# ಜೀತ ಪದ್ಧತಿ ಒಂದು ಪುನರ್ವ್ಯಾಖ್ಯಾನ

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು:
ಕಿರಣ ಕಮಲ ಪ್ರಸಾದ

ಮಾರ್ಗದರ್ಶಕರು:
ಡಾ. ಎಲ್. ಶ್ರೀನಿವಾಸ,
ಮುಖ್ಯಸ್ಥರು ಮತ್ತು
ಸಹಾಯಕ ಪ್ರಾಧ್ಯಾಪಕರು.






ಮಾನವ ಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276.




2018

# ಜೀತ ಪದ್ಧತಿ ಒಂದು ಪುನರ್ವ್ಯಾಖ್ಯಾನ

(ಪಿಹೆಚ್. ಡಿ. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

**ಸಂಶೋಧಕರು:**
**ಕಿರಣ ಕಮಲ ಪ್ರಸಾದ**

**ಮಾರ್ಗದರ್ಶಕರು:**
ಡಾ. ಎಲ್. ಶ್ರೀನಿವಾಸ,
ಮುಖ್ಯಸ್ಥರು ಮತ್ತು
ಸಹಾಯಕ ಪ್ರಾಧ್ಯಾಪಕರು,



ಮಾನವ ಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – 583276.

**2018**

# ಪ್ರಮಾಣ ಪತ್ರ

**ಜೀತ ಪದ್ಧತಿ ಒಂದು ಪುನರ್ವ್ಯಾಖ್ಯಾನ** ಎನ್ನುವ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಹೆಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. **ಡಾ. ಎಲ್. ಶ್ರೀನಿವಾಸ,** ಮುಖ್ಯಸ್ಥರು ಹಾಗೂ ಸಹಾಯಕ ಪ್ರಾಧ್ಯಾಪಕರು, ಮಾನವ ಶಾಸ್ತ್ರ ವಿಭಾಗ, ಇವರ ಮಾರ್ಗದರ್ಶನದಲ್ಲಿ ಪಿಹೆಚ್. ಡಿ. ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಮಹಾಪ್ರಬಂಧವನ್ನು ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Kiran Kamal Prasad

**ಕಿರಣ ಕಮಲ ಪ್ರಸಾದ**
ಸಂಶೋಧಕರು
ಮಾನವ ಶಾಸ್ತ್ರ ವಿಭಾಗ,
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – 583276.

**ಸ್ಥಳ:** ವಿದ್ಯಾರಣ್ಯ

**ದಿನಾಂಕ: 28 ನವೆಂಬರ್ 2018**

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕಿರಣ ಕಮಲ ಪ್ರಸಾದ ಇವರು ನನ್ನ ಮಾರ್ಗದರ್ಶನದಲ್ಲಿ ಜೀತ ಪದ್ಧತಿ ಒಂದು ಪುನರ್ವ್ಯಾಖ್ಯಾನ ಎನ್ನುವ ಶೀರ್ಷಿಕೆಯ** ಮಹಾಪ್ರಬಂಧವನ್ನು ಮಾನವ ಶಾಸ್ತ್ರ ವಿಭಾಗದ ಮೂಲಕ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ:** ವಿದ್ಯಾರಣ್ಯ

**ದಿನಾಂಕ: 28 ನವೆಂಬರ್ 2018**

**ಡಾ. ಎಲ್. ಶ್ರೀನಿವಾಸ**
**ಮುಖ್ಯಸ್ಥರು ಮತ್ತು**
ಸಹಾಯಕ ಪ್ರಾಧ್ಯಾಪಕರು
**ಮಾನವ ಶಾಸ್ತ್ರ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – 583276.

# ಪರಿವಿಡಿ

| ಅಧ್ಯಾಯಗಳ ಸಂಖ್ಯೆ | ಶೀರ್ಷಿಕೆಗಳು | ಪುಟ ಸಂಖ್ಯೆ |
|---|---|---|
| VI. | ಜೀತ ಹೆಚ್ಚಿಗೆ ಕಾಣುವ ಕ್ಷೇತ್ರಗಳು, ಸಮುದಾಯಗಳು ಮತ್ತು ಪ್ರದೇಶಗಳು ಹಾಗೂ ಜೀತದ ವ್ಯಾಪ್ತಿ, ಜೀತ ನಿರ್ಮೂಲನೆಯಲ್ಲಿ ಕರ್ನಾಟಕದ ಪಾತ್ರ ಮತ್ತು ಅದಕ್ಕೆ ತೆಗೆದುಕೊಳ್ಳಬೇಕಾದ ಕ್ರಮಗಳು | 274 |
| VII. | 'ಬಿಟ್ಟಿ ಚಾಕ್ರಿ'ಗೆ ಮೂರು ಊರುಗಳಲ್ಲಿ ಸಮೀಕ್ಷೆ ಮಾಡಲು ಬಳಸಿದ ಪ್ರಶ್ನಾವಳಿಯ ನಮೂನೆ | 293 |
| VIII. | ಕೆಲವು ಛಾಯಾಚಿತ್ರಗಳು | 301 |

# ಕೋಷ್ಟಕಗಳು

# ನಕ್ಷೆಗಳು

# ಅಧ್ಯಾಯ 1

## ಪ್ರಸ್ತಾವನೆ

# ಅಧ್ಯಾಯ ಒಂದು

# ಪ್ರಸ್ತಾವನೆ

## 1.1 ವಿಷಯ

ಜೀತ ಪದ್ಧತಿಯ ಪುನರ್ವ್ಯಾಖ್ಯಾನವನ್ನು ಹಲವಾರು ಸ್ತರಗಳಲ್ಲಿ ಮಾಡಲಾಗಿದೆ. ಜೀತ ಪದ್ಧತಿಯು ಭಾರತೀಯ ಸಮಾಜಕ್ಕೆ ಅಂಟು ಕೊಂಡಿರುವ ಪುರಾತನ, ವ್ಯಾಪಕ ಹಾಗೂ ಅಗಾಧ ಅನಿಷ್ಟ ಪದ್ಧತಿಗಳಲ್ಲಿ ಪ್ರಮುಖವಾದದ್ದು. ಭಾರತೀಯ ಸಂವಿಧಾನವು ಮಾನವ ವ್ಯಾಪಾರ, ಬೇಗಾರ್ (ಪುಕ್ಕಟೆ ದುಡಿಮೆ) ಮತ್ತು ಅದರಂತಹ ಬಲಾತ್ಕಾರದ ದುಡಿಮೆಗಳ ನಿಷೇಧವನ್ನು ಮೂಲಭೂತ ಹಕ್ಕುಗಳಲ್ಲಿ ಒಂದಾಗಿ ಪರಿಗಣಿಸುತ್ತದೆ. ಆ ಮೂಲಭೂತ ಹಕ್ಕಿನ ರಕ್ಷಣೆಗೋಸ್ಕರ 1976ರ ಫೆಬ್ರವರಿ 9ನೇ ತಾರೀಕಿನಂದು ಜಾರಿಗೊಳಿಸಲ್ಪಟ್ಟ ಜೀತಪದ್ಧತಿ ನಿರ್ಮೂಲನೆ ಕಾಯ್ದೆಯು ಬಲಾತ್ಕಾರದ ರೂಪವಾಗಿರುವ ಜೀತ ಪದ್ಧತಿಯನ್ನು ನಿಷೇಧಿಸುತ್ತದೆ. ಕಾನೂನು ಬಂದ ಮೇಲೆ ಜೀತ ಪದ್ಧತಿ ನಿರ್ಮೂಲನೆ ಮಾಡಲು ಹಲವಾರು ಕ್ರಮಗಳನ್ನು ಕರ್ನಾಟಕವನ್ನೊಳಗೊಂಡಂತೆ ಹಲವಾರು ರಾಜ್ಯ ಸರ್ಕಾರಗಳು ಕೈಗೊಂಡಿವೆ. ಸ್ವಾತಂತ್ರ್ಯ ಪೂರ್ವದಲ್ಲಿಯೂ ಜೀತ ನಿರ್ಮೂಲನೆಗೆ ಭಾರತದ ಹಲವಾರು ಪ್ರಾಂತ್ಯಗಳಲ್ಲಿ ವಿವಿಧ ಪ್ರಯತ್ನಗಳು ನಡೆದಿವೆ. ಈ ಹಿನ್ನೆಲೆಯಲ್ಲಿ ಈಗಲೂ ಕರ್ನಾಟಕದಲ್ಲಿ ಎಷ್ಟರ ಮಟ್ಟಿಗೆ ಜೀತ ಪದ್ಧತಿ ಜೀವಂತವಿದೆ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ.

ಇನ್ನೂ ವಿಶಾಲವಾಗಿ ಗಮನಿಸಿದರೆ ಜೀತ ಪದ್ಧತಿಯು ಭರತ ಖಂಡದಾದ್ಯಂತ ನಿಜವಾಗಿಯೂ ಜಾತಿ ಪದ್ಧತಿಯ ಒಂದು ಮುಖವೇ ಆಗಿದೆ. ದಲಿತರಿಗೆ ಅನ್ವಯಿಸಿದರೆ ಜಾತಿ ಪದ್ಧತಿಯ ಆರ್ಥಿಕ ಸ್ವರೂಪವೇ ಜೀತ ಪದ್ಧತಿ. ಅದನ್ನು 'ಜಾತಿ ಗುಲಾಮಿ ಪದ್ಧತಿ' ಎಂತಲೇ ಕರೆಯಬಹುದು. ಜಾತಿ ವ್ಯವಸ್ಥೆಯ ಉಚ್ಛ್ರಾಯ ಕಾಲದಲ್ಲಿ ಅಂದರೆ ಕ್ರಿ.ಶ. ಸುಮಾರು ಎರಡನೇ ಶತಮಾನದಿಂದ ಬ್ರಿಟಿಷರ ಆಳ್ವಿಕೆಯ ಆರಂಭದ ಕಾಲಮಾನವಾದ ಕ್ರಿ.ಶ. 18ನೇ ಶತಮಾನದ ವರೆಗೆ ದಲಿತರು ಮತ್ತು ಮೂಲನಿವಾಸಿ ಜನರು 'ಜಾತಿಗುಲಾಮಿ ಪದ್ಧತಿ'ಯಲ್ಲಿ ಸಿಲುಕಿಕೊಂಡಿದ್ದರು. ಬ್ರಿಟಿಷರು ಬಂದ ಕಾಲದ ತನಕ ನಮ್ಮ ದೇಶದ ಎಲ್ಲಾ ದಲಿತರು ಮತ್ತು ಹೆಚ್ಚಿನ ಮೂಲನಿವಾಸಿಗಳು, ಅಂದರೆ ಒಟ್ಟು ಜನಸಂಖ್ಯೆಯ ಸುಮಾರು ಕಾಲುಭಾಗದಷ್ಟು ಜನರು, ಎಲ್ಲಾ ಮೇಲ್ಜಾತಿ – ಮೇಲ್ವರ್ಗದವರಿಗೆ ಅಡಿಯಾಳಾಗಿದ್ದರು.

ಜಾತಿ ವ್ಯವಸ್ಥೆ, 'ಜಾತಿ ಗುಲಾಮಿ ಪದ್ಧತಿ'ಯ ಮೂಲಗಳನ್ನು ಕ್ರಿ. ಶ. ಎರಡನೇ ಶತಮಾನದ ಮುಂಚೆಯೇ ಅಂದರೆ ಕ್ರಿ. ಪೂ. 20 – 15 ಶತಮಾನಗಳಿಂದಲೇ ಗುರುತಿಸಬಹುದು. ಮಧ್ಯ ಏಷ್ಯಾದಿಂದ ಭಾರತಕ್ಕೆ ಮುನ್ನುಗ್ಗಿ ಬಂದ ಆರ್ಯರೆನಿಸಿದ ಬಿಳಿ, ಗೋದಿ ವರ್ಣದ ಒಂದು ಜನಾಂಗವು ಕಂದು, ಕಪ್ಪು ಬಣ್ಣದ ಆಗಿನ ವಿವಿಧ ಜನಾಂಗೀಯ ಮೂಲನಿವಾಸಿಗಳನ್ನು ಸದೆಬಡಿದು ಅವರನ್ನು ಅಂಚಿಗೆ ತಳ್ಳಿಯೋ ಅಥವಾ ತಮ್ಮ ಹದ್ದು ಬಸ್ತಿನಲ್ಲಿಯೇ ಇಟ್ಟೋ ಮೂಲವಾಗಿ ಜನಾಂಗಗಳನ್ನಾಧರಿಸಿದ ಯಜಮಾನ –

ದಾಸ ವ್ಯವಸ್ಥೆಯನ್ನು ಹುಟ್ಟುಹಾಕಿತ್ತು. ತದನಂತರ ಒಟ್ಟಾರೆಯಾಗಿ ಜನಾಂಗಗಳನ್ನಾಧರಿಸಿಯೇ ಸಮಾಜಕ್ಕೆ ಬೇಕಾದ ಸೇವೆಗಳನ್ನೂ ಕಸುಬುಗಳನ್ನೂ ವಿಂಗಡಿಸಲಾಯಿತು.

ಅಲ್ಲಿಂದ ಬೆಳೆಯಲಾರಂಭಿಸಿದ ಜಾತಿ ವ್ಯವಸ್ಥೆಯಲ್ಲಿ ಸಂಪ್ರದಾಯದ ಪ್ರಕಾರ ಅಥವಾ ಮನುಸ್ಮೃತಿ ಅಥವಾ ಇತರ ಧರ್ಮಶಾಸ್ತ್ರಗಳಲ್ಲಿ ನಮೂದಿಸಿದ ಕಟ್ಟಳೆಗಳ ಪ್ರಕಾರ ಒಂದು ಊರಿನ ಪ್ರತಿಯೊಂದು ಜಾತಿಗೂ ಒಂದು ವಿಶಿಷ್ಟ ಸೇವೆ ಮತ್ತು ಪ್ರತ್ಯೇಕ ಕಸುಬು ನಿಗದಿಪಡಿಸಲಾಗಿತ್ತು. ಪ್ರತಿಯೊಂದು ಹಳ್ಳಿಯಲ್ಲೂ ಉತ್ಪಾದನೆಯು ವ್ಯವಸಾಯ ಕೇಂದ್ರಿತವಾಗಿದ್ದು ವ್ಯವವಸಾಯವು ಒಕ್ಕಲಿಗರಿಗೆ ಜಾತಿ ನಿರ್ಬಂಧದಿಂದ ಹೇರಲ್ಪಟ್ಟ ಕಸುಬಾಗಿತ್ತು. ಹಳ್ಳಿಯ ಸುತ್ತುಮುತ್ತಲಿನ ವ್ಯವಸಾಯಯೋಗ್ಯ ಭೂಮಿಯನ್ನು ಆ ಊರಿನ ಒಕ್ಕಲಿಗ ಕುಟುಂಬದವರು ವಾಡಿಕೆ ಪ್ರಕಾರ ಹಂಚಿಕೊಂಡು ವ್ಯವಸಾಯ ಮಾಡುತ್ತಿದ್ದರು. ಉಳಿದ ಎಲ್ಲಾ ಜಾತಿಗಳು ಅವರವರ ಕುಲಕಸುಬಿನನ್ವಯ ಒಂದೊಂದು ಸೇವೆಯನ್ನು ಊರಿಗೂ, ಊರಿನ ಜನರಿಗೂ, ವ್ಯವಸಾಯ ಕುಟುಂಬಗಳಿಗೂ ಸಲ್ಲಿಸುತ್ತಿದ್ದರು. ಪ್ರತಿ ಸುಗ್ಗಿಕಾಲದಲ್ಲಿ ಹೊಲದಿಂದ ದವಸಧಾನ್ಯಗಳನ್ನು ಒಕ್ಕಲಿಗರ ಕಣದಲ್ಲಿ ಶೇಖರಿಸಲಾಗುತ್ತಿತ್ತು. ಸಂಪ್ರದಾಯದ ನಿಯಮದಂತೆ ಮತ್ತು ಒಬ್ಬೊಬ್ಬರು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಒಕ್ಕಲಿಗರು ತಮಗೆ ಸೇವೆ ಸಲ್ಲಿಸಿದವರಿಗೆ ರೂಢಿಯಲ್ಲಿ ನಿಗದಿಸಿದಂತೆ ಶೇಖರಿಸಿದ ದವಸಧಾನ್ಯಗಳನ್ನು ಬೇರೆಬೇರೆ ಪ್ರಮಾಣದಲ್ಲಿ ಭಾಗಮಾಡಿ ಕೊಡುತ್ತಿದ್ದರು. ಆದರೆ ಈ ವಿನಿಮಯದಿಂದ ದಲಿತರು ಮತ್ತು ಮೂಲನಿವಾಸಿಗಳು ಹೊರಗುಳಿಯುತ್ತಿದ್ದರು. ಏಕೆಂದರೆ ಜಾತಿ ನಿಯಮದ ಪ್ರಕಾರ ದಲಿತರು ಮತ್ತು ಮೂಲನಿವಾಸಿಗಳು ನಿಕೃಷ್ಟವೆನಿಸಿದ ಸೇವೆ ಸಲ್ಲಿಸಬೇಕಾಗಿತ್ತೇ ವಿನಃ ಅವರಿಗೆ ಪ್ರತಿಫಲ ಪಡೆಯುವ ವಾಡಿಕೆಯ ಹಕ್ಕು ಇರಲಿಲ್ಲ. ಅವರ ಸೇವೆಗೆ ಸಿಗುವ 'ಪ್ರತಿಫಲ'ವೆಂದರೆ ಒಕ್ಕಲಿಗ ಮನೆತನದವರು ತಮ್ಮ ಅಡಿಯಾಳಾಗಿದ್ದ ದಲಿತರ ಅಥವಾ ಮೂಲನಿವಾಸಿಗಳ ಆಗುಹೋಗುಗಳನ್ನು 'ಸಂಪೂರ್ಣ'ವಾಗಿ ನೋಡಿಕೊಳ್ಳುವುದಾಗಿತ್ತು. ಆದರೆ ಧರ್ಮಶಾಸ್ತ್ರಗಳ ಪ್ರಕಾರ ದಲಿತರ ಅವಶ್ಯಕತೆಗಳನ್ನು ಅತ್ಯಂತ ನಿಕೃಷ್ಟಗೊಳಿಸಲಾಗಿದ್ದು ಅವರನ್ನು 'ಸಂಪೂರ್ಣ'ವಾಗಿ ನೋಡಿಕೊಳ್ಳುವುದು 'ದನಿ'ಗಳಿಗೆ ಅಷ್ಟೊಂದು ಹೊರೆಯಾಗುತ್ತಿರಲಿಲ್ಲ. ದಲಿತರು ಮತ್ತು ಮೂಲನಿವಾಸಿಗಳಿಗೆ ಸಂಬಂಧಪಟ್ಟಂತಿದ್ದ ಜಾತಿ ವ್ಯವಸ್ಥೆಯನ್ನು ಜಾತಿ ಗುಲಾಮಿ ಪದ್ಧತಿಯೆನ್ನಬಹುದು. ಜಾತಿ ಗುಲಾಮಿ ವ್ಯವಸ್ಥೆಗೂ ಬೇರೆ ಗುಲಾಮಿ ವ್ಯವಸ್ಥೆಗಳಿಗೂ ವ್ಯತ್ಯಾಸವಿದೆ.

ಆದರೂ 'ಜಾತಿ ಗುಲಾಮಿ ಪದ್ಧತಿ'ಯು ಆಗ ಪ್ರಪಂಚದ ಬೇರೆ ದೇಶಗಳಲ್ಲಿ ವ್ಯಾಪಿಸಿಕೊಂಡಿದ್ದ ಗುಲಾಮಿಪದ್ಧತಿಗಿಂತ ಕಡಿಮೆಯೇನಲ್ಲ. ಅಥವಾ ಇದನ್ನು ನಾವು ಕ್ರಿಸ್ತ ಪೂರ್ವ ಮತ್ತು ಕ್ರಿಸ್ತ ಶತಕದ ಉಗಮ ಕಾಲದಲ್ಲಿದ್ದ ಗ್ರೀಕ್ ಮತ್ತು ರೋಮ್ ಸಾಮ್ರಾಜ್ಯಗಳಲ್ಲಿ ವ್ಯಾಪಕವಾಗಿ ಬೇರುಬಿಟ್ಟಿದ್ದ ಮತ್ತು 16ನೇ ಶತಮಾನದಿಂದ ಉತ್ತರ ಅಮೇರಿಕದಲ್ಲಿದ್ದಂತಹ ಗುಲಾಮಿ ಪದ್ಧತಿಗಳಿಗೆ ಹೋಲಿಸಿದರೆ ಅದು ಒಂದು ರೀತಿಯಲ್ಲಿ ಅವೆಲ್ಲವುಗಳಿಗಿಂತ ಕ್ರೂರವಾಗಿತ್ತು, ಅಮಾನವೀಯವಾಗಿತ್ತು ಎಂದು ಹೇಳಬಹುದು.

'ಜಾತಿ ಗುಲಾಮಿ ಪದ್ಧತಿ'ಯ ಜೊತೆಜೊತೆಗೆ ಕ್ರಿ. ಶ. ಆರಂಭ ಕಾಲದಿಂದಲೂ ಇದ್ದ ಧರ್ಮಶಾಸ್ತ್ರಗಳ ಪ್ರಕಾರ ಮತ್ತು ಏಳನೇ ಶತಮಾನದಿಂದ ಭಾರತದಲ್ಲಿ ಆಗಮಿಸಿದ ಮುಸುಲ್ಮಾನರು ಅಳವಡಿಸುತ್ತಿದ್ದ ಸಂಪ್ರದಾಯ ಹಾಗೂ ಕಟ್ಟಳೆಗಳ ಪ್ರಕಾರ ಇನ್ನೊಂದು ರೀತಿಯ ದಾಸ-ದಾಸಿ ಪದ್ಧತಿ ಅಥವಾ ಗುಲಾಮಿ ಪದ್ಧತಿ ಅಸ್ಥಿತ್ವದಲ್ಲಿರುವುದನ್ನೂ ನಾವು ಕಾಣುತ್ತೇವೆ. ಅದರ ಪ್ರಕಾರ ಗುಲಾಮರು ಒಂದು ಜಾತಿಗೆ ಸೀಮಿತಗೊಳ್ಳದೇ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟವರೂ ಮಾರಾಟಕ್ಕೊಳಗಾದ ಯಾವುದೇ ಜಾತಿ, ಧರ್ಮ, ಪ್ರದೇಶದವರು ಗುಲಾಮರನ್ನಾಗಿಸಬಹುದಾಗಿದ್ದರೂ ಅವರ ನಿರ್ಬಂಧಗಳು ಕೊನೆಗೊಳ್ಳುವ ಅಂದರೆ ಅವರು ಗುಲಾಮಗಿರಿಯಿಂದ ಹೊರಬರುವ ಸಾಧ್ಯತೆಯೂ ಕಾನೂನಾತ್ಮಕವಾಗಿಯೇ ಇತ್ತು.

'ಜಾತಿ ಗುಲಾಮಿ ಪದ್ಧತಿ'ಯು ಬ್ರಿಟಿಷರ ಆಳ್ವಿಕೆ ಕಾಲದಲ್ಲಿ ಅವರು ತಂದಿರುವ ಕೆಲವು ಆರ್ಥಿಕ ಧೋರಣೆ ಮತ್ತು ಕಾನೂನುಗಳಿಂದ ಜೀತಪದ್ಧತಿಯಾಗಿ ರೂಪ ಪಡೆಯಿತು. ಬ್ರಿಟಿಷರ ಕಾಲದಲ್ಲಿಯೇ 'ಜಾತಿ ಗುಲಾಮಿ ಪದ್ಧತಿ'ಯು ಜೀತ ಪದ್ಧತಿಯಾಗಿ ಮಾರ್ಪಾಡಾಗಬೇಕಾದರೆ 'ಇಂಡೆಂಚರ್ಡ್ ಲೇಬರ್' 'ಜಜ್‌ಮನಿ ಪದ್ಧತಿ', 'ಬಲೂತ', 'ವೆಟ್ಟಿ ಚಾಕಿರಿ', 'ಹಿಟ್ಟಿ ಬಿಟ್ಟಿ ಚಾಕ್ರಿ' ತರಹದ ಹಲವಾರು ಹಂತಗಳನ್ನು ದಾಟಿಹೋಗಿದ್ದು ನಂತರ ಅದು ಪ್ರಾದೇಶಿಕವಾಗಿ ಜೀತ ತರಹದ 'ಕಾಮಿಯಾ', 'ಸಾಗ್ರಿ', 'ಹಾಲಿ', 'ಬಾರಮಸಿಯಾ', 'ಭಾಗೇಲಾ', 'ಪಡಿಯಾಳ್', 'ಅಡಿಮೈ', 'ಪಲೇರು', 'ವೆಟ್ಟಿಚಾಕಿರಿ' ಮುಂತಾದ ಹಲವಾರು ರೂಪಗಳನ್ನು ಪಡೆಯಿತು. ಈ ಪರಿಸ್ಥಿತಿಯು ಸ್ವಾತಂತ್ರ್ಯ ನಂತರವೂ ಮುಂದುವರೆಯಿತು.

ಸ್ವತಂತ್ರ ಭಾರತದಲ್ಲಿ ಜೀತ ಪದ್ಧತಿ ವಿರುದ್ಧ ಕಾನೂನನ್ನು ಜಾರಿಗೊಳಿಸಿದ್ದ ಕಾರಣದಿಂದ ಬ್ರಿಟಿಷರ ಕಾಲದಿಂದ ಅಸ್ಥಿತ್ವದಲ್ಲಿರುವ ಜೀತ ಪದ್ಧತಿಯು ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ಹಲವಾರು ಅಧಿಕಾರಿ ವರ್ಗದವರು, ಜನಪ್ರತಿನಿಧಿಗಳು ಮತ್ತು ಸಾರ್ವಜನಿಕರು ನಂಬಿರುವ ಹಾಗಿದೆ. ಆದರೆ ಜೀತ ಸಮಸ್ಯೆ, ದಲಿತರು ಮತ್ತು ಮೂಲನಿವಾಸಿಗಳ ಸಂಘಟನೆಗಳು ಮತ್ತವರ ಬಗ್ಗೆ ಕೆಲಸ ಮಾಡುತ್ತಿರುವ ಸಂಘ ಸಂಸ್ಥೆಗಳು ಹಾಗೂ ವ್ಯಕ್ತಿಗಳು ಜೀತಪದ್ಧತಿಯ ವಾಸ್ತವ್ಯದ ಪರಿಣಾಮಗಳನ್ನು ಸದಾ ಎದುರಿಸುತ್ತಲೇ ಇದ್ದಾರೆ. ಮಾಧ್ಯಮಗಳು ನಿರಂತರವಾಗಿ ಜೀತದಾಳುಗಳ ಬಗ್ಗೆ ವರದಿ ಮಾಡುತ್ತಲೇ ಇವೆ. ಭಾರತದಲ್ಲಿ 20ನೇ ಶತಮಾನದ ಕೊನೇ ದಶಕಾದಿಯಿಂದ ತೀವ್ರತರವಾಗಿ ಆರಂಭಗೊಂಡ ಗೋಳೀಕರಣದ ಪರಿಣಾಮದಿಂದ ಒಟ್ಟಾರೆಯಾಗಿ ಕಾರ್ಮಿಕರ ಹಕ್ಕುಗಳು ಮೊಟಕುಗೊಳ್ಳುತ್ತಿದ್ದು ಪ್ರತ್ಯೇಕವಾಗಿ ಅಸಂಘಟಿತ ಕಾರ್ಮಿಕರ ಬದುಕು ಹೆಚ್ಚೆಚ್ಚು ಹತಾಶವಾಗುತ್ತಿದೆ. ಕೆಲಸವನ್ನು ಹುಡುಕಿಕೊಂಡು ವಲಸೆ ಹೋಗುತ್ತಿರುವ ನಿರ್ಗತಿಕ ಕಾರ್ಮಿಕರ ಪರಿಸ್ಥಿತಿ ಚಿಂತಾಜನಕವಾಗುತ್ತಿದೆ. ಆಂತರಿಕ ವಲಸೆ ಕಾರ್ಮಿಕರು ಮತ್ತು ಮನೆಗೆಲಸದವರ ಸಂಖ್ಯೆ ಹೆಚ್ಚಾಗುತ್ತಿರುವ ಜೊತೆಗೆ ಅವರಿಗೆ ಸಿಗಬೇಕಾದ ಕೂಲಿಯ ತುಲನಾತ್ಮಕ ಬೆಲೆಯೂ ವಿಪರೀತ ಕಡಿಮೆಯಾಗುತ್ತಿದೆ. ಅವರ ಸೇವೆಯನ್ನು ಖಾತ್ರಿಪಡಿಸಲು ಹೊಸ ಹೊಸ ನಿರ್ಬಂಧಗಳನ್ನು ಅವರ ಮೇಲೆ ಹೇರಲಾಗುತ್ತಿದೆ.

ಜೊತೆಗೆ 'ಪರಿವರ್ತನಾತ್ಮಕ ಸಂವಿಧಾನ'ದ ಪರಿಕಲ್ಪನೆಯಡಿ ಸರ್ವೋಚ್ಚ ನ್ಯಾಯಾಲವು ಸಂವಿಧಾನವನ್ನು ಅರ್ಥೈಸುವುದರ ಜೊತೆಗೆ ಸಂವಿಧಾನದಲ್ಲಿಯ ಮೂಲಭೂತ ಹಕ್ಕುಗಳ ವ್ಯಾಖ್ಯಾನಗಳನ್ನು ವಿಸ್ತರಿಸುತ್ತಾ ಸಾಮಾಜಿಕ ಆಚರಣೆ ಮತ್ತು ಪದ್ಧತಿಗಳನ್ನು ಸಂವಿಧಾನದ ಮೂಲ ಆಶಯಗಳಾದ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವ ಮೌಲ್ಯಗಳ ಸಾಣೆಗೊಡ್ಡಿ ಮೂಲಭೂತ ಹಕ್ಕುಗಳ ಹರವನ್ನು ವಿಸ್ತಾರಗೊಳಿಸುತ್ತಿದೆ. 'ಬಲತ್ಕಾರದ ದುಡಿಮೆ ನಿಷೇಧ' ಮೂಲಭೂತ ಹಕ್ಕಿನ ಅರ್ಥವ್ಯಾಪ್ತಿಯನ್ನೂ ಸರ್ವೋಚ್ಛ ನ್ಯಾಯಾಲವು ಈ ರೀತಿ 1982ರಲ್ಲೇ ಒಂದು ಸಾರಿ ವಿಸ್ತರಿಸಿದೆ. ಸಮಾಜದ ಹೊಸ ಆವಿಷ್ಕಾರಗಳಿಗನುಗುಣವಾಗಿ ಅಥವಾ ಮೂಲಭೂತ ಹಕ್ಕುಗಳ ಅತ್ಯಾಧುನಿಕ ದೃಷ್ಟಿಕೋನಗಳಿಗನುಗುಣವಾಗಿ 'ಬಲತ್ಕಾರದ ದುಡಿಮೆ ನಿಷೇಧ'ವನ್ನು ಇನ್ನೂ ಹೊಸ ರೀತಿಯಲ್ಲಿ ಮತ್ತು ವಿಶಾಲವಾಗಿ ಅರ್ಥೈಸುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಒಂದು ರೀತಿಯಲ್ಲಿ ಬ್ರಿಟಿಷರ ಕಾಲದ ಜೀತ ಪದ್ಧತಿ ಕಡಿಮೆಯಾಗುತ್ತಿದ್ದರೂ ಹೊಸ ರೀತಿಯ ಜೀತದ ರೂಪಗಳು ಕಣ್ಣಿಗೆ ಬೀಳುತ್ತಿವೆ. ಅವುಗಳ ಜೊತೆಗೆ ಹಳೇಕಾಲದ 'ಜಾತಿ ಗುಲಾಮಿ ಪದ್ಧತಿ'ಯ ಪಳೆಯುಳಿಕೆಗಳಂತಿರುವ 'ಬಿಟ್ಟಿ ಚಾಕ್ರಿ'ಯಂತಹ ಕೆಲವು ಪದ್ಧತಿಗಳು ಅಲ್ಲಲ್ಲಿ ಕಂಡು ಬರುತ್ತಿವೆ.

ಉತ್ತರ ಕರ್ನಾಟಕದಲ್ಲಿ ದಿನಗೂಲಿಗೋಸ್ಕರ ಮಾಡುವ ಕೆಲಸಗಳ ಹೊರತಾಗಿಯೂ ಜೀತ ಪದ್ಧತಿಯೊಳಗೆ ವರ್ಷವಿಡೀ 'ವಾರ್ಷಿಕ ಸಂಬಳ'ದ ಲೆಕ್ಕದಲ್ಲಿ ದುಡಿಯುವ ಜೀತದಾಳುಗಳಲ್ಲದೆಯೂ ಊರಿನ ರೈತರಿಗೆ ಅದೇ ಊರಿನ ದಲಿತರು ಪ್ರತಿನಿತ್ಯ ಕೆಲವು ಗಂಟೆ ಕಾಲ ದಿನಗೂಲಿ ಪಡೆಯದೇ ಇಡೀ ವರ್ಷ ಮತ್ತು ವರ್ಷಗಟ್ಟಲೆ 'ಬಿಟ್ಟಿ ಚಾಕ್ರಿ' ಅಥವಾ ಇನ್ನಿತರ ಹೆಸರುಗಳಿಂದ ಕರೆಯಿಸಿಕೊಳ್ಳುವ ಕೆಲವು ಸೇವೆಗಳನ್ನು ಸಲ್ಲಿಸುತ್ತಿರುವುದು ಬಹಳ ವಿಶಿಷ್ಟವಾಗಿ ಗೋಚರಿಸುತ್ತದೆ. ಒಂದು ಕಡೆ ದಿನಗೂಲಿಯೂ ಅಲ್ಲ. ಇನ್ನೊಂದು ಕಡೆ ಇಷ್ಟರ ವರೆಗೆ ಜೀತ ಪದ್ಧತಿ ರದ್ದತಿ ಕಾನೂನಿನಡಿ ಕರ್ನಾಟಕದಲ್ಲಿ ಕ್ರಮ ತೆಗೆದುಕೊಳ್ಳಲಾಗುತ್ತಿದ್ದ ಹಗಲು ರಾತ್ರಿ ಎನ್ನದೇ ಸಾಮಾನ್ಯವಾಗಿ ವರ್ಷವಿಡೀ ವರ್ಷಗಟ್ಟಲೆ ದುಡಿಯುವ ಜೀತದಾಳುಗಳ ತರಹವೂ ಅಲ್ಲ. ದಿನಕ್ಕೆ ಕೆಲವು ಗಂಟೆ ಮಾತ್ರ; ಕೆಲವು ನಿರ್ದಿಷ್ಟ ಸೇವೆಗಳು ಮಾತ್ರ. ಆದರೆ ಅವನ್ನು ಪ್ರತಿ ನಿತ್ಯ, ವರ್ಷವಿಡೀ ಮಾಡಲೇಬೇಕು ಮತ್ತು ಜೀವನ ಪರ್ಯಂತವೂ ಮಾಡಬೇಕೆಂಬ ನಿರ್ಬಂಧವಿದೆ. ಕುಟುಂಬದಲ್ಲಿ ಅದನ್ನು ಮುಂದೆಯೂ ನಡೆಸಿಕೊಂಡು ಹೋಗಬೇಕೆಂಬ ಸಾಂಪ್ರದಾಯಿಕ ಕಡ್ಡಾಯವಿದೆ. ನಿರ್ಬಂಧ, ಕಡ್ಡಾಯ ಇರುವ ಪರಿಸ್ಥಿತಿ ಇರುವಾಗ ಬಲಾತ್ಕಾರದ ದುಡಿಮೆ, ಜೀತ ಪದ್ಧತಿ ಕಲ್ಪನೆಗಳು ತಕ್ಷಣಕ್ಕೆ ಹೊಳೆಯುತ್ತವೆ. ಆದ್ದರಿಂದ 'ಬಿಟ್ಟಿ ಚಾಕ್ರಿ'ಯು ಜೀತ ಪದ್ಧತಿಯ ವ್ಯಾಖ್ಯಾನದಡಿ ಅದನ್ನು ಪರಿಗಣಿಸಬಹುದೇ ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ.

### 1.2 ಉದ್ದೇಶ

ಜೀತ ಪದ್ಧತಿಯನ್ನು ಮೇಲೆ ಸಂಕ್ಷಿಪ್ತವಾಗಿ ವಿವರಿಸಿದಂತೆ ಹಲವಾರು ಆಯಾಮಗಳಿಂದ ವ್ಯಾಖ್ಯಾನಿಸುವುದು, ಅದರ ಹಲವಾರು ರೂಪಾಂತರಗಳನ್ನು ಅರ್ಥೈಸುವುದು ಅಥವಾ ಜೀತ ಪದ್ಧತಿಯ

ಪುನರ್ವ್ಯಾಖ್ಯಾನ ಮಾಡುವುದು ಈ ಅಧ್ಯಯನದ ಒಟ್ಟಾರೆ ಉದ್ದೇಶ. ಜೀತ ಪದ್ಧತಿಯ ಕಾನೂನಾತ್ಮಕ ವ್ಯಾಖ್ಯಾನದ ಜೊತೆ ಅದು ಬೇರೆಬೇರೆ ಕಾಲಘಟ್ಟಗಳಲ್ಲಿ ಪಡೆದ ರೂಪಗಳು, ಅದರ ಅರ್ಥವ್ಯಾಪ್ತಿಗಳು, ಒಟ್ಟಾರೆ ಸಮಾಜದಲ್ಲಿ ಅದು ನಿರ್ವಹಿಸುತ್ತಿರುವ ಪಾತ್ರ, ಸ್ವಾತಂತ್ರ್ಯ, ಸಂವಿಧಾನೋತ್ತರ ಕಾನೂನಿನಲ್ಲಿಯ ವ್ಯಾಖ್ಯಾನದಲ್ಲಿಯೂ ತೋರಿಬಂದ ಅರ್ಥವೈಶಾಲ್ಯ, ಗೋಳೀಕರಣ – ಉದಾರೀಕರಣದ ಯುಗದಲ್ಲಿ ಜೀತ ಪದ್ಧತಿಯಲ್ಲಿ ಕಂಡು ಬರುತ್ತಿರುವ ವ್ಯತ್ಯಾಸಗಳು ಮತ್ತು ಅದಕ್ಕನುಗುಣವಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲೂ ರಾಷ್ಟ್ರ ಮಟ್ಟದಲ್ಲೂ ರೂಪುಗೊಳ್ಳುತ್ತಿರುವ ಹೊಸ ಕಾನೂನಗಳು ಇವೆಲ್ಲವುಗಳನ್ನು ಅರ್ಥೈಸಿ ಜೀತ ಪದ್ಧತಿಯ ಪುನರ್ವ್ಯಾಖ್ಯಾನವನ್ನು ಮಾಡಲಾಗುವುದು.

ಈ ವಿಶಾಲ ಚೌಕಟ್ಟಿನಲ್ಲಿ 'ಬಿಟ್ಟಿ ಚಾಕ್ರಿ'ಯನ್ನು ಮಾನವ ಶಾಸ್ತ್ರೀಯ ವಿಧಾನಗಳಿಂದ ಆಳವಾಗಿ ಅಭ್ಯಸಿಸಿ ಜೀತ ಕಾನೂನಿನಲ್ಲಿರುವ ಜೀತ ಪದ್ಧತಿ ವ್ಯಾಖ್ಯಾನವು ಅದಕ್ಕೆ ಅನ್ವಯಿಸುತ್ತದೋ ಇಲ್ಲವೋ ಎಂದು ಒಂದು ಸ್ಪಷ್ಟ ತೀರ್ಮಾನಕ್ಕೆ ಬರುವುದೇ ಈ ಅಧ್ಯಯನದ ನಿರ್ದಿಷ್ಟ ಉದ್ದೇಶ. 'ಬಿಟ್ಟಿ ಚಾಕ್ರಿ'ಯ ಸ್ವರೂಪ, ದಲಿತರ ಬದುಕಲ್ಲಿ ಅದರ ಪಾತ್ರ, ಅದನ್ನು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಚಾರಿತ್ರಿಕ ಆಯಾಮಗಳಲ್ಲಿ ಜೀತ ಪದ್ಧತಿ – ಜಾತಿ ವ್ಯವಸ್ಥೆಗಳ ಹಿನ್ನೆಲೆಯಲ್ಲಿ ಅರ್ಥೈಸುವ ಪ್ರಯತ್ನವನ್ನೂ ಈ ಅಧ್ಯಯನದಲ್ಲಿ ಮಾಡಲಾಗಿದೆ.

### 1.3 ವ್ಯಾಪ್ತಿ

ಜೀತ ಪದ್ಧತಿ ಮತ್ತು ತತ್ಸಂಬಂಧಿತ ಪದ್ಧತಿಗಳ ಅಧ್ಯಯನವು ಗ್ರಾಂಥಿಕವಾಗಿದ್ದು ಅದರ ಚಾರಿತ್ರಿಕ ಹರವು ಕ್ರಿಪೂ. 20–15 ಶತಮಾನಗಳಿಂದ ಈಗಿನ ಕಾಲದ ವರೆಗೂ ಇರುವುದು. ಅದು ಸಾಮಾಜಿಕ, ಆರ್ಥಿಕ, ಐತಿಹಾಸಿಕ ಮತ್ತು ಕಾನೂನಾತ್ಮಕ ವಿಶ್ಲೇಷಣೆಗಳನ್ನೂ ಒಳಗೊಂಡಿರುವುದು. ಜೀತ ಪದ್ಧತಿಯ ಬದಲಾಗುತ್ತಿರುವ ರೂಪಗಳನ್ನು ದಾಖಲಿಸಿ ಅರ್ಥೈಸುವ ಪ್ರಯತ್ನ ಮಾಡುವಾಗ ಅದಕ್ಕೆ ಸಂಬಂಧ ಪಟ್ಟ ಬಹುಮುಖ್ಯ ಸಾಹಿತ್ಯಕ ಚರ್ಚೆಗಳನ್ನೂ ಉಲ್ಲೇಖಿಸಲಾಗಿದೆ.

ಆದರೆ 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆಯು ಸಂಪೂರ್ಣವಾಗಿ ಕ್ಷೇತ್ರಾಧ್ಯಯನ ಕೇಂದ್ರಿತವಾಗಿದೆ. 'ಬಿಟ್ಟಿ ಚಾಕ್ರಿ'ಯ ಕ್ಷೇತ್ರಾಧ್ಯಯನಕ್ಕೆ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನಲ್ಲಿಯ ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿ ಎಂಬ ಮೂರು ಊರುಗಳಲ್ಲಿಯ ದಲಿತ ಕೇರಿಗಳನ್ನು ಆರಿಸಲಾಗಿದೆ. ಇಡೀ ತಾಲೂಕಿನ ಒಟ್ಟು 132 ಹಳ್ಳಿಗಳಲ್ಲಿ 43 ಹಳ್ಳಿಗಳಲ್ಲಿ ಬೇರೆಬೇರೆ ಪ್ರಮಾಣದಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರಿದ್ದಾರೆ (ಕೋಷ್ಟಕ 1, ಪುಟ 9). ಆದರೆ ಕ್ಷೇತ್ರಾಧ್ಯಯನಕ್ಕೆ ಆರಿಸಿದ ಮೂರು ಹಳ್ಳಿಗಳಲ್ಲಿಯ ದಲಿತ ಕೇರಿಗಳಲ್ಲಿ ಬಹುತೇಕ ಎಲ್ಲ ಕುಟುಂಬಗಳಲ್ಲೂ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದಾರೆ ಅಥವಾ 'ಬಿಟ್ಟಿ ಚಾಕ್ರಿ'ಯ ಹಿನ್ನೆಲೆ ಅವುಗಳಿಗಿದೆ[1]. ಪೂರ್ವಜರ ಕಾಲದಿಂದಲೂ ಅವರಲ್ಲಿ ಆ

---

1 ಬೈಲಹೊಂಗಲ ತಾಲೂಕಿನಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ 43 ಊರುಗಳಲ್ಲಿ ಮೂರು ಹಳ್ಳಿಗಳಲ್ಲಿ ಮಾತ್ರ ಬಹುತೇಕ ಎಲ್ಲಾ ದಲಿತ ಕುಟುಂಭಗಳು 'ಬಿಟ್ಟಿ' ಚಾಕ್ರಿ' ಮಾಡುತ್ತಿದ್ದುದರಿಂದಲೇ ಆ ಮೂರು ಊರುಗಳನ್ನು ಕ್ಷೇತ್ರಾಧ್ಯಯನಕ್ಕೆ ಆರಿಸಲಾಗಿತ್ತು.

ಸಂಪ್ರದಾಯವಿದೆ. ಆ ಮೂರು ಹಳ್ಳಿಗಳಲ್ಲಿಯ ದಲಿತರು ಮಾಡುತ್ತಿರುವ 'ಬಿಟ್ಟಿ ಚಾಕ್ರಿ'ಯನ್ನು ವಿವಿಧ ಆಯಾಮಗಳಲ್ಲಿ ಅರ್ಥೈಸಿ ವಿಶ್ಲೇಷಿಸಲಾಗಿದೆ.

'ಬಿಟ್ಟಿ ಚಾಕ್ರಿ' ಕುರಿತು ಕ್ಷೇತ್ರಾಧ್ಯಯನದಿಂದ ಕಂಡು ಹಿಡಿದ ಅಂಶಗಳ ಆಧಾರದ ಮೇಲೆ ಜೀತ ಪದ್ಧತಿಯ ವ್ಯಾಖ್ಯಾನದ ಮೇಲೆ ಬೆಳಕನ್ನು ಚೆಲ್ಲಿ ಕಾನೂನಾತ್ಮಕವಾಗಿಯೂ ಸಾಮಾಜಿಕವಾಗಿಯೂ ಅದರ ಬಗ್ಗೆ ತೆಗೆದುಕೊಳ್ಳಬೇಕಾಗಿರುವ ನಿಲುವು ಹಾಗೂ ಕ್ರಮಗಳ ಬಗ್ಗೆ ವಿವೇಚನೆ ಮಾಡುತ್ತಾ ಅಧ್ಯಯನವನ್ನು ನಡೆಸಿಕೊಂಡು ಹೋಗಲಾಗಿದೆ.

**1.4 ಸಂಶೋಧನಾ ವಿಧಾನ – ಭಾಗವಹಿಸುವ ಮೂಲಕ ಪರಿಣಾಮ ಬೀರುವ ಕ್ರಮಗಳೊಂದಿಗೆ ಅಧ್ಯಯನ**

ಅಧ್ಯಯನವು ಭಾಗವಹಿಸುವ ಮೂಲಕ ಪರಿಣಾಮ ಬೀರುವ ರೀತಿಯಲ್ಲಿ ಕೈಗೊಳ್ಳಲಾಗುವ ಅಧ್ಯಯನ ಅಥವಾ ಅನ್ವೇಷಣೆಯ / participatory action researchನ)[2] ಸಂಶೋಧನಾ ವಿಧಾನದ

---

[2] ಭಾಗವಹಿಸುವ ಮೂಲಕ ಪರಿಣಾಮ ಬೀರುವ ರೀತಿಯಲ್ಲಿ ಕೈಗೊಳ್ಳಲಾಗುವ ಅಧ್ಯಯನ(ಪಾರ್ಟಿಸಿಪೇಟರಿ ಆ್ಯಕ್ಷನ್ ರಿಸರ್ಚ್ participatory action research-PAR)ದ ಸಂಶೋಧನಾ ವಿಧಾನ(methodolgy)ವು ಹಲವಾರು ಎಳೆಗಳನ್ನು ಒಳಗೊಂಡಿದೆ. ಅದರಲ್ಲಿ ಮುಖ್ಯವಾದ ಎಳೆ **ಭಾಗವಹಿಸುವಿಕೆಯ ಅವಲೋಕನ** (participant observation). "Participatory Action Research is an extension of participant-observer research strategy." Rogers, E.S. et al. (1994). ಅದರ ಇನ್ನೊಂದು ಎಳೆ ಜನರ **ಭಾಗವಹಿಸುವಿಕೆ**. ಭಾಗವಹಿಸುವಿಕೆಯ ಅವಲೋಕನವನ್ನು ಆಧಾರವಾಗಿ ನಡೆಸುವ 'participatory research'ನಲ್ಲಿ ಸಾಮಾನ್ಯ ಜನರು ಪ್ರಮುಖ ಪಾತ್ರ ವಹಿಸುತ್ತಾರೆ. "... I will single out the central role of ordinary people play in motivating and sustaining the research efforts, the nature of the knowledge generation and the social change mechanism embedded in participatory research." (Park P. 1999.)

Participatory Action Researchನ ಇನ್ನೊಂದು ಎಳೆ **'ಪರಿಣಾಮ ಬೀರುವ ಕ್ರಮಗಳನ್ನು ಕೈಗೊಳ್ಳುವುದು'** (ಆ್ಯಕ್ಷನ್). ಆ್ಯಕ್ಷನ್ ರಿಸರ್ಚ್(action research) ಪರಿಕಲ್ಪನೆಯನ್ನು ಮೊದಲು ಕಟ್ಟಿ ರೂಪಕೊಟ್ಟವರು ಕರ್ಟ್ ಲೆವಿನ್ ಎಂಬ ಮನಶ್ಶಾಸ್ತ್ರಜ್ಞರು. ಅದನ್ನು ಅವರು ಮೊದಲು ಬಳಸಿದ್ದು 1944ರಲ್ಲಿ; ಮತ್ತು ಅದು ಪ್ರಥಮ ಬಾರಿಗೆ 1946ರ ಅವರ ಒಂದು ಪ್ರಬಂಧದಲ್ಲಿ ಕಂಡುಬರುತ್ತದೆ (Lewin 1946). "Action Research is a comparative research on the conditions and effects of various forms of social action and research leading to social action that uses a spiral of steps, each of which is composed of a circle of planning, action, and fact-finding about the result of the action." (Wikipedia, Kurt Lewin – viewed on August 5, 2018). 'ಆ್ಯಕ್ಷನ್ ರಿಸರ್ಚ್' ಪರಿಕಲ್ಪನೆಯಲ್ಲಿ **'ಬದಲಾವಣೆಯ ಸಿದ್ಧಾಂತ'**ದ ಪರಿಕಲ್ಪನೆಯೂ ಒಳಗೊಳ್ಳುತ್ತದೆ. ಅದರಲ್ಲಿ ಮೂರು ಹಂತಗಳು ಒಳಗೊಂಡಿರುತ್ತವೆ.: 'Make a radical change; minimize disruption of structure's operation; make sure change is adopted permanently.' (Wikipedia, Kurt Lewin, ibid.).

'ಆ್ಯಕ್ಷನ್ ರಿಸರ್ಚ್'ನಲ್ಲಿಯ ಹಲವಾರು ಅಂಗಗಳಲ್ಲಿ ಗುಂಪೊಂದರಲ್ಲಿ ಬದಲಾವಣೆ ತರುವಂತಹದ್ದು ಒಂದು. ಆ ಗುಂಪು ಒಂದು ಸಂಘಟನೆಯಾಗಿರಬಹು ಅಥವಾ ಒಂದು ಸಾಮಾಜಿಕ ವ್ಯವಸ್ಥೆಯಾಗಿರಬಹುದು (ನೋಡಿ: Dickens and Watkins, 1999). 'ಬದಲಾಣೆ' ಪರಿಕಲ್ಪನೆಗೆ ಪೂರಕವಾಗಿರುವ ಪ್ರಕ್ರಿಯೆ ಎಂದರೆ **'ತೊಡಗುವಿಕೆ ಮತ್ತು ವಿಮರ್ಶೆ'** (action and reflection) – '... addressing deep rooted organisational issues through recurring cycles of action and reflection' (ನೋಡಿ: ibid.). ನಿರಂತರ 'ತೊಡಗುವಿಕೆ ಮತ್ತು ವಿಮರ್ಶೆ' ಅಂದರೆ ಒಂದು 'ತೊಡಗುವಿಕೆ' ನಂತರ ಅದರ ಮೇಲೆ 'ವಿಮರ್ಶೆ' ಹಾಗೂ ಆ 'ವಿಮರ್ಶೆ' ನಂತರ ಇನ್ನೊಂದು ಹಂತದ 'ತೊಡಗುವಿಕೆ'. ಹೀಗೆ ಸಂವಾದೀಯ 'ತೊಡಗುವಿಕೆ ಮತ್ತು ವಿಮರ್ಶೆ'ಗಳಿಂದ ಹುಟ್ಟುವ ಜ್ಞಾನವೇ 'ಆ್ಯಕ್ಷನ್ ರಿಸರ್ಚ್' ಎನಿಸುವುದು. ಹೊಸ ಜ್ಞಾನ ಪಡೆಯುವುದರ ಜೊತೆಗೆ ಬದಲಾವಣೆ ತರುವುದೂ ಅನ್ವೇಷಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. "The researcher enters a real-world situation and aims both to improve it and to acquire knowledge." (Chekland P and Holwell S. 1998). 'ವಿಮರ್ಶೆ'ಯಲ್ಲಿಯೂ ಎರಡು ಪ್ರಮುಖ ಪ್ರಭೇದಗಳನ್ನು ಗುರುತಿಸಲಾಗಿದೆ: 'ವಿವೇಚನಾತ್ಮಕ ವಿಮರ್ಶೆ ಅಥವಾ ದೃಷ್ಟಿಕೋನ' ಮತ್ತು 'ತಕ್ಷಣ ಫಲಿತಾಂಶದ ವಿಮರ್ಶೆ ಅಥವಾ ದೃಷ್ಟಿಕೋನ' ('critical versus pragmatic scientific orientation'). "The pragmatic orientation is well suited for contexts where concerted and immediate action is needed, whereas the critical is preferable where transformative action needs to be preceded by critical thinking and reflection. In the former, power to act is a desired outcome, and in the latter, unequal and invisible power relations need to be unveiled before they can be transformed." (Andrews WJ and Lindhutt E 2008. P. 95).

/ methodolgyಯ ಚೌಕಟ್ಟನ್ನು ಇಟ್ಟುಕೊಂಡಿದೆ. ಅದು ಒಂದು ವಿಶಾಲ ಆದರ್ಶವಾಗಿದ್ದು ಅದನ್ನು ನಿಖರ ಪ್ರಯೋಗಕ್ಕೆ ಅಳವಡಿಸಿಲ್ಲ. ಅದರಲ್ಲಿ ಹಲವಾರು ವಿಧಾನ ಅಥವಾ ಉಪವಿಧಾನ(method)ಗಳನ್ನು ಬಳಸಲಾಗಿದೆ. ಗುಣಾತ್ಮಕ ವಿಧಾನ ಕೇಂದ್ರಿತವಾಗಿದ್ದರೂ ಸಂಖ್ಯಾತ್ಮಕ ಹಾಗೂ ಪ್ರಮಾಣಾತ್ಮಕ ವಿವರಗಳನ್ನು ಪಡೆಯುವ ವಿಧಾನಗಳನ್ನೂ ಬಳಸಲಾಗಿದೆ. ಕ್ಷೇತ್ರಾಧ್ಯಯನವನ್ನೂ ಗ್ರಾಂಥಿಕ ಮಾಹಿತಿಯನ್ನೂ ಅವಲಂಬಿಸಿದೆ. ಅವನ್ನು ಅಧ್ಯಯನವು ರೂಪುಗೊಳ್ಳುತ್ತಿರುವಾಗ ಅವಶ್ಯಕತೆಗೆ ತಕ್ಕಂತೆ ಬಳಸಿಕೊಂಡಿರುವ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿದೆ. ಸಂಶೋಧನಾ ವಿಧಾನದ ಚೌಕಟ್ಟಿನಲ್ಲಿ ಉಪವಿಧಾನಗಳನ್ನು ಬಳಸಿ ವಸ್ತುನಿಷ್ಠ ಗ್ರಹಿಕೆಗಳನ್ನು ಪಡೆಯಲು ವಹಿಸಿದ ಎಚ್ಚರಿಕೆಗಳ ಬಗ್ಗೆಯೂ ಈ ಅಧ್ಯಾಯದ ಮುಂದಿನ ಪರಿಚ್ಛೇಧಗಳಲ್ಲಿ ಪ್ರಸ್ತಾಪಿಸಲಾಗಿದೆ.

ಭಾಗವಹಿಸುವಿಕೆ ಅಥವಾ ಸಹಭಾಗಿತ್ವವನ್ನು ಹಲವಾರು ಸ್ತರಗಳಲ್ಲಿ ಅರ್ಥೈಸಲಾಗಿದೆ. ಸಂಶೋಧಕನ ಭಾಗವಹಿಸುವಿಕೆಯ ಅವಲೋಕನ (participant observation) ಮಾತ್ರವಲ್ಲದೇ ಕ್ಷೇತ್ರಾಧ್ಯಯನದ ಮೂಲ ವಿಷಯವಾದ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವ ಕೆಲವರು ಸಂಶೋಧನೆಯ ಕರ್ತೃ (subject)ಗಳಾಗಿ ಸಂಶೋಧನೆಯಲ್ಲಿ ಭಾಗಿಗಳಾಗುವಂತೆ ನೋಡಿಕೊಳ್ಳುವುದೂ ಒಂದು ಅಂಶ. ಅಲ್ಲದೇ ಸಂಶೋಧನೆಯ ಫಲಿತಗಳನ್ನು 'ಬಿಟ್ಟಿ ಚಾಕ್ರಿ' ಮಾಡುವವರಿಗೆ ನ್ಯಾಯ ಒದಗಿಸಬೇಕಾದಲ್ಲಿ ಅಂತಹ ಕಾರ್ಯಕ್ಕೆ ನೆರವಾಗುವ ರೀತಿಯಲ್ಲಿ ನಾಯಕತ್ವ ವಹಿಸುವಂತೆ ಮಾಡುವುದು ಕೂಡಾ ಸಂಶೋಧನೆಯ ಒಂದು ಭಾಗ. ಸಂಶೋಧನಾ ಪ್ರಕ್ರಿಯೆಯ ಸಮಯದಲ್ಲಿ ವಸ್ತುನಿಷ್ಠ ಹಾಗೂ ವೈಜ್ಞಾನಿಕ ಮಾಹಿತಿಯನ್ನು ಕಲೆಹಾಕುವುದರ ಜೊತೆಗೆ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವ ಕೆಲವರನ್ನು ಅಗತ್ಯವೆನಿಸಿದರೆ ಅದನ್ನು ಮಾಡುವವರಿಗೆ ಜೀತ ಪದ್ಧತಿ ರದ್ದತಿ ಕಾನೂನಿನನ್ವಯ ನ್ಯಾಯ ಒದಗಿಸುವ ನಾಯಕರಾಗಿ ಬೆಳೆಯುವಂತೆ ನೋಡಿಕೊಳ್ಳಲಾಗುವುದು.

ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿ ಗ್ರಾಮಗಳಲ್ಲಿಯ ದಲಿತ ಕೇರಿಗಳಲ್ಲಿಯ ಕುಟುಂಬಗಳ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಆಯಾಮಗಳನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವ ಮತ್ತಿತರ ದಲಿತರು ಹಾಗೂ ಭೂಮಾಲಿಕರ ನಡುವಿನ

---

Participatory Action Researchನ ಹಲವಾರು ಸಾಧ್ಯತೆಗಳನ್ನು Greenword DJ, Whyte WF, Harkavy I ರವರ "Participatory Action Research as a Process and as a Goal" ಪ್ರಬಂಧದಲ್ಲಿ ಕಾಣಬಹುದು. "Participatory action research is presented as a social research method and process, and as a goal that social research should always strive to achieve." (Greenword et.al. 1993. p.175). ಯಾವುದೇ Participatory Action Researchನಲ್ಲಿ ಜನರ ಭಾಗವಹಿಸುವಿಕೆಯನ್ನು ಇಂತಿಷ್ಟೇ ಇರಬೇಕು ಅಥವಾ ಹೀಗೇ ಇರಬೇಕು ಎಂದು ಮೊದಲೇ ನಿರ್ಧರಿಸಲಿಕ್ಕಾಗುವುದಿಲ್ಲ. ಅದು ಸಾಧಿಸಬೇಕಾದ ಗುರಿಯಾಗಿದ್ದು ಅದರಲ್ಲಿ ಹಲವಾರು ಅಂಶಗಳು ಒಳಗೊಂಡಿವೆ (ನೋಡಿ: ibid.).

ಪ್ರಸ್ತುತ ಅಧ್ಯಯನದಲ್ಲಿ 'ಪಾರ್ಟಿಸಿಪೇಟರಿ ಆ್ಯಕ್ಷನ್ ರಿಸರ್ಚ್'ನಲ್ಲಿಯ ಜನರ ಭಾಗವಹಿಸುವಿಕೆಯ ಅಂಶ ಸಂಪೂರ್ಣವಾಗಿ ಒಂದು **ಸಾಧಿಸಬೇಕಾದ ಆಶಯವಾಗಿದ್ದು ಅದರ ಆರಂಭಿಕ ಪ್ರಯತ್ನಗಳನ್ನು ಮಾತ್ರ** ಇಲ್ಲಿ ದಾಖಲಿಸಿದೆ ಎಂದು ಹೇಳಬಹುದು. ಅಧ್ಯಯನದ ಪರಿಣಾಮವಾಗಿ ಉದ್ದೇಶಿತ ಜನರ ಮೇಲೆ ಪರಿಣಾಮ ಬೀರುವ ಕ್ರಮಗಳನ್ನು ಕೈಗೊಳ್ಳುವ ಅಂಶವೂ ಈ ಅಧ್ಯಯನದ ಮುಕ್ತಾಯದ ಹಂತದಲ್ಲಿ ಒಂದು ಸೀಮಿತ ಗುರಿಯನ್ನು ಮಾತ್ರ ತಲುಪಿದ್ದು ಅಧ್ಯಯನದ ಮುಂದಿನ ಹಂತವನ್ನು ಎತ್ತಿಕೊಳ್ಳುವ ಮತ್ತು ಅದರಲ್ಲಿ ಜನರ ಭಾಗವಹಿಸುವಿಕೆಯ ಅಂಶಗಳ ಬೇರೆ ಮಜಲುಗಳನ್ನು ಮುಟ್ಟುವ ನಿರೀಕ್ಷೆ ಇದೆ.

ಶ್ರಮಿಕ ಸಂಬಂಧಗಳನ್ನು ಸ್ವಲ್ಪ ಮಟ್ಟಿಗೆ ಜಾತಿ ಮತ್ತು ವರ್ಗ ಸಂಬಂಧಗಳ ಚೌಕಟ್ಟಿನಲ್ಲಿಯೂ ವಿಶ್ಲೇಷಿಸಲಾಗಿದೆ.

ಆದ್ದರಿದ ಅಧ್ಯಯನಕ್ಕೆ ಬಳಸಿದ ಸಂಶೋಧನಾ ವಿಧಾನವು ಒಂದು ರೀತಿಯಲ್ಲಿ ಕ್ಷೇತ್ರಾಧ್ಯಯನಕ್ಕೆ ನಡೆಸಿದ 'ಬಿಟ್ಟಿ ಚಾಕ್ರಿ' ಕುರಿತಾಗಿಯೇ ಮುಖ್ಯವಾಗಿ ಅನ್ವಯಿಸುತ್ತದೆ.

**1.4.1 ಬೈಲಹೊಂಗಲ ತಾಲೂಕು ಮತ್ತು ಅಲ್ಲಿಯ ಮೂರು ಹಳ್ಳಿಗಳ ಆಯ್ಕೆ:**

ಇದೇ ಅಧ್ಯಾಯದ 'ವೈಯಕ್ತಿಕ ತಾತ್ವಿಕ ನೆಲೆಗಳು' (1.5) ಎಂಬ ಪರಿಚ್ಛೇಧದಲ್ಲಿ ವಿವರಿಸಿದ ಹಾಗೆ 1987ರಿಂದಲೇ ಜೀತ ಪದ್ಧತಿಯಿಂದ ಪ್ರಭಾವಿತನಾಗಿ ಜೀತ ಪದ್ಧತಿಯ ನಿರ್ಮೂಲನೆಗೆ ರಾಜ್ಯಾದ್ಯಂತವೂ ರಾಜ್ಯದ ಹೊರಗೂ ತೊಡಗಿಸಿಕೊಂಡಿದ್ದೆನು. ಅದಕ್ಕೋಸ್ಕರ ಜೀತ ವಿಮುಕ್ತಿ ಕರ್ನಾಟಕ – ಜೀವಿಕವೆಂಬ ಸಂಘಟನೆ ಕಟ್ಟಿ ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ವಿವಿಧ ಚಟುವಟಿಕೆಗಳಲ್ಲಿ ಕಾರ್ಯತತ್ಪರನಾಗಿದ್ದೆನು. ಅದರಲ್ಲಿ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕೂ ಒಂದು. ಅಲ್ಲಿ 2006ರಿಂದಲೂ ಕೆಲಸ ನಿರ್ವಹಿಸುತ್ತಿದ್ದೆನು. ಜೀತದ ಬಗ್ಗೆ ಕೆಲಸ ಮಾಡುವ ಆರೇಳು ಕಾರ್ಯಕರ್ತರು ಇಡೀ ತಾಲೂಕಿನಾದ್ಯಂತ ಹಳ್ಳಿಗಳಲ್ಲಿ ಸಂಪರ್ಕವನ್ನಿಟ್ಟುಕೊಂಡಿದ್ದರು. ಆ ತಾಲೂಕಿನ ಜೀವಿಕದ ಹಿರಿಯ ಕಾರ್ಯಕರ್ತರಿಂದಲೇ ಸುಮಾರು 2012ರಿಂದ ದೊರಕಿದ ಮಾಹಿತಿಯಿಂದ ಮೊದಲ ಬಾರಿ 'ಬಿಟ್ಟಿ ಚಾಕ್ರಿ'ಯ ಬಗ್ಗೆ ನನ್ನ ಕುತೂಹಲ ಸೆಳೆಯಿತು. ಆ ಕಾರ್ಯಕರ್ತರಲ್ಲಿ ಹಲವರು 'ಬಿಟ್ಟಿ ಚಾಕ್ರಿ' ಕುಟುಂಬದಿಂದ ಬಂದಿರುವುದೂ ಮಹತ್ವದ್ದಾಗಿತ್ತು.

ಅವರ ಮೂಲಕ ಇಡೀ ತಾಲೂಕಿನಲ್ಲಿ ಅಂತಹ 'ಬಿಟ್ಟಿ ಚಾಕ್ರಿ' ಮಾಡುವ ಜನರಿದ್ದ ಊರುಗಳನ್ನು ಪಟ್ಟಿ ಮಾಡಿದೆನು (ಕೋಷ್ಟಕ 1: ಪುಟ 9). ಪಟ್ಟಿ ಮಾಡುವಾಗ ಐದಕ್ಕಿಂತ ಕಡಿಮೆ 'ಬಿಟ್ಟಿ ಚಾಕ್ರಿ' ಮಾಡುವವರಿರುವ ಹಳ್ಳಿಗಳು ಹಾಗೂ ಐದು ಮತ್ತು ಅದಕ್ಕಿಂತ ಜಾಸ್ತಿ ಇರುವ ಹಳ್ಳಿಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡಿದೆನು. ಹೆಚ್ಚು ಮಂದಿ 'ಬಿಟ್ಟಿ ಚಾಕ್ರಿ' ಮಾಡುವ ಊರುಗಳಲ್ಲಿ ಬಹುತೇಕ ಇಡೀ ದಲಿತ ಕೇರಿಯಲ್ಲಿರುವವರೆಲ್ಲರೂ 'ಬಿಟ್ಟಿ ಚಾಕ್ರಿ' ಮಾಡುವ ಕೆಲವು ಊರುಗಳನ್ನು ಗುರುತಿಸಲಾಗಿತ್ತು. ಅವುಗಳಲ್ಲಿ ಮುಖ್ಯವಾಗಿ ಗುರುತಿಸಿದ್ದು ಕೆಂಗಾನೂರು ಗ್ರಾಮ ಪಂಚಾಯತಿ ವ್ಯಾಪ್ತಿಗೆ ಬರುವ ಜಾಲಿಕೊಪ್ಪ ಊರು. ಅಲ್ಲಿ ಎಲ್ಲಾ ದಲಿತ ಕುಟಂಬಗಳು 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದಾರೆ ಎಂಬ ಮಾಹಿತಿ ಸಿಕ್ಕಿದರೆ ಅದರ ಪಕ್ಕದಲ್ಲಿ ಅರವಳ್ಳಿ ಮತ್ತು ಲಿಂಗದಳ್ಳಿ ಊರುಗಳಿದ್ದು ಅವುಗಳಲ್ಲಿಯೂ ಕೆಲವು ಮಂದಿ 'ಬಿಟ್ಟಿ ಚಾಕ್ರಿ' ಮಾಡುತ್ತಿರುವುದನ್ನು ತಿಳಿದುಬಂತು.

**ಕೋಷ್ಟಕ 1**

## ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನಲ್ಲಿ ಬಿಟ್ಟಿ ಚಾಕ್ರಿ ಮಾಡುವವರು ಇರುವ ಊರುಗಳು

| ಕ್ರಸ | ಊರು | ಗ್ರಾಪಂ | ಹೋಬಳಿ | ಬಿಟ್ಟಿಚಾಕ್ರಿಯ ಕುಟುಂಬಗಳು |
|---|---|---|---|---|
| | ಐದಕ್ಕಿಂತ ಹೆಚ್ಚು ಮಂದಿ ಬಿಟ್ಟಿ ಚಾಕ್ರಿ ಮಾಡುವವರು ಇರುವ ಊರುಗಳು | | | |
| ೧. | ಸಂಗೊಳ್ಳಿ | ಸಂಗೊಳ್ಳಿ | ಬೈಲಹೊಂಗಲ | ೦೬ |
| ೨. | ಜಾಲಿಕೊಪ್ಪ | ಕೆಂಗನೂರು | " | ೨೧ |
| ೩. | ಲಿಂಗದ ಹಳ್ಳಿ | " | " | ೦೬ |
| ೪. | ಅರವಳ್ಳಿ | " | " | ೦೫ |
| ೫. | ಸವಟಗಿ | ಕೆಬಿ ಪಟ್ಟಿಹಾಳ | " | ೦೭ |
| ೬ | ಚಿವಟಗುಂಡಿ | ಚಿವಟಗುಂಡಿ | ನೇಸರ್ಗಿ | ೨೨ |
| ೭ | ಎರಡಾಲ | ಬೈಲವಾಡ | " | ೧೨ |
| ೮ | ಚಿಕ್ಕ ಬಾಗೇವಾಡಿ | ಚಿಕ್ಕ ಬಾಗೇವಾಡಿ | " | ೨೨ |
| ೯ | ಮದನಬಾವಿ | ಮದನಬಾವಿ | " | ೦೭ |
| ೧೦. | ತುರುಮರಿ | ತುರುಮರಿ | ಕಿತ್ತೂರು | ೧೦ |
| | ಒಂದರಿಂದ ನಾಲ್ಕರ ತನಕ ಬಿಟ್ಟಿ ಚಾಕ್ರಿ ಮಾಡುವವರು ಇರುವ ಊರುಗಳು | | | |
| ೧೧. | ಗರಜೂರು | ಸಂಗೊಳ್ಳಿ | ಬೈಲಹೊಂಗಲ | ೦೧ |
| ೧೨. | ಕೆಂಗನೂರು | ಕೆಂಗನೂರು | " | ೦೨* |
| ೧೩. | ಬೆಳವಡಿ | ಬೆಳವಡಿ | " | ೦೩* |
| ೧೪. | ಹೊಳಿಹೊಸೂರು | ಹೊಳಿಹೊಸೂರು | " | ೦೩ |
| ೧೫. | ಕುರಕುಂದ | " | " | ೦೧ |
| ೧೬. | ದೊಡ್ಡವಾಡ | ದೊಡ್ಡವಾಡ | " | ೦೩ |
| ೧೭. | ಅಮಟೂರು | ಅಮಟೂರು | " | ೦೩ |
| ೧೮. | ನಯಾನಗರ | " | " | ೦೩* |
| ೧೯. | ಒಕ್ಕುಂದ | ಒಕ್ಕುಂದ | " | ೦೪* |
| ೨೦. | ಕೊರವಿಕೊಪ್ಪ | " | " | ೦೧* |
| ೨೧. | ಕೆಬಿ ಪಟ್ಟಿಹಾಳ | ಕೆಬಿ ಪಟ್ಟಿಹಾಳ | " | ೦೩ |
| ೨೨. | ಗೋವಿನಕೊಪ್ಪ | ಗೋವಿನಕೊಪ್ಪ | " | ೦೧ |
| ೨೩ | ಚಿಕ್ಕ ಬೆಳಿಕಟ್ಟಿ | " | " | ೦೧ |
| ೨೪. | ಸಿದ್ದ ಸಮುದ್ರ | ಬೆಳವಡಿ | " | ೦೨* |
| ೨೫. | ತುರುಕರ ಶಿಗೇಹಳ್ಳಿ | ತುರುಕರ ಶಿಗೇಹಳ್ಳಿ | " | ೦೧ |
| ೨೬. | ಮೇಟ್ಯಾಲ | " | " | ೦೨* |
| ೨೭. | ಮೇಕಲ ಮರಡಿ | ಮೇಕಲ ಮರಡಿ | ನೇಸರ್ಗಿ | ೦೩ |
| ೨೮. | ಕುಲೇರ ಕೊಪ್ಪ | ನವಲಗಟ್ಟಿ | ನೇಸರ್ಗಿ | ೦೩ |
| ೨೯. | ಒಣ್ಣೂರ | ಒಣ್ಣೂರ | " | ೦೩ |
| ೩೦. | ನಾಗನೂರು | ನಾಗನೂರು | " | ೦೨* |
| ೩೧. | ನವಲಗಟ್ಟಿ | ನವಲಗಟ್ಟಿ | " | ೦೪ |
| ೩೨. | ಯರಗುದ್ದಿ | ಮದನಬಾವಿ | " | ೦೪ |
| ೩೩. | ದೇಶನೂರು | ದೇಶನೂರು | " | ೦೨ |
| ೩೪. | ಪೊಲಾರಕೊಪ್ಪ | ಪೊಲಾರಕೊಪ್ಪ | " | ೦೧* |
| ೩೫. | ನೇಗಿನಹಾಳ | ನೇಗಿನಹಾಳ | ಕಿತ್ತೂರು | ೦೩ |
| ೩೬. | ಹಿರೇ ನಂದಿಹಳ್ಳಿ | " | " | ೦೧ |
| ೩೭. | ದಾಸ್ತಿಕೊಪ್ಪ | ದಾಸ್ತಿಕೊಪ್ಪ | " | ೦೨* |
| ೩೮. | ವೀರಾಪುರ | " | " | ೦೧ |
| ೩೯. | ಕೊಟಬಾಗಿ | ಕಲಬಾಂವಿ | " | ೦೧ |
| ೪೦. | ಹುಣಸಿಕಟ್ಟಿ | ಹುಣಸಿಕಟ್ಟಿ | " | ೦೨ |
| ೪೧. | ಔರಾದಿ | ಔರಾದಿ | " | ೦೩ |
| ೪೨. | ಬಸ್ಸಾಪುರ | " | " | ೦೨ |
| ೪೩ | ಚಿಕ್ಕ ನಂದಿಹಳ್ಳಿ | ಚಿಕ್ಕ ನಂದಿಹಳ್ಳಿ | " | ೦೨ ಒಟ್ಟು ೧೯೧ |

* ಈ ಊರುಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರು ಇದ್ದಾರೆಂದು ತಿಳಿದುಬಂದಿದ್ದರೂ ಅವರಲ್ಲಿ ಯಾರೂ ಅದನ್ನು ಒಪ್ಪಿಕೊಳ್ಳುತ್ತಿಲ್ಲ. ಕಾರಣ ಹಿಂದೆ ಅವರಲ್ಲಿ ಜೀತದಾಳುಗಳೆಂದು ಗುರುತಿಸಿ ಅವರಿಗೆ ಜೀತ ಕಾನೂನಿನ ಪ್ರಕಾರ ನ್ಯಾಯ ಸಿಗುವಂತೆ ಅವರೇ ಜಿಲ್ಲಾಧಿಕಾರಿಗಳಿಗೆ ಅರ್ಜಿ ಸಲ್ಲಿಸಿದಾಗ ಅವರ ಮಾಲೀಕರು ಅದನ್ನು ತಿಳಿದುಕೊಂಡು ಅವರು ತಮ್ಮ ಅರ್ಜಿಗಳನ್ನು ವಾಪಾಸು ಪಡೆದು ಅವರ ಮೇಲೆ ವಿವಿಧ ಬೆದರಿಕೆಗಳನ್ನು ಒಡ್ಡಿದ್ದರು. 'ಬಿಟ್ಟಿ ಚಾಕ್ರಿ' ಮಾಡುವುದನ್ನು ಕೂಡಾ ಒಪ್ಪಿಕೊಂಡರೆ ತಮ್ಮ ಮೇಲೆ ಇದೇ ತರಹ ತೊಂದರೆಯಾಗಬಹುದೆಂಬ ಭಯದಿಂದ ಒಪ್ಪಿಕೊಳ್ಳುತ್ತಿಲ್ಲ.

ಜಾಲಿಕೊಪ್ಪದ ಜೊತೆಗೆ ನೇಸರ್ಗಿ ಹೋಬಳಿಯ ಗ್ರಾಮ ಪಂಚಾಯತಿ ಕೇಂದ್ರವಾಗಿರುವ ಚಿವಟಗುಂಡಿ ಮತ್ತು ಇನ್ನೊಂದು ಗ್ರಾಮ ಪಂಚಾಯತಿ ಕೇಂದ್ರವಾಗಿರುವ ಚಿಕ್ಕಬಾಗೇವಾಡಿಗಳಲ್ಲಿಯೂ ಬಹುತೇಕ ಎಲ್ಲರೂ 'ಬಿಟ್ಟಿ ಚಾಕ್ರಿ'ಯನ್ನು ಮಾಡುತ್ತಿರುವುದು ತದನಂತರ ಗಮನಕ್ಕೆ ಬಂತು. ಹೀಗೆ 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆಗೆ ಬೈಲಹೊಂಗಲ ತಾಲೂಕಿನ ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿ ಎಂಬ ಮೂರು ಊರುಗಳಲ್ಲಿಯ ದಲಿತ ಕೇರಿಗಳನ್ನು ಆರಿಸಿಕೊಳ್ಳಲಾಯಿತು.

**1.4.2 ಅಧ್ಯಯನದ ಕಾಲಘಟ್ಟಗಳು, ಅಧ್ಯಯನದ ವಿವಿಧ ಪ್ರಯತ್ನಗಳು:**

2013ರ ಆರಂಭದಲ್ಲಿ ಜಾಲಿಕೊಪ್ಪ, ಅರವಳ್ಳಿ ಮತ್ತು ಲಿಂಗದಳ್ಳಿ ಊರುಗಳನ್ನು ಭೇಟಿಯಾಗಿ ಕೆಲವೊಂದು ಪ್ರಾಥಮಿಕ ಮಾಹಿತಿಗಳನ್ನು ಒಟ್ಟುಗೂಡಿಸಿದೆನು. 2013ರ dÆನ್ ತಿಂಗಳಲ್ಲಿ ಕರ್ನಾಟಕ ಸರ್ಕಾರವು ರಚಿಸಿದ ಜೀತ ಪದ್ಧತಿ ಪರಿಶೀಲನಾ ಸಮಿತಿಯಲ್ಲಿ ಭಾಗವಹಿಸುತ್ತಿದ್ದುದರಿಂದಲೂ ನವದೆಹಲಿಯ ಕಾನೂನು ವಿಶ್ವ ವಿದ್ಯಾಲಯದ ಸಹಯೋಗದೊಂದಿಗೆ ಜೀವಿಕ ಮತ್ತಿತರ ಸಂಘಟನೆಗಳು ಸೇರಿ ಕೇಂದ್ರ ಸರ್ಕಾರ ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಗಳು ಒಪ್ಪಿಕೊಳ್ಳುವಂತಹ ಜೀತ ಕಾನೂನಿನಡಿ ಹೊಸ ನಿಯಾಮಾವಳಿಗಳನ್ನು ರಚಿಸುವ ಕಾರ್ಯದ ನೇತೃತ್ವ ವಹಿಸಿದ್ದುದರಿಂದಲೂ 2013 ಮತ್ತು 2014ರ ಹೆಚ್ಚಿನ ಭಾಗ 'ಬಿಟ್ಟಿ ಚಾಕ್ರಿ'ಯ ನೇರ ಅಧ್ಯಯನದಲ್ಲಿ ತೊಡಗಿಸಲು ಆಗಿರಲಿಲ್ಲ. ಅಧ್ಯಯನದಿಂದ ಪರಿಣಾಮ ಬೀರುವಂತೆ ಮಾಡುವುದೂ ಅಧ್ಯಯನ ವಿಧಾನದ ಭಾಗವಾಗಿರುವುದರಿಂದ

ಸರ್ಕಾರದ ನೀತಿ ನಿಯಮ, ಧೋರಣೆಗಳ ಮೇಲೆ ಪರಿಣಾಮ ಬೀರುವಂತೆ ಮಾಡುವ ಅವಕಾಶಗಳು ಅಧ್ಯಯನದ ಕಾಲ ವ್ಯಾಪ್ತಿಯ ಸಮಯದಲ್ಲೇ ತಾನಾಗಿ ಬಂದೊದಗಿದ್ದರಿಂದ ಅವನ್ನು 'ಬಿಟ್ಟಿ ಚಾಕ್ರಿ' ಕುರಿತಾಗಿ ಸರ್ಕಾರದ ಮೇಲೆ ಪರಿಣಾಮ ಬೀಳುವಂತೆ ಬಳಸಿಕೊಂಡೆನು. 2014ರ ಮಧ್ಯಭಾಗದಿಂದ ವ್ಯವಸ್ಥಿತವಾಗಿ 'ಬಿಟ್ಟಿ ಚಾಕ್ರಿ' ಕುರಿತು ಜಾಲಿಕೊಪ್ಪದಲ್ಲಿ ಅನ್ವೇಷಣೆ ಮಾಡಲು ನಿರತನಾದೆನು. ಅಕ್ಟೋಬರ್ 20ರಿಂದ 22ರ ಜಾಲಿಕೊಪ್ಪದ ದಲಿತರ ಒಂದು ಮನೆಯಲ್ಲಿ ವಾಸವಿದ್ದು ಅವರ ಒಲವನ್ನು ಸಂಪಾದಿಸುವ ಪ್ರಯತ್ನವನ್ನು ಆರಂಭಿಸಿದೆನು. ದಲಿತ ಕೇರಿಯ ಎಲ್ಲ ಕುಟುಂಬಗಳ ಪರಿಚಯ ಮತ್ತು ಮಾಹಿತಿ ಪಡೆಯಲು ಆರಂಭಿಸಿದೆನು. ದಲಿತೇತರ ಓಣಿಗಳನ್ನೂ ಊರ ಸುತ್ತಲೂ ಇರುವ ಹೊಲಗದ್ದೆಗಳನ್ನೂ ಅವುಗಳಲ್ಲಿ ಕೆಲಸ ಮಾಡುವ ಭೂಮಾಲಿಕರನ್ನೂ ಕೂಲಿಯಾಳುಗಳನ್ನೂ ಪರಿಚಯ ಮಾಡಿಕೊಂಡೆನು. ಜಾಲಿಕೊಪ್ಪ ಮತ್ತು ಅರವಳ್ಳಿ ಗ್ರಾಮಗಳ ದಲಿತ ಕೇರಿಗಳಲ್ಲಿಯೂ ದಲಿತೇತರ ಓಣಿಗಳಲ್ಲಿಯೂ ಕೆಲವು ಬಾರಿ ಸುತ್ತಾಡಿದೆನು. ಅಲ್ಲಿಯ ಕೆಲವು ಮಂದಿ ಜೊತೆ ಸಂಭಾಷಣೆ ಮಾಡಿದೆನು. ಮೊದಲಿನ ದಿನವೇ ಜಾಲಿಕೊಪ್ಪದ ದಲಿತೇತರ ಭಾಗದಲ್ಲಿ ಸುತ್ತಾಡುತ್ತಿದ್ದಾಗ ಮಾತುಕತೆಗೆ ತೊಡಗಿದ ಒಬ್ಬ ದಲಿತೇತರರು "ಊರಲ್ಲಿ 'ಬಿಟ್ಟಿ ಚಾಕ್ರಿ'ಯನ್ನು ದಲಿತರು ರೈತರಿಗೆ ಇನ್ನೂ ಮಾಡುತ್ತಿದ್ದಾರೆ; ಅದು 30% ಈಗಲೂ ಇದೆ" ಎಂದು ನೇರವಾಗಿ ನನ್ನ ಮುಂದೆ ಒಪ್ಪಿಕೊಂಡಿದ್ದರು.

ನಂತರದ ಸಮಯದಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಕೆಲವರ ಅನುಭವಗಳನ್ನೂ 'ಜೀವನ ಚಿತ್ರಗ'ಳನ್ನೂ ಮೂರು ಮಂದಿಯ ದಿನಚರಿಗಳನ್ನೂ ಹದಿನೈದು ದಿನಕ್ಕೊಂದು ಬಾರಿಯಂತೆ ಒಟ್ಟು ಮಾಡಿದೆನು. ನಂತರ 2015ರ ಅಕ್ಟೋಬರ್ ತಿಂಗಳಲ್ಲಿ ಐದು ದಿನ (21–25) ಪುನಃ ಜಾಲಿಕೊಪ್ಪದ ದಲಿತರ ಮನೆಯೊಂದರಲ್ಲಿ ವಾಸವಿದ್ದು ಎಲ್ಲಾ ಕುಟಂಬಗಳ ಆಳವಾದ ಪರಿಚಯ ಮಾಡಿಕೊಂಡೆನು.

ಅಲ್ಲಿದ್ದ ಐದು ದಿನಗಳೂ ದೊಡ್ಡ ಹಬ್ಬದ ದಿನಗಳು. 21ರಂದು ಮಹಾನವಮಿ, 22ರಂದು ಆಯುಧ ಪೂಜೆ, 23ರಂದು ವಿಜಯ ದಶಮಿ ಮತ್ತು 24ರಂದು ಮೊಹರಮ್. ಮೊಹರಂ ಆಚರಣೆಯ ಪ್ರಯುಕ್ತ ಎಲ್ಲಾ ಜಾತಿಯವರು ಊರವರು ಸೇರಿ ಊರಿನಿಂದ ಮಲಪ್ರಭಾ ನದಿ ದಂಡಕ್ಕೆ ಮೆರವಣಿಗೆ ಹೊರಟು ಅಲ್ಲಿ ಆಚರಿಸುವ ಹಬ್ಬದಲ್ಲಿ ಭಾಗವಹಿಸಿದೆನು. ಪುನಃ ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ಜಾಲಿಕೊಪ್ಪಕ್ಕೆ ಭೇಟಿಯಾಗಿ ಅವರ ದಿನಚರಿಗಳನ್ನು ಇನ್ನೂ ಆಳವಾಗಿ ಗಮನಿಸಿದೆನು. ಅವರಲ್ಲಿ ಕೆಲವರ 'ಜೀವನ ಚಿತ್ರ'ಗಳನ್ನು ಇನ್ನೂ ವಿವರವಾಗಿ ದಾಖಲಿಸಿದೆನು. ಮೂರು ಮಂದಿಯ ದಿನಚರಿಗಳನ್ನು ಪ್ರತಿ ವಾರವೆಂಬಂತೆ ಜೀವಿಕದ ಕಾರ್ಯರಿಂದ ಒಟ್ಟುಗೂಡಿಸಿದೆನು.

2016ರ ಜನವರಿಯಲ್ಲಿ ಅದೇ ರೀತಿ ಚಿವಟಗುಂಡಿಯಲ್ಲಿ 4, 5, 6ರಂದು ಮೂರು ದಿನ ದಲಿತ ಕೇರಿಯಲ್ಲಿ ವಾಸವಿದ್ದು ಅಲ್ಲಿಯ ಎಲ್ಲಾ ದಲಿತ ಮನೆಗಳನ್ನು ಪರಿಚಯ ಮಾಡಿಕೊಂಡೆನು. ಹಾಗೆಯೇ ಇಡೀ ಊರನ್ನು ಭೇಟಿಯಾದೆನು. ಕೆಲವು ದೊಡ್ಡ ಭೂಮಾಲಿಕರನ್ನೂ ಭೇಟಿಯಾದೆನು. ಅವರ ಹೊಲಗಳಲ್ಲೂ ಅವರ ಮನೆಗಳಲ್ಲೂ ಅವರನ್ನು ಮಾತನಾಡಿಸಿದೆನು. ಮುಂದೆ 2016ರ ಆಗಸ್ಟ್ ತಿಂಗಳಲ್ಲಿ 10–11 ಮತ್ತು 21–22ರಂದು ಚಿವಟಗುಂಡಿಯಲ್ಲಿ ವಾಸವಿದ್ದು ಆ ಅವಧಿಯಲ್ಲಿ ಸ್ವಲ್ಪ ಸಮಯ ಜಾಲಿಕೊಪ್ಪದಲ್ಲಿಯೂ ಬಿಟ್ಟಿ ಚಾಕ್ರಿಯ ಆಳವಾದ ಅನುಭವಪಡೆಯಲು ಪ್ರಯತ್ನಿಸಿದೆನು. 2018ರ ಜನವರಿ 14–15ರಂದೂ ಸಂಕ್ರಾಂತಿ ಹಬ್ಬದ ಪ್ರಯುಕ್ತ ಜಾಲಿಕೊಪ್ಪದಲ್ಲಿದ್ದು ಚಿವಟಗುಂಡಿಗೂ ಭೇಟಿಕೊಟ್ಟೆನು.

ಇವೆಲ್ಲ ಅನುಭವದ ಆಧಾರದ ಮೇಲೆ 2016ರ ಮೇ ತಿಂಗಳಲ್ಲಿ ಜಾಲಿಕೊಪ್ಪ ಮತ್ತು ಚಿವಟಗುಂಡಿಯ ದಲಿತರ ಮನೆಗಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಧಾರ್ಮಿಕ ವಿಷಯಗಳ ಕುರಿತಾಗಿ ಕೆಲವು ಮಾಹಿತಿಗಳನ್ನು ಮತ್ತು ಪ್ರತ್ಯೇಕವಾಗಿ 'ಬಿಟ್ಟಿ ಚಾಕ್ರಿ' ಕುರಿತು ಆದಷ್ಟು ವಿವರವಾದ ಮಾಹಿತಿಗಳನ್ನು ಕಲೆಹಾಕಲು ಒಂದು ಪ್ರಶ್ನಾವಳಿ ರೂಪಿಸಿದೆನು. ಆ ಎರಡೂ ಊರುಗಳ ಎಲ್ಲಾ ಕುಟುಂಬಗಳನ್ನು ಭೇಟಿಯಾಗಿ ಮತ್ತು ಐದು ಮಂದಿ ಜೀವಿಕ ಕಾರ್ಯಕರ್ತರ ನೆರವಿನಿಂದ ಅವುಗಳಿಗೆ ಉತ್ತರಗಳನ್ನು ಪಡೆದೆನು. ನಂತರ 2018ರ ಆರಂಭದಲ್ಲಿ ಅದೇ ಪ್ರಶ್ನಾವಳಿ ಬಳಸಿ ಚಿಕ್ಕಬಾಗೇವಾಡಿಯ ದಲಿತ ಕೇರಿಯ ಮಾಹಿತಿಗಳನ್ನೂ ಒಟ್ಟು ಮಾಡಿದೆನು.

ಹೀಗೆ ಜನರ ಜೊತೆಗಿದ್ದು ಅವರ ವಿಶ್ವಾಸ ಸಂಪಾದಿಸಿ ಅವರ ಜೀವನ ಕ್ರಮವನ್ನು ಸ್ವಲ್ಪ ಮಟ್ಟಿಗೆ ಅವರ ಜೀವನದ ಭಾಗವಾಗಿ ಮಾಡಿದ ಅವಲೋಕನ ಮೂಲಕ ಪಡೆದ ಗ್ರಹಿಕೆಗಳು, ವೈಯಕ್ತಿಕ ಮತ್ತು

ಗುಂಪು ಚರ್ಚೆಗಳಿಂದ ಪಡೆದ ಮಾಹಿತಿಗಳು, ಕೆಲವರ 'ಜೀವನ ಚಿತ್ರ'ಗಳನ್ನು ಒಟ್ಟುಗೂಡಿಸಿ ಪಡೆದ ವಿವರಗಳು, 20–30 ಮುಂದಿಯಿಂದ 'ಬಿಟ್ಟಿ ಚಾಕ್ರಿ' ಕುರಿತು ಬರೆಯಿಸಿದ ನಿರ್ದಿಷ್ಟ ವಿಚಾರಗಳು, 'ಬಿಟ್ಟಿ ಚಾಕ್ರಿ' ಕುರಿತು ಕೆಲವರಿಂದ ಎಂಟು ತಿಂಗಳ ಅವಧಿಯಲ್ಲಿ ಹಲವು ದಿನ ಬರೆಯಿಸಿದ ದಿನಚರಿಗಳು ಮತ್ತು ಮೂರೂ ಊರುಗಳಲ್ಲಿ ಕೈಗೊಂಡ ಏಕರೂಪದ ಪ್ರಶ್ನಾವಳಿಗಳಿಂದ ನಡೆಸಿದ ಸಮೀಕ್ಷೆ ಮೂಲಕ ಒಟ್ಟುಹಾಕಿದ ಮಾಹಿತಿಗಳು ಮತ್ತು ಈ ಮೂಲ ಮಾಹಿತಿಗಳನ್ನು ಅರ್ಥೈಸಲು 'ಸಾಹಿತ್ಯ ವಿಮರ್ಶೆ'ಯಿಂದ ಗ್ರಹಿಸಿದ ಸೂಕ್ತ ವಿಚಾರಗಳು ಮುಂತಾದ ವಿಧಾನಗಳ ಸಂವಾದೀಯತೆಯ ಫಲವೇ ಈ ಮಹಾಪ್ರಬಂಧ. ಹೀಗೆ ಹಲವಾರು ಒಂದಕ್ಕೊಂದು ಪೂರಕ ವಿಧಾನಗಳನ್ನು ಬಳಸಿ 'ಬಿಟ್ಟಿ ಚಾಕ್ರಿ' ಕುರಿತು ಆದಷ್ಟು ವಸ್ತುನಿಷ್ಠ ಗ್ರಹಿಕೆ ರೂಪಿಸುವಂತೆ ಪ್ರಯತ್ನ ಪಟ್ಟಿದ್ದೇನೆ.

ಈ ಎಲ್ಲಾ ವಿಶ್ಲೇಷಣೆಗಳಿಂದ 'ಬಿಟ್ಟಿ ಚಾಕ್ರಿ'ಯು' ಎಷ್ಟರ ಮಟ್ಟಿಗೆ ಜೀತ ಕಾನೂನಿನಲ್ಲಿರುವ ಜೀತ ಪದ್ಧತಿಯ ವ್ಯಾಖ್ಯಾನದೊಳಗೆ ಬರುತ್ತದೆ ಎಂಬುದರ ಬಗ್ಗೆ ನಿರ್ಣಯಕ್ಕೆ ಬರಲಾಗಿದೆ.

ಈ ಅಧ್ಯಯನ ಕೇವಲ ಮಾನವ ಶಾಸ್ತ್ರೀಯ ಅನ್ವೇಷಣೆ ಮಾತ್ರವಲ್ಲ. ಜೀತದಾಳುಗಳ ಮುಖಂಡತ್ವದಲ್ಲಿ ಜೀತದಾಳುಗಳ ಜೀವನ ಪರಿಸ್ಥಿತಿಗಳನ್ನು ಸುಧಾರಿಸಲು ಕಾನೂನಾತ್ಮಕವಾಗಿಯೂ ಆಡಳಿತಾತ್ಮಕವಾಗಿಯೂ ಸೂಕ್ತ ಬದಲಾವಣೆಗಳನ್ನು ತರುವುದು ಪ್ರಮುಖ ಪಾತ್ರ ವಹಿಸುತ್ತದೆ. ಪರಿಣಾಮ ಬೀರುವ ಪ್ರಯತ್ನದ ಗುರಿ ಅಧ್ಯಯನದ ಜೊತೆಜೊತೆ ಇದ್ದಿದ್ದುದರಿಂದ ಅಧ್ಯಯನವು ಎಷ್ಟರ ಮಟ್ಟಿಗೆ ವಸ್ತುನಿಷ್ಠವಾಗಬಹುದು ಎಂಬುದರ ಬಗ್ಗೆ ಇನ್ನೊಂದು ಉಪಭಾಗದಲ್ಲಿ (1.5.8ರಲ್ಲಿ) ಪ್ರಸ್ತಾಪಿಸಿದ್ದೇನೆ.

## 1.5 ವಸ್ತುನಿಷ್ಠತೆ ಮತ್ತು ವೈಯಕ್ತಿಕ ನಿಲುವುಗಳು ಹಾಗೂ ಪರಿಣಾಮ ಬೀರುವ ಪ್ರಯತ್ನಗಳು

ಮೇಲೆ ವಿವರಿಸಿದ ವಿಧಾನಗಳನ್ನು ಬಳಸಿ ಜೀತ ಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ' ಕುರಿತಾದ ವಸ್ತುನಿಷ್ಠ ಮಾಹಿತಿಗಳನ್ನು ಕಲೆಹಾಕಲು ಪ್ರಯತ್ನಿಸಿದ್ದೇನೆ. ಯಾವುದೇ ವಿಜ್ಞಾನದ ತಳಹದಿ ವಸ್ತುನಿಷ್ಠವಾಗಿಯೂ ಪೂರ್ವಗ್ರಹಕ್ಕೊಳಗಾಗದೆಯೂ ಒಟ್ಟುಗೂಡಿಸಿದ ಮಾಹಿತಿಗಳು. ಅಷ್ಟೇ ಮುಖ್ಯವಾಗಿ ವಸ್ತುನಿಷ್ಠವಾಗಿಯೂ ಪೂರ್ವಗ್ರಹ ನಿಲುವುಗಳಿಂದ ಮುಕ್ತವಾಗಿಯೂ ವಿಶ್ಲೇಷಣೆ ಮಾಡಿ ಅಧ್ಯಯನದ ವಿಷಯ ಕುರಿತು ಅಧಿಕಾರಯುತ ನಿಲುವುಗಳಿಗೆ ಅಥವಾ ತೀರ್ಮಾನಗಳಿಗೆ ಬರುವುದು ಯಾವುದೇ ಅಧ್ಯಯನದ ಗುರಿ. ಆದರೆ ಸಾಪೇಕ್ಷತೆ ಎಲ್ಲಾ ದೃಷ್ಟಿಕೋನಗಳು ಮತ್ತು ವಿಜ್ಞಾನಗಳು ಒಪ್ಪಿಕೊಳ್ಳಲೇ ಬೇಕಾದ ಒಂದು ಸಾಮಾನ್ಯ ನೆಲೆ ಎನ್ನಬಹುದು. ಸಾಪೇಕ್ಷತೆ ಒಪ್ಪಿಕೊಂಡೂ ವಸ್ತುವಿಷ್ಠ ಗ್ರಹಿಕೆ ಪಡೆಯುವುದು ಹೇಗೆ? ಮತ್ತು ವಸ್ತುವಿಷ್ಠ ಅನ್ವೇಷಣೆ ಮಾಡುವುದು ಹೇಗೆ? ಮಾನವ ಶಾಸ್ತ್ರೀಯ ಸಮಾಜ ಶಾಸ್ತ್ರದ ಅನ್ವೇಷಣೆಯಲ್ಲಿ ವಸ್ತುನಿಷ್ಠತೆಗೆ ಬರಲು ಸಹಯವಾಗುವಂತಹ ಒಂದು ಮಾರ್ಗ ಅನ್ವೇಷಕನು ತಾನು ತಾಳಿರುವ ನಿಲುವುಗಳು ಮತ್ತು ತನ್ನಲ್ಲಿರಬಹುದಾದಂತಹ ಪೂರ್ವಗ್ರಹಗಳನ್ನು ಆದಷ್ಟೂ ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವಂತಹದ್ದು. ಆ ದೃಷ್ಟಿಯಿಂದ ಮಹಾಪ್ರಬಂಧದ ಪ್ರವೇಶಕ್ಕೆ ಮೊದಲು ಪ್ರಬಂಧಕ್ಕೆ ಆರಿಸಿದ ವಿಷಯದ ಚರ್ಚೆ ಕೈಗೊಳ್ಳುವ

ಆರಂಭದಲ್ಲೇ ಆ ವಿಷಯನ್ನು ಗ್ರಹಿಸುವ ನನ್ನ ಮಾನಸಿಕ ಚೌಕಟ್ಟಿನ ಕೆಲವು ಮುಖಗಳನ್ನು ದಾಖಲಿಸುವ ಪ್ರಯತ್ನ ಮಾಡಿದ್ದೇನೆ.

### 1.5.1 ಸ್ವಾತಂತ್ರ್ಯ, ಸಂವಿಧಾನದ ಆಶಯಗಳು

ನನ್ನ ಹುಟ್ಟು ಭಾರತವು ಸ್ವಾತಂತ್ರ್ಯ ಪಡೆದ ಕೆಲವೇ ವರ್ಷಗಳ ನಂತರ ಮತ್ತು ಡಾ. ಬಿ. ಆರ್. ಅಂಬೇಡ್ಕರ್‌ರವರ ನೇತೃತ್ವದಲ್ಲಿ ರಚಿಸಿದ ಸಂವಿಧಾನವನ್ನು ಭಾರತವು ಆತ್ಮಾರ್ಪಣೆ ಮಾಡಿಕೊಂಡ ಮರುವರ್ಷ. ಬಾಲ್ಯದ ಶಾಲಾದಿನಗಳಲ್ಲಿ ಸ್ವಾತಂತ್ರ್ಯ ಹೋರಾಟ, ಅದರ ನಾಯಕರು, ಅವರ ಆದರ್ಶ, ಹೊಸ ಭಾರತದ ಕನಸುಗಳು ನನ್ನನ್ನು ಗಾಢವಾಗಿ ತಟ್ಟಿದ ಸಂಗತಿಗಳು. ಬೇರೆ ಬೇರೆ ಸ್ನಾತಕ ಅಧ್ಯಯನಗಳಲ್ಲಿ, ಸ್ನಾತಕೋತ್ತರ ಅಧ್ಯಯನದಲ್ಲಿ ಮತ್ತು ಅವುಗಳ ಹೊರತಾಗಿ ನವಭಾರತ ಕಟ್ಟುವಲ್ಲಿ, ಸಮಾಜ ಬದಲಾವಣೆ ಬಗ್ಗೆ, ಸಂವಿಧಾನದ ಪೀಠಿಕೆಯ ಆಶಯಗಳ ಅನುಷ್ಠಾನದ ಬಗ್ಗೆ ನನ್ನ ಚಿಂತನ–ಮಂಥನ, ಕಾಳಜಿಗಳು ಸುತ್ತುವರಿದಿದ್ದುವು. ಸಾಮಾಜಿಕ ಬದಲಾವಣೆಯಲ್ಲಿ ತೊಡಗಿಸಿಕೊಳ್ಳಲು ಹೈಸ್ಕೂಲ್ ವಿದ್ಯಾರ್ಥಿ ದೆಸೆಯಿಂದಲೇ ಪಣ ತೊಟ್ಟಿದ್ದು ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಸಾಮಾಜಿಕ ಬದಲಾವಣೆಯ ಒಂದು ಸ್ಪಷ್ಟ ಗ್ರಹಿಕೆಗೆ ನಾನು ಬಂದಿದ್ದೆನು: ಬಡತನವೆಂದರೆ ಭಾರತದಲ್ಲಿ ವರ್ಗ ಮತ್ತು ಜಾತಿ ವ್ಯವಸ್ಥೆಗಳು ಒಂದಕ್ಕೊಂದು ಪೂರಕವಾಗಿವೆ. ಅಂದರೆ ಅನುಸೂಚಿತ ಜಾತಿ ಜನಾಂಗದವರೇ ಬಡವರು ಮತ್ತು ಸಮಾಜದಿಂದ ವಂಚಿತರಾದವರು; ಬಡತನ ನಿರ್ಮೂಲನೆಯ ಉತ್ತಮ ಮಾರ್ಗವೆಂದರೆ ಅವರನ್ನು ಜಾಗೃತಗೊಳಿಸಿ ಅವರ ಮುಖಂಡತ್ವದಲ್ಲಿ ಅವರಿಂದಲೇ ಅವರ ಸಮಸ್ಯೆಗಳನ್ನು ಪರಿಹರಿಸುವಂತೆ ಆಗುವುದು.

### 1.5.2 ಜಾತಿ ವ್ಯವಸ್ಥೆಯು ಭಾರತದ ಮೂಲ ವೈರುಧ್ಯ

ಜಾತಿ ವ್ಯವಸ್ಥೆಯು ಭಾರತ ದೇಶದ ಮೂಲ ವೈರುಧ್ಯವನ್ನಾಗಿ ಗುರುತಿಸುವಲ್ಲಿ ಮತ್ತದರ ಆಮೂಲಾಗ್ರ ಬದಲಾವಣೆಗೆ ಡಾ. ಬಿ. ಆರ್. ಅಂಬೇಡ್ಕರ್‌ರವರ ಕಾಣ್ಕೆ, ಚಿಂತನೆ, ಅಧ್ಯಯನ, ಪರಿಹಾರ ಸೂಚಿ ಮತ್ತು ಪ್ರಯತ್ನ ಅಭೂತಪೂರ್ವವಾದದ್ದು. ಅವರ ಪ್ರಕಾರ ನಮ್ಮ ದೇಶದ ಎಲ್ಲಾ ಅನಿಷ್ಟಗಳಿಗೆ ಮೂಲ ಜಾತಿ ವ್ಯವಸ್ಥೆ ಮತ್ತು ಅದರ ಮೂಲೋತ್ಪಾಟನೆಯಿಂದಲೇ ನಿಜವಾದ ಅರ್ಥದಲ್ಲಿ ದೇಶಕ್ಕೆ ನೆಮ್ಮದಿ, ಅದರೊಳಗೆ ಸಾಮರಸ್ಯ ಮತ್ತದರ ಸರ್ವಾಂಗೀಣ ಬೆಳವಣಿಗೆ ಸಾಧ್ಯ. ಅದನ್ನು ನಾನು ಪೂರ್ತಿಯಾಗಿ ಅಂಗೀಕರಿಸುತ್ತೇನೆ ಮತ್ತು ಅದನ್ನೇ ಈ ರೀತಿಯೂ ನಾನು ಗ್ರಹಿಸುತ್ತೇನೆ. ಭಾರತದಲ್ಲಿಯ ಯಾವುದೇ ಸಮಸ್ಯೆಗೆ ಜಾತಿಯ ಆಯಾಮ ಇರುವುದರಿಂದ ಅದನ್ನು ಗುರುತಿಸುವ, ಅರ್ಥೈಸುವ ಮತ್ತದಕ್ಕೆ ಸಮಂಜಸ ಪರಿಹಾರ ಕಂಡುಹಿಡಿಯುವ ಕೆಲಸಗಳನ್ನು ಜಾತಿ ಹಿನ್ನೆಲೆಯಲ್ಲೇ ಮಾಡಬೇಕು. ಜಾತಿ ವ್ಯವಸ್ಥೆ ಎನ್ನುವಾಗ ಅದರ ಸಮಸ್ಯೆ ಇರುವುದು ಅಸ್ಪೃಶ್ಯತೆ ಮತ್ತು ದಲಿತ ಪ್ರಶ್ನೆಯಲ್ಲಿ. ಅಂದ ಮೇಲೆ ಜಾತಿ ವ್ಯವಸ್ಥೆ ಜೊತೆ ಅತಿ ನಿಕಟವಾಗಿ ತಳುಕು ಹಾಕುವಂತಹದ್ದು ಜೀತ ಪದ್ಧತಿ. 19–20ರ ಶತಮಾನಗಳ

ನಂತರ ಅನುಸೂಚಿತ ಜಾತಿ ಜನಾಂಗದವರಲ್ಲದವರೂ ಕೆಲವು ಮಂದಿ ಜೀತದಲ್ಲಿರುವುದು ಕಂಡುಬರುತ್ತದಾದರೂ, ಈಗಲೂ ಆ ಸಮಸ್ಯೆಯು ದೊಡ್ಡ ಮಟ್ಟದಲ್ಲಿರುವುದು ಆ ಸಮುದಾಯಗಳಲ್ಲಿ.

**1.5.3 ಭಾರತೀಯ ಸಂವಿಧಾನದ ನಿಷೇಧಾತ್ಮಕವಾಗಿರುವ ಮೂರು ಮೂಲಭೂತ ಹಕ್ಕುಗಳು**

ಡಾ. ಅಂಬೇಡ್ಕರ್‌ರವರ ಚಿಂತನೆ – ನಾಯಕತ್ವದ ಪರಿಣಾಮವಾಗಿಯೇ ನಮ್ಮ ಸಂವಿಧಾನಕ್ಕೆ ಅದ್ಭುತ, ಉದಾತ್ತ ಪೀಠಿಕೆ ಇರುವುದು ಮಾತ್ರವಲ್ಲದೇ ಅದರ ಮೂರನೇ ಭಾಗವು ಬೇರೆ ಯಾವುದೇ ದೇಶದ ಸಂವಿಧಾನದಲ್ಲಿರದಂತೆ ಮೂರು ನಿಷೇಧಾತ್ಮಕ ಮತ್ತು ಶಿಕ್ಷಾರ್ಹ ಮೂಲಭೂತ ಹಕ್ಕುಗಳನ್ನು ಒಳಗೊಂಡಿದೆ. ಆ ಮೂರೂ ಹಕ್ಕುಗಳು ಅನುಸೂಚಿತ ಸಮುದಾಯಗಳಿಗೆ ಅನ್ವಯಿಸುವುದು ಮಾತ್ರವಲ್ಲದೇ ಒಂದಕ್ಕೊಂದು ಪೂರಕವಾಗುವ ರೀತಿಯಲ್ಲಿವೆ. ಅವು ಯಾವುವೆಂದರೆ ವಿಧಿ 17ರಲ್ಲಿಯ ಅಸ್ಪೃಶ್ಯತೆ ಆಚರಣೆ ನಿಷೇಧ, ವಿಧಿ 23ರಲ್ಲಿಯ ಮಾನವ ಸಾಗಣಿಕೆ, ಪುಕ್ಕಟೆ ದುಡಿಮೆ (ಬೇಗಾರ್) ಮತ್ತು ಎಲ್ಲಾ ರೀತಿಯ ಬಲಾತ್ಕಾರ ದುಡಿಮೆ ನಿಷೇಧ ಮತ್ತು ವಿಧಿ 24ರಲ್ಲಿಯ ಅಪಾಯಕಾರಿ ಪ್ರಕ್ರಿಯೆಗಳಲ್ಲಿ 14 ವರ್ಷ ಕೆಳಗಿನ ಮಕ್ಕಳ ದುಡಿಮೆ ನಿಷೇಧ. ಅವು ಒಂದಕ್ಕೊಂದು ಪೂರಕ ಏಕೆಂದರೆ ಅಸ್ಪೃಶ್ಯತೆ ಆಚರಣೆಗಳ ದುಷ್ಪರಿಣಾಮ ಬೀರುವುದು ಅನುಸೂಚಿತ ಸಮುದಾಯಗಳ ಮೇಲೆ ಮಾತ್ರ ಅಥವಾ ಹೆಚ್ಚಾಗಿ ಎಂಬುದು ಸರ್ವವಿದಿತ ಮತ್ತು ಸುಸ್ಪಷ್ಟ. ಬಲಾತ್ಕಾರದ ದುಡಿಮೆಗೊಳಗಾಗುವವರು ಈಗಲೂ ಬಹುತೇಕ ಅದೇ ಸಮುದಾಯಗಳಿಂದ. ಭಾರತದಲ್ಲಿ ಜೀತ ಪದ್ಧತಿ ಕೇವಲ ತೀವ್ರ ಬಡತನದ ಒಂದು ರೂಪ ಮಾತ್ರವಲ್ಲದೇ ಅದು ಅನುಸೂಚಿತ ಸಮುದಾಯಗಳ ಜೀವನದ ಒಂದು ಭಾಗವೆಂತಲೇ ಪರಿಗಣಿಸಬಹುದು. ಜಾತಿ ವ್ಯಸ್ಥೆಯ ಒಂದು ಮುಖ ಅದು. ಮತ್ತು ಕೊನೆಯದಾಗಿ ಬಾಲ ಕಾರ್ಮಿಕತೆ ವಯಸ್ಸಿಗೆ ಸಂಬಂಧಪಟ್ಟಿದ್ದು ಮಾತ್ರವಲ್ಲ. ಅನುಸೂಚಿತ ಸಮುದಾಯಗಳಿಂದಲೇ ಹೆಚ್ಚಿನ ಮಕ್ಕಳು ಈಗಲೂ ತಮ್ಮ ಮೈಮನಸ್ಸು ಬೆಳೆಯುವ ಮುಂಚೆಯೇ ಸಂಸಾರದ ಭಾರ ಹೊರುತ್ತಾರೆ.

**1.5.4 ಸಂವಾದೀಯ ಭೌತಿಕವಾದ – ಶ್ರಮ ಸಿದ್ಧಾಂತ, ವಿಕಾಸವಾದ, ಕಾರ್ಯ–ಕಾರಣ ಸಂಬಂಧ**

ನನ್ನ ವೈಚಾರಿಕತೆಯ ಒಟ್ಟಾರೆ ಸ್ಪಷ್ಟ ನೆಲೆಗಳು ಸಂವಾದೀಯ ಭೌತಿಕವಾದ – ಶ್ರಮ ಸಿದ್ಧಾಂತ, ವಿಕಾಸವಾದ ಮತ್ತು ಪ್ರತಿಯೊಂದು ಸಂಗತಿಗೂ ಅನ್ವಯಿಸುವ ಕಾರ್ಯ–ಕಾರಣ ಸಂಬಂಧ. ಪ್ರಕೃತಿಯು ತನ್ನ ನಿಗೂಢ ಶಕ್ತಿಯಿಂದಲೇ ನಿರಂತರ ಚೈತನ್ಯಶೀಲವಾಗಿದ್ದು, ಆದಿಮಾನವನಿಂದ ಆಧುನಿಕ ಮಾನವನೆಡೆಯ ವಿಕಾಸ ಸÁzsÀå ªÁzÀzÉÝÃ ಕೈ–ಮೆದುಳು, ಶ್ರಮ–ಮನಸ್ಸು, ದುಡಿಮೆ–ಚಿಂತನೆಗಳ ಸಂವಾದೀಯ ಕೊಡುಕೊಳ್ಳುವಿಕೆಯಿಂದಾಗಿದ್ದು ಒಟ್ಟಾರೆಯಾಗಿ ಸಮಾಜದ ರೂಪಾಂತರಗಳಿಗೆ ಮೂಲ ಪ್ರೇರಣೆ ಉತ್ಪಾದನಾ ಶಕ್ತಿ–ಸಂಬಂಧಗಳ ಬದಲಾವಣೆಗಳಲ್ಲಿದೆ. ಆದರೆ ಮಾನವ ಸಮಾಜದ ವಿಕಾಸದ ಒಂದು ಕಾಲಘಟ್ಟದಿಂದ ಉತ್ಪಾದನಾ ಶಕ್ತಿಗಳ ಒಡೆತನ ಪಡೆದವರು ಪ್ರತಿ ಉತ್ಪಾದನೆಯಲ್ಲಿ ಉದ್ಭವಿಸುವ ಹೆಚ್ಚುವರಿ ಮೌಲ್ಯವನ್ನು ತಮ್ಮದಾಗಿಸಿ ದುಡಿಮೆಗೆ ಸಿಗಬೇಕಾದ ಅದರ ಪಾಲಿನಿಂದ ವಂಚಿಸಿ ಉತ್ಪಾದನೆಯ

ಅನುಭೋಗದಲ್ಲಿ ಅಸಮಾನತೆಗಳನ್ನು ರಚಿಸಿ ಅಸಮಾನ ಸಮಾಜಗಳ ವಿವಿಧ ರೂಪಗಳಿಗೆ ಕಾರಣರಾದರು.

### 1.5.5 ವರ್ಗ ªÀåªÀಸ್ಥೆ ಮತ್ತು ಜಾತಿವ್ಯವಸ್ಥೆಯ ಬೆಸುಗೆ

ಭಾರತದಲ್ಲಿ ವರ್ಗವ್ಯವಸ್ಥೆಯೂ ಜಾತಿವ್ಯವಸ್ಥೆಯೂ ಬೆಸೆದುಕೊಂಡಿದೆ. ಜಾತಿ ವ್ಯವಸ್ಥೆಯು ಅಸಮಾನ ಸಮಾಜದ ಅತಿ ಕೆಟ್ಟ ಸ್ವರೂಪವೊಂದಾಗಿದ್ದು ಸಮಾಜದ ಎಲ್ಲಾ ರಂಗಗಳನ್ನು ಅದು ವಿಧೂಷಿತಗೊಳಿಸಿದೆ. ಅನುಸೂಚಿತ ಜಾತಿ ಜನಾಂಗಗಳನ್ನು ಸಮಾಜದ ಎಲ್ಲಾ ಸ್ಥಾನಮಾನಗಳಿಂದ ಹೊರಗಿಟ್ಟು ಅವರನ್ನು ಅತ್ಯಂತ ಕೆಳಮಟ್ಟದ ಶ್ರೇಣಿಯಲ್ಲಿ ದೂಡಲ್ಪಟ್ಟು, ಅವರಿಂದಲೇ ಎಲ್ಲಾ ಶ್ರಮಭರಿತ ಸೇವೆಗಳನ್ನು ಮಾಡಿಸಿ ಅವುಗಳಿಗೆ ಯಾವುದೇ ಬೆಲೆ ನೀಡದ್ದು ಮಾತ್ರವಲ್ಲದೇ ಆ ಸೇವೆಗಳನ್ನು ನಿಕೃಷ್ಟ ಸೇವೆಗಳೆಂದು ಪರಿಗಣಿಸಿದ್ದರಿಂದಲೇ ಅವರಿಗೆ ಸಮಾಜದ ಸ್ಥಾನಮಾನಗಳಿಂದ ವಂಚಿಸಿ, ಅಧಿಕಾರ, ಪ್ರಭಾವಗಳನ್ನು ನಿರಾಕರಿಸಿ ಅವರ ಇಡೀ ಬದುಕನ್ನೇ ನಿರ್ಮೌಲ್ಯೀಕರಿಸಿ, ಸಂಸ್ಕೃತಿ ಹೀನರನ್ನಾಗಿಸಿ ಕೀಳರಿಮೆ–ವಿಮುಖತೆಯಿಂದ ತೊಯ್ದಾಡುವಂತೆ ಮಾಡಿದೆ–ಮಾಡುತ್ತಿದೆ. ಜಾತಿವ್ಯವಸ್ಥೆಯಲ್ಲಿಯ ಅನುಸೂಚಿತ ಜಾತಿ, ಜನಾಂಗಗಳ ಫಲರಹಿತ ಸೇವೆಯೇ 'ಜಾತಿ ಗುಲಾಮಿಪದ್ಧತಿ'ಯಾಗಿದ್ದು ಅದು ಬ್ರಿಟಿಷರ ಕಾಲನಂತರ 'ಇಂಡೆಂಚ್ಚರ್ಡ್' ಪದ್ಧತಿ ಜೊತೆಜೊತೆಯಾಗಿಯೋ ತದನಂತರವೋ ಜೀತ ಪದ್ಧತಿಯಾಗಿ ಮಾರ್ಪಾಡಾಗಿ ಈಗಲೂ ದೇಶದ, ರಾಜ್ಯದ ಮೂಲೆಮೂಲೆಗಳಲ್ಲಿ ಪ್ರತ್ಯೇಕವಾಗಿ ಹಳ್ಳಿಗಳಲ್ಲಿ ಪಟ್ಟಣ ನಗರಗಳ ಅಸಂಘಟಿತ ಕ್ಷೇತ್ರಗಳಲ್ಲಿ ಇನ್ನೂ ಜೀವಂತವಾಗಿರುವುದರೊಂದಿಗೆ ಮನೆಕೆಲಸ, ವಲಸೆ ಹೋಗುವ ಮೂಲಕ ಮತ್ಯಾವುದೋ ರೀತಿಯಲ್ಲೋ ಹೊಸ ಜೀತ ರೂಪಗಳು ಹುಟ್ಟುತ್ತಿವೆ.

### 1.5.6 ಜೀತ ಪದ್ಧತಿಯು ಜಾತಿ ವ್ಯವಸ್ಥೆಯ ಭಾಗವಾಗಿ ಬೀರಿದ ವೈಯಕ್ತಿಕ ಪ್ರಭಾವ

ಒಂದು ರೀತಿಯಲ್ಲಿ ಅನುಸೂಚಿತ ಸಮುದಾಯಗಳ ಮೇಲಿನ ಜಾತಿ ವ್ಯವಸ್ಥೆಯ ವಿವಿಧ ಪರಿಣಾಮಗಳನ್ನು ಜೀತ ಪದ್ಧತಿಯು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ ಅಥವಾ ಪ್ರತಿಬಿಂಬಿಸುತ್ತದೆ. ಜೀತ ಪದ್ಧತಿ ನನ್ನ ಮೇಲೆ ವೈಯಕ್ತಿಕವಾಗಿ ಪ್ರಭಾವ ಬೀರಿದ್ದು 1987ರಲ್ಲಿ ನಡೆದ ಘಟನಾವಳಿಗಳಿಂದ (ಪ್ರಸಾದ 2017). ಅದರ ಬಗ್ಗೆ 'ಆ್ಯಕ್ಷನ್ ರಿಸರ್ಚ್' ಮೂಲಕವೇ ಕೆಲವೇ ತಿಂಗಳೊಳಗೆ ಕಾರ್ಯೋನ್ಮುಖನಾದೆ. ಆ ಅಧ್ಯಯನದ ಫಲವೇ 1990ರಲ್ಲಿ ಜೀತ ವಿಮುಕ್ತ ಸಂಘಟನೆ, ಆನೇಕಲ್ ತಾಲೂಕು ಮಟ್ಟದಲ್ಲಿ ಮತ್ತು 1993ರಲ್ಲಿ ಜೀತ ವಿಮುಕ್ತಿ ಕರ್ನಾಟಕ – ಜೀವಿಕದ ಹುಟ್ಟು ಕರ್ನಾಟಕ ರಾಜ್ಯ ಮಟ್ಟದಲ್ಲಿ ಆಯಿತು. 30 ವರ್ಷಗಳ ಸುದೀರ್ಘ ಅವಧಿ ನಂತರ ಉತ್ತರ ಕರ್ನಾಟಕದಲ್ಲಿ ಈಗಲೂ ಇರುವ 'ಬಿಟ್ಟಿ ಚಾಕ್ರಿ'ಯು ನನ್ನ ಗಮನವನ್ನು ಇತ್ತೀಚೆಗೆ ಸೆಳೆದಿದೆ.

### 1.5.7 'ಬಿಟ್ಟಿ ಚಾಕ್ರಿ' ಬಗ್ಗೆ ಗಮನ

ಉತ್ತರ ಕರ್ನಾಟಕದ ನನ್ನ ಒಬ್ಬ ಸಹೋದ್ಯೋಗಿ ಸ್ನೇಹಿತರು ಮತ್ತು ಜೀತ ಪದ್ಧತಿಯಿಂದಲೂ 'ಬಿಟ್ಟಿಚಾಕ್ರಿ'ಯಿಂದಲೂ ಸ್ವತಃ ನೊಂದು ಬೆಂದು ಬೆಳೆದವರ ಮುಖಾಂತರ 'ಬಿಟ್ಟಿಚಾಕ್ರಿ' ಬಗ್ಗೆ 2012ರಲ್ಲಿ ಪ್ರಥಮ ಬಾರಿಗೆ ನನ್ನ ಗಮನಕ್ಕೆ ಬಂತು. ಈಗಲೂ ಅದು ಪ್ರಚಲಿತವಿರುವುದನ್ನು ಕೇಳಿ ಅದು ನನ್ನಲ್ಲಿಯ ಕುತೂಹಲವನ್ನು ಕೆರಳಿಸಿತು. ಅದರ ಕುರಿತಾದ ಆಚರಣೆಗಳು ನನ್ನ ಗಮನ ಸೆಳೆದಿದ್ದು ಅದರ ಕುರಿತಾಗಿ ಖಚಿತವಾದ, ಆಳವಾದ, ವೈಜ್ಞಾನಿಕ ಮಾಹಿತಿ ಕಲೆಹಾಕಲು ನಾನು ಶುರು ಮಾಡಿದೆನು. ಅದನ್ನು ಜೀತ ಪದ್ಧತಿ ಕಾನೂನಿನಡಿ ಅರ್ಥೈಸಿ ಅದರ ಪ್ರಕಾರ ಕ್ರಮ ಕೈಗೊಳ್ಳಲು ಸಾಧ್ಯವಿದೆಯೇ ಎಂಬುದರ ಬಗ್ಗೆ ಚಿಂತನೆ ಮಾಡುತ್ತಾ ಬಂದಿದ್ದೇನೆ ಮತ್ತು ಅದರ ಕುರಿತು ಕೆಲವು ಪ್ರಯತ್ನಗಳನ್ನು ಮಾಡುತ್ತಲೂ ಬಂದಿದ್ದೇನೆ.

### 1.5.8 ಪರಿಣಾಮ ಬೀರುವ ಪ್ರಯತ್ನಗಳೊಂದಿಗೆ ಅಧ್ಯಯನ ಮತ್ತು ವಸ್ತುನಿಷ್ಠತೆ

ಇನ್ನೊಂದು ದೃಷ್ಟಿಯಿಂದಲೂ ವಸ್ತುನಿಷ್ಠ ಗ್ರಹಿಕೆಯ ಪ್ರಶ್ನೆಯು 'ಭಾಗವಹಿಸುವಿಕೆಯಲ್ಲಿ ಪರಿಣಾಮ ಬೀರುವ ಕ್ರಮಗಳ ಜೊತೆಗಿನ ಅಧ್ಯಯನ'ವನ್ನು ಎದುರು ಹಾಕುತ್ತದೆ. ಅದೇನೆಂದರೆ ಅಧ್ಯಯನದ ಮೂಲಕ ಪರಿಣಾಮ ಬೀರುವ ಪ್ರಯತ್ನಗಳು ವಸ್ತುನಿಷ್ಠ ಮಾಹಿತಿಯನ್ನು ಕಲೆಹಾಕುವಲ್ಲಿ ವ್ಯತಿರಿಕ್ತ ಪ್ರಭಾವ ಬೀರುವುದಿಲ್ಲವೇ? ಪರಿಣಾಮ ಬೀರುವ ಪ್ರಯತ್ನಗಳನ್ನು ಯಾವಾಗ ಎತ್ತಿಕೊಳ್ಳಬೇಕು? ಅಧ್ಯಯನ ಮುಗಿದ ನಂತರವೇ ಅಥವಾ ಅಥವಾ ಅಧ್ಯಯನ ನಡೆಯುತ್ತಿರುವಾಗಲೇ ಪರಿಣಾಮ ಬೀರುವ ಪ್ರಯತ್ನಗಳನ್ನು ಕೈಗೊಳ್ಳಬಹುದೇ? ಪರಿಣಾಮ ಬೀರುವ ಪ್ರಯತ್ನಗಳನ್ನು ಯಾರು ಎತ್ತಿಕೊಳ್ಳಬೇಕು? ಬಹಳ ಸ್ಪಷ್ಟವಾಗಿ ಸಮಸ್ಯೆಗೊಳಗಾಗಿದ್ದವರೇ ಅಥವಾ ಅವರ ಮುಖಂಡತ್ವದಲ್ಲೇ ಅವುಗಳನ್ನು ಎತ್ತಿಕೊಳ್ಳಬೇಕೆಂಬುದು ಉತ್ತಮ ಸಾಮಾಜಿಕ ಕಾರ್ಯಕರ್ತನ, ಸಂಘಟಕನ ನೈತಿಕ ನಿಲುವು ಮತ್ತು ರಾಜಮಾರ್ಗ. ಹಾಗೆಯೇ ಸಮಸ್ಯೆಗೊಳಗಾಗಿದ್ದವರು ನ್ಯಾಯ ಪಡೆಯಲು ಪ್ರಯತ್ನಿಸುವಾಗ ಅವರನ್ನು ಯಾವುದೇ ಅನುದ್ದೇಶಿತ ತೊಂದರೆಗಳಿಗೆ ಅಥವಾ ಅಹಿತಕರ ಘಟನೆಗಳಿಗೆ ಸಿಲುಕದಂತೆ ಎಚ್ಚರಿಕೆಯನ್ನೂ ವಹಿಸಬೇಕಾಗುತ್ತದೆ. ಪರಿಣಾಮ ಬೀರುವ ಪ್ರಯತ್ನಗಳನ್ನು ಯಾವಾಗ ಎತ್ತಿಕೊಳ್ಳಬೇಕೆಂಬುದಕ್ಕೆ ನಿರ್ದಿಷ್ಟ ನಿಲುವುಗಳಿಲ್ಲ. ಬಹುಷಃ ಒಪ್ಪಿಕೊಳ್ಳಬಹುದಾದ ಒಂದು ನಿಲುವು ಏನೆಂದರೆ, 'ಬಿಟ್ಟಿ ಚಾಕ್ರಿ'ಯು ಒಂದು ಸಮಸ್ಯೆ ಎಂದು ಅದನ್ನು ಆಚರಿಸುತ್ತಿರುವವರೇ ಆ ನಿಲುವಿಗೆ ಬಂದಿದ್ದರೆ 'ಬಿಟ್ಟಿ ಚಾಕ್ರಿ'ಯ ಅಧ್ಯಯನ ನಡೆಯುವಾಗಲೇ ಪರಿಣಾಮ ಬೀರುವ ಪ್ರಯತ್ನಗಳನ್ನು ಎತ್ತಿಕೊಳ್ಳಲು ಅಭ್ಯಂತರವಿಲ್ಲ. ಪರಿಣಾಮ ಬೀರುವ ಪ್ರಯತ್ನಗಳು ಅನ್ವೇಷಕರಿಂದ ಆರಂಭವಾಗಿದ್ದರೆ ಅಧ್ಯಯನ ಪೂರ್ಣಗೊಳ್ಳುವ ತನಕ ಅನ್ವೇಷಕನು ಕಾಯುವುದು ಸೂಕ್ತ ಎನಿಸುತ್ತದೆ. ಈ ಎಚ್ಚರಗಳನ್ನು ವಹಿಸಿಕೊಂಡೇ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವವರ ಮೇಲೆ ಸಕಾರಾತ್ಮಕ ಪರಿಣಾಮ ಬೀರುವಂತೆ ಅಧ್ಯಯನದ ಅವಧಿಯಲ್ಲಿ ಕೈಕೊಂಡ ಪರಿಣಾಮ ಬೀರುವ ಪ್ರಯತ್ನಗಳ ಬಗ್ಗೆ ಕೊನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

### 1.6 ಅಧ್ಯಯನದ ಸ್ವರೂಪ – 'ಜೀತ ಪದ್ಧತಿ' ಮತ್ತು 'ಬಿಟ್ಟಿ ಚಾಕ್ರಿ' ಕುರಿತು ಅಧ್ಯಯನ ಪ್ರಶ್ನೆಗಳು

'ಜೀತ ಪದ್ಧತಿ'ಯ ಒಟ್ಟಾರೆ ಸ್ವರೂಪವೇನು? ಅದರಲ್ಲಾದ ಸ್ಥಿತ್ಯಂತರಗಳ್ಯಾವುವು? ಅದರ ಅರ್ಥೈಸುವಿಕೆಯಲ್ಲಿ ಆದ ಪುನರ್ವ್ಯಾಖ್ಯಾನಗಳು ಯಾವುವು? ಜೀತ ಪದ್ಧತಿಗೂ ಜಾತಿ ವ್ಯವಸ್ಥೆಗೂ ಸಂಬಂಧವಿದೇಯೇ? ಜೀತ ಪದ್ಧತಿಗೂ ಗುಲಾಮ ಪದ್ಧತಿಗೂ ಸಂಬಂಧವಿದೇಯೇ? ಜೀತ ಪದ್ಧತಿ, ಗುಲಾಮಿ ಪದ್ಧತಿ ಮತ್ತು ಬಲಾತ್ಕಾರದ ದುಡಿಮೆಗಳಿಗಿರುವ ಸಂಬಂಧವೇನು? ಜೀತ ಪದ್ಧತಿಯಲ್ಲೇ ವಿವಿಧ ರೂಪಗಳನ್ನು ಪರಿಗಣಿಸಬಹದೇ? ಜೀತ ಪದ್ಧತಿ ರದ್ಧತಿ ಕಾನೂನು, 1976ರ ಸ್ವರೂಪವೇನು? ಅದರಲ್ಲಿ ಬರುವ ಜೀತ ಪದ್ಧತಿ ಕುರಿತ ವ್ಯಾಖ್ಯಾನವೇನು? ಅದು ಹಿಂದಿನ ಅಥವಾ ಸಮಕಾಲೀನ ಸೀಮಿತ ಕಾಲಘಟ್ಟ ಒಂದಕ್ಕೆ ಮಾತ್ರ ಅನ್ವಯಿಸುತ್ತದೆಯೇ ಅಥವಾ ಮುಂದೆ ರೂಪಾಂತರಗೊಳ್ಳಬಹುದಾದ ಹೊಸ ಜೀತದ ರೂಪಗಳಿಗೂ ಅನ್ವಯಿಸುತ್ತದೆಯೇ? ಜೀತ ಕಾನೂನಿನ ತಳಹದಿಯಾದ ಸಂವಿಧಾನದ ವಿಧಿ 23 'ಪರಿವರ್ತನಾತ್ಮಕ ಸಂವಿಧಾನ'ದ ಪ್ರಕ್ರಿಯೆಗೆ ಒಳಗೊಂಡಿದೆಯೇ? ಈ ಎಲ್ಲಾ ಪ್ರಶ್ನೆಗಳಿಗೆ ಗ್ರಾಂಥಿಕ ಅಧ್ಯಯನದಿಂದಲೇ ಉತ್ತರಗಳನ್ನು ಪಡೆಯಲಾಗಿದೆ.

ಕ್ಷೇತ್ರಾಧ್ಯಯನದ ಮುಖ್ಯ ವಿಷಯವಾದ 'ಬಿಟ್ಟಿ ಚಾಕ್ರಿ' ಕುರಿತಾಗಿಯೇ ಪ್ರತ್ಯೇಕ ಪ್ರಶ್ನೆಗಳನ್ನು ರೂಪಿಸಲಾಗಿದೆ. 'ಬಿಟ್ಟಿ ಚಾಕ್ರಿ'ಯ ಒಟ್ಟಾರೆ ರೂಪವೇನು? ಅದನ್ನು ಸೂಚಿಸಲು ಜನರು ಬಳಸುವ ಇತರೆ ಪದಗಳ್ಯಾವುವು? 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವವರ ಮತ್ತು 'ಬಿಟ್ಟಿ ಚಾಕ್ರಿ'ಯನ್ನು ಮಾಡಿಸಿಕೊಳ್ಳುವವರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳೇನು? ಮುಂತಾದ ಪ್ರಶ್ನೆಗಳಿಗೆ ಉತ್ತರಗಳನ್ನು ಕ್ಷೇತ್ರಾಧ್ಯಯನದ ಮೂಲಕ ಕಂಡುಹಿಡಿಯಲಾಗಿದೆ. ಗ್ರಾಂಥಿಕ ಅಧ್ಯಯನದಿಂದ ಜೀತ ಪದ್ಧತಿ ಮತ್ತು ಜಾತಿ ವ್ಯವಸ್ಥೆ ಕುರಿತ ಪ್ರಶ್ನೆಗಳಿಗೆ ಪಡೆದ ಉತ್ತರಗಳನ್ನು 'ಬಿಟ್ಟಿ ಚಾಕ್ರಿ' ಕುರಿತ ವಿವರಗಳಿಗೆ ಸಮೀಕರಿಸಲಾಗಿದೆ. 'ಬಿಟ್ಟಿ ಚಾಕ್ರಿ'ಯನ್ನು ಹೋಲುವ ಇತರ ಪದ್ಧತಿಗಳ್ಯಾವುವು? ಎಂಬ ಪ್ರಶ್ನೆಗೂ ಗ್ರಾಂಥಿಕ ಅಧ್ಯಯನದಿಂದಲೇ ಉತ್ತರ ಪಡೆದು ಜಾತಿ ವ್ಯವಸ್ಥೆ – ಜೀತ ಪದ್ಧತಿಗೂ 'ಬಿಟ್ಟಿ ಚಾಕ್ರಿ'ಗೂ ಏನಾದರೂ ಸಂಬಂಧವಿದೆಯೇ? ಇದ್ದರೆ ಅದು ಎಂತಹುದು? 'ಬಿಟ್ಟಿ ಚಾಕ್ರಿ'ಯನ್ನು ಜೀತ ಕಾನೂನಿನ ವ್ಯಾಖ್ಯಾನದೊಳಗೆ ಅರ್ಥೈಸಬಹುದೇ? ಎಂಬ ಪ್ರಶ್ನೆಗಳಿಗೂ ಉತ್ತರ ಪಡೆಯಲಾಗಿದೆ.

ಜೀತ ಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆಗೆ ಸಹಾಯವಾಗಲೆಂದು ಈ ಮುಂದೆ ಕೊಡಲಾದ ಅಧ್ಯಯನ ಪ್ರಶ್ನೆ (ರಿಸರ್ಚ್ ಕ್ವೆಶ್ಚನ್ಸ್)ಗಳನ್ನು ರೂಪಿಸಿದ್ದೇನೆ ಮತ್ತು ಅವಕ್ಕೆ ತಕ್ಕಂತೆ ಮಹಾಪ್ರಬಂಧದ ಅಧ್ಯಾಯಗಳನ್ನು ಜೋಡಿಸಿದ್ದೇನೆ. 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆಗೆ ಜಾತಿ ವ್ಯವಸ್ಥೆಯನ್ನೊಳಗೊಂಡಂತೆ ಜೀತ ಪದ್ಧತಿ ಕುರಿತಾದ ಪುನರ್ವ್ಯಾಖ್ಯಾನಕ್ಕೆ ಸಂಬಂಧ ಪಟ್ಟ ಅನ್ವೇಷಣೆಯೇ ಮೂಲ ಮತ್ತು ತಳಹದಿ ಆಗಿದ್ದರೂ ಪೀಠಿಕೆಯ ಮೊದಲ ಅಧ್ಯಾಯದ ನಂತರ ಮಹಾಪ್ರಬಂಧವನ್ನು ಜೀತ ಪದ್ಧತಿ – ಜಾತಿ ವ್ಯವಸ್ಥೆಗಳ ವಿವೇಚನೆಯಿಂದ ಆರಂಭಿಸದೇ 'ಬಿಟ್ಟಿ ಚಾಕ್ರಿ' ಕುರಿತಾದ ಕ್ಷೇತ್ರಾಧ್ಯಯನದಿಂದ ಕಂಡುಹಿಡಿದ ಸಂಗತಿಗಳ ನಿರೂಪಣೆಯಿಂದ ಆರಂಭಿಸಿದ್ದೇನೆ. ಇದು ಮಹಾಪ್ರಬಂಧದ ನಿರೂಪಣೆಯ ದೃಷ್ಟಿಯಿಂದ ಮಾತ್ರ. ಅಧ್ಯಯನವು ಜೀತ ಪದ್ಧತಿಯ ಪುನರ್ವ್ಯಾಖ್ಯಾನದ ಕುರಿತಾಗಿಯೇ ಇದೆ. ಅದರ

ಹಿನ್ನೆಲೆಯಲ್ಲಿಯೇ 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆಯೂ ನಡೆಯುತ್ತದೆ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅಧ್ಯಯನಕ್ಕೆ ಅಳವಡಿಸಿದ ಸಂಶೋಧನಾ ವಿಧಾನದಲ್ಲಿ ಸ್ಪಷ್ಟಪಡಿಸಿದ್ದಂತೆ 'ಜೀತ ಪದ್ಧತಿಯ ಪುನರ್ವ್ಯಾಖ್ಯಾನ' ಮತ್ತು 'ಬಿಟ್ಟಿ ಚಾಕ್ರಿ'ಯ ಸ್ವರೂಪ ಅಧ್ಯಯನದ ಎರಡು ಆಯಾಮಗಳು. ಅಧ್ಯಯನದ ವಿಷಯ, ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪಗಳನ್ನೊಳಗೊಂಡ **ಮೊದಲ ಅಧ್ಯಾಯವಾದ ಪೀಠಿಕೆಯ** ನಂತರದ **ಅಧ್ಯಾಯ ಎರಡು ಮತ್ತು ಮೂರು 'ಬಿಟ್ಟಿ ಚಾಕ್ರಿ'** ಕುರಿತಾಗಿದ್ದರೆ ನಂತರದ **ಅಧ್ಯಾಯ ನಾಲ್ಕು ಮತ್ತು ಐದು ಜೀತ ಪದ್ಧತಿ ಮತ್ತು ಅದರ ಭೂಮಿಕೆಯಾದ ಜಾತಿ ವ್ಯವಸ್ಥೆ** ಕುರಿತಾಗಿವೆ. **ಉಪಸಂಹಾರದ ಕೊನೆಯ ಅಧ್ಯಾಯ** ಆರು ಜೀತ ಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ'ಯನ್ನು ಸಮೀಕರಿಸುತ್ತದೆ. ಜೀತ ಕಾನೂನಿನನ್ವಯ 'ಬಿಟ್ಟಿ ಚಾಕ್ರಿ' ಬಗ್ಗೆ ತೆಗೆದುಕೊಳ್ಳಬಹುದಾದ ನಿಲುವುಗಳು; ಪರಿಣಾಮ ಬೀಳುವಂತೆ ಅಧ್ಯಯನದ ಅವಧಿಯಲ್ಲಿ ಮಾಡಿದ ಪ್ರಯತ್ನಗಳು; ಮತ್ತು ಮುಂದಿನ ಮಾರ್ಗೋಪಾಯಗಳ ಬಗ್ಗೆ ಪ್ರಸ್ತಾಪ ಅದರಲ್ಲಿದೆ. ಮುಖ್ಯ ನಾಲ್ಕು ಅಧ್ಯಯನ ಪ್ರಶ್ನೆಗಳು ಹೀಗಿವೆ:

**1.6.1 'ಬಿಟ್ಟಿ ಚಾಕ್ರಿ'ಯ ಸ್ವರೂಪ:** 'ಬಿಟ್ಟಿ ಚಾಕ್ರಿ'ಯನ್ನು ಆಚರಿಸುವವರ ಸಾಮಾಜಿಕ, ಆರ್ಥಿಕ, ರಾಜಕೀಯ ಸಾಂಸ್ಕೃತಿಕ ಪರಿಸ್ಥಿತಿಗಳೊಂದಿಗೆ 'ಬಿಟ್ಟಿ ಚಾಕ್ರಿ'ಯ ಸ್ವರೂಪವೇನು?

**1.6.2 'ಬಿಟ್ಟಿ ಚಾಕ್ರಿ'ಯನ್ನು ಹೋಲುವ ಇತರೆ ಆಚರಣೆಗಳು:** 'ಬಿಟ್ಟಿ ಚಾಕ್ರಿ'ಯನ್ನು ಹೋಲುವ ಬೇರೆ ಅದೇ ತರಹದ ಆಚರಣೆಗಳಿಗೂ 'ಬಿಟ್ಟಿ ಚಾಕ್ರಿ'ಗೂ ಇರುವ ಸಾಮ್ಯತೆ, ವ್ಯತ್ಯಾಸಗಳೇನು?

**1.6.3 ಜಾತಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ಜೀತ ಪದ್ಧತಿಯಲ್ಲಾದ ಸ್ಥಿತ್ಯಂತರಗಳು:** ಜಾತಿವ್ಯವಸ್ಥೆಗೂ ಜೀತ ಪದ್ಧತಿಗೂ ಹಾಗೂ 'ಬಿಟ್ಟಿ ಚಾಕ್ರಿ'ಗೂ ಇರುವ ಸಂಬಂಧಗಳೇನು?

**1.6.4 1976ರ ಜೀತ ಪದ್ಧತಿ ರದ್ದತಿ ಕಾನೂನಿನಲ್ಲಿರುವ ಜೀತ ಪದ್ಧತಿ ವ್ಯಾಖ್ಯಾನ:** ಜೀತ ಕಾನೂನಿನಲ್ಲಿಯ ಜೀತ ಪದ್ಧತಿ ವ್ಯಾಖ್ಯಾನ 'ಬಿಟ್ಟಿ ಚಾಕ್ರಿ' ಆಚರಣೆಗೆ ಎಷ್ಟರ ಮಟ್ಟಿಗೆ ಅನ್ವಯಿಸುತ್ತದೆ?

ಮೇಲಿನ ಪ್ರಶ್ನೆಗಳಿಗೆ ಉತ್ತರವಾಗಿ ಈ ಕೆಳಗಿನ ಅಧ್ಯಾಯಗಳನ್ನು ಹೆಣೆಯಲಾಗಿದೆ:

**ಅಧ್ಯಾಯ ಎರಡು:** ಬೈಲಹೊಂಗಲ ತಾಲೂಕಿನಲ್ಲಿ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವ ಮೂರು ಹಳ್ಳಿಗಳಲ್ಲಿಯ ಕ್ಷೇತ್ರಾಧ್ಯಯನದಿಂದ ಒಂದನೇ ಅಧ್ಯಯನ ಪ್ರಶ್ನೆಗೆ ಉತ್ತರ ಪಡೆಯುವುದು.

**ಅಧ್ಯಾಯ ಮೂರು:** 'ಬಿಟ್ಟಿ ಚಾಕ್ರಿ'ಯನ್ನು ಹೋಲುವ ಬೇರೆ ರಾಜ್ಯಗಳಲ್ಲಿಯ ಇತರೆ ಆಚರಣೆಗಳ ಅಧ್ಯಯನದಿಂದ ಎರಡನೇ ಅಧ್ಯಯನ ಪ್ರಶ್ನೆಗೆ ಉತ್ತರ ಪಡೆಯುವುದು.

**ಅಧ್ಯಾಯ ನಾಲ್ಕು:** ಜಾತಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ಜೀತ ಪದ್ಧತಿಯ ಚಾರಿತ್ರಿಕ ಹಾಗೂ ಸಾಮಾಜಿಕ ಅಧ್ಯಯನದಿಂದ ಮೂರನೇ ಅಧ್ಯಯನ ಪ್ರಶ್ನೆಗೆ ಉತ್ತರ ಪಡೆಯುವುದು.

**ಅಧ್ಯಾಯ ಐದು:** ಜೀತ ಪದ್ಧತಿ ರದ್ದತಿ ಕಾನೂನು, 1976ರಲ್ಲಿಯ ಜೀತ ಪದ್ಧತಿ ಕುರಿತ ವ್ಯಾಖ್ಯಾನದ ಅಧ್ಯಯನದಿಂದ ನಾಲ್ಕನೇ ಅಧ್ಯಯನ ಪ್ರಶ್ನೆಗೆ ಉತ್ತರ ಪಡೆಯುವುದು.

# ಅಧ್ಯಾಯ 2

## ಬೈಲಹೊಂಗಲ ತಾಲೂಕಿನ ಮೂರು ದಲಿತ ಹಳ್ಳಿಗಳಲ್ಲಿಯ 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆ

# ಅಧ್ಯಾಯ ಎರಡು

## ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಮೂರು ದಲಿತ ಹಳ್ಳಿಗಳಲ್ಲಿಯ 'ಬಿಟ್ಟಿ ಚಾಕ್ರಿ'ಯ ಅನ್ವೇಷಣೆ

ಬೆಳಗಾವಿ ಜಿಲ್ಲೆಯಲ್ಲಿ ಬೈಲಹೊಂಗಲ ತಾಲೂಕಿನ ಜಾಲಿಕೊಪ್ಪ, ಚಿವಟಗುಂಡಿ, ಚಿಕ್ಕ ಬಾಗೇವಾಡಿ ಎಂಬ ಮೂರು ಹಳ್ಳಿಗಳಲ್ಲಿರುವ ದಲಿತ ಕೇರಿಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರ ಕ್ಷೇತ್ರಾಧ್ಯಯನದಿಂದ ಪಡೆದ ಮಾಹಿತಿಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. 'ಬಿಟ್ಟಿ ಚಾಕ್ರಿ' ಮಾಡುವವರು ಭೂಮಾಲಿಕ ರೈತ ಕುಟುಂಬಗಳಿಗೆ ದಿನನಿತ್ಯ ಮತ್ತು ವಿಶೇಷ ಸಂದರ್ಭದಲ್ಲಿ ಒದಗಿಸುವ ವಿವಿಧ ಸೇವೆಗಳು, ಅವುಗಳಿಗೆ ಸಿಗುವ ಸೌಲಭ್ಯಗಳು, 'ಬಿಟ್ಟಿ ಚಾಕ್ರಿ' ಮಾಡುವವರ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳು ಮತ್ತು ಮೂರು ಊರುಗಳಲ್ಲಿಯ ದಲಿತ ಕುಟುಂಬಗಳ ಒಟ್ಟಾರೆ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳನ್ನು ಪ್ರಶ್ನಾವಳಿಗಳಿಂದ ಪಡೆದ ಮಾಹಿತಿಗಳಿಂದ ಕ್ರೋಢೀಕರಿಸಲಾಗಿದೆ. 'ಬಿಟ್ಟಿ ಚಾಕ್ರಿ' ಮಾಡುವವರ ಪರಿಸ್ಥಿತಿಗಳನ್ನು ಊರಿನ ಇತರ ಎಲ್ಲಾ ಜಾತಿ ಮತ್ತು ಧರ್ಮೀಯರ ಕೆಲವು ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳಿಗೆ ಹೋಲಿಸಲಾಗಿದೆ. ಇದರ ಜೊತೆಗೆ ನೇರ ಅವಲೋಕನ, 'ಬಿಟ್ಟಿ ಚಾಕ್ರಿ' ಮಾಡುವವರಿಂದ ಪಡೆದ ವಿವಿಧ ಅನುಭವಗಳು, ಅವರೊಂದಿಗಿನ ಸಂಭಾಷಣೆಗಳು, ಗುಂಪುಚರ್ಚೆಗಳು, ಅವರ ಕೆಲವು ಸುಧೀರ್ಘ ಹಾಗೂ ಚುಟುಕು 'ಜೀವನ ಚಿತ್ರ'ಗಳು (case studies), ಅವರಲ್ಲಿ ಕೆಲವರಿಂದ ಪಡೆದ 7–8 ತಿಂಗಳುಗಳ ಅವಧಿಯ ದಿನಚರಿಗಳು ಮುಂತಾದ ವಿಧಾನಗಳಿಂದ 'ಬಿಟ್ಟಿ ಚಾಕ್ರಿ'ಯ ಒಂದು ಚಿತ್ರವನ್ನು ಅನಾವರಣ ಮಾಡುವ ಪ್ರಯತ್ನ ಇಲ್ಲಿದೆ.

ಕ್ಷೇತ್ರಾಧ್ಯಯನದ ಮಾಹಿತಿಗೆ ಪೀಠಿಕೆಯಾಗಿ ಬೆಳಗಾವಿ ಜಿಲ್ಲೆಯ ಪೌರಾಣಿಕ, ಐತಿಹಾಸಿಕ, ಸಾಂಸ್ಕೃತಿಕ ವೈಶಿಷ್ಟ್ಯ ಹಾಗೂ ಹಿರಿಮೆಗಳನ್ನು ಸ್ಥೂಲವಾಗಿ ಗ್ರಹಿಸಿ ಬೈಲಹೊಂಗಲ ತಾಲೂಕಿನ ವೈಶಿಷ್ಟ್ಯವನ್ನೂ ಗುರುತಿಸಲಾಗಿದೆ. ಇವುಗಳ ಹಿನ್ನೆಲೆಯಲ್ಲಿ ಕ್ಷೇತ್ರಾಧ್ಯಯನದ ಕೇಂದ್ರವಾಗಿರುವ ಮೂರು ಹಳ್ಳಿಗಳ ವಿಶಿಷ್ಟತೆಗಳನ್ನೂ ದಾಖಲಿಸಲಾಗಿದೆ. ಬೆಳಗಾವಿ ಜಿಲ್ಲೆಯ ಚಾರಿತ್ರಿಕ ಸ್ಥಿತ್ಯಂತರಗಳು, ಮುಂದಿನ ಅಧ್ಯಾಯಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಗುರುತಿಸಿದಂತಹ ಜಾತಿ ವ್ಯವಸ್ಥೆ – ಜೀತ ಪದ್ಧತಿಗಳಲ್ಲಾದ ಬದಲಾವಣೆಗೆ ಹಾಗೂ ವಿವಿಧ ಮತ್ತು ವಿಶಿಷ್ಠ ಪರಿಸರ ಹೊಂದಿರುವ ಮೂರು ಊರುಗಳಲ್ಲಿ ಕಾಣಬಹುದಾದ 'ಬಿಟ್ಟಿ ಚಾಕ್ರಿ'ಯ ಲಕ್ಷಣಗಳ ಏಕರೂಪತೆಗೆ ಒಂದು ರೀತಿಯ ಸಮರ್ಥನೆ ಕೊಡುವಂತಿವೆ.

### 2.1 ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲೂಕು ಹಾಗೂ ಆಯ್ದ ಮೂರು ಊರುಗಳ ಒಟ್ಟಾರೆ ಚಿತ್ರ

#### 2.1.1 ಬೆಳಗಾವಿ ಜಿಲ್ಲೆಯ ವೈಶಿಷ್ಟ್ಯತೆ

ಕರ್ನಾಟಕದ ಬಹುಮುಖ್ಯ ಜಿಲ್ಲೆಗಳಲ್ಲಿ ಒಂದಾಗಿರುವ ಬೆಳಗಾವಿ ಜಿಲ್ಲೆಯು ಕರ್ನಾಟಕದ ವಾಯುವ್ಯ ದಿಕ್ಕಿನಲ್ಲಿರುವ ಗಡಿನಾಡು ಜಿಲ್ಲೆಯಾಗಿದ್ದು ದಕ್ಷಿಣಕ್ಕೆ ಉತ್ತರ ಕನ್ನಡ ಜಿಲ್ಲೆ, ನೈಋತ್ಯಕ್ಕೆ ಗೋವಾ

ರಾಜ್ಯ, ಪಶ್ಚಿಮ, ವಾಯುವ್ಯ ಮತ್ತು ಉತ್ತರಕ್ಕೆ ಮಹಾರಾಷ್ಟ್ರ ರಾಜ್ಯದ ರತ್ನಗಿರಿ, ಕೊಲ್ಲಾಪುರ ಮತ್ತು ಸಾಂಗ್ಲಿ ಜಿಲ್ಲೆಗಳು, ಈಶಾನ್ಯಕ್ಕೆ ಬಾಗಲಕೋಟೆ ಜಿಲ್ಲೆ, ಪೂರ್ವಕ್ಕೆ ಗದಗ ಜಿಲ್ಲೆ, ಆಗ್ನೇಯಕ್ಕೆ ಧಾರವಾಡ ಜಿಲ್ಲೆಗಳನ್ನು ಗಡಿಯಾಗಿ ಹೊಂದಿಕೊಂಡಿದೆ. ಅದು ಪೌರಾಣಿಕವಾಗಿಯೂ ಐತಿಹಾಸಿಕವಾಗಿಯೂ ಮಹತ್ವವನ್ನು ಪಡೆದಿದೆ[3]. ದಾಖಲಾದ ಚರಿತ್ರೆಯು ಜಿಲ್ಲೆಯಲ್ಲಿಯ ಬಹುಶ್ರುತ ಸಾಮಾಜಿಕ ಹಾಗೂ ಸಾಂಸ್ಕೃತಿಕ

---

[3] ಜಿಲ್ಲೆಯ ಸೌದತ್ತಿ–ಎಲ್ಲಮ್ಮ ವಿಷ್ಣುವಿನ ಆರನೇ ಅವತಾರವಾದ ಪರಶುರಾಮ ತನ್ನ ತಂದೆ ಜಮದಗ್ನಿಯ ಆಜ್ಞಾನುಸಾರ ತನ್ನ ತಾಯಿಯನ್ನೇ ಕೊಂದ ಜಾಗವೆಂಬ ಪ್ರತೀತಿ ಹೊಂದಿದೆ. ನಂತರ ಅದೇ ಜಾಗದಲ್ಲಿ ತನ್ನ ತಂದೆಯ ಅನುಗ್ರಹದಿಂದಲೇ ತನ್ನ ತಾಯಿಗೆ ಮರುಜೀವ ಪಡೆದನು. ದಕ್ಷ್ಯ ಯಜ್ಞದಲ್ಲಿ ಉಲ್ಲೇಖಿತ ಘಟನಾವಳಿಗಳು ಮತ್ತು ವೀರಭದ್ರನ ಸಾಹಸಕಾರ್ಯಗಳು ಜಿಲ್ಲೆಯ ಯೆಡೂರು ಮತ್ತು ಗೊಡ್ಚಿ ಹಳ್ಳಿಗಳಲ್ಲಿ ನಡೆದಿದ್ದವು ಎಂದು ಐತಿಹ್ಯಗಳು ಹೇಳುತ್ತವೆ (ಸೆನ್ಸ್ ಆಫ್ ಇಂಡಿಯಾ 1991: ಬೆಳಗಾಂವ್: 12).

ಚರಿತ್ರೆಯ ಅರಂಭಕಾಲದಿಂದಲೂ ಬೆಳಗಾವಿಯು ಗುರುತಿಸಲ್ಪಟ್ಟಿದೆ. ಖಾನಾಪುರ ತಾಲೂಕಿನಲ್ಲಿರುವ ಹಲಸಿಯು ಆರಂಭದ ಕದಂಬರ ರಾಜಧಾನಿಯಾಗಿತ್ತು. ಸೌದತ್ತಿಯು ರಟ್ಟರ ರಾಜಧಾನಿಯಾಗಿತ್ತು. ಬೆಳಗಾವಿ ಹತ್ತಿರದ ಕಾಕತಿಯು ವಾರಂಗಲ್ಲಿನ ಕಾಕತೀಯರ ಮೂಲಸ್ಥಾನವೆಂದು ಕೆಲವು ಇತಿಹಾಸಕಾರರು ಗುರುತಿಸುತ್ತಾರೆ. ಬೆಳಗಾವಿ ಜಿಲ್ಲೆಯು ಪುರಾತನ ಕುಂತಲ ದೇಶದ ಭಾಗವಾಗಿತ್ತು. ಕ್ರಿ ಪೂ. 327ರಿಂದ ಕ್ರಿಶ. 229ರ ವರೆಗೆ ಶಾತವಾಹನರು ಆಂಧ್ರ ಪ್ರದೇಶ ಮತ್ತು ಕುಂತಲ ದೇಶವನ್ನೊಳಗೊಂಡಂತೆ ಕರ್ನಾಟಕದ ಮೇಲೆ ಸಾರ್ವಭೌಮತ್ವವನ್ನು ಪಡೆದಿದ್ದರು. ಅದು ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳನ್ನೊಳಗೊಂಡಂತೆ ಚಾಲುಕ್ಯ ಸಾಮ್ರಾಜ್ಯ (ಕ್ರಿ ಸ. 550–610)ದ ಭಾಗವೂ ಆಗಿತ್ತು. ಕ್ರಿ ಶ. 760ರಲ್ಲಿ ರಾಷ್ಟ್ರಕೂಟರು ಪಶ್ಚಿಮ ಚಾಲುಕ್ಯರನ್ನು ಸೋಲಿಸಿದಾಗ ಅವರ ಕೈಕೆಳಗೆ ಅದು ಬಂತು. ಆಗ ಅದರ ಹೆಸರು 'ಕುಂಡಿ ಮೂರು ಸಾವಿರ' ಎಂದಿತ್ತು. ಕ್ರಿ ಶ. 850ರಿಂದ ಸುಮಾರು ನಾಲ್ಕು ಶತಮಾನಗಳ ತನಕ ರಟ್ಟರು ಅಥವಾ ರಟ್ಟ ಮಹಾಮಂಡಲೇಶ್ವರರು ಜಿಲ್ಲೆಯ ಬಹುಭಾಗವನ್ನು ಆಳಿದರು. ಅವರು ಮೊದಲು ರಾಷ್ಟ್ರಕೂಟರ ಪ್ರಧಾನ ಸಾಮಂತರಾಗಿದ್ದರು; ನಂತರ ಗೋವಾ ಕದಂಬರ ಅಧೀನದಲ್ಲಿದ್ದರು; ಮತ್ತು ಕ್ರಿ ಶ. 1170ರಿಂದ ಸ್ವತಂತ್ರ ರಾಜರಾಗಿದ್ದರು. ಅವರ ರಾಜಧಾನಿಯಾದ ಸುಗಂದವರ್ತಿಯು ಈಗಿನ ಸೌದತ್ತಿ–ಎಲ್ಲಮ್ಮ ಪ್ರದೇಶಕ್ಕೆ ಅನ್ವಯಿಸುತ್ತದೆ. ತಮ್ಮ ರಾಜಧಾನಿಯನ್ನು ರಟ್ಟರು ಕ್ರಿ ಶ. 1208ರಲ್ಲಿ ಈಗಿನ ಬೆಳಗಾವಿಯಾಗಿರುವ 'ವೆಲುಗ್ರಾಮ ಎಪ್ಪತ್ತ'ಕ್ಕೆ ಬದಲಾಯಿಸಿದರು. ವೆಲುಗ್ರಾಮವನ್ನು ಕದಂಬರಿಂದ ಹೋರಾಟ ಮಾಡಿ ಪಡೆದಿದ್ದರು. ರಟ್ಟರ ಮೂಲ ಪುರುಷರು ಪೂಜಾರಿಗಳಾಗಿದ್ದ ಮೆರಡ ಮತ್ತು ಅವನ ಮಗ ಪೃಥ್ವಿವರ್ಮ. ರಾಷ್ಟಕೂಟ ದೊರೆ ಎರಡನೇ ಕೃಷ್ಣನು ಪೃಥ್ವಿವರ್ಮನನ್ನು 'ಮಹಾಮಂಡಲೇಶ್ವರ' ಬಿರುದಿನಲ್ಲಿ ಸಾಮಂತನನ್ನಾಗಿಸಿ ಪಟ್ಟ ಕಟ್ಟಿದನು. ಕ್ರಿ ಶ. 1253ರಲ್ಲಿ ರಟ್ಟರನ್ನು ದೇವಗಿರಿಯ ಯಾದವರು ಸೋಲಿಸಿದರು. ಯಾದವರು ಇಡೀ ಜಿಲ್ಲೆಯ ಆಧಿಪತ್ಯವನ್ನು ಹೊಂದಿದ್ದರು.

ಯಾದವರನ್ನು ಕ್ರಿ ಶ. 1320ರಲ್ಲಿ ಅಲ್ಲೌದ್ದಿನ್ ಖಿಲ್ಜಿಯು ಸೋಲಿಸಿದನು. 1327ರಲ್ಲಿ ಮುಹಮ್ಮದ್ ಬಿನ್ ತುಗ್ಲಖ್ ದೊರೆಯು ಕರ್ನಾಟಕವನ್ನು ವಶಪಡಿಸಿ ಹುಕ್ಕೇರಿ ಮತ್ತು ರಾಯಬಾಗ್‌ನಲ್ಲಿ ತನ್ನ ಇಬ್ಬರು ಅಧಿಪತಿಗಳನ್ನು ನೇಮಿಸಿ ಎಲ್ಲಾ ಪ್ರದೇಶದ ಆಡಳಿತ ನಡೆಸುವಂತೆ ನೋಡಿಕೊಂಡನು. ಆದರೆ ಕೆಲವೇ ವರ್ಷಗಳಲ್ಲಿ ವಿಜಯನಗರ ಸಾಮ್ರಾಜ್ಯವು ವಿಸ್ತರಿಸುತ್ತಾ ಬೆಳಗಾವಿ ಜಿಲ್ಲೆಯನ್ನೂ ಅದು ವಶಪಡಿಸಿಕೊಂಡಿತ್ತು. ಆದರೆ ಕ್ರಿ ಶ. 1472ರ ತನಕ ವಿಜಯನಗರ ರಾಜರಿಗೂ ಬಹಮನಿ ಸುಲ್ತಾನರಿಗೂ ಬೆಳಗಾವಿ ಸುತ್ತಮುತ್ತಲಿನ ಪ್ರದೇಶ ವಶಪಡಿಸಿಕೊಳ್ಳುವ ಬಗ್ಗೆ ನಿರಂತರ ಯುದ್ಧಗಳು ನಡೆಯುತ್ತಿದ್ದವು. ಕ್ರಿಶ. 1357ರಲ್ಲಿ ಬೆಳಗಾವಿ ಜಿಲ್ಲೆಯ ಉತ್ತರ ಭಾಗವು ಬಹಮನಿ ಸಾಮ್ರಾಜ್ಯದ ನಾಲ್ಕು ವಿಭಾಗಗಳಲ್ಲಿ ಒಂದು ಮಾಲಿಕ್–ಸೆರಿಫ್–ಉದ್ದೀನ್ ಘೋರೆಯ ಆಡಳಿತಕ್ಕೆ ಬಂತು. ಬೆಳಗಾವಿಯ ಕೋಟೆಯನ್ನೊಳಗೊಂಡಂತೆ ಜಿಲ್ಲೆಯ ದಕ್ಷಿಣ ಭಾಗವು ವಿಜಯನಗರ ರಾಜರ ಅಧೀನದಲ್ಲಿ ಉಳಿಯಿತು. ಕ್ರಿ ಶ. 1470ರಲ್ಲಿ ಬಹಮನಿಯ ಒಬ್ಬ ಗವರ್ನರ್ ಮುಹಮ್ಮದ್ ಗಿಲಾನಿಯು ಗೋವಾವನ್ನು ವಶಪಡಿಸಿದಾಗ ವಿಜಯನಗರ ರಾಜರ ಸಹಾಯದಿಂದ ಬಂಕಾಪುರದ ಸಾಮಂತನು ಗೋವಾವನ್ನು ಮರು ವಶಪಡಿಸಲೆತ್ನಿಸಿದನು. ಆಗ ಬಹಮನಿ ಸುಲ್ತಾನನು ಬೆಳಗಾವಿ ಕೋಟೆ ಮೇಲೆ ದಾಳಿಯಿಟ್ಟಾಗ, ಕರ್ಣರಾಜನು ಕೋಟೆಯನ್ನು ರಕ್ಷಿಸಲಿಕ್ಕೆ ಸೆಣಸಾಡಿದರೂ ಅವನು ಸೋತು ಇಡೀ ಬೆಳಗಾವಿ ಜಿಲ್ಲೆಯು ಬಹಮನಿ ಸುಲ್ತಾನರ ಆಳ್ವಿಕೆಯಡಿ ಬಂತು. 1478ರಲ್ಲಿ ಬಹಮನಿ ಸಾಮ್ರಾಜ್ಯವನ್ನು 'ತರಫ್' ಎಂಬ ಎಂಟು ಆಡಳಿತ ವಿಭಾಗಗಳನ್ನಾಗಿ ವಿಂಗಡಿಸಲಾಗಿತ್ತು. ಬೆಳಗಾವಿ ಕೋಟೆಯನ್ನೊಳಗೊಂಡ ಪಶ್ಚಿಮ ವಿಭಾಗವು ಫಕ್ರು–ಉಲ್–ಮುಲ್ಕ್‌ನ ಅಧೀನಕ್ಕೆ ಬಂತು. ಸಂಕೇಶ್ವರವನ್ನು ತನ್ನ ಕೇಂದ್ರವನ್ನಾಗಿಸಿ ಕೊಂಕಣ ವಿಭಾಗದ ಆಡಳಿತ ನಡೆಸುತ್ತಿದ್ದ ಬಹದೂರ್ ಗಿಲಾನಿಯು ಬಹಮನಿ ಸುಲ್ತಾನನ ವಿರುದ್ಧ ದಂಗೆಯೆದ್ದು ಗೋವಾ ಮತ್ತು ಬೆಳಗಾವಿಯನ್ನು ವಶಪಡಿಸಿಕೊಂಡನು. ಬಿಜಾಪುರ ವಿಭಾಗದ ಆಡಳಿತ ನಡೆಸುತ್ತಿದ್ದ ಯುಸುಫ್ ಅದಿಲ್ ಷಾನನ್ನು ಸೋಲಿಸಿ ತನ್ನ ಆಧಿಪತ್ಯವನ್ನೇ ಧೃಡಪಡಿಸಿದನು. ನಂತರ ಬಿಜಾಪುರವು ಸ್ವತಂತ್ರವಾಯಿತು. ಕ್ರಿ ಶ. 1510ರಲ್ಲಿ ಪೋರ್ಚುಗೀಸರು ಗೋವಾವನ್ನು ಬಿಜಾಪುರದ ಆಳ್ವಿಕೆಯಿಂದ ಬಿಡಿಸಿಕೊಂಡರು. ಕ್ರಿ ಶ. 1511ರಲ್ಲಿ ಬಿಜಾಪುರದ ದೊರೆ ಇಸ್ಮಾಯಿಲ್ ಅದಿಲ್ ಷಾನು ಖುಸ್ರು ತುರ್ಕನನ್ನು ಬೆಳಗಾವಿಯ ಗವರ್ನರ್ ಆಗಿ ನೇಮಿಸಿದನು. ಖುಸ್ರು ತುರ್ಕರವರ ಸೇವೆಗೆ 'ಅಸಾದ್ ಖಾನ್' ಎಂಬ ಬಿರುದನ್ನು ಕೊಡಲಾಯಿತು. ಸಂತನಂತಿದ್ದ ಅಸಾದ್ ಖಾನ್‌ರವರು ಸುಮಾರು 38 ವರ್ಷ ಆಳಿದರು.

ಕ್ರಿ ಶ. 1565ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಬಿಜಾಪುರ, ಬೀದರ್, ಗೊಲ್ಕೊಂಡ ಮತ್ತು ಅಹ್ಮದ್‌ನಗರದ ಸುಲ್ತಾನರು ಸೇರಿ ರಕ್ಕಸ ತಂಗಡಿಯಲ್ಲಿ ನಡೆದ ತಾಲಿಕೋಟ ಯುದ್ಧದಲ್ಲಿ ಸೋಲಿಸಿದ ನಂತರ ಎಲ್ಲೆಡೆ ಅರಾಜಕತೆ ರಾರಾಜಿಸಿತು. ಆ ಸಮಯದಲ್ಲಿ ವಿಠಲ ಗೌಡನು ಬೆಳಗಾವಿ ಜಿಲ್ಲೆಯ ಕೆಲವು ಕೋಟೆಗಳನ್ನು ವಶಪಡಿಸಿ ತೋರ್ಗಲ್‌ಅನ್ನು ತನ್ನ ಕೇಂದ್ರ ಮಾಡಿ ಬಿಜಾಪುರ ಸುಲ್ತಾನರ ವಿರುದ್ಧ ಸ್ವತಂತ್ರ ರಾಜನಂತೆ ವರ್ತಿಸಲು ಶುರುಮಾಡಿದನು. ಕ್ರಿ ಶ. 1573ರಲ್ಲಿ ಆಲಿ ಅದಿಲ್ ಷಾ ಸ್ವತಂತ್ರ ರಾಜರಂತೆ ವರ್ತಿಸುತ್ತಿದ್ದ ಧಾರವಾಡ ಮತ್ತು ಬಂಕಾಪುರದ ರಾಜರನ್ನು ಸೋಲಿಸಿ ವಿಠಲ ಗೌಡನನ್ನೂ ಸೆರೆ ಹಿಡಿದು ಕೊಂದು ಬಿಜಾಪುರದ ಆಳ್ವಿಕೆಯನ್ನು ಭದ್ರಪಡಿಸಿದನು. ಮುಂದೆ ಕ್ರಿ ಶ. 1686ರಲ್ಲಿ ಔರಂಗಜೇಬನು ಇಡೀ ಬಿಜಾಪುರ ಸಾಮ್ರಾಜ್ಯವನ್ನು ವಶಪಡಿಸುವ ತನಕ ಇಡಿ ಬೆಳಗಾವಿ ಜಿಲ್ಲೆಯು ಬಿಜಾಪುರ ಆಳ್ವಿಕೆಯಡಿ ಇತ್ತು. ಆದರೆ ಕ್ರಿ ಶ. 1659ದಲ್ಲಿ ಶಿವಾಜಿಯು ಪಾನ್‌ಪಾಲ ಕೋಟೆಯನ್ನು ವಶಪಡಿಸುವ ಮೂಲಕ ಬೆಳಗಾವಿ ಜಿಲ್ಲೆಯ ಸಂಕೇಶ್ವರ ಪ್ರದೇಶವನ್ನು ಒಳಗೊಂಡಿರುವ ಕೊಲ್ಹಾಪುರ ಜಿಲ್ಲೆಯನ್ನೂ ವಶಪಡಿಸಿಕೊಂಡನು. ಕ್ರಿ ಶ. 1668ರಿಂದ ಇಂದು ರಾವ್ ಘೋರ್ಪಡೆಯು ಹುಕ್ಕೇರಿ ಮತ್ತು ರಾಯಬಾಗ್‌ಗಳನ್ನು ಆಳುತ್ತಿದ್ದನು. ಕ್ರಿ ಶ. 1673ರಲ್ಲಿ ಹುಬ್ಬಳ್ಳಿಗೆ ದಂಡೆತ್ತಿ ಹೋಗುವಾಗ ಶಿವಾಜಿಯು ಹುಕ್ಕೇರಿ ಮತ್ತು ರಾಯ್‌ಬಾಗ್‌ಗಳನ್ನು ಸುಲಿಗೆ ಮಾಡಿ ಬೆಳಗಾವಿ ಜಿಲ್ಲೆಯ ಹಲವಾರು ಪ್ರದೇಶಗಳನ್ನು ತನ್ನ ವಶಮಾಡಿಕೊಂಡನು. ಕ್ರಿ ಶ. 1686ರಲ್ಲಿ ಬಿಜಾಪುರದ ಪತನದ ನಂತರ ಮೊಗಲರು ಮರಾಠರನ್ನು ಬೆಳಗಾವಿ ಜಿಲ್ಲೆಯಿಂದ ಹೊರಗಿಟ್ಟಿದ್ದರು.

ಪರಂಪರೆಗೆ ಸಾಕ್ಷಿಯಾಗಿದೆ. ಸಾಮಾಜಿಕ ಚಳವಳಿ, ಬದಲಾಣೆಗಳಲ್ಲಿಯೂ ಜಿಲ್ಲೆಯ ಜನರು ನಿರಂತರವಾಗಿ ಭಾಗವಹಿಸಿರುವುದಕ್ಕೆ ಸ್ವಾತಂತ್ರ್ಯ ಚಳವಳಿಯಲ್ಲಿ ಬೆಳಗಾವಿಯ ಜನರು ಮಹತ್ತರ ಪಾತ್ರ ವಹಿಸಿರುವುದು ಒಂದು ಉದಾಹರಣೆ. ವಿವಿಧ ಕಲೆಗಳಲ್ಲಿಯೂ ಜಿಲ್ಲೆಯು ಉನ್ನತ ಮಟ್ಟದ ಸಾಧನೆ ಮಾಡಿದೆ (ಕರ್ನಾಟಕ ಸ್ಟೇಟ್ ಗೆಝೆಟಿಯರ್ 1987: v-vi). ರಾಜ್ಯದ ಎಂಟನೇ ಜ್ಞಾನ ಪೀಠ ಪ್ರಶಸ್ತಿ ಪುರಸ್ಕೃತರಾಗಿ ಚಂದ್ರಶೇಖರ ಕಂಬಾರರು ಕನ್ನಡ ಹಾಗೂ ಕರ್ನಾಟಕ ರಾಜ್ಯದ ಘನತೆಯನ್ನು ಎತ್ತಿಹಿಡಿದಿದ್ದಾರೆ.

---

ಮೊಗಲ್ ಚಕ್ರವರ್ತಿಯು ದಕ್ಷಿಣದ ಪ್ರಾಂತ್ಯಗಳನ್ನು ಸೈನಿಕ ಆಡಳಿತಕ್ಕೆ ಮಾತ್ರ ಸೀಮಿತಗೊಳಿಸಿದ್ದನು. ಅವನು ಅಬ್ದುಲ್ ರಾಹುಫ್ ಖಾನ್‌ರನ್ನು ಮಾನ್‌ಸಬ್‌ದಾರ್‌ನನ್ನಾಗಿ ನೇಮಿಸಿ ಬೆಳಗಾವಿ ಮತ್ತು ತೋರ್ಗಲ್‌ಗಳನ್ನೊಳಗೊಂಡಂತೆ 22 ಮಹಾಲ್‌ಗಳ ಆಡಳಿತವನ್ನು ಅವನಿಗೆ ವಹಿಸಿಕೊಟ್ಟನು. ಅಬ್ದುಲ್ ರಾಹುಫ್ ಖಾನ್ ಮೊದಲು ಬಂಕಾಪುರ ನಂತರ ಸವಣೂರನ್ನು ತನ್ನ ಕೇಂದ್ರವನ್ನಾಗಿಸಿ ಕಂದಾಯ ವಸೂಲಿಯನ್ನು ಅನುವಂಶೀಯ ಅಧಿಕಾರಿಗಳಾಗಿದ್ದ ದೇಸಾಯಿಗಳಿಗೆ ವಹಿಸಿಕೊಟ್ಟನು. ಕ್ರಿ. ಶ. 1707ರಲ್ಲಿ ಔರಂಗಜೇಬನು ತೀರಿಕೊಂಡಾಗ ಶಿವಾಜಿಯ ಇಬ್ಬರು ಮೊಮ್ಮಕ್ಕಳಾದ ಸಾಹು ಮತ್ತು ಸಂಭಾಜಿಯ ಆಧಿಪತ್ಯದಲ್ಲಿ ಕ್ರಮವಾಗಿ ಸತಾರ ಮತ್ತು ಕೊಲ್ಹಾಪುರ ವಿಭಾಗಗಳು ಸ್ಥಾಪಿತವಾದವು. ಕ್ರಿ. ಶ. 1719ರಲ್ಲಿ ಚಕ್ರವರ್ತಿಯು ಬೆಳಗಾವಿಯನ್ನೊಳಗೊಂಡಂತೆ ಆರು ದಖ್ಖಣ ಪ್ರಾಂತ್ಯಗಳಿಂದ 'ಚೌತ್' (ಕಾಲು ಭಾಗ) ಮತ್ತು 'ಸರ್ದೇಶ್‌ಮುಖಿ' (ಹತ್ತನೇ ಒಂದು ಭಾಗ) ಕಂದಾಯಗಳನ್ನು ವಸೂಲಿ ಮಾಡುವ ಹಕ್ಕುಗಳನ್ನು ಸಾಹು ರಾಜನಿಗೆ ವಹಿಸಿದನು. ಆದರೆ ಕೊಲ್ಹಾಪುರ ಮತ್ತು ಸವಣೂರಿನ ಸ್ಥಳೀಯ ಸಾಮಂತರ ಪ್ರಭಾವ ತುಂಬಾ ಇದ್ದುದರಿಂದ ಸಾಹು ರಾಜನು ಕೃಷ್ಣ ನದಿಯನ್ನು ದಾಟಿ ಬರಲು ಹೆದರುತ್ತಿದ್ದನು. ಕ್ರಿ. ಶ. 1723ರಲ್ಲಿ ದಖ್ಖಣದ ವೈಸ್‌ರಾಯ್ ಆಗಿದ್ದ ನಿಝಾಮ್-ಉಲ್-ಮುಲ್ಕ್ ಬಿಜಾಪುರ ಪ್ರಾಂತ್ಯದಲ್ಲಿಯ ಅರಾಜಕತೆಯನ್ನು ಅಡಗಿಸುವಾಗ ಅಥಣಿ ಮತ್ತು ಬೆಳಗಾವಿ ಕೋಟೆಗಳನ್ನು ವಶಪಡಿಸಿ ಸವಣೂರಿನ ನವಾಬನನ್ನು ಆ ಪ್ರಾಂತ್ಯಕ್ಕೆ ಸುಬೇದಾರ್ (ಗವರ್ನರ್)ನನ್ನಾಗಿ ನೇಮಿಸಿದನು. ಕ್ರಿ. ಶ. 1726ರಲ್ಲಿ ಕೃಷ್ಣ ನದಿಯ ದಕ್ಷಿಣಕ್ಕಿರುವ ಪ್ರಾಂತ್ಯಗಳಿಂದ ಕಂದಾಯ ವಸೂಲಿ ಮಾಡುವ ನೆಪದಲ್ಲಿ ಪೇಶ್ವೆ ಬಾಜಿ ರಾವ್ ಕರ್ನಾಟಕಕ್ಕೆ ದಂಡೆತ್ತಿ ಬಂದು ಶ್ರೀರಂಗಪಟ್ಟಣ ತನಕವೂ ಹಲವಾರು ಪ್ರದೇಶಗಳನ್ನು ಲೂಟಿಮಾಡಿದನು. ಕ್ರಿ. ಶ. 1730ರಲ್ಲಿ ಸತಾರ ಮತ್ತು ಕೊಲ್ಹಾಪುರ ರಾಜರ ಮಧ್ಯೆ ನಡೆದ ಒಪ್ಪಂದದಂತೆ ಕೃಷ್ಣ ಮತ್ತು ತುಂಗಭದ್ರ ನದಿಗಳ ಮಧ್ಯೆ ಇರುವ ಪ್ರದೇಶವನ್ನು ಕೊಲ್ಹಾಪುರದ ರಾಜನಿಗೆ ಬಿಟ್ಟುಕೊಡಲಾಗಿತ್ತು. ನಿಝಾಮನಡಿ ಇದ್ದ ಸವಣೂರಿನ ನವಾಬನು ತನ್ನ ಅಡಿ ಇದ್ದ ಪ್ರದೇಶಗಳನ್ನು ವಿಸ್ತರಿಸುತ್ತಾ ಮರಾಠರು ಆ ಪ್ರದೇಶಗಳಲ್ಲಿ ಕಂದಾಯ ವಸೂಲಿ ಮಾಡುವುದನ್ನು ಕ್ರಿ. ಶ. 1746ರಲ್ಲಿ ತಡೆದಾಗ ಆ ನಂತರದ ವರ್ಷ ಮರಾಠರು ದಾಳಿಮಾಡಿ ನವಾಬನು ಹಲವಾರು ಪ್ರದೇಶಗಳನ್ನು ಪೇಶ್ವೆಗೆ ಬಿಟ್ಟುಕೊಡುವಂತೆ ಮಾಡಿದರು. ಕ್ರಿ. ಶ. 1756ರಲ್ಲಿ ಬೆಳಗಾವಿ ಕೋಟೆಯು ಪೇಶ್ವೆಗೆ ಸೇರಿತು. ಕ್ರಿ. ಶ. 1763ರಲ್ಲಿ ಹುಕ್ಕೇರಿಯ ದೇಸಾಯಿಯನ್ನು ಪೇಶ್ವೆ ಮಾಧವ ರಾವ್ ತನ್ನ ಅಧೀನಗೊಳಿಸಿದನು. ಕ್ರಿ. ಶ. 17764ರಲ್ಲಿ ಮೈಸೂರಿನ ಹೈದರಾಲಿಯು ದಂಡೆತ್ತಿ ಬಂದು ಸವಣೂರಿನ ನವಾಬನನ್ನು ಅಧೀನಗೊಳಿಸಿದನು. ಹೈದರಾಲಿಯ ಸೇನಾಧಿಪತಿ ಫಾಜ್ಲ್ ಉಲ್ಲಾಃ ಖಾನ್ ಧಾರವಾಡನ್ನು ವಶಪಡಿಸಿ ಕೃಷ್ಣ ನದಿ ತನಕ ದಂಡೆತ್ತಿ ಹೋದನು. ಕ್ರಿ. ಶ. 1776-78ರಂದು ಹೈದರಾಲಿಯು ಪುನಃ ಈ ಪ್ರಾಂತ್ಯಗಳ ಮೇಲೆ ದಾಳಿ ಮಾಡಿದನು. ಕ್ರಿ. ಶ. 1790ರಲ್ಲಿ ಟಿಪ್ಪು ಸುಲ್ತಾನ್‌ನ ಆಳ್ವಿಕೆಯಲ್ಲಿ ಮರಾಠರು ಬ್ರಿಟಿಷರ ಜೊತೆಗೂಡಿ ಪರಶುರಾಮ ಭಾಊ ಮತ್ತು ಕ್ಯಾಪ್ಟನ್ ಲಿಟಲ್ ನೇತೃತ್ವದಲ್ಲಿ ಇಡಿ ಬೊಂಬೆ ಕರ್ನಾಟಕ ಪ್ರಾಂತ್ಯವನ್ನು ತಮ್ಮ ವಶಪಡಿಸಿಕೊಂಡರು.

ಕ್ರಿ. ಶ. 1818ರಲ್ಲಿ ಜನರಲ್ ಮುನ್ರೊ ಬೆಳಗಾವಿ ಜಿಲ್ಲೆಯನ್ನು ವಶಪಡಿಸಿಕೊಂಡಾಗ ಅದು ಬ್ರಿಟಿಷರ ಆಡಳಿತದಡಿ ಬಂತು. ಆ ನಂತರ ಕೆಲ ದಶಕಗಳ ಕಾಲ ಅನುವಂಶೀಯ ರಾಜರು ತಮ್ಮ ಪ್ರದೇಶಗಳ ಆಡಳಿತ ನಡೆಸಬಹುದಿತ್ತು. ಕ್ರಿ. ಶ. 1824ರಲ್ಲಿ ಕಿತ್ತೂರಿನ ದೇಸಾಯಿಯು ಮಗನಿಲ್ಲದ ಕಾರಣ ದತ್ತು ಪುತ್ರನನ್ನು ಪಡೆದುಕೊಂಡಾಗ 'ಡಾಕ್ಟ್ರಿನ್ ಆಫ್ ಲ್ಯಾಪ್ಸ್' ಪ್ರಕಾರ ದತ್ತು ಪುತ್ರನಿಗೆ ಅಧಿಕಾರ ಹಸ್ತಾಂತರಿಸಲಾಗದು ಎಂಬ ನೆಪ ಒಡ್ಡಿ ಕಿತ್ತೂರು ಸಂಸ್ಥಾನವನ್ನು ಬ್ರಿಟಿಷರಿಗೆ ಬಿಟ್ಟುಕೊಡಬೇಕೆಂದು ಬ್ರಿಟಿಷರು ಪಟ್ಟು ಹಿಡಿದರು. ಆಗ ವಿಧವೆಯಾಗಿದ್ದ ಕಿತ್ತೂರು ರಾಣಿ ಚೆನ್ನಮ್ಮರು ಬ್ರಿಟಿಷರ ವಿರುದ್ಧ ದಂಗೆ ಎದ್ದರು. ಬ್ರಿಟಿಷರು ರಾಣಿಯನ್ನು ವಶಪಡಿಸಿ ಕಿತ್ತೂರು ಸಂಸ್ಥಾನವನ್ನು ತಮ್ಮದಾಗಿಸಿಕೊಂಡರು. ಆದರೂ ರಾಣಿ ಚೆನ್ನಮ್ಮನ ಸೇನಾನಿ ಸಂಗೊಳ್ಳಿ ರಾಯಣ್ಣನು ಕ್ರಿ. ಶ. 1829ರಲ್ಲಿ ಬ್ರಿಟಿಷರ ವಿರುದ್ಧ ಇನ್ನೊಂದು ಸಾರಿ ದಂಗೆ ಎದ್ದನು. ಬ್ರಿಟಿಷರು ರಾಯಣ್ಣನನ್ನು ವಶಪಡಿಸಿ ಖಾನಾಪುರದ ನಂದಗಡ್‌ನಲ್ಲಿ ಸಾಯಿಸಿದರು.

ಕ್ರಿ.ಶ. 1830ರಲ್ಲಿ ಬೊಂಬೆ ಪ್ರಾಂತ್ಯದ ಗವರ್ನರ್ ಮರಾಠರಿಂದ ವಶಪಡಿಸಿದ ಮತ್ತು ಇತರ ರಾಜರೊಂದಿಗಿನ ಒಪ್ಪಂದಗಳಿಂದ ಪಡೆದ ಬಾಂಬೆ ಕರ್ನಾಟಕದ ಎಲ್ಲಾ ಪ್ರಾಂತ್ಯಗಳನ್ನೆಲ್ಲಾ ಧಾರವಾಡ ಜಿಲ್ಲೆಯ ಹೆಸರಿನಲ್ಲಿ 'ರೆಗ್ಯುಲೇಷನ್ ಆ್ಯಕ್ಟ್' ಅಡಿ ತಂದನು. ಕ್ರಿ. ಶ. 1836ರಲ್ಲಿ ಅದನ್ನು ಎರಡು ಕಲೆಕ್ಟರೇಟ್‌ಗಳನ್ನಾಗಿ ವಿಭಜಿಸಲಾಯಿತು. ಉತ್ತರ ಕಲೆಕ್ಟರೇಟ್‌ನ ಕೇಂದ್ರವನ್ನು ಕ್ರಿ. ಶ. 1838ರಂದು ಬೆಳಗಾವಿಗೆ ವರ್ಗಾಯಿಸಲಾಯಿತು. ಕ್ರಿ. ಶ. 1840ರಲ್ಲಿ ಸ್ಥಳೀಯ ರಾಜ ನಿಧನನಾದಾಗ ನಿಪ್ಪಾಣಿಯು ಬ್ರಿಟಿಷರ ಅಧೀನಕ್ಕೆ ಬಂತು. ಕ್ರಿ. ಶ. 1844 ಮತ್ತು 1857ರಲ್ಲಿ ಕೊಲ್ಹಾಪುರ ಮತ್ತು ಸಾವಂತವಾಡಿಯಲ್ಲಿ ಬ್ರಿಟಿಷರ ವಿರುದ್ಧ ದಂಗೆಗಳು ಎದ್ದಿದ್ದವು. ತೋರ್ಗಲಿನ ಕಾಡು ಪ್ರದೇಶದಲ್ಲಿ ಕ್ರಿ. ಶ. 1858ರಲ್ಲಿ ಸೆರೆ ಹಿಡಿಯಲಾದ ನರಗುಂದದ ಬಾಬಾಸಾಹೇಬರನ್ನು ಬೆಳಗಾವಿ ನಗರದ ಹೊರಗೆ ಹೇ ಸ್ಟ್ಯಾಕ್ ಹಿಲ್‌ನಲ್ಲಿ ಗಲ್ಲಿಗೇರಿಸಲಾಯಿತು.

ಕ್ರಿ. ಶ. 1947ರಲ್ಲಿ ಬ್ರಿಟಿಷರ ಆಳ್ವಿಕೆ ಕೊನೆಗೊಂಡಿತು. 1948ರಲ್ಲಿ ಬೆಳಗಾವಿ ಜಿಲ್ಲೆಯ ಗಡಿಗಳನ್ನು ಮರು ಎಳೆಯಲಾಯಿತು. ಕ್ರಿ. ಶ. 1956ರಲ್ಲಿ ರಾಜ್ಯಗಳ ಪುನರ್ವಿಂಗಡನೆಯಾದ ನಂತರ ಚಾಂದ್‌ಗಡ್ ತಾಲೂಕನ್ನು ಹೊರತು ಪಡಿಸಿ ಆಗಿನ ಬೆಳಗಾವಿ ಜಿಲ್ಲೆಯು ಮೈಸೂರು ರಾಜ್ಯಕ್ಕೆ ಸೇರಿತು. ಮೈಸೂರನ್ನು ಕರ್ನಾಟಕವೆಂದು 1973ರಲ್ಲಿ ನಾಮಕರಣ ಮಾಡಲಾಯಿತು. ಬೆಳಗಾವಿ ನಗರವು ಬೆಳಗಾವಿ, ಬಿಜಾಪುರ (ಮತ್ತು ಬಾಗಲಕೋಟೆ), ಧಾರವಾಡ (ಗದಗ ಮತ್ತು ಹಾವೇರಿ) ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನೊಳಗೊಂಡ ಬೆಳಗಾವಿ ವಿಭಾಗದ ಕೇಂದ್ರ ಸ್ಥಾನವಾಗಿದೆ (ಸೆನ್ಸಸ್ ಆಫ್ ಇಂಡಿಯಾ 1991: ಬೆಳಗಾಂವ್: 12-15). ಜಿಲ್ಲೆಗೆ ಮೊದಲಿದ್ದ 'ಬೆಳಗಾಂವ್' ಎಂಬ ಹೆಸರು ಬೆಳಗಾವಿ ಎಂದು 2008ರಲ್ಲಿ ಬದಲಾಯಿತು.

ವ್ಯವಸಾಯ ಕ್ಷೇತ್ರದಲ್ಲಿ ಕರ್ನಾಟಕದಲ್ಲೇ ಬೆಳಗಾವಿ ಜಿಲ್ಲೆಯು ಒಂದನೇ ಸ್ಥಾನದಲ್ಲಿದ್ದು, ಕೈಗಾರಿಕೆಯಲ್ಲಿ ಬೆಂಗಳೂರು, ಮೈಸೂರು ಮತ್ತು ಧಾರವಾಡ ಜಿಲ್ಲೆಗಳ ನಂತರದ ಸ್ಥಾನ ಪಡೆದಿದ್ದು ಒಟ್ಟಾರೆ ಅಭಿವೃದ್ಧಿ ಸೂಚ್ಯಂಕದಲ್ಲಿಯೂ ನಾಲ್ಕನೇ ಸಾನ ಪಡೆದಿದೆ. ಜಿಲ್ಲೆಯ ಜನರು ದೊಡ್ಡ ದೊಡ್ಡ ಸಹಕಾರಿ ಬ್ಯಾಂಕುಗಳನ್ನು ನಡೆಸುತ್ತಿದ್ದು ಜಿಲ್ಲೆಯಲ್ಲಿ 28 ಸಹಕಾರಿ ಸಕ್ಕರೆ ಕಾರ್ಖಾನೆಗಳು ಇವೆ.

### 2.1.2 ಬೈಲಹೊಂಗಲ ತಾಲೂಕಿನ ವೈಶಿಷ್ಟ್ಯತೆ

ಇಂತಹ ಮಹತ್ತರ ಬೆಳಗಾವಿ ಜಿಲ್ಲೆಯ ಆಗ್ನೇಯ ದಿಕ್ಕಿನಲ್ಲಿ ಧಾರವಾಡ ಜಿಲ್ಲೆಗೆ ತಾಗಿಕೊಂಡು ಬೈಲಹೊಂಗಲ ತಾಲೂಕು ಇದೆ. ಜಿಲ್ಲೆಯ ಒಟ್ಟು ಹತ್ತು ತಾಲೂಕುಗಳಲ್ಲಿ[4] ಅದು ಒಂದು. ಮೇಲೆ ನಮೂದಿಸಿದ ಒಂದು ಗಡಿಭಾಗವನ್ನು ಬಿಟ್ಟರೆ ಬೆಳಗಾವಿ ಜಿಲ್ಲೆಯ ಕೆಲವು ತಾಲೂಕುಗಳು ಬೈಲಹೊಂಗಲ ತಾಲೂಕನ್ನು ಸುತ್ತುವರಿದಿವೆ: ನೈಋತ್ಯದಲ್ಲಿ ಖಾನಾಪುರ ತಾಲೂಕು, ಪಶ್ಚಿಮದಲ್ಲಿ ಬೆಳಗಾವಿ ತಾಲೂಕು, ಉತ್ತರದಲ್ಲಿ ಗೋಕಾಕ ತಾಲೂಕು, ಉತ್ತರ, ಈಶಾನ್ಯ ಮತ್ತು ಪೂರ್ವ ದಿಕ್ಕುಗಳಲ್ಲಿ ಸವದತ್ತಿ ತಾಲೂಕು. ಬೈಲಹೊಂಗಲವು ಒಂದು ಉಪವಿಭಾಗ ಕೇಂದ್ರವೂ ಹೌದು[5]. ಇತಿಹಾಸದಲ್ಲಿ, ಪ್ರತ್ಯೇಕವಾಗಿ ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಬೈಲಹೊಂಗಲಕ್ಕೆ ವಿಶಿಷ್ಟ ಸ್ಥಾನವಿದೆ[6]. ಕರ್ನಾಟಕದ ಜಾನಪದ ಕಲೆ ಮತ್ತು ಸಾಹಿತ್ಯದಲ್ಲೂ ತಾಲೂಕು ವಿಶಿಷ್ಟವಾಗಿ ಗುರುತಿಸಿಕೊಂಡಿದೆ[7].

ಬೈಲಹೊಂಗಲ ತಾಲೂಕನ್ನು ದಾಖಲೆ–ಗೆಜೆಟಿಯರ್‌ಗಳಲ್ಲಿ, ರಾಷ್ಟ್ರಾದ್ಯಂತದ ದಾಶಮಾನಿಕ ಜನಗಣತಿ ವರದಿಗಳಲ್ಲಿ ಸಂಪಗಾಂವ್ ತಾಲೂಕು ಎಂತಲೂ ಕರೆಯಲಾಗಿದೆ. ತಾಲೂಕಿನ ನಡುಭಾಗದಿಂದ ತುಸು ಉತ್ತರಕ್ಕೆ ಪೂರ್ವದ ಅಂಚಿನಲ್ಲಿರುವ ಬೈಲಹೊಂಗಲ ಪುರಸಭೆ [ಪಟ್ಟಣ ಪಂಚಾಯತಿ] ಈಗಿನ ತಾಲೂಕು ಕೇಂದ್ರವಾದರೆ ಸಂಪಗಾಂವ್ ಎಂಬುದು ಬೈಲಹೊಂಗಲ ಪಟ್ಟಣದಿಂದ ಬೆಳಗಾವಿಗೆ, ಅಂದರೆ ಪೂರ್ವ ದಿಕ್ಕಿನಿಂದ ಪಶ್ಚಿಮಕ್ಕೆ ಹೋಗುವ ಮತ್ತು ತಾಲೂಕು ಮಧ್ಯ ಭಾಗದಿಂದ ತುಸು ಉತ್ತರಕ್ಕೆ ಹಾಗೂ ಇಡೀ ತಾಲೂಕನ್ನು ಸರಿ ಮಧ್ಯ ಭಾಗದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ

---

4 ಬೆಳಗಾವಿ ಜಿಲ್ಲೆಯ 10 ತಾಲೂಕುಗಳು: ಬೆಳಗಾವಿ, ಖಾನಾಪುರ, ಬೈಲಹೊಂಗಲ (ಸಂಪಗಾಂವ್), ಸೌದತ್ತಿ (ಪರಸಗಡ್), ರಾಮದುರ್ಗ, ಗೋಕಾಕ್, ಹುಕ್ಕೇರಿ, ಚಿಕ್ಕೋಡಿ. ರಾಯಬಾಗ್ ಮತ್ತು ಅಥಣಿ. ಬೆಳಗಾವಿ ತಾಲೂಕಿನ ಎರಡು ಹಳ್ಳಿಗಳು ತಾಲೂಕಿನ ಪಶ್ಚಿಮ ಗಡಿಯಿಂದ ಸ್ವಲ್ಪ ದೂರವಿದ್ದು ಕೊಲ್ಹಾಪುರ ಜಿಲ್ಲೆಯ ಹಳ್ಳಿಗಳಿಂದ ಸುತ್ತುವರೆದಿದೆ.

5 ಬೈಲಹೊಂಗಲ ಉಪವಿಭಾಗದಲ್ಲಿ ಬೈಲಹೊಂಗಲ. ಸೌದತ್ತಿ, ರಾಮದುರ್ಗ ಮತ್ತು ಗೋಕಾಕ್ ತಾಲೂಕುಗಳು ಸೇರಿಕೊಂಡಿವೆ. ಜಿಲ್ಲೆಯ ಇನ್ನಿತರ ಉಪವಿಭಾಗಗಳು ಎರಡು: 1. ಬೆಳಗಾವಿ ಉಪವಿಭಾಗ – ಬೆಳಗಾವಿ ಮತ್ತು ಖಾನಾಪುರ ತಾಲೂಕುಗಳು 2. ಚಿಕ್ಕೋಡಿ ಉಪವಿಭಾಗದ್ಲಿದಲ್ಲಿ ಇನ್ನುಳಿದ ನಾಲ್ಕು ತಾಲೂಕುಗಳು ಇವೆ.

6 ಅಡಿಟಿಪ್ಪಣಿ 2ರಲ್ಲಿ ನಮೂದಿಸಿದ ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣನ ಬ್ರಿಟಿಷರ ವಿರುದ್ಧದ ಹೋರಾಟ ಇಲ್ಲಿ ಗಮನಿಸಬಹುದು. ಕಿತ್ತೂರು ಬೈಲಹೊಂಗಲ ತಾಲೂಕಿಗೆ ಸೇರಿದ್ದು, 2017ರಲ್ಲಿ ಅದನ್ನು ಪ್ರತ್ಯೇಕ ತಾಲೂಕಾಗಿ ಘೋಷಿಸಲಾಗಿದೆ. ಸಂಗೊಳ್ಳಿ ಈಗಲೂ ಬೈಲಹೊಂಗಲ ತಾಲೂಕಿಗೇ ಸೇರಿರುತ್ತದೆ. ಮಲ್ಲಮ್ಮನ ಬೆಳವಡಿಯೂ ಬೈಲಹೊಂಗಲಕ್ಕೇ ಸೇರುತ್ತದೆ.

7 ಕರ್ನಾಟಕ ಜಾನಪದ ಸಾಹಿತ್ಯದಲ್ಲಿ ತುಂಬಾ ಹೆಸರುವಾಸಿಯಾದ ಹಾಗೂ ಜಾನಪದ ರಂಗಭೂಮಿಯಲ್ಲಿ ಜನಪ್ರಿಯವಾದ ಸಣ್ಣಾಟ ಅಥವಾ ಡಪ್ಪಿನಾಟ 'ಸಂಗ್ಯಾ ಬಾಳ್ಯ' ಬೈಲಹೊಂಗಲ ಪಟ್ಟಣ ಮತ್ತು ಅದರಿಂದ 5–6 ಕಿ.ಮೀ. ದೂರದಲ್ಲಿರುವ ಬೈಲವಾಡ ವಾರ್ತೆಯಲ್ಲಿ 19ನೇ ಶತಮಾನದ ಅಂತ್ಯದಲ್ಲಿ ನಡೆದಿರುವ ನಿಜಘಟನೆಯನ್ನು ಆಧರಿಸಿದ ಜಾನಪದ ಆಟವಾಗಿದೆ. ಅದನ್ನು ಬೈಲಹೊಂಗಲ ತಾಲೂಕು, ಬೆಳಗಾವಿ ಜಿಲ್ಲೆ ಸೇರಿದಂತೆ ಎಲ್ಲಾ ಉತ್ತರ ಕನ್ನಡ ಜಿಲ್ಲೆಗಳಲ್ಲೂ ಈಗಲೂ ಪ್ರದರ್ಶಿಸಲಾಗುತ್ತದೆ. ಕೀರ್ತಿನಾಥ ಕುರ್ತುಕೋಟಿಯವರೊಂದಿಗೆ ಚಂದ್ರಶೇಖರ ಕಂಬಾರರು 'ಸಂಗ್ಯಾ ಬಾಳ್ಯ' ಆಟವನ್ನು 1966ರಲ್ಲಿ ಮೊದಲಿಗೆ ಸಂಪಾದಿಸಿ ಪ್ರಕಟಿಸಿದರು (ತರಿಕೆರೆ: 2012).

ಮಲಪ್ರಭಾ ನದಿಗೆ ಉತ್ತರಕ್ಕೆ ಸುಮಾರು 7–8 ಕಿಲೊ ಮೀಟರ್ ಅಂತರದಲ್ಲಿ ನದಿಗೆ ಸಮಾನಾಂತರವಾಗಿ ಓಡುವ ರಸ್ತೆಯ ಎರಡೂ ಬದಿಗಳಲ್ಲಿ ಹರಡಿರುವ, ಮತ್ತು ಬೈಲಹೊಂಗಲದಿಂದ ಸಮಾರು ಏಳು ಕಿ.ಮೀ. ದೂರದಲ್ಲಿರುವ ಒಂದು ಹಳ್ಳಿ. ಈ ತಾಲೂಕು ಬೆಳಗಾವಿ ಜಿಲ್ಲೆಯ ಆಗ್ನೇಯ ದಿಕ್ಕಿನಲ್ಲಿದ್ದು 15$^0$ 28' ಮತ್ತು 19$^0$ 59' ಉತ್ತರ – ಅಕ್ಷಾಂಶ ಮತ್ತು 74$^0$ 38' ಮತ್ತು 74$^0$ 59' ಪೂರ್ವ – ರೇಖಾಂಶಗಳ ಮಧ್ಯೆ ಇದೆ (ಇಂಪೇರಿಯಲ್ ಗೆಝೆಟಿಯರ್, ಸಂಪುಟ xxii : 23). ತಾಲೂಕಿನಲ್ಲಿ ಒಂದು ಪಟ್ಟಣ, ಮೂರು ಹೋಬಳಿಗಳು – ಬೈಲಹೊಂಗಲ, ನೇಸರ್ಗಿ ಮತ್ತು ಕಿತ್ತೂರು, 38 ಗ್ರಾಮ ಪಂಚಾಯತಿಗಳು ಮತ್ತು 132 ಕಂದಾಯ ಗ್ರಾಮಗಳು ಇವೆ.

ಬೈಲಹೊಂಗಲ ತಾಲೂಕು ಪಶ್ಚಿಮದ ಬೆಟ್ಟ ಗುಡ್ಡಗಳ ಮತ್ತು ಪೂರ್ವದ ಮೈದಾನಗಳ ನಡುವಣ ಪ್ರದೇಶದಲ್ಲಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ತಾಲೂಕಿನಲ್ಲಿ ಹಲವಾರು ತರಹದ ಮಣ್ಣು ಮತ್ತು ಭೂ ಪದರಗಳು ಕಾಣಿಸಿಕೊಳ್ಳುತ್ತವೆ. ಗುಡ್ಡ ಬೆಟ್ಟಗಳ ಇಳಿಜಾರಿನಿಂದ ಕ್ರಮೇಣ ಪೂರ್ವ ದಿಕ್ಕಿನಲ್ಲಿ ಹತ್ತಿಗೆ ಅನುಕೂಲವಾಗಿರುವ ಕಪ್ಪು ಮಣ್ಣಿನಿಂದ ಕೂಡಿದ ವಿಶಾಲ ಬಯಲು ಪ್ರದೇಶಕ್ಕೆ ಅದು ಜಾರುತ್ತದೆ. ವಾರ್ಷಿಕ ಮಳೆ 30 ಇಂಚು. 19ನೇ ಶತಮಾನದ ಕೊನೆಭಾಗದಲ್ಲೇ ಅದು ಬರಗಾಲಗಳಿಂದ ಸುಮಾರಾಗಿ ಮುಕ್ತವಾಗಿದೆ ಎಂದು ಇಂಪೇರಿಯಲ್ ಗೆಝೆಟಿಯರ್‌ನಲ್ಲಿ ದಾಖಲಾಗಿದೆ (ಸಂಪುಟ xxii: 23). 20ನೇ ಶತಮಾನದ ಉತ್ತರಾರ್ಧದಲ್ಲಿ ಕೈಗೊಂಡ ಮಲಪ್ರಭಾ ನದಿ ಯೋಜನೆಯಿಂದ (ಕರ್ನಾಟಕ ಸ್ಟೇಟ್ ಗೆಝೆಟಿಯರ್, 1987: 296–297] ಬೈಲಹೊಂಗಲ ತಾಲೂಕಿನ ನೀರಾವರಿ ಆಧಾರಿತ ವ್ಯವಸಾಯದ ಪ್ರಮಾಣ ಹೆಚ್ಚಾಗಿ ಆರ್ಥಿಕ ಮಟ್ಟದಲ್ಲಿ ತಾಲೂಕು ಉತ್ತಮಾಗಿದೆ ಎಂದು ತಿಳಿದುಕೊಳ್ಳಬಹುದು.

ಸೌದತ್ತಿ ತಾಲೂಕಿನ ನವಿಲು ತೀರ್ಥದಲ್ಲಿ ಮಲಪ್ರಭಾ ನದಿಗೆ ಅಡ್ಡವಾಗಿ ಅಣೆಕಟ್ಟನ್ನು ಕಟ್ಟಲು 1963ರಲ್ಲಿ ಪ್ರಾರಂಭಿಸಿ 1974ರಲ್ಲಿ ಅದನ್ನು ಮುಕ್ತಾಯಗೊಳಿಸಲಾಯಿತು. 1986 ಮಾರ್ಚ್ ತಿಂಗಳ ಕೊನೆಯಲ್ಲಿ 1,34,810 ಹೆಕ್ಟೇರ್‌ಗಳಷ್ಟು ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಲುವೆಗಳನ್ನು ನಿರ್ಮಿಸಲಾಯಿತು. 1985–86ರಲ್ಲಿ ವಾಸ್ತವವಾಗಿ ನೀರಾವರಿ ಒದಗಿಸಲಾದ ಜಮೀನು ಬೈಲಹೊಂಗಲ ತಾಲೂಕಿನಲ್ಲಿ 6,654 ಕಿ.ಮೀ. ಆಗಿತ್ತು[8] (ಕರ್ನಾಟಕ ಸ್ಟೇಟ್ ಗೆಝೆಟಿಯರ್ 1987: 296–97).

ಅಣೆಕಟ್ಟಿನಿಂದ ಮುಳುಗಡೆಯಾದ ಒಟ್ಟು ಪ್ರದೇಶ 13,034 ಹೆಕ್ಟೇರ್. ಅಣೆಕಟ್ಟಿನಿಂದ ತಾಲೂಕಿನ 19 ಹಳ್ಳಿಗಳು ಸಂಪೂರ್ಣವಾಗಿ ಮತ್ತು 14 ಹಳ್ಳಿಗಳು ಭಾಗಶಃ ಮುಳುಗಡೆಯಾಗಿದ್ದವು[9]. 1984ರ

---

8 ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯ ಪಡೆದ ಇನ್ನುಳಿದ ತಾಲೂಕುಗಳು – ರಾಮದುರ್ಗ 19,484 ಹೆಕ್ಟೇರ್, ಮತ್ತು ಪರಸಗಡ್ ತಾಲೂಕು 36,978 ಹೆಕ್ಟೇರ್.

9 ಜಿಲ್ಲೆಯ ಇನ್ನುಳಿದ ತಾಲೂಕುಗಳಿಂದ ಸಂಪೂರ್ಣವಾಗಿ ಮತ್ತು ಭಾಗಶಃ ಮುಳುಗಡೆಯಾದ ಹಳ್ಳಿಗಳೆಂದರೆ – ಪರಸಗಡ್ (ಸೌದತ್ತಿ) ತಾಲೂಕಿನ ಕ್ರಮವಾಗಿ 21 ಮತ್ತು 13, ಖಾನಾಪುರ ತಾಲೂಕಿನ ಕ್ರಮವಾಗಿ 2 ಮತ್ತು 3 – ಒಟ್ಟು ಕ್ರಮವಾಗಿ 42 ಮತ್ತು 30 ಹಳ್ಳಿಗಳು.

ನಂತರವೂ ಪುನರ್ವಸತಿ ಕೆಲಸವು ಮುನ್ನಡೆದಿದ್ದು ಈಗ ಅದು ಪೂರ್ಣಗೊಂಡಿದೆ (ಕರ್ನಾಟಕ ಸ್ಟೇಟ್ ಗೆಝೆಟಿಯರ್ 1987: 296–97).

2011ರ ಜನಗಣತಿಯಂತೆ ಬೈಲಹೊಂಗಲ ತಾಲೂಕಿನ ಒಟ್ಟು ವಿಸ್ತೀರ್ಣ 1120 ಚದರ ಕಿಲೊ ಮೀಟರ್. ಅದರಲ್ಲಿ ಒಂದು ಪಟ್ಟಣ 132ಹಳ್ಳಿಗಳು ಇವೆ. ಒಟ್ಟಾರೆ ಜನಸಂಖ್ಯೆ 80,060 ಮನೆಗಳಲ್ಲಿ 3,81,189 ಮಂದಿ (1,92,462 ಗಂಡಸರು – 1,88,727 ಹೆಂಗಸರು)[10] ಆಗಿದ್ದು, ಅನುಸೂಚಿತ ಜಾತಿಗಳ ಜನಸಂಖ್ಯೆ 26,161 (13,241–12,920) ಮತ್ತು ಅನುಸೂಚಿತ ಜನಾಂಗಗಳ ಜನಸಂಖ್ಯೆ 33,911 (17,027–16,884) ಆಗಿದೆ. ತಾಲೂಕಿನ ಅಕ್ಷರಸ್ಥರು 2,43,796 (1,37,777–1,06,019). ಕೆಲಸ ಮಾಡುವವರು 1,61,698 (1,08,679–52,819) ಪ್ರಮುಖ ಕೆಲಸಗಾರರು 1,31.312 (94,148–37,164). ಪೂರ್ಣ ಪ್ರಮಣದಲ್ಲಿಲ್ಲದ ಕೆಲಸಗಾರರು 30,186 (14,531–15,655). ಕೆಲಸದಲ್ಲಿಲ್ಲದವರು 2,19,691 (83,783–1,35,908) ಮಂದಿ ಇದ್ದಾರೆ.

**2.1.3 ಬೈಲಹೊಂಗಲ ತಾಲೂಕಿನ ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿಗಳ ಒಟ್ಟಾರೆ ಚಿತ್ರ**

ಬೈಲಹೊಂಗಲ ತಾಲೂಕಿನ ಮೂರು ಹಳ್ಳಿಗಳಲ್ಲಿಯ ಮೂರು ದಲಿತ ಕೇರಿಗಳನ್ನು ಬಿಟ್ಟಿ ಚಾಕ್ರಿ ಅಧ್ಯಯನಕ್ಕೆ ಆರಿಸಲಾಗಿದೆ – ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕಬಾಗೇವಾಡಿ[11].

**ಜಾಲಿಕೊಪ್ಪವು** ಬೈಲಹೊಂಗಲದಿಂದ ಧಾರವಾಡಕ್ಕೆ ಹೋಗುವ ರಸ್ತೆಯಲ್ಲಿ ಮಲಪ್ರಭಾ ನದಿಗೆ ಅಡ್ಡವಾಗಿ ಕಟ್ಟಿದ ಸೇತುವೆ ದಾಟಿದ ನಂತರ ಸುಮಾರು ಏಳು ಕಿ.ಮೀ. ದೂರದಲ್ಲಿ ದಕ್ಷಿಣದಲ್ಲಿ ಸಿಗುತ್ತದೆ. ಚಿವಟಗುಂಡಿಯು ತಾಲೂಕು ಕೇಂದ್ರದಿಂದ ಪಶ್ಚಿಮಕ್ಕೆ ಏಳು ಕಿಮೀ ದೂರದಲ್ಲಿದೆ. ಚಿಕ್ಕಬಾಗೇವಾಡಿಯು ಬೆಳಗಾವಿ ರಸ್ತೆಯ ಇಕ್ಕೆಲಗಳಲ್ಲಿ ಪಶ್ಚಿಮಕ್ಕೆ ತಾಲೂಕಿನ ಗಡಿಭಾಗದಲ್ಲಿ ಸುಮಾರು 15 ಕಿ.ಮೀ. ದೂರದಲ್ಲಿದೆ.

**2011ರ ಜನಗಣತಿಯ ದಾಖಲೆ ಪ್ರಕಾರ ಜಾಲಿಕೊಪ್ಪದಲ್ಲಿಯ** ಒಟ್ಟು ಮನೆಗಳು 208. ಒಟ್ಟು ಜನಸಂಖ್ಯೆ 1,044 (536–508). ಅಲ್ಲಿಯ ಅಕ್ಷರತೆ 76.31(87.76–64.08).ಕೆಲಸದಲ್ಲಿ ಭಾಗವಹಿಸುವಿಕೆಯ ಪ್ರಮಾಣ (59.70–20.87). ಅನುಸೂಚಿತ ಜಾತಿಗಳು (57–57). ಅನುಸೂಚಿತ ಜನಾಂಗಗಳು (120–100).

---

10 ಇನ್ನು ಮುಂದೆ ಯಾವುದೇ ಜನಸಂಖ್ಯೆಯ ಮುಂದೆ ಆವರಣದಲ್ಲಿ ಕೊಡಲಾಗುವ ಗಂಡಸರ–ಹೆಂಗಸರ ಕುರಿತು ಕೊಡುವ ಸಂಖ್ಯೆಯ ಮುಂದೆ ಗಂಡಸರು ಮತ್ತು ಹೆಂಗಸರು ಎಂದು ಸೂಚಿಸದೆ ಕೇವಲ ಸಂಖ್ಯೆಯನ್ನು ಮಾತ್ರ ಕೊಡಲಾಗುವುದು.

11 ಈ ಮೂರೂ ಹಳ್ಳಿಗಳಿಗೂ ಕೆಲವು ವೈಶಿಷ್ಟ್ಯಗಳಿವೆ. ಜಾಲಿಕೊಪ್ಪವು ಅಡಿಟಿಪ್ಪಣಿ 2ರಲ್ಲಿ ವಿವರಿಸಿದ ಕೆಲವು ಚಾರಿತ್ರಿಕ ಘಟನೆಗಳು ನಡೆದ ಪ್ರದೇಶಗಳಿಗೆ ಹೊಂದಿಕೊಂಡಿದೆ. ಮತ್ತು ಆರ್ಥಿಕ ದೃಷ್ಟಿಯಲ್ಲಿ ಮಹತ್ವದ್ದಾಗಿದೆ. ಜಾಲಿಕೊಪ್ಪದಿಂದ ಸಂಗೊಳ್ಳಿಯು ಕೇವಲ 7–8 ಕಿ.ಮೀ. ದೂರದಲ್ಲಿದೆ; ಕಿತ್ತೂರು ಸುಮಾರು 14–15 ಕಿ.ಮೀ. ದೂರದಲ್ಲಿದೆ; ಬೆಳವಡಿ ಮಲ್ಲಮನಿಂದ ಪ್ರಖ್ಯಾತವಾದ ಬೆಳವಡಿಯು ಕೇವಲ 4 ಕಿ.ಮೀ. ದೂರವಿದೆ. ಚಿವಟಗುಂಡಿಯು ಅಡಿಟಿಪ್ಪಣಿ 6ರಲ್ಲಿ ವಿವರಿಸಿದ ಜಾನಪದ ಸಣ್ಣಾಟ 'ಸಂಗ್ಯಾ ಬಾಳ್ಯಾ'ಕ್ಕೆ ಸಂಬಂಧಪಟ್ಟ ಬೈಲವಾಡ ವಾರ್ತೆಯಿಂದ ಒಂದುವರೆ ಕಿ.ಮೀ. ದೂರದಲ್ಲಿದೆ. ಚಿಕ್ಕ ಬಾಗೇವಾಡಿಯು ಪುಟ 21ರಲ್ಲಿ ಪ್ರಸ್ತಾಪಿಸಿರುವ ಬೆಳಗಾವಿ ಜಿಲ್ಲೆಯ ಆಧುನಿಕ ಆರ್ಥಿಕ ಪ್ರಗತಿಯ ಒಂದು ಸಂಕೇತವಾಗಿರುವ 28 ಸಕ್ಕರೆ ಕಾರ್ಖಾನೆಗಳಲ್ಲಿ ಒಂದು ಇರುವ ತಾಲೂಕಿನ ಎಮ್.ಕೆ. ಹುಬ್ಬಳ್ಳಿಯಿಂದ 10 ಕಿ.ಮೀ. ದೂರದಲ್ಲಿದೆ.

**ಚಿವಟಗುಂಡಿಯಲ್ಲಿರುವ** ಒಟ್ಟು ಮನೆಗಳು 321. ಒಟ್ಟು ಜನಸಂಖ್ಯೆ 1,533 (759–774). ಅಕ್ಷರತೆ 69.82(79.91–59.40). ಕೆಲಸ ಭಾಗವಹಿಸುವಿಕೆಯ ಪ್ರಮಾಣ (61.66, 33.85). ಅನುಸೂಚಿತ ಜಾತಿಗಳು (74–65). ಅನುಸೂಚಿತ ಜನಾಂಗಗಳು (13–16).

**ಚಿಕ್ಕ ಬಾಗೇವಾಡಿಯಲ್ಲಿರುವ** ಒಟ್ಟು ಮನೆಗಳು 623 ಒಟ್ಟು ಜನಸಂಖ್ಯೆ 2992 (1518–1474) ಅಕ್ಷರತೆ 74.80 (83.19–66.24). ಕೆಲಸ ಭಾಗವಹಿಸುವಿಕೆಯ ಪ್ರಮಾಣ (57.31–13.64), ಅನುಸೂಚಿತ ಜಾತಿಗಳು (70–73). ಯಾವುದೇ ಅನುಸೂಚಿತ ಜನಾಂಗ ಅಲ್ಲಿಲ್ಲ.

**2.2 ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿಗಳಲ್ಲಿಯ ದಲಿತ ಕೇರಿಗಳು**

**ಜಾಲಿಕೊಪ್ಪ:** (ದಲಿತ ಕೇರಿಯ ನಕ್ಷೆ – ಪುಟ 26)

45 ವರ್ಷದ ಹಿಂದೆ ಮಲಪ್ರಭಾ ನದಿದಂಡೆಯಲ್ಲಿದ್ದ ಊರುಗಳೆಲ್ಲಾ ಸ್ಥಳಾಂತರಗೊಂಡವು. ಅದರಲ್ಲಿ ಜಾಲಿಕೊಪ್ಪವೂ ಒಂದಾಗಿತ್ತು. ಬೈಲಹೊಂಗಲದಿಂದ ಧಾರವಾಡಕ್ಕೆ ಹೋಗುವ ರಸ್ತೆಯ

ಬಲಭಾಗದಲ್ಲಿ ದಲಿತ ಕೇರಿಯನ್ನು ನಿರ್ಮಿಸಿದರೆ ಇತರ ಜಾತಿಯವರು ಎಡಭಾಗದಲ್ಲಿ ನೆಲಸಿದರು. ಅರವಳ್ಳಿ ಮತ್ತು ಲಿಂಗದಳ್ಳಿ ಗ್ರಾಮದವರು ಜಾಲಿಕೊಪ್ಪ ಗ್ರಾಮಕ್ಕೆ ತಾಗಿಯೇ ರಸ್ತೆಯ ಎಡಭಾಗದಲ್ಲಿ ಬಂದು ನೆಲಸಿದರೆ, ಕೆಂಗಾನೂರಿನವರು ರಸ್ತೆಯ ಬಲಭಾಗದಲ್ಲಿ ಉತ್ತರಕ್ಕೆ ಬಂದು ನೆಲಸಿದರು.

ಹಳೆ ಊರಲ್ಲಿ ದಲಿತರಿಗೆ ಯಾವುದೇ ಜಮೀನು ಇರಲಿಲ್ಲ. ಸ್ಥಳಾಂತರಗೊಂಡಿದ್ದಕ್ಕೆ ದಲಿತರಿಗೆ ಸರ್ಕಾರದಿಂದ ಯಾವುದೇ ಪರಿಹಾರ ಸಿಕ್ಕಿರಲಿಲ್ಲ. ಆದರೆ ಸರ್ಕಾರವೇ ದೊಡ್ಡ ದೊಡ್ಡ ಸೈಟುಗಳನ್ನು (50'x80') ಮಾಡಿ ಜನತಾ ಮನೆಗಳನ್ನು ಕಟ್ಟಿಸಿಕೊಟ್ಟಿತು. ಬೈಲಹೊಂಗಲ – ಧಾರವಾಡ ರಸ್ತೆಯ ಬಲಭಾಗದಲ್ಲಿ ಪಶ್ಚಿಮಕ್ಕೆ ಹಾದು ಹೋಗುವ 100 ಮೀಟರ್ ಉದ್ದದ ಓಣಿಯ ಇಕ್ಕೆಲಗಳಲ್ಲಿ ಸ್ಥಳಾಂತರಗೊಂಡವರೆಲ್ಲ ಮನೆ ಕಟ್ಟಿಸಿ ಕೊಂಡರು. ಹಳೆ ಊರಿನಲ್ಲಿ ಓಣಿ ಮತ್ತು ಮನೆಗಳು ಇಕ್ಕಟ್ಟಿನಲ್ಲಿದ್ದರೆ ಹೊಸ ಊರನಲ್ಲಿ ಮನೆನಿವೇಶನಗಳು ವಿಶಾಲವಾಗಿವೆ. ಎಲ್ಲಾ ಮನೆಗಳಿಗೂ ವಿದ್ಯುತ್ ವ್ಯವಸ್ಥೆಯಾಗಿದೆ. ಕುಟುಂಬಗಳು ಜಾಸ್ತಿಯಾಗುತ್ತಿದ್ದಂತೆ ದಕ್ಷಿಣಕ್ಕೆ ಬೈಲಹೊಂಗಲ – ಧಾರವಾಡ ರಸ್ತೆಯ ಬಲಭಾಗದಲ್ಲಿಯೂ ಅದರ ಹಿಂದುಗಡೆಯೂ ಹೊಸಮನೆಗಳನ್ನು ಕಟ್ಟಿಸಿಕೊಳ್ಳುತ್ತಿದ್ದಾರೆ.

ಕೇರಿ ಒಳಕ್ಕೆ ಬರುತ್ತಿದ್ದ ಹಾಗೇ ಪಶ್ಚಿಮದ ಕೊನೆ ತುದಿಯ ಸ್ವಲ್ಪ ಮುಂಚೆ ಓಣಿ ಮಧ್ಯದಲ್ಲಿ ಬೇವಿನ ಮರದ ಕೆಳಗೆ ಕಟ್ಟೆಯ ಮೇಲೆ ಮಾತಂಗಿ ದೇವರನ್ನು ನೆಲೆಸಿದ್ದು ಈಗ ಬೇವಿನ ಮರವು ಎರಡು ವರ್ಷಗಳ ಹಿಂದೆ ಒಣಗಿ ಅದರ ಜಾಗದಲ್ಲಿ ಅಶ್ವತ್ಥ ಮರವು ಸೊಗಸಾಗಿ ಬೆಳೆದು ನಿಂತಿದೆ. ಓಣಿಯ ಪಶ್ಚಿಮ ಅಂಚಿನಲ್ಲಿ ರಸ್ತೆ ಮಧ್ಯದಲ್ಲಿ ಕರಿಯಮ್ಮ ದೇವರ ಹಳೆ ಮೂರ್ತಿಯನ್ನು ತಂದು ಸ್ಥಾಪಿಸಿದ್ದು 2017ರಲ್ಲಿ ಸಮುದಾಯ ಭವನವನ್ನು ಕರಿಯಮ್ಮ ದೇವರಿಗೆ ಗುಡಿಯಾಗುವ ರೀತಿಯಲ್ಲಿ ಕಟ್ಟಿಸಿದ್ದಾರೆ.

ಜಾಲಿಕೊಪ್ಪ, ದಲಿತ ಕೇರಿಯ ನಕ್ಷೆ



ಕೆಲಸ ಹುಡುಕಿ ಕೊಂಡು ಜಾಲಿಕೊಪ್ಪದ ದಲಿತರು ಹೆಚ್ಚಾಗಿ ಹೋಗುವುದು ಏಳು ಕಿ. ಮೀ. ದೂರದಲ್ಲಿರುವ ಬೈಲಹೊಂಗಲ ಪಟ್ಟಣಕ್ಕೆ.

**ಚಿವಟಗುಂಡಿ:** (ದಲಿತ ಕೇರಿಯ ನಕ್ಷೆ – ಪುಟ 28

ಚಿವಟಗುಂಡಿಯ ದಲಿತ ಕೇರಿಯಲ್ಲಿ ಒಟ್ಟು 42 ಮನೆಗಳಿವೆ. ಅವರ ಹಿರಿಯರೆಲ್ಲರೂ ಮೊದಲಿನಿಂದಲೂ ಅಲ್ಲಿಯೇ ಇದ್ದರು. ಒಂದು ಮೂಲ ಕುಟುಂಬ ನಾಲ್ಕು ತಲೆಮಾರಿನ ಹಿಂದೆ ಕಡೆಪಟ್ಟಿಯಿಂದ ಬೈಲಹೊಂಗಲಕ್ಕೆ 13 ಕಿ.ಮೀ. ದೂರದಲ್ಲಿರುವ ಮತ್ತಿಕೊಪ್ಪಕ್ಕೆ ಬಂದು ನಂತರ ಮತ್ತಿಕೊಪ್ಪಕ್ಕೆ ಬಂದು ನೆಲೆಸಿತ್ತು. ಇನ್ನೊಂದು ಮೂಲ ಕುಟುಂಬ ಸಂಪಗಾಂವದಿಂದ ನಾಲ್ಕು ತಲೆಮಾರಿನ ಹಿಂದೆ ಚಿವಟಗುಂಡಿಗೆ ಬಂದು ನೆಲೆಸಿದೆ.

ದಲಿತ ಕೇರಿಯಲ್ಲಿದ್ದ ಮೂಲ ದೇವರು ಕರೆಮ್ಮ ಮತ್ತು ಭರಮಪ್ಪ. ಕರೆಮ್ಮನ ಕಲ್ಲು ಚಿವಟಗುಂಡಿಯ ದಲಿತ ಕೇರಿಯ ಮುಖ್ಯ ಓಣಿಯ ಮಧ್ಯಭಾಗದಲ್ಲಿ ಉತ್ತರಕ್ಕಿದೆ. ಭರಮಪ್ಪನ ಕಲ್ಲು ಸರಿ ಎದುರಿಗೆ ಓಣಿಯ ದಕ್ಷಿಣಕ್ಕೆ ಸ್ವಲ್ಪ ಒಳಗೆ ಇದೆ. ಕರೆಮ್ಮನ ಕಲ್ಲನ್ನು ಒಳಗೊಂಡಂತೆ ಸಮುದಾಯ ಭವನವನ್ನು 2015ರಲ್ಲಿ ಕಟ್ಟಲಾಗಿತ್ತು. ಅದಕ್ಕೆ ಪ್ರಮುಖ ದ್ವಾರ ದಲಿತರ ಮುಖ್ಯ ಓಣಿಯಲ್ಲಿದೆ. ನಂತರ ಕರೆಮ್ಮನ ಕಲ್ಲಿನ ಪಕ್ಕದಲ್ಲಿ ದುರ್ಗಾ ದೇವಿಯ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಊರಿನ ಗೌಡರ ನೇತೃತ್ವದಲ್ಲಿ ಊರಿನವರಿಂದೆಲ್ಲಾ ಪಟ್ಟಿ ಹಾಕಿ ಮೂರ್ತಿ ಮಾಡಿಸಿ ಅದನ್ನು 2017ರಲ್ಲಿ ಸ್ಥಾಪನೆ ಮಾಡಲಾಗಿದೆ. ಅದಕ್ಕೆ ಎದುರಾಗಿ ಪೂರ್ವ ದಿಕ್ಕಿನಲ್ಲಿ ದಲಿತ ಕೇರಿಯ ಮುಖ್ಯ ಓಣಿಯ ಉತ್ತರ ದಿಕಿನಲ್ಲಿರುವ ಮನೆಗಳ ಹಿಂದಿರುವ ಕಿರು ಓಣಿಯಿಂದ ದಲಿತರಲ್ಲದವರೂ ಬಂದು ಪೂಜೆ ಸಲ್ಲಿಸಲು ಅನುಕೂಲವಾಗುವಂತೆ ಇನ್ನೊಂದು ಬಾಗಿಲನ್ನು ಇಟ್ಟುಕೊಳ್ಳಲಾಗಿದೆ. ಊರನಲ್ಲಿರುವ ಸ್ವಾಮಿಯೇ ಅದನ್ನು ಐದು ವರ್ಷ ಹಿಂದೆ ಸ್ಥಾಪಿಸಿದರು.

ಊರಲ್ಲಿ ಕೆಲಸ ಇಲ್ಲದಾಗ ಊರಿನವರು ಅಕ್ಕ ಪಕ್ಕದ ಊರುಗಳಿಗೆ ಕೆಲಸಕ್ಕೆ ಹೋಗುತ್ತಾರೆ – ಮೂರು ಕಿ.ಮೀ ದೂರದಲ್ಲಿ ಬೈಲವಾಡ, ಐದು ಕಿಮೀ ದೂರದಲ್ಲಿ ನಾಗನೂರು ಮತ್ತು ಐದು ಕಿಮೀ ದೂರದಲ್ಲಿ ಸಂಪಗಾಂವ ಇವು ಚಿವಟಗುಂಡಿಯ ದಲಿತರು ಕೆಲಸ ಮಾಡುವ ಇತರ ಊರುಗಳು.

**ಚಿಕ್ಕ ಬಾಗೇವಾಡಿ:** (ದಲಿತ ಕೇರಿಯ ನಕ್ಷೆ – ಪುಟ 30)

ಹಳೆ ಕಾಲದಿಂದಲೂ ಈ ಊರು ಮತ್ತು ದಲಿತ ಕೇರಿ ಅಸ್ತಿತ್ವದಲ್ಲಿದೆ. 100–120 ವರ್ಷಗಳ ಹಿಂದೆ ಕೇವಲ ನಾಲ್ಕು ಕುಟುಂಬಗಳಿದ್ದು (1. ಕೆಳಗೇರಿ, 2. ಕುಂಬ್ಳಿ, 3. ಹಲಗಿ, 4. ಚನಮಂತ್ರಿ) ಈಗ ಅವು ಬೆಳೆದು ಹೆಚ್ಚಾಗಿವೆ. ಜೊತೆಗೆ ಬೇರೆ ಕಡೆಯಿಂದ ಆರು ಕುಟುಂಬಗಳು ಬಂದು ನೆಲಸಿವೆ. ಆರು ಮಂದಿಯೂ ಚಿಕ್ಕಬಾಗೇವಾಡಿಯಲ್ಲಿಯ ತವರಿಗೆ ಬಂದವರು – ಹೆಂಡತಿ ಜೊತೆ ಗಂಡಸರು ತಮ್ಮ ಇಡೀ ಕುಟುಂಬದ ಜೊತೆ ಬಂದಿರುವುದು (ನಾಲ್ಕು ಮಂದಿ), ಗಂಡ ತೀರಿದ ಮೇಲೆ ಕುಟುಂಬದ ಜೊತೆ ತವರಿಗೆ ಬಂದಿರುವುದು (ಇಬ್ಬರು)– 1. ಖಾನಾಪುರದ ಗಂದಿಗವಾಡ ಗ್ರಾಮದಿಂದ ಬಾಬು ಮಾದಿಗರ, 2. ಸೌದತ್ತಿ ತಾಲೂಕಿನ ದುಂಡಕೊಪ್ಪದಿಂದ ರವಿ ಮಾದಿಗರ, 3. ಮತ್ತಿಕೊಪ್ಪದಿಂದ ದುರಗಪ್ಪ, 4. ಆನಿಗೋಳದಿಂದ ಶೋಭಾ, 5. ನೇಸರ್ಗಿ ಮಲ್ಲಾಪುರದಿಂದ ಸಂಗವ್ವ, 6. ಚಿವುಟಗುಂಡಿಯಿಂದ ಪಾರವ್ವ ಚಿಕ್ಕ ಬಾಗೇವಾಡಿಯಿಂದ ಒಬ್ಬರು ಧಾರವಾಡದ ಮಲ್ಲಿಗವಾಡಕ್ಕೆ ಹೋಗಿದ್ದಾರೆ.

ಚಿಕ್ಕ ಬಾಗೇವಾಡಿ ಗ್ರಾಮದ ಸುತ್ತಲೂ ಎಮ್.ಕೆ. ಹುಬ್ಬಳ್ಳಿ, ಹಿರೆ ಬಾಗೇವಾಡಿ ಮತ್ತು ಸಂಪಗಾಂವ್ ಎಂಬ ಪಟ್ಟಣವೆನಿಸಬಹುದಾದ ದೊಡ್ಡ ಊರುಗಳಿದ್ದು ಅವು ಚಿಕ್ಕ ಬಾಗೇವಾಡಿಯ ಹಲವರಿಗೆ ಕೆಲಸವನ್ನು ಒದಗಿಸುತ್ತವೆ. ಎಮ್. ಕೆ. ಹುಬ್ಬಳ್ಳಿಯ ಸಕ್ಕರೆ ಕಾರ್ಖಾನೆಯು ಕೆಲವು ಶಿಕ್ಷಿತ ಯುವಕರಿಗೆ ವರ್ಷಕ್ಕೆ ಆರು ತಿಂಗಳು ಮಾಸಿಕ ಸಂಬಳದ ನೌಕರಿ ಒದಗಿಸುತ್ತದೆ[12]. ಘಟಪ್ರಭಾ, ಕಾಕಲೆ, ಹೊನಗಾ, ದೇವಗಿರಿ, ಬ್ಯಾಡಗಿ ಮುಂತಾದ ಕಡೆ ಮೇನಿಂದ ಅಕ್ಟೋಬರ್ ತನಕ ಕ್ಯಾಬೇಜ್ ಕಟಾವು ಮಾಡಲು 8–10 ಮಂದಿಯ ತಂಡಗಳಲ್ಲಿ ಗುತ್ತಿಗೆ ಆಧಾರದಲ್ಲಿ ಕೆಲಸ ಹುಡುಕಿಕೊಂಡು ಹೋಗುತ್ತಾರೆ.

### 2.2.1 ಮೂರು ಊರುಗಳಲ್ಲಿಯ ಒಟ್ಟು ಮತ್ತು 'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳು

**ಜಾಲಿಕೊಪ್ಪದಲ್ಲಿ** ಇರುವ ಒಟ್ಟು ದಲಿತ ಮನೆಗಳು 22. ಅವರೆಲ್ಲಾ ಹಿರಿಯರ ಕಾಲದಿಂದಲೂ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದ ಕುಟುಂಬಗಳು. ಇವುಗಳಲ್ಲಿ 18 ಕುಟುಂಬಗಳು ಈಗಲೂ ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಿವೆ; ಮೂರುಕುಟುಂಬಗಳು ವಿಶೇಷ ಸಂದರ್ಭಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುತ್ತಿವೆ. ಮತ್ತು ಇನ್ನುಳಿದ ಒಂದೇ ಕುಟುಂಬ ಅದನ್ನು ಪೂರ್ತಿಯಾಗಿ ಬಿಟ್ಟಿದೆ.

---

12 ಆದ್ದರಿಂದಲೇ ಜಾಲಿಕೊಪ್ಪ ಮತ್ತು ಚಿವಟಗುಂಡಿಗೆ ಹೋಲಿಸಿದರೆ ಚಿಕ್ಕಬಾಗೇವಾಡಿಯಲ್ಲಿ 5–6 ಮಂದಿ ದಲಿತರು ತಿಂಗಳ ಸಂಬಳ ಲೆಕ್ಕದಲ್ಲಿ ಉದ್ಯೋಗದಲ್ಲಿರುವವರ ಬಗ್ಗೆ ಮುಂದೆ ಕಾಣುತ್ತೇವೆ. ಮೊದಲ ಎರಡು ಊರುಗಳಲ್ಲಿ ಅಂತಹವರು ಒಬ್ಬಿಬ್ಬರು ಮಾತ್ರ.

ಚಿಕ್ಕ ಬಾಗೇವಾಡಿ ದಲಿತ ಕೇರಿಯ ನಕ್ಷೆ



**ಕೋಷ್ಟಕ 2**

| ಕ್ರ ಸ. | ಜಾಲಿಕೊಪ್ಪದ ದಲಿತ ಕೇರಿಯ 22 ಕುಟುಂಬಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳ ವಿವರಗಳು | ಕುಟುಂಬಗಳ ಸಂಖ್ಯೆ | % |
|---|---|---|---|
| 1 | ಈಗಲೂ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ಕುಟುಂಬಗಳು | 18 | 81.9 |
| 2 | ಮೊದಲು 'ಬಿಟ್ಟಿ ಚಾಕ್ರಿ' ಮಾಡಿದ್ದು ಈಗ ಅದನ್ನು ಬಿಟ್ಟಿರುವವರು | 1 | 4.5 |
| 3 | ದಿನನಿತ್ಯ 'ಬಿಟ್ಟಿಚಾಕ್ರಿ' ಮಾಡುವುದನ್ನು ಬಿಟ್ಟಿದ್ದು ಈಗ ವಿಶೇಷ ಸಂದರ್ಭಗಳಲ್ಲಿ ಮಾತ್ರ 'ಬಿಟ್ಟಿ ಚಾಕ್ರಿ'ಮಾಡುತ್ತಿರುವ ಕುಟುಂಬಗಳು | 3 | 13.6 |
| | ಒಟ್ಟು ಕುಟುಂಬಗಳು | 22 | 100 |

**ಚಿವಟಗುಂಡಿಯ** 42 ಕುಟುಂಬಗಳಲ್ಲಿ 22 ಕುಟುಂಬಗಳು ಈಗಲೂ ರೈತರಿಗೆ ಬೆಳಿಗ್ಗೆ ಪ್ರತಿನಿತ್ಯ ಕೆಲಕಾಲ 'ಬಿಟ್ಟಿ ಚಾಕ್ರಿ' ಸಲ್ಲಿಸುತ್ತಿದ್ದಾರೆ. ಉಳಿದ 20 ಮನೆಗಳಲ್ಲಿ ಎಂಟು ಕುಟುಂಬಗಳು ಬೇರೆ ಬೇರೆ ಕಾರಣಗಳಿಂದ ತಾತ್ಕಾಲಿಕವಾಗಿ ಊರು ಬಿಟ್ಟು ಬೇರೆ ಊರುಗಳಲ್ಲಿ ನೆಲಸಿವೆ – ಗಂಡ ತೀರಿದ ಮೇಲೆ ತವರು ಮನೆಯಲ್ಲೋ ಜೀತಕ್ಕೋಸ್ಕರವೋ ಅಥವಾ ಇತರ ಕಾರಣಗಳಿಗೋಸ್ಕರ. ಆ ಎಂಟು ಕುಟುಂಬಗಳಲ್ಲಿ ಒಂದು ಕುಟುಂಬ ಬಿಟ್ಟು ಉಳಿದ ಏಳು ಕುಟುಂಬಗಳೂ ಊರಲ್ಲಿದ್ದಾಗ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದವು. ಊರಲ್ಲಿರುವ ಇನ್ನು ಐದು ಕುಟುಂಬಗಳ ಮನೆತನದಲ್ಲಿ 'ಬಿಟ್ಟಿ ಚಾಕ್ರಿ'ಯ ಅನುಭವವಿದ್ದರೂ ಅವರು ಮಾತ್ರ ಮೊದಲಿನಿಂದಲೂ 'ಬಿಟ್ಟಿ ಚಾಕ್ರಿ'ಗೆ ಹೋಗದೇ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿವೆ. ಇನ್ನುಳಿದ ಏಳು ಕುಟುಂಬಗಳು ದಿನ ನಿತ್ಯದ 'ಬಿಟ್ಟಿ ಚಾಕ್ರಿ' ಬಿಟ್ಟರೂ ವಿಶೇಷ ಸಂದರ್ಭಗಳಲ್ಲಿ ಅದನ್ನು ಮಾಡುತ್ತಿದ್ದಾರೆ.

**ಕೋಷ್ಟಕ 3**

| ಕ್ರ ಸ. | ಚಿವಟಗುಂಡಿಯ ದಲಿತ ಕೇರಿಯ 42 ಕುಟುಂಬಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳ ವಿವರಗಳು | ಕುಟುಂಬಗಳ ಸಂಖ್ಯೆ | % |
|---|---|---|---|
| 1 | ಈಗಲೂ ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ಕುಟುಂಬಗಳು | 22 | 51.16 |
| 2 | ಊರಲಿದ್ದಾಗ ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದು (ಒಂದು ಕುಟುಂಬ ಬಿಟ್ಟು) ಈಗ ತಾತ್ಕಾಲಿಕವಾಗಿ ಬೇರೆ ಊರುಗಳಲ್ಲಿ ನೆಲೆಸಿರುವ ಕುಟುಂಬಗಳು | 8 | 19.04 |
| 3 | 'ಬಿಟ್ಟಿ ಚಾಕ್ರಿ'ಯನ್ನು ಮಾಡದೇ ಇರುವ ಕುಟುಂಬಗಳು | 5 | 12.00 |
| 4 | ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವುದನ್ನು ಬಿಟ್ಟಿದ್ದು ಈಗ ವಿಶೇಷ ಸಂದರ್ಭಗಳಲ್ಲಿ ಮಾತ್ರ 'ಬಿಟ್ಟಿ ಚಾಕ್ರಿ'ಮಾಡುತ್ತಿರುವ ಕುಟುಂಬಗಳು | 7 | 17.80 |
| | ಒಟ್ಟು ಕುಟುಂಬಗಳು | 42 | 100 |

**ಚಿಕ್ಕ ಬಾಗೇವಾಡಿಯಲ್ಲಿ** ಒಟ್ಟಿಗೆ ಇರುವ ದಲಿತ ಕುಟುಂಬಗಳು 34. ಅವರಲ್ಲಿ ತಳವಾರಿಕೆ ಮಾಡುವ ಮೂರು ಕುಟಂಬಗಳನ್ನು ಬಿಟ್ಟು ಉಳಿದ ಎಲ್ಲಾ ಕುಟುಂಬಗಳು ಅವರ ಪೂರ್ವಜರ ಕಾಲದಿಂದಲೂ ರೈತರಿಗೆ ಬೆಳಿಗ್ಗೆ ಪ್ರತಿನಿತ್ಯ ಕೆಲಕಾಲ 'ಬಿಟ್ಟಿ ಚಾಕ್ರಿ' ಸಲ್ಲಿಸುತ್ತಿದ್ದರು. ಅವರಲ್ಲಿ ಈಗಲೂ 19 ಕುಟುಂಬಗಳು 'ಬಿಟ್ಟಿ ಚಾಕ್ರಿ' ಮಾಡುತ್ತಿವೆ. ಕೇವಲ ಆರು ಕಟುಂಬಗಳು ತಮ್ಮ ಹಿರಿಯರ ಕಾಲದಿಂದ

'ಬಿಟ್ಟಿ ಚಾಕ್ರಿ' ಮಾಡಿದ್ದರೂ ಈಗ ಕೇವಲ ವಿಶೇಷ ಸಂದರ್ಭಗಳಲ್ಲಿ ಮಾತ್ರ ಅದನ್ನು ಮಾಡುತ್ತಿದ್ದಾರೆ. ಇನ್ನುಳಿದ ಆರು ಕುಟುಂಬಗಳು ಪೂರ್ತಿಯಾಗಿ ಅದನ್ನು ಬಿಟ್ಟಿವೆ.

**ಕೋಷ್ಟಕ 4**

| ಕ್ರ ಸ. | ಚಿಕ್ಕ ಬಾಗೇವಾಡಿಯಲ್ಲಿಯ ದಲಿತ ಕೇರಿಯ 34 ಕುಟುಂಬಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳ ವಿವರಗಳು | ಕುಟುಂಬಗಳ ಸಂಖ್ಯೆ | % |
|---|---|---|---|
| 1 | ದಿನನಿತ್ಯ 'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳು | 19 | 55.9 |
| 2 | ಮೊದಲಿನಿಂದಲೂ 'ಬಿಟ್ಟಿ ಚಾಕ್ರಿ' ಮಾಡದೇ ಇರುವ ಕುಟುಂಬಗಳು | 3 | 8.9 |
| 3 | ಮೊದಲು 'ಬಿಟ್ಟಿ ಚಾಕ್ರಿ' ಮಾಡಿದ್ದು ಈಗ ಅದನ್ನು ಮಾಡದೇ ಇರುವ ಕುಟುಂಬಗಳು | 6 | 17.6 |
| 4 | ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವುದನ್ನು ಬಿಟ್ಟಿದ್ದು ಈಗ ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಿಟ್ಟಿ ಚಾಕ್ರಿ ಮಾಡುತ್ತಿರುವ ಕುಟುಂಬಗಳು | 6 | 17.6 |
| | ಒಟ್ಟು ಕುಟುಂಬಗಳು | 34 | 100 |

**2.2.2 'ಬಿಟ್ಟಿ ಚಾಕ್ರಿ' ಮಾಡುವವರ ಲಿಂಗವಾರು ಮತ್ತು ಕುಟುಂಬ ಸದಸ್ಯತ್ವದ ವಿವರಗಳು**

**ಜಾಲಿಕೊಪ್ಪದಲ್ಲಿ** ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವ 18 ಕುಟುಂಬಗಳಲ್ಲಿ ಒಟ್ಟು 30 ಮಂದಿ ಅದನ್ನು ಮಾಡುತ್ತಿದ್ದಾರೆ. ಅವರಲ್ಲಿ 13 ಮಂದಿ ಗಂಡಸರು ಮತ್ತು 17 ಮಂದಿ ಹೆಂಗಸರು. 13 ಮಂದಿ ಗಂಡಸರಲ್ಲಿ 10 ಮಂದಿ ಕುಟುಂಬದ ಯಜಮಾನರು ಮತ್ತು 3 ಮಂದಿ ಕುಟುಂಬದ ಸದಸ್ಯರು. ಸದಸ್ಯರಲ್ಲಿ ಒಬ್ಬರು ಮಾತ್ರ ಮದುವೆ ಆಗದ ಹದಿಹರೆಯದ ಯುವಕ. 17 ಮಂದಿ ಮಹಿಳೆಯರಲ್ಲಿ ನಾಲ್ಕು ಮಂದಿ ಕುಟುಂಬದ ಯಜಮಾನಿಯರು, 12 ಮಂದಿ ಯಜಮಾನರ ಹೆಂಡಂದಿರು ಮತ್ತು ಒಬ್ಬರು ವಿಧವೆ ಹೆಣ್ಣುಮಗಳು. ಬೇರೆ ಊರಿನ ಅವರ ಗಂಡ 10–12 ವರ್ಷ ಹಿಂದೆ ತೀರಿ ಕೊಂಡ ನಂತರ ತನ್ನ 16 ವರ್ಷದ ಶಾಲೆಗೆ ಹೋಗುತ್ತಿರುವ ಮಗಳೊಂದಿಗೆ ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ಜಾಲಿಕೊಪ್ಪದ ತನ್ನ ತಾಯಿ ಜೊತೆ ವಾಸವಾಗಿದ್ದು ತಾನೂ ಅಂತಹ ಸೇವೆಗೆ ಹೋಗುತ್ತಿದ್ದಾಳೆ. ನಾಲ್ಕು ಮಂದಿ ಯಜಮಾನಿಯರಲ್ಲಿ ಮೂರು ಮಂದಿ ವಿಧವೆಯರು; ಒಬ್ಬರು ಮಾತ್ರ ವಿಧವೆ ಅಲ್ಲದಿದ್ದರೂ ಗಂಡನ ಅನಾರೋಗ್ಯದ ಕಾರಣ ಕುಟುಂಬದ ಯಜಮಾನಿಕೆ ನಡೆಸುತ್ತಿದ್ದಾರೆ.

**ಕೋಷ್ಟಕ 5**

| | ಜಾಲಿಕೊಪ್ಪದಲ್ಲಿಪ್ರತಿನಿತ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ 30 ಮಂದಿಯವರ ಲಿಂಗವಾರು ಮತ್ತು ಕುಟುಂಬ ಸದಸ್ಯತ್ವದ ವಿವರಗಳು | | | | | |
|---|---|---|---|---|---|---|
| ಕ್ರಸ | ಗಂಡಸರು | ಸಂಖ್ಯೆ | % | ಹೆಂಗಸರು | ಸಂಖ್ಯೆ | % |
| 1 | ಯಜಮಾನರು | 10 | 77 | ಯಜಮಾನಿಯರು | 04 | 23.5 |
| 2 | ಇತರ ಸದಸ್ಯರು | 03 | 33 | ಯಜಮಾನರ ಹೆಂಡತಿಯರು | 12 | 70.5 |
| 3 | | | | ಇತರ ಸದಸ್ಯರು | 01 | 06.0 |
| | ಒಟ್ಟು | 13 | 100 | | 17 | 100 |

**ಚಿವಟಗುಂಡಿಯಲ್ಲಿ** ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವ 22 ಕುಟುಂಬಗಳಲ್ಲಿ ಒಟ್ಟಿಗೆ 37 ಮಂದಿ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದಾರೆ. ಅವರಲ್ಲಿ 17 ಮಂದಿ ಗಂಡಸರು ಮತ್ತು 20 ಮಂದಿ ಹೆಂಗಸರು. 17 ಮಂದಿ ಗಂಡಸರಲ್ಲಿ 14 ಮಂದಿ ಕುಟುಂಬದ ಯಜಮಾನರಾಗಿದ್ದು ಇನ್ನುಳಿದ ಮೂರು ಮಂದಿ ಕುಟುಂಬದ ಇತರ ಸದಸ್ಯರಾಗಿದ್ದಾರೆ – ಒಬ್ಬ ತಂದೆ, ಒಬ್ಬ 18 ವರ್ಷದ ತಮ್ಮ, ಇನ್ನೊಬ್ಬರು ಮದುವೆಯಾಗಿದ್ದು ಜೊತೆಗಿರುವ ಮಗ. 20 ಮಂದಿ ಹೆಂಗಸರಲ್ಲಿ ಇಬ್ಬರು ವಿಧವೆಯರಾಗಿದ್ದು ಮನೆಯ ಯಜಮಾನಿಯಾಗಿದ್ದಾರೆ. 15 ಮಂದಿ ಮನೆಯ ಯಜಮಾನರ ಹೆಂಡತಿಯರಾಗಿದ್ದಾರೆ. ಇನ್ನುಳಿದ ಮೂರು ಮಂದಿ ಕುಟುಂಬದ ಇತರ ಸದಸ್ಯರಾಗಿದ್ದಾರೆ – ಒಬ್ಬಳು ತಾಯಿ, ಇನ್ನೊಬ್ಬರು ಸೊಸೆ, ಮತ್ತೊಬ್ಬರು ಊರಲ್ಲೇ ಇರುವ ಗಂಡನಿಂದ ಬೇರ್ಪಟ್ಟು ಜೊತೆಗಿರುವ ಅಕ್ಕ.

**ಕೋಷ್ಟಕ 6**

| **ಚಿವಟಗುಂಡಿಯಲ್ಲಿ ಪ್ರತಿನಿತ್ಯ 'ಬಿಟ್ಟ ಚಾಕ್ರಿ' ಮಾಡುತ್ತಿರುವ 37 ಮಂದಿಯ ಲಿಂಗವಾರು ಮತ್ತು ಕುಟುಂಬ ಸದಸ್ಯತ್ವದ ವಿವರಗಳು** | | | | | | |
|---|---|---|---|---|---|---|
| ಕ್ರಸ | ಗಂಡಸರು | ಸಂಖ್ಯೆ | % | ಹೆಂಗಸರು | ಸಂಖ್ಯೆ | % |
| 1 | ಯಜಮಾನರು | 14 | 82.3 | ಯಜಮಾನಿಯರು | 02 | 10 |
| 2 | ಇತರ ಸದಸ್ಯರು | 03 | 17.7 | ಯಜಮಾನರ ಹೆಂಡತಿಯರು | 15 | 75 |
| 3 | | | | ಇತರ ಸದಸ್ಯರು | 03 | 15 |
| | ಒಟ್ಟು | 17 | 100.0 | | 20 | 100 |

ಚಿಕ್ಕ ಬಾಗೇವಾಡಿಯ ದಿನನಿತ್ಯ 'ಬಿಟ್ಟಿ ಚಾಕ್ರಿ' ಮಾಡುವ ಒಟ್ಟು 19 ಕುಟುಂಬಗಳಲ್ಲಿ 28 ಮಂದಿ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿದ್ದಾರೆ. ಅವರಲ್ಲಿ 19 ಮಂದಿ ಹೆಂಗಸರಾದರೆ ಇನ್ನುಳಿದ ಒಂಭತ್ತು ಮಂದಿ ಗಂಡಸರು. ಆ ಒಂಭತ್ತು ಗಂಡಸರಲ್ಲಿ ಎಂಟು ಮಂದಿಯೂ ಕುಟುಂಬದ ಯಜಮಾನರಾದರೆ, ಒಬ್ಬರು ಮಾತ್ರ ಕುಟುಂಬದ ಹಿರಿಯರು. 19 ಮಹಿಳೆಯರಲ್ಲಿ ಕೇವಲ ನಾಲ್ಕು ಮಂದಿ ಮಾತ್ರ ಕುಟಂಬದ ಯಜಮಾನಿಯರು. ಅವರಲ್ಲಿ ಎಲ್ಲರ ಗಂಡಂದಿರು ತೀರಿಕೊಂಡಿದ್ದಾರೆ. ಒಂದು ಕುಟುಂಬದಲ್ಲಿ ಗಂಡನು ತೀರಿ ಕೊಂಡಿದ್ದು ಕುಟಂಬದ ಯಜಮಾನಿ ಜೊತೆ ಕುಟುಂಬದ ಇನ್ನೊಬ್ಬ ಹಿರಿಯ ಗಂಡಸರು 'ಬಿಟ್ಟಿ ಚಾಕ್ರಿ'ಯನ್ನು ಮಾಡುತ್ತಿದ್ದಾರೆ. ಉಳಿದ 15 ಮಹಿಳೆಯರ ಕುಟುಂಬದಲ್ಲಿ ಎಂಟು ಮಂದಿಯ ಹೆಂಡತಿಯರೊಂದಿಗೆ ಅವರ ಎಂಟು ಮಂದಿ ಗಂಡಂದಿರೂ 'ಬಿಟ್ಟಿ ಚಾಕ್ರಿ'ಯನ್ನು ಮಾಡುತ್ತಿದ್ದಾರೆ. ಉಳಿದ ಏಳು ಮಂದಿ ಅಂತಹ ಸೇವೆ ಮಾಡುತ್ತಿರುವ ಹೆಂಗಸರ ಯಜಮಾನರು ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ.

**ಕೋಷ್ಟಕ 7**

| ಚಿಕ್ಕ ಬಾಗೇವಾಡಿಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ 28 ಮಂದಿಯ ಲಿಂಗವಾರು ಮತ್ತು ಕುಟುಂಬ ಸದಸ್ಯತ್ವದ ವಿವರಗಳು | | | | | | |
|---|---|---|---|---|---|---|
| ಕ್ರಸ | ಬಿಟ್ಟಿ ಚಾಕ್ರಿ ಮಾಡುವ ಗಂಡಸರು | ಸಂಖ್ಯೆ | % | ಬಿಟ್ಟಿ ಚಾಕ್ರಿ ಮಾಡುವ ಹೆಂಗಸರು | ಸಂಖ್ಯೆ | % |
| 1 | ಯಜಮಾನರು | 08 | 89 | ಯಜಮಾನಿಯರು | 04 | 21 |
| 2 | ಇತರ ಸದಸ್ಯರು | 01 | 11 | ಬಿಟ್ಟಿ ಚಾಕ್ರಿ ಮಾಡುವ ಯಜಮಾನರ ಹೆಂಡತಿಯರು | 08 | 42.2 |
| 3 | | | | ಕೂಲಿ ಕೆಲಸ ಮಾಡುವ ಯಜಮಾನರ ಹೆಂಡತಿಯರು | 07 | 36.8 |
| | ಒಟ್ಟು | 09 | 100 | | 19 | 100 |

### 2.3 'ಬಿಟ್ಟಿ ಚಾಕ್ರಿ' ಕುರಿತು ವಿವರವಾದ ಮಾಹಿತಿಗಳು

#### 2.3.1 ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವ ಸಮಯ

ಇಂತಹ ಕೆಲಸ ಮಾಡುವ ದಲಿತರು ಬೆಳಿಗ್ಗೆ ಹೊತ್ತು ಎದ್ದ ಕೂಡಲೇ ತಾವು 'ಬಿಟ್ಟಿ ಚಾಕ್ರಿ' ಮಾಡಲು ಸಂಪ್ರದಾಯದಿಂದ ನಿಗದಿಯಾದ ರೈತರ ಮನೆಗಳಿಗೆ 'ಬಿಟ್ಟಿ ಚಾಕ್ರಿ' ಮಾಡಲು ಹೋಗಬೇಕು. ಸಾಮಾನ್ಯವಾಗಿ ಆ ಕೆಲಸಗಳು ಒಂದರಿಂದ ಮೂರು ಗಂಟೆ ಕಾಲ ಸಮಯ ತೆಗೆದುಕೊಳ್ಳಬಹುದು. ಬೆಳಿಗ್ಗೆ 6–7 ಗಂಟೆಯಿಂದ 8–9 ಗಂಟೆ ತನಕವೂ 'ಬಿಟ್ಟಿ ಚಾಕ್ರಿ' ಕೆಲಸಗಳು ನಡೆಯುತ್ತಿರಬಹುದು.

#### 2.3.2 ದಿನ ನಿತ್ಯ ಮಾಡುವ 'ಬಿಟ್ಟಿ ಚಾಕ್ರಿ'ಯಲ್ಲಿಯ ಸೇವೆಗಳು

ಆ ಕೆಲಸಗಳು ಮುಖ್ಯವಾಗಿ ಮನೆ ಅಂಗಳ, ಕೊಟ್ಟಿಗೆಯ ಸ್ವಚ್ಛತೆಗೆ ಸಂಬಂಧಪಟ್ಟ ಎಲ್ಲಾ ಕೆಲಸಗಳು ಮತ್ತು ಕೆಲವು ಅಡಿಗೆಗೆ ಸಂಬಂಧಪಟ್ಟದ್ದಾಗಿವೆ. ಕೊಟ್ಟಿಗೆಗೆ ಸಂಬಂಧ ಪಟ್ಟಂತೆ ಸೆಗಣಿಯನ್ನು ಎತ್ತಿಹಾಕುವ ಮತ್ತು ಅದಕ್ಕೆ ಸಂಬಂಧ ಪಟ್ಟ ಇನ್ನಿತರ ಹಲವಾರು ಕೆಲಸಗಳು, ದನಕರುಗಳನ್ನು ಸ್ವಚ್ಛ ಮತ್ತು ಆರೈಕೆ ಮಾಡುವ ಕೆಲಸಗಳು ಹಾಗೂ ಅಡಿಗೆಗೆ ಸಂಬಂಧಪಟ್ಟಂತೆ ಕಾಳು ಕಡಿ ಹಸನು ಮಾಡುವುದೋ, ಕಟ್ಟಿಗೆ ಒಡೆಯುವುದೋ ಹೀಗೆ ಹಲವಾರು ಕೆಲಸಗಳು ಒಳಗೊಂಡಿವೆ. ಅವನ್ನು ಹೀಗೆ ಗುರುತಿಸಬಹುದು: ಅಂಗಳ ಕಸ ಗುಡಿಸುವುದು, ಹುಸಿ(ದನದ ಕೊಟ್ಟಿಗೆ ಮತ್ತು ಮನೆ ಮಧ್ಯೆ ಇರುವ ಜಾಗ) ಸಾರಿಸುವುದು, ಹುಸಿ ತೊಳೆಯುವುದು, ಕೊಟ್ಟಿಗೆ ಸ್ವಚ್ಛ ಮಾಡುವುದು, ಸೆಗಣಿ ಬಳಿಯುವುದು ಮತ್ತು ಅಡಿ (ತಿಪ್ಪೆ)ಗೆ ಹಾಕುವುದು, ಸೆಗಣಿಯನ್ನು ಗೋಬರ್ ಗ್ಯಾಸ್‌ಗೆ ಹಾಕುವುದು, ಮೇವು ಕೊರೆ (ಕಡಿ)ಯುವುದು, ಮತ್ತು ಹಸು ಕರುಗಳ ಎಲ್ಲಾ ಕೆಲಸ ಮಾಡುವುದು ಅಂದರೆ ಹಸು ಎತ್ತು ಎಮ್ಮೆಗಳಿಗೆ ಹುಲ್ಲು ಹಾಕುವುದು, ನೀರು ಕುಡಿಸುವುದು, ಅವುಗಳ ಮೈ ತೊಳೆಯುವುದು – ಸ್ವಚ್ಛಗೊಳಿಸುವುದು, ಕಟ್ಟಿಗೆ ಒಡೆಯುವುದು, ಕಾಳು ಹಸನು ಮಾಡುವುದು.

ಒಬ್ಬರು ಸಂಜೆಯೂ 'ಬಿಟ್ಟಿ ಚಾಕ್ರಿ' ಮಾಡುತ್ತಾರೆ. ಒಬ್ಬರು ದಿನ ಮಧ್ಯೆಯೂ ಮಾಡುತ್ತಾರೆ.

**2.3.3 ವಿಶೇಷ ಸಂದರ್ಭಗಳಲ್ಲಿಯ 'ಬಿಟ್ಟಿ ಚಾಕ್ರಿ' ಸೇವೆಗಳು ಮತ್ತವಕ್ಕೆ ತಗಲುವ ಸಮಯ, ದಿನಗಳು**

**ನಿಶ್ಚಿತಾರ್ಥ, ಮದುವೆ ಸಮಯದಲ್ಲಿ 'ಬಿಟ್ಟಿ ಚಾಕ್ರಿ'ಯ ಕೆಲಸಗಳು ಹೀಗಿವೆ:** ದಿನ ನಿತ್ಯಮಾಡುವ ಸ್ವಚ್ಛತೆ ಕೆಲಸಗಳ ಜೊತೆ ಇಡೀ ವಠಾರವನ್ನು ಶುಚಿಗೊಳಿಸುವ ಮತ್ತು ಸಿಂಗರಿಸುವ ಕೆಲಸಗಳನ್ನು ಮಾಡಬೇಕಾಗುತ್ತದೆ. ಅವು ಹೀಗಿವೆ: ಅಂಗಳ ಬಾಗಿಲ ಹಸನ ಮಾಡುವುದು,ಅಂಗಳ ಕಸ ಗುಡಿಸುವುದು/ಹೊಡೆಯುವುದು/ಕೀಳುವುದು,ಅಂಗಳ ಹಿತ್ತಿಲ ಸ್ವಚ್ಛತೆ, ಸೆಗಣಿ ಬಳಿಯುವುದು, ಮನೆ ಸ್ವಚ್ಛತೆ, ಮನೆ ಸಾರಿಸುವುದು, ಮನೆ ಧೂಳು ಒರೆಸುವುದು, ಮೇವು ಕೊರೆಯುವುದು, ಕಟ್ಟಿಗೆ ಒಡೆಯುವುದು, ಮನೆ ಸಾರಿಸಲಿಕ್ಕೆ ಮಟ್ಟಿ(ಗೋಡೆಗೆ ಬಳಿಯಲು ಬಳಸುವ ಬಿಳಿ ಬಣ್ಣದ ಮಣ್ಣು) ತರುವುದು ಅಥವಾ ಹಾಕುವುದು, ಮನೆಗೆ ಬಣ್ಣ ಅಥವಾ ಸುಣ್ಣ ಬಳಿಯುವುದು, ಮಾವಿನ ತೋರಣ ಕಟ್ಟುವುದು, ಹಂದರ (ಚಪ್ಪರ) ಹಾಕಲಿಕ್ಕೆ ಹೊಂಗೆ ಸೊಪ್ಪು ತರುವುದು, ಇತ್ಯಾದಿ. ಜೊತೆಗೆ ಅಡಿಗೆಗೆ ಸಂಬಂಧಪಟ್ಟಂತೆ ಈ ಮುಂದಿನ ಕೆಲಸಗಳನ್ನು ಮಾಡಬೇಕಾಗುತ್ತದೆ: ಕಾಳು ಕಡಿ ಹಸನು ಮಾಡುವುದು, ಗಿರಣಿಗೆ ಹೋಗಿ ಬೀಸಿ ಕೊಂಡು ಬರುವುದು, ಕಿರಾಣಿ ಅಂಗಡಿಗೆ ಹೋಗಿ ಸಾಮಾನು ತೆಗೆದುಕೊಂಡು ಬರುವುದು, ಇತ್ಯಾದಿ. ದೇವರ ಕಾರ್ಯದ ಸಮಯದಲ್ಲಿ ಹಲಿಗೆ ಬಡಿಯುವುದು ಮದುವೆ ಸಮಯದಲ್ಲಿ ಮಾಡಬೇಕಾದ ಒಂದು ವಿಸಿಷ್ಠ ಕೆಲಸ. ಔತಣದ ಸಮಯದಲ್ಲಿ ಪಾತ್ರೆಗಳನ್ನು ತೊಳೆಯುವುದು, ಊಟದ ಎಲೆಗಳನ್ನು ತೆಗೆದುಹಾಕುವುದು ಕೂಡಾ ಮಾಡಬೇಕಾಗುತ್ತದೆ. ಮದುವೆ ಎಂಟು ದಿವಸ ಮೊದಲು ಮತ್ತು ನಂತರ ಎಂಟು ದಿವಸ ದನಕರುಗಳಿಗೆ ನೀರು ಕುಡಿಸುವುದು, ಮೇವು ಹಾಕುವುದು, ಮೈ ತೊಳೆಯುವುದು ಮುಂತಾದ ಕೆಲಸಗಳನ್ನು ಮಾಡಲೇಬೇಕು. ಮದುಮಗನಿಗೆ ಹೊಸ ಚಪ್ಪಲಿ ತರುವುದುಅಥವಾ ಸ್ವತಃ ಹೊಲಿದು ಕೊಡುವುದು ಮದುವೆ ಸಮಯದಲ್ಲಿ ಸಲ್ಲಿಸುವ ಇನ್ನೊಂದು ವಿಶಿಷ್ಠ ಸೇವೆಯಾಗಿದೆ. ಮದುವೆ ಸಮಯದಲ್ಲಿ 8–10 ದಿನ ಕೆಲಸವಿರುತ್ತದೆ.

ಒಬ್ಬ 'ಬಿಟ್ಟಿ ಚಾಕ್ರಿ' ಮಾಡುವ ಹೆಂಗಸು ಸ್ವತಃ ಕಟ್ಟಿಗೆ ಒಡೆಯದೇ ಇರುವುದರಿಂದ ಕೂಲಿ ಕೊಟ್ಟು ಕಟ್ಟಿಗೆ ಹೊಡೆದು ಕೊಡಬೇಕು.

**ಸಾವಿನ ಸಂದರ್ಭದಲ್ಲಿ 'ಬಿಟ್ಟಿ ಚಾಕ್ರಿ'ಯಲ್ಲಿ ಮಾಡುವ ಕೆಲಸಗಳು:** ಸ್ವಚ್ಛತೆಯ ಕೆಲಸಗಳು ಎಂದಿನಂತಿವೆ: ಅಂಗಳ ಕಸ ಗುಡಿಸುವುದು, ಕಟ್ಟಿಗೆ ಒಡೆಯುವುದು, ಮೇವು ಕೊರೆಯುವುದು, ಸೆಗಣಿ ಬಳಿಯುವುದು, ಊಟದ ಎಲೆಗಳನ್ನು ತೆಗೆದುಹಾಕುವುದು, ಟೀ ಕಪ್ಪುಗಳನ್ನು ತೆಗೆದುಹಾಕುವುದು, ಮನೆ ಸ್ವಚ್ಛಗೊಳಿಸುವುದು, ಇತ್ಯಾದಿ. ಕೆಲವು ವಿಶಿಷ್ಠ ಸೇವೆಗಳು ಹೀಗಿವೆ: ಹಲಿಗೆ ಬಡಿಯುವುದು, ಹಿಲಾಲ್[13] ಹಿಡಿಯುವುದು, ದಾನದ ಬುಟ್ಟಿ ಹೊರುವುದು, ಶವ ಎತ್ತಿ ಕೊಂಡು ಹೋದ ಮೇಲೆ ಶವ ಇದ್ದ ಜಾಗವನ್ನು ತೊಳೆದು ಸಗಣಿಯಿಂದ ಸಾರಿಸಿ, ಬಿದ್ದಿರುವ ಕಸಕಡ್ಡಿ ಹೂ ಎಲೆ ಮುಂತಾದುವುಗಳನ್ನು ಗುಡಿಸಿ ಸುಟ್ಟು

---

[13]ರಾತ್ರಿ ಹೊತ್ತು ಮೆರವಣಿಗೆಯಲ್ಲಿ ಬೆಳಕು ಕೊಡಲು ಸೀಮೆ ಎಣ್ಣೆ ಸುರಿದಾಗ ಹೊತ್ತಿ ಉರಿಯುವ ಹಳೆ ಬಟ್ಟೆಯನ್ನು ತುದಿಗೆ ಕಟ್ಟಿದ ಒಂದು ಉದ್ದನೆಯ ಕೋಲು

ಹಾಕುವುದು, ಹಕ್ಕೆ (ಕೊಟ್ಟಿಗೆ), ಹುಸಿ, ಅಂಗಳ ಬಾಗಿಲನ್ನು ತೊಳೆದು ಶುಚಿಗೊಳಿಸುವುದು. ಸಿದಗಿ[14] ಹೊರುವುದು ಅಂದರೆ ಶವ ಸಂಸ್ಕಾರ ಆದ ಮೇಲೆ ಊರ ಮಠದಲ್ಲಿ ಇಡುವುದು, ಇತ್ಯಾದಿ. ನಂತರ ಎಂಟರಿಂದ 15 ದಿನಗಳ ತನಕ ಸಾಂತ್ವನ ನೀಡಲು ಬಂದವರಿಗೆ ಸತ್ಕಾರ ನೀಡಿದ ಮೇಲೆ ತಿಂಡಿ ತಿನಿಸು ಮಾಡಿದ ಎಲೆ, ಟೀ ಕಪ್ಪುಗಳನ್ನು ಎತ್ತಿ ಹಾಕಲು ಒಬ್ಬರು ಇಡೀ ದಿವಸ ಇರಲೇ ಬೇಕು. ಅವರು ಆ ದಿನಗಳಂದು ಬೇರೆ ದಿನಗೂಲಿಗೆ ಹೋಗುವ ಹಾಗಿಲ್ಲ.

**ತಿಥಿ ಸಂರ್ಭದಲ್ಲಿ 'ಬಿಟ್ಟಿ ಚಾಕ್ರಿ'ಯಲ್ಲಿ ಮಾಡುವ ಕೆಲಸಗಳು:** ಅಂಗಳ ಕಸ ಗುಡಿಸುವುದು,ಮನೆ ಸಾರಿಸುವುದು, ಕಸ ಕೀಳುವುದು, ಕಟ್ಟಿಗೆ ಒಡೆಯುವುದು, ಮೇವು ಕೊರೆಯುವುದು, ಊಟದ ಎಲೆಗಳನ್ನು ತೆಗೆದುಹಾಕುವುದು, ಹಲಿಗೆ ಬಡಿಯುವುದು, ಹಸು ಸ್ವಚ್ಛಗೊಳಿಸುವುದು, ತಿಂದು ಬಿಟ್ಟಿದ್ದನ್ನು ನೀಡಿಸಿಕೊಂಡುಬರುವುದು, ಇತ್ಯಾದಿ. ಇವೆಲ್ಲಾ ಒಂದೇ ದಿವಸಕ್ಕೆ ಆಗುವ ಕೆಲಸಗಳು.ಮದುವೆ ತಿಥಿ ಸಾವುಗಳಲ್ಲಿ ಮೂರೂ ಹೊತ್ತೂ ಸಗಣಿ ಬಳಿಯಬೇಕು.

ಹಸು ಎಮ್ಮೆ ಸತ್ತಾಗ ಎತ್ತಿ ನಿರ್ದಿಷ್ಟ ಜಾಗದಲ್ಲಿ ಹಾಕಿ ಚರ್ಮ ಬಿಡಿಸುವುದು ಕೂಡಾ ಸಂಪ್ರದಾಯದ ಸೇವೆಯ ಭಾಗವಾಗಿ ಈ ಮೂರೂ ಹಳ್ಳಿಯಲ್ಲಿದೆ. ತಾಲೂಕಿನ ಬಹುತೇಕ ಬೇರೆ ಎಲ್ಲಾ ಊರುಗಳಲ್ಲಿಯೂ ಅದು ಇನ್ನೂ ಚಾಲ್ತಿಯಲ್ಲಿದೆ.

**ಹೆಣ್ಣು ಮಕ್ಕಳ ಮೈ ನೆರೆದಾಗ ರೈತರಿಗೆ ಮಾಡುವ ಕೆಲಸಗಳು:** ಕಟ್ಟಿಗೆ ಕಡಿಯುವುದು, ಹಲಿಗೆ ಬಡಿಯುವುದು, ಸಂಬಂಧಿಕರು ಬುತ್ತಿ ಕಟ್ಟಿ ಕೊಂಡು ಬಂದಾಗ ಊಟದ ಎಲೆ ಟೀ ಕಪ್ಪು ಎತ್ತುವುದು, ಕಸ ಮುಸೂರಿ ಸ್ವಚ್ಛ ಮಾಡುವುದು, ಹಾಡುಗಾರರಿದ್ದರೆ ಶೋಬಾನೆ ಹಾಡುಗಳನ್ನು ಹಾಡುವುದು, ಇತ್ಯಾದಿ.

**ಊರ ಹಬ್ಬ / ಜಾತ್ರೆ ಸಮಯದಲ್ಲಿ ರೈತರಿಗೆ ಮಾಡುವ 'ಬಿಟ್ಟಿ ಚಾಕ್ರಿ'ಯ ಕೆಲಸಗಳು:** ಹಸುಗಳ ಮೈ ತೊಳೆಯುವುದು, ಕಟ್ಟಿಗೆ ಒಡೆಯುವುದು, ನೆಲ ಸ್ವಚ್ಛಗೊಳಿಸುವುದು, ಅಂಗಳ ಕಸ ಗುಡಿಸುವುದು, ಕಟ್ಟಿಗೆ ಬಡಿಯುವುದು, ಮಟ್ಟಿ ತಂದು ಕೊಡುವುದು, ಕೊಟ್ಟಿಗೆಗೆ ಸುಣ್ಣ ಬಳಿಯುವುದು (ದಸರಾ – ಹಟ್ಟಿ ಹಬ್ಬಕ್ಕೆ), ಅಡಿ (ತಿಪ್ಪೆಗುಂಡಿ) ತಿರುವಿ ಹಾಕುವುದು ಅಥವಾ ತೀರುವುದು ಅಥವಾ ಜಗ್ಗುವುದು (ದೀಪಾವಳಿ, ಉಗಾದಿಗೆ), ಬಾರುಕೋಲುಗಳನ್ನು ಮಾಡಿ ಕೊಡುವುದು (ನಾಗರ ಪಂಚಮಿಯಲ್ಲಿ).

### 2.4 ಊರವರೆಲ್ಲರೂ ಸೇರಿ ಮಾಡುವ ಸಾಮೂಹಿಕ ಕಾರ್ಯಗಳು / ಚಾಕ್ರಿಗಳು

ಈ ಮೇಲಿನ ಎಲ್ಲಾ ಸೇವೆಗಳಿಗೆ ಸೂಕ್ತವಾದ ಹೆಸರಿನ ವಿವೇಚನೆಯ ಮುಂಚೆ ಊರ ಜಾತ್ರೆಗಳಲ್ಲಿ ಬೇರೆ ಬೇರೆ ಜಾತಿಗಳು ನೀಡುವ ಸೇವೆಗಳು ಮತ್ತು ಆ ಸೇವೆಗಳಿಗೆ ಜನರು ಇಟ್ಟಿರುವ ಅಥವಾ ಕರೆಯುವ ಹೆಸರುಗಳು ಮತ್ತು ಅವರು ಮಾಡುವ ಸೇವೆಗಳ ಪ್ರಸ್ತಾಪ ಈಗ ಮಾಡಲಾಗಿದೆ.

---

[14]ಶವ ಕೊಂಡೊಯ್ಯಲಿಕ್ಕೆ ಬಳಸುವ ಮರದ ಅಥವಾ ಕಬ್ಬಿಣದ ಒಂದು ಸಾಧನ

ಊರ ಜಾತ್ರೆ ಮತ್ತು ಪ್ರಮುಖ ದೇವರುಗಳ ಹಬ್ಬಗಳಲ್ಲಿ (ಫೆಬ್ರವರಿಯಿಂದ ಮೇ ತನಕ) – ಬಸವ ಜಯಂತಿ, ಹನುಮ ಜಯಂತಿ, ದುರ್ಗಾ ದೇವಿ, ಹೋಳಿ ಹುಣ್ಣಿಮೆ (ಮಾರ್ಚ್‌ನಲ್ಲಿ), ಮೋಹರಂ (ಅಕ್ಟೋಬರ್‌ನಲ್ಲಿ) ಸಮಯದಲ್ಲಿ ಊರ ಎಲ್ಲ ಜನರು ಜಾತಿಜನಾಂಗದವರು ಒಟ್ಟಿಗೆ ಸೇರಿ ಅವನ್ನು ಆಚರಿಸುತ್ತಾರೆ. ಆದರೆ ಈ ಸೇವೆಗಳಲ್ಲಿ ದಲಿತೇತರರು ಮತ್ತು ದಲಿತರು ಮಾಡುವ ಸೇವೆಗಳಿಗೂ ಅವುಗಳ ಹೆಸರುಗಳಿಗೂ ಸ್ಪಷ್ಟ ವ್ಯತ್ಯಾಸವಿದೆ.

**2.4.1 ದಲಿತರಲ್ಲದ ಜಾತಿ ಜನರು ಸಲ್ಲಿಸುವ ಸೇವೆಗಳ ಹೆಸರುಗಳು ಮತ್ತು ಸೇವೆಗಳು:**

ದಲಿತರಲ್ಲದ ಜಾತಿಗಳು ಮಾಡುವ ಸೇವೆಗಳನ್ನು ದೈವದ/ದೇವರ ಕೆಲಸ/ಸೇವೆ/ಚಾಕರಿ ಅನ್ನುತ್ತಾರೆ. ಕೆಲವರು ದೈವಾಚಾರಿ ಕೆಲಸ ಎಂತಲೂ ಕೆಲವರು ಇಡೀ ಊರಿನವರು ಸೇರಿಕೊಂಡು ಮಾಡುವ ದೈವದ ಸೇವೆ ಎಂತಲೂ ಇನ್ನೂ ಕೆಲವರು ಮೂಲ ದೇವರಿಕೆ ಮಾಡುವುದು ಎಂತಲೂ ಕರೆಯುತ್ತಾರೆ. ಪ್ರತ್ಯೇಕವಾಗಿ ದಲಿತರಲ್ಲದ ಜಾತಿಗಳವರು ಮಾಡುವ ಸೇವೆಗಳಿಗೆ ಸ್ಪಷ್ಟವಾಗಿ ಜಾತ್ರೆಯ / ಊರ ಹಿರೇತನ ಮಾಡುವುದು ಎಂದು ಎಲ್ಲರೂ ಹೇಳುತ್ತಾರೆ. ಅಂದರೆ ಅವರ ಒಟ್ಟಾರೆ ಜವಾಬ್ದಾರಿ ಜಾತ್ರೆಯ ಹಿರೇತನ ಅಥವಾ ಮೇಲ್ವಿಚಾರಿಕೆ ಮಾಡುವುದು, ಅವರಿಗಿಂತ 'ಕೆಳಗಿನ' ಜನರನ್ನು ಕರೆಯುವುದು ಮತ್ತು ಜನರಿಗೆ ಕೆಲಸಗಳನ್ನು ಹಂಚಿಕೊಂಡು ಮೇಲುಸ್ತುವಾರಿ ನೋಡಿಕೊಳ್ಳುವುದು ಅವರ ಜವಾಬ್ದಾರಿಯಾಗಿರುತ್ತದೆ.

**ದಲಿತರಲ್ಲದ ಜಾತಿ ಜನರು ನೋಡಿಕೊಳ್ಳುವ ವಿವಿಧ ಕೆಲಸಗಳು ಹೀಗಿವೆ:** ಜಾತ್ರೆಯಲ್ಲಿ ಪಟ್ಟಿ (ದೇವರ ಪಟ್ಟಿ) ಮಾಡುವುದು / ಊರಲ್ಲಿ ಪಟ್ಟಿ ಹಾಕುವುದು/ಎತ್ತುವುದು ಅಂದರೆ ಹಣ ಸಂಗ್ರಹ ಮಾಡುವುದು; ಅಡಿಗಿ ವ್ಯವಸ್ಥೆ ರೇಶನ್ ತರುವುದು/ಖರೀದಿಸುವುದು/ ಜಾತ್ರೆಯ ಸಾಮಾಗ್ರಿಗಳನ್ನು ತರುವುದು; ಅಡುಗೆ ಮಾಡುವುದು; ಕಟ್ಟಿಗೆ ಕಡಿಸುವುದು; ನೀರಿನ ವ್ಯವಸ್ಥೆ ಮಾಡುವುದು; ಊಟ ನೀಡುವುದು /ಅಡಿಗೆ ಊಟ ಉಪಚಾರ ಕೆಲಸ ಮಾಡುವುದು; ಊರಿನ ಸ್ವಚ್ಛತೆಮಾಡಿಸುವುದು (ಊರಿನ ಹೊಲಸಾಗಿರುವ ಜಾಗಗಳ ಕಸ ತೆಗೆಯುವುದು); ನಾಟಕ ಹರಿಕಥೆ ಹೇಳುವವರನ್ನು ಕರೆಸುವುದು / ತರುವುದು; ಇತರೆ ಮನೋರಂಜನೆ ಕಾರ್ಯಕ್ರಮಗಳನ್ನು ಮಾಡಿಸುವುದು; ಡೋಲು ಬಾರಿಸುವುದು; ಪೂಜೆ ಪುರಸ್ಕಾರ ಮಾಡುವುದು ಇತ್ಯಾದಿ.

**2.4.2 ದಲಿತರು ಸಲ್ಲಿಸುವ ಸೇವೆಗಳಿಗಿರುವ ಹೆಸರುಗಳು ಮತ್ತು ಸೇವೆಗಳು**

ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿ ಊರುಗಳಲ್ಲಿ ಮಾದಿಗರು ಮಾತ್ರ ಮುಂದೆ ಹೆಸರಿಸಲಾದ ಸೇವೆಗಳನ್ನು ಮಾಡುತ್ತಾರೆ. ಬೇರೆ ಉಪ ಜಾತಿಯವರು ಅಂತಹ ಸೇವೆ ಮಾಡುವುದಿಲ್ಲ. ಜಾಲಿಕೊಪ್ಪ ಮತ್ತು ಚಿವಟಗುಂಡಿಯಲ್ಲಿ ಕೇವಲ ಮಾದಿಗರು ಮಾತ್ರ ಇದ್ದಾರೆ. ಚಿಕ್ಕಬಾಗೇವಾಡಿಯಲ್ಲಿ ಅನುಸೂಚಿತ ಜಾತಿಯಾದ ಭಜಂತ್ರಿಯವರು ಮಾದಿಗರ ರೀತಿಯ ಸೇವೆಗಳನ್ನು ಮಾಡುವುದಿಲ್ಲ. ಅಂದರೆ

ಜಾತ್ರೆಗಳಲ್ಲಿ ಕಸ ಗುಡಿಸುವುದು, ಮುಸುರೆ ತೆಗೆಯುವುದು, ಕಟ್ಟಿಗೆ ಒಡೆಯುವುದು, ಹಲಗೆ ಬಾರಿಸುವುದು ಮುಂತಾದುವನ್ನು ಭಜಂತ್ರಿಗಳು ಮಾಡುವುದಿಲ್ಲ.

ದಲಿತರು ಮಾಡುವ ಸೇವೆಗಳನ್ನು ಈ ತರಹ ಕರೆಯುತ್ತಾರೆ: **ದೇವರ 'ಬಿಟ್ಟಿ'** ಮಾಡುವವರು; ದೈವದ/ದೇವರ ಕೆಲಸ/ಚಾಕರಿ / **ದೈವದ 'ಬಿಟ್ಟಿ ಚಾಕರಿ'** / ಊರು ಸೇವೆ ಮಾಡುವವರು ಎಂದು ಕರೆಯುತ್ತಾರೆ. ಈ ಹೆಸರುಗಳು ದಲಿತೇತರ ಕೆಲಸಗಳ ಹೆಸರುಗಳಂತೆ ಇವೆ. ಆದರೆ 'ಬಿಟ್ಟಿ' ಎಂಬ ಪದ ದಲಿತರ ಸೇವೆಗಳಿಗೆ ವಿಶಿಷ್ಟವಾಗಿ ಇಡಲ್ಪಟ್ಟಿದೆ. ಜೊತೆಗೆ ಅವರ ಕೆಲಸಗಳನ್ನು ಪ್ರತ್ಯೇಕವಾಗಿ ಈ ಹೆಸರುಗಳಿಂದಲೂ ಕರೆಯುತ್ತಾರೆ: ಹೊಲೇರ ಕೆಲಸ/ಸೇವೆ; ಹೊಲೆಯರು ಮಾಡುವ ಕೆಲಸ. ಆ ಕೆಲಸಗಳೂ ನಿರ್ದಿಷ್ಟವಾಗಿ ಅವರು ದಿನನಿತ್ಯ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ಮಾಡುವ 'ಬಿಟ್ಟಿ ಚಾಕ್ರಿ'ಯ ಕೆಲಸಗಳನ್ನೇ ಹೋಲುತ್ತವೆ. ಊರಿನ ಸಾಮೂಹಿಕ ಕಾರ್ಯಗಳಲ್ಲಿ ದಲಿತರು ಮಾಡುವ ಕೆಲಸಗಳು ಹೀಗಿವೆ:

ಗುಡಿ ಸುತ್ತ (ಅಂಗಳ) / ಅಂಗಳ ಬಾಗಿಲ ಕಸ ಹೊಡೆಯುವುದು / ಎತ್ತುವುದು/ ಕೆತ್ತುವುದು / ಕೀಳುವುದು / ಗುಡಿಸುವುದು / ಗುಡಿ ಸುತ್ತ ಮುತ್ತ ಸ್ವಚ್ಛ ಮಾಡುವುದು; ಕಸ ಮುಸರಿಯನ್ನು ತೆಗೆಯುವುದು; ಗಟಾರ ಸ್ವಚ್ಛ ಮಾಡುವುದು; ದುರ್ಗಾ ಮತ್ತು ಗ್ರಾಮ ದೇವಿಗಳ ಜಾತ್ರೆಗಳಲ್ಲಿ ದೇವರುಗಳಿಗೆ ಪಾದ ಹೊಲಿದು ಕೊಡುವುದು; ದೇವರ ಗುಡಿ ಮುಂದೆ ಹಂದರ ಹಾಕುವುದಕ್ಕೆ ಹೊಂಗೆ ಸೊಪ್ಪು ತರುವುದು; ಜಾತ್ರೆಯ ಅಡಿಗೆಗೆ ಕಟ್ಟಿಗೆ ಒಡಿಯುವುದು / ದೈವದ ಕಟ್ಟಿಗೆ ಒಡೆಯುವುದು; ಊಟದ ಜಾಗ ಸ್ವಚ್ಛಗೊಳಿಸುವುದು;ಊಟದ ಎಲೆ ತೆಗೆಯುವುದು / ಎತ್ತುವುದು; ಊಟ ಮಾಡಿದ ಸ್ಥಳ ಸ್ವಚ್ಛಗೊಳಿಸುವುದು;ಹಲಿಗೆ ಹೊಡೆಯುವುದು / ಬಾರಿಸುವುದು; ಬಾಡಿಗೆಗೆ ತಂದ ಪಾತ್ರೆಗಳನ್ನು ಮಾತ್ರ ಸ್ವಚ್ಛಗೊಳಿಸುವುದು ಇತ್ಯಾದಿ.

**2.4.3 ದಲಿತರು ದಿನ ನಿತ್ಯ – ವಿಶೇಷ ಸಂದರ್ಭದಲ್ಲಿ ಮಾಡುವ 'ಬಿಟ್ಟಿಚಾಕ್ರಿ'ಗೆ ಇರುವ ಇತರ ಹೆಸರುಗಳು**

ಈ ಮೇಲಿನ ಹಿನ್ನೆಲೆಯೊಂದಿಗೆ ದಲಿತರು ಸಲ್ಲಿಸುವ 'ಬಿಟ್ಟಿ ಚಾಕ್ರಿ'ಗೆ ಸಂಬಂಧ ಪಟ್ಟಂತೆ ಬಳಸುವ ಇನ್ನಿತರ ಹೆಸರುಗಳ ಬಗ್ಗೆ ಈಗ ಪ್ರಸ್ತಾಪ ಮಾಡುವುದು ಸೂಕ್ತ. ನನಗೆ ಪ್ರಥಮ ಬಾರಿಗೆ 2012ರಲ್ಲಿ ಬೆಳಿಗ್ಗೆ ಪ್ರತಿನಿತ್ಯ ಕೆಲಕಾಲ ದಲಿತರು ರೈತರಿಗೆ ಸಾಂಪ್ರದಾಯಿಕಾವಗಿ ಮತ್ತು ಕಡ್ಡಾಯವಾಗಿ ಸಲ್ಲಿಸುವ ಸೇವೆಗಳ ಕುರಿತು ಮಾಹಿತಿ ನೀಡಿದಾಗ ಆ ಸೇವೆಗಳನ್ನು 'ಬಿಟ್ಟಿ ಚಾಕ್ರಿ' ಎಂತಲೇ ಕರೆದಿರುವುದು ಕಂಡು ಬಂದಿತ್ತು. ಅದರ ಬಗ್ಗೆ ಇನ್ನೂ ವಿಸ್ತೃತವಾಗಿ ನನಗೆ ಮಾಹಿತಿ ಕೊಟ್ಟ ಆ ಸ್ನೇಹಿತರಿಂದ ತಿಳಿದುಕೊಂಡಿದ್ದೆನು. ನಂತರ ಒಂದೆರಡು ತಿಂಗಳಲ್ಲಿ ಬೈಲಹೊಂಗಲ ತಾಲೂಕಿನಲ್ಲಿಯ ಅಕ್ಕಪಕ್ಕದಲ್ಲಿಯೇ ಇರುವ ಜಾಲಿಕೊಪ್ಪ, ಅರವಳ್ಳಿ ಮತ್ತು ಲಿಂಗದಳ್ಳಿ ಊರುಗಳನ್ನು ಭೇಟಿಯಾಗಲು ಹೋದಾಗ ಅಲ್ಲಿಯ ದಲಿತರು ಯಾವುದೇ ಅಭ್ಯಂತರವಿಲ್ಲದೇ ತಾವು 'ಬಿಟ್ಟಿ ಚಾಕ್ರಿ'ಯನ್ನು ಮಾಡುತ್ತಿರುವುದನ್ನು

ಒಪ್ಪಿಕೊಂಡಿದ್ದರು. ಜಾಲಿಕೊಪ್ಪದ ಕೆಲವು ಭೂಮಾಲಿಕರನ್ನು ಭೇಟಿಯಾದಾಗ ಅವರೂ ಊರಲ್ಲಿ ದಲಿತರು 'ಬಿಟ್ಟಿ ಚಾಕ್ರಿ' ಮಾಡುತ್ತಿರುವುದನ್ನು ಒಪ್ಪಿಕೊಂಡಿದ್ದರು.

ನಂತರ ಬೇರೆ ಬೇರೆ ತಿಂಗಳುಗಳಲ್ಲಿ ಮತ್ತು ನಂತರದ ವರ್ಷಗಳಲ್ಲಿ ಜಾಲಿಕೊಪ್ಪ ಮತ್ತು ಚಿವಟಗುಂಡಿ ಗ್ರಾಮಗಳನ್ನು ಭೇಟಿ ಮಾಡುತ್ತಿರುವಾಗ 'ಬಿಟ್ಟಿ ಚಾಕ್ರಿ'ಯಲ್ಲಿ ತಾವು ಮಾಡುತ್ತಿರುವ ಬಹುಮುಖ್ಯ ಸೇವೆ ಗುರುತಿಸಿಕೊಂಡು ಆ ಸೇವೆಯ ಹೆಸರಲ್ಲೇ 'ಬಿಟ್ಟಿ ಚಾಕ್ರಿ' ಎಂದು ಈ ಅಧಯಯನದಲ್ಲಿ ವಿವರಿಸಲಾದ ಪದ್ಧತಿಯನ್ನು ಕರೆಯುವುದೂ ಕಂಡು ಬಂದಿದೆ. ಅದೇನೆಂದರೆ ಸೆಗಣಿ ಬಳಿಯುವುದು, ಹೆಂಡಿ ಕಸ ಬಳಿಯುವುದು, ಶಗಣಿ ಕಸ ಮಾಡುವುದು, ಸಗಣಿ ಉಗಿಯುವುದು, ಅಂಗಳ ಕಸ ಹಿಡಿಯುವ ಕೆಲಸ ಇತ್ಯಾದಿ. ಜೊತೆಗೆ 'ಬಿಟ್ಟಿ ಚಾಕ್ರಿ'ಗೆ ಸಮಾನಾಂತರವಾಗಿ 'ರೈತರ ಬಿಟ್ಟಿ', 'ರೈತರ ಚಾಕ್ರಿ', 'ರೈತರ ಕಸ ಮುಸೂರಿ' ಎಂದೂ ಬೇರೆ ಬೇರೆ ಜಿಲ್ಲೆಗಳಲ್ಲಿ ಬಳಸುವುದು ಕಂಡು ಬಂದಿದೆ. ಜೊತೆಗೆ 'ಬಿಟ್ಟಿ ಕೆಲಸ', 'ಚಾಕರಿ ಕೆಲಸ', 'ಮನೆ ಬಿಟಿ, ಮನೆ ಚಾಕರಿ' ಮುಂತಾದ ಪದಗಳೂ ಚಾಲ್ತಿಯಲ್ಲಿವೆ. ಬೆಳಿಗ್ಗೆ ಪ್ರತಿನಿತ್ಯ ಕೆಲಕಾಲ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ಕೆಲವಾರು ದಿನ ದಲಿತರು ರೈತರಿಗೆ ಸಲ್ಲಿಸುವ ಸೇವೆಗಳಿಗೆ 'ಬಿಟ್ಟಿ ಚಾಕ್ರಿ' ಎಂತಲೇ ಕರೆಯಲಾಗಿದೆ. ಆದ್ದರಿಂದ ಈ ಪ್ರಬಂಧದಲ್ಲಿ ರೈತರಿಗೆ ಬೆಳಿಗ್ಗೆ ಪ್ರತಿನಿತ್ಯ ಕೆಲಕಾಲ ದಲಿತರು ಸಲ್ಲಿಸುವ ಸೇವೆಯನ್ನು 'ಬಿಟ್ಟಿ ಚಾಕ್ರಿ' ಎಂತಲೇ ಕರೆದಿದ್ದೇನೆ[15].

**2.5 'ಬಿಟ್ಟಿ ಚಾಕ್ರಿ'ಗೆ ಮಾಡುವವರಿಗೆ ಸಿಗುವ ಸೌಲಭ್ಯಗಳು**

**2.5.1 ದಿನ ನಿತ್ಯ ಮತ್ತು ವರ್ಷದಲ್ಲಿ ಸಿಗುವ ಸೌಲಭ್ಯಗಳು**

ದಿನ ನಿತ್ಯ 'ಬಿಟ್ಟಿ ಚಾಕ್ರಿ' ಮಾಡುವಾಗ ಸೇವೆ ಮಾಡುವವರಿಗೆ ಟೀ, ಒಂದೆರಡು ತಂಗಳ ರೊಟ್ಟಿ ಕೊಡುತ್ತಾರೆ. ಟೀಯನನು ಅಲ್ಲೆ ಕುಡಿದು ರೊಟ್ಟಿಗಳನ್ನು ಮನೆಗೆ ತೆಗೆದುಕೊಂಡು ಮಕ್ಕಳಿಗೆ ಕೊಡುವದು ರೂಢಿ. ಇದರ ಜೊತೆಗೆ ವರ್ಷಕ್ಕೆ ಒಂದು ಸಾರಿ ಕೆಲವು ಚೀಲ ಜೋಳವನ್ನೂ ರೈತರು 'ಬಿಟ್ಟಿ ಚಾಕ್ರಿ' ಮಾಡುವವರಿಗೆ ಕೊಡುತ್ತಾರೆ. ಚಿವಟಗುಂಡಿಯಲ್ಲಿ ಹೆಚ್ಚಿನವರಿಗೆ ಒಬ್ಬೊಬ್ಬರಿಗೆ ಒಂದು ಅಥವಾ ಎರಡು ಚೀಲ ಬಿಳಿ ಜೋಳ ಕೊಡುತ್ತಾರೆ. ಒಬ್ಬರು ಮಾತ್ರ ಮೂರು ಚೀಲ ಬಿಳಿ ಜೋಳ ಕೊಡುತ್ತಿದ್ದರು. ರೈತರ ಮನೆಯಲ್ಲಿ ದನಕರುಗಳು ಜಾಸ್ತಿ ಇದ್ದಂತೆ ಅವರಿಗೆ ಕೊಡುವ ಜೋಳದ ಪ್ರಮಾಣವು ಅಷ್ಟೇ ಪ್ರಮಾಣದಲ್ಲಿ ಜಾಸ್ತಿಯಾಗುತ್ತದೆ. ಜೋಳದ ಜೊತೆ ಹೊಲ ಗದ್ದೆಗಳಲ್ಲಿ ಬೆಳೆದ ಬೇರೆ ಬೇರೆ ದವಸ ಧಾನ್ಯಗಳಲ್ಲಿ ಕೆಲವು ಸೇರು 2ರಿಂದ 10 ಕಿಲೊ ಗ್ರಾಂ ತನಕ ಕೊಡಲಾಗುತ್ತದೆ. ಉದಾಹರಣೆಗೆ ಗೋದಿ, ಶೇಂಗಾ (ಕಡಲೆ), ಬೇಳೆ, ಬೆಲ್ಲ, ಹೆಸರು ಇತ್ಯಾದಿ. ಜಾಲಿಕೊಪ್ಪದಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಕೆಲವು ಮಂದಿ ಐದು ಚೀಲ,

---

15 ಒಟ್ಟಾರೆಯಾಗಿ ಜೀತ ಪದ್ಧತಿಗೂ ಸಂಬಂಧಪಟ್ಟಿರುವಂತೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಬಳಸುವ ಶಬ್ದದಿಂದ ಒಂದು ಆಚರಣೆಯ ಬಗ್ಗೆ ಏನೇ ತೀರ್ಮಾನ ಮಾಡಲು ಬರುವುದಿಲ್ಲ. ಬದಲಿಗೆ ಆ ಆಚರಣೆಯಲ್ಲಿ ಒಳಗೊಂಡಿರುವ ಪ್ರಕ್ರಿಯೆಗಳು ಆ ಆಚರಣೆಯ ಸ್ವರೂಪವನ್ನು ನಿಗದಿ ಮಾಡುವಲ್ಲಿ ಸಹಾಯಮಾಡುತ್ತವೆ. ಹೀಗಿದ್ದರೂ 'ಬಿಟ್ಟಿ ಚಾಕ್ರಿ' ಶಬ್ದವೇ ಆ ಶಬ್ದವು ಸೂಚಿಸುವ ಆಚರಣೆಗಳಿಗೆ ಒಂದು ನೇರ ಮತ್ತು ಸ್ಪಷ್ಟ ಮಾಹಿತಿ ನೀಡುತ್ತದೆ. ಯಾವುದೇ ಶಬ್ದ ಅಥವಾ ಪದಪುಂಜ ಬಳಸಿದರೂ ನಾವು ಗಮನಿಸಬೇಕಾದುದು ಆ ಆಚರಣೆಯಲಿ ಒಳಗೊಂಡಿರುವ ಪ್ರಕ್ರಿಯೆಗಳಾವುವು ಎಂದು. ಆ ಆಚರಣೆಗೆ ಜನರು ಬಳಸುವ ಇತರ ಶಬ್ದಗಳಿಗೆ ಹೋಲಿಸಿದರೆ, 'ಬಿಟ್ಟಿ ಚಾಕ್ರಿ' ಪದವು ಚುಟುಕಾಗಿಯೂ ಅರ್ಥಪೂರ್ಣವಾಗಿಯೂ ಇದೆ.

ಆರು ಚೀಲ, ಎಂಟು ಚೀಲ ಮತ್ತು ಒಬ್ಬಿಬ್ಬರು 10–12 ಚೀಲ ಜೋಳ ಪಡೆಯುತ್ತಿದ್ದರು. ಚಿವಟಗುಂಡಿಗೂ ಜಾಲಿಕೊಪ್ಪಕ್ಕೂ ಇರವು ವ್ಯತ್ಯಾಸದ ಬಗ್ಗೆ ವಿಚಾರಿಸಿದಾಗ ತಿಳಿದು ಬಂದ ಕಾರಣವೇನೆಂದರೆ, ಜಾಲಿಕೊಪ್ಪದಲ್ಲಿ ಒಂಬತ್ತು ಕುಟುಂಬದವರು ಬೆಳಿಗ್ಗೆ ಮತ್ತು ಮಧ್ಯಾಹ್ನ ಹೊತ್ತು 'ಬಿಟ್ಟಿ ಚಾಕ್ರಿ' ಮಾಡುತ್ತಾರೆ. ಜೊತೆಗೆ ಐದಾರು ಕುಟುಂಬಗಳು ದಿನನಿತ್ಯ ಎರಡೆರಡು ಮನೆಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುತ್ತಾರೆ. ಅಷ್ಟೇ ಅಲ್ಲ. ಕೊಡುವ ವಾರ್ಷಿಕ ಜೋಳವು ಉತ್ತಮ ಮಟ್ಟದ ಬಿಳಿ ಜೋಳವಾಗಿದ್ದರೆ ಅದರ ಚೀಲವೊಂದಕ್ಕೆ ಎರಡರಿಂದ ಮೂರು ಸಾವಿರ ರೂ. ತನಕ ಬೆಲೆಯಿದೆ. ಕೊಡುವ ಜೋಳವು ಐದನೇ ನಂಬರ್ ಜೋಳವಾದರೆ ಅದರ ಬೆಲೆ ಕಡಿಮೆ – ಒಂದರಿಂದ ಒಂದುವರೆ ಸಾವಿರ ರೂ. ತನಕ ಮಾತ್ರ. ಆದ್ದರಿಂದ ಒಂದು ಚೀಲ ಬಿಳಿ ಜೋಳ ಕೊಡುವ ಜಾಗದಲ್ಲಿ ಎರಡು ಚೀಲ ಐದನೇ ನಂಬರ್ ಜೋಳ ಕೊಡಬೇಕಾಗುತ್ತದೆ.

ಏನಿದ್ದರೂ ಪ್ರತಿನಿತ್ಯ ವರ್ಷವಿಡೀ ತಪ್ಪದೇ 2–3 ಗಂಟೆ ಮಾಡುವ 'ಬಿಟ್ಟಿ ಚಾಕ್ರಿ' ಕೆಲಸಕ್ಕೆ ಅವರಿಗೆ ಒಂದು ವರ್ಷಕ್ಕೆ ಸಿಗುವ ಕಾಳುಕಡಿ ನ್ಯಾಯೋಚಿತವಲ್ಲ. ಕರ್ನಾಟಕ ಸರ್ಕಾರದ ಕನಿಷ್ಠ ವೇತನದ ಪ್ರಕಾರ ಅತ್ಯಂತ ಕೆಳ ಮಟ್ಟದ ಶ್ರಮಾಧಾರಿತ ಕೆಲಸಕ್ಕೆ ಈಗ ದಿನಕ್ಕೆ 324 ರೂ. ಎಂದಿರುವುದು[16]. ಪ್ರಚಲಿತ ಕೂಲಿ ಈ ಮೂರು ಊರುಗಳ ಪ್ರದೇಶದಲ್ಲಿ ಗಂಡಸರಿಗೆ 200 ರೂ., ಹೆಂಗಸರಿಗೆ 100ರಿಂದ 150 ರೂ. ಪ್ರಚಲಿತ ಕೂಲಿಯಲ್ಲೇ 10 ದಿನವಿಡೀ ಕೆಲಸ ಮಾಡಿದರೆ ಒಂದು ಚೀಲ ಉತ್ತಮ ಬಿಳಿ ಜೋಳದ ಒಂದು ಚೀಲ ಸಂಪಾದಿಸಬಹುದು. ಕೇವಲ ಎರಡೇ ಗಂಟೆ 'ಬಿಟ್ಟಿ ಚಾಕ್ರಿ' ಮಾಡಿದರೂ 40 ದಿನ ಅಥವಾ ಒಂದುವರೆ ತಿಂಗಳೊಳಗೆ ಅದನ್ನು ಸಂಪಾದಿಸಬಹುದು. ಆದ್ದರಿಂದ ದಿನನಿತ್ಯ ಬಿಟ್ಟಿಚಾಕ್ರಿ ಮಾಡುವವರಿಗೆ ದವಸ ಧಾನ್ಯದಲ್ಲಿ ಸಿಗುವ ಪ್ರತಿಫಲ ಅವರ ಹಾಕುವ ಶ್ರಮಕ್ಕೆ ತಕ್ಕುದಲ್ಲ. ಜೊತೆಗೆ ದಿನನಿತ್ಯ ಸೇವೆ ಜೊತೆ ಬೇರೆ ಬೇರೆ ವಿಶೇಷ ಸಂದರ್ಭಗಳಲ್ಲಿ ದಿನವಿಡೀ ಕೆಲವು ಸಾರಿ ಹಲವಾರು ದಿನವಿಡೀ ಕೂಲಿ ಇಲ್ಲದೇ ಸೇವೆ ಸಲ್ಲಿಸ ಬೇಕಾಗುತ್ತದೆ.

'ಬಿಟ್ಟಿ ಚಾಕ್ರಿ' ಮಾಡುವವರಲ್ಲಿ ಹೆಚ್ಚಿನವರು 26ರಿಂದ 60 ವರ್ಷ ವಯಸ್ಸಿನ ಗುಂಪಿಗೆ ಸೇರಿದವರು. ಹಾಗೆಯೇ ಅವರಲ್ಲಿ ಹೆಚ್ಚಿನವರು ಅನಕ್ಷರಸ್ಥರು. ಅವರಲ್ಲಿ 25ರಿಂದ 25% ಮಂದಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮೊಟಕುಗೊಳಿಸಿ 'ಬಿಟ್ಟಿಚಾಕ್ರಿ'ಯನ್ನು ಮುಂದುವರಿಸಿಕೊಂಡು ಹೋಗುವ ಪರಿಸ್ಥಿತಿಗೆ ಒಳಗಾಗಿದ್ದವರು ಎಂದು ತಿಳಿದುಕೊಳ್ಳಬಹುದು.

---

[16]ಕರ್ನಾಟಕ ಸರ್ಕಾರದ ನೊಟಿಫಿಕೇಷನ್ ನಂ. ಕೆಎಇ 30 ಎಲ್‌ಎಮ್.ಡಬ್ಲ್ಯು 2012 ದಿನಂಕ 14–05–2013ರ ಪ್ರಕಾರ ಒಬ್ಬ ಕೃಷಿಕಾರ್ಮಿಕರ ಕನಿಷ್ಟ ವೇತನ ದಿನಕ್ಕೆ 269.04 ಎಂದು ಇತ್ತು. 2015ರಲ್ಲಿ ಅದು 304 ಆಗಿತ್ತು.

### 2.5.2 ವಿಶೇಷ ಸಂದರ್ಭಗಳಲ್ಲಿ ಸಿಗುವ ಸೌಲಭ್ಯಗಳು:

ಎಲ್ಲಾ ವಿಶೇಷ ಸಂದರ್ಭಗಳಲ್ಲಿ 'ಬಿಟ್ಟಿಚಾಕ್ರಿ' ಮಾಡುವ ವ್ಯಕ್ತಿಗಳಿಂದ ಹಿಡಿದು ಅವರ ಕುಟುಂಬದ ಎಲ್ಲರಿಗೂ ಊಟದ ಸೌಲಭ್ಯ ಸಿಗಿಯೇ ಸಿಗುತ್ತದೆ. ಜೊತೆಗೆ ಒಂದು ಬಟ್ಟೆ, ಹಳೆ ಪಾತ್ರೆಗಳು, 200–300 ರೂ. ಗಳನ್ನು ಕೊಡಲಾಗುತ್ತದೆ. 'ಬಿಟ್ಟಿ ಚಾಕ್ರಿ' ಮಾಡುವವರು ದೊಡ್ಡ ಮಟ್ಟದಲ್ಲಿ ಸಹಾಯ ಮಾಡಿದರೆ ಒಂದು ಎಮ್ಮೆ ಕರು ಅಥವಾ ಐದು ಗ್ರಾಂ ಬಂಗಾರವನ್ನು ಪಡೆದಿರುವುದನ್ನು ಸ್ಮರಿಸುತ್ತಾರೆ.

ಸಾವಿನ ಸಂದರ್ಭದಲ್ಲಿ ದಾನದ ಬುಟ್ಟಿ ಹೊರುವವರಿಗೆ ಆ ಬುಟ್ಟಿಯಲ್ಲಿದ್ದ ದಾನದ ಕಾಳುಗಳು ಮತ್ತು ಹಳೆ ಪಾತ್ರೆಗಳು ಕೊಡುತ್ತಾರೆ. ಕೆಲವರು 200–300 ಅಥವಾ 400–500 ರೂ.ಗಳನ್ನೂ ಪಡೆದಿದ್ದಾರೆ. ತಿಥಿಯ ಸಮಯದಲ್ಲಿ ಆ ದಿನದ ಊಟ ಬಿಟ್ಟರೆ ಬೇರೆ ಏನೂ ಸಿಗುವುದಿಲ್ಲ. ಕೆಲವು ಸಾರಿ ಹಲಿಗೆ ಬಡಿಯಲಿಕ್ಕೆ 200 ರೂ.ಗಳನ್ನು ಪಡೆದಿರುವುದೂ ಉಂಟು.

## 2.6 'ಬಿಟ್ಟಿಚಾಕ್ರಿ'ಯಲ್ಲಿರುವವರ ಲಿಂಗವಾರು, ವಯಸ್ಸು ಆಧಾರಿತ ಮತ್ತು ಶೈಕ್ಷಣಿಕ ವಿವರಗಳು

**ಕೋಷ್ಟಕ 8 : 'ಬಿಟ್ಟಿ ಚಾಕ್ರಿ'ಯಲ್ಲಿರುವವರ ಲಿಂಗವಾರು ಮತ್ತು ವಯಸ್ಸು ಆಧರಿತ ವಿಂಗಣೆ:**

| ಊರು | 'ಬಿಟ್ಟಿಚಾಕ್ರಿ'– ದಿನಗೂಲಿ | ಲಿಂಗ | | ವಯಸ್ಸು | | | | |
|---|---|---|---|---|---|---|---|---|
| | | ಗ | ಹೆ | 15–18 | 19–25 | 26–40 | 41–60 | 61+ |
| ಜಾಲಿಕೊಪ್ಪ | 30 | 13 | 17 | 01 | 00 | 15 | 11 | 03 |
| % 100 | | 43.3 | 56.7 | 03.3 | 00.0 | 50.0 | 36.6 | 09.9 |
| ಚಿವಟಗುಂಡಿ | 37 | 21 | 16 | 00 | 02 | 18 | 13 | 04 |
| % 100 | | 56.7 | 43.3 | 00.0 | 05.4 | 48.6 | 35.1 | 10.8 |
| ಚಿಕ್ಕ ಬಾಗೇವಾಡಿ | 28 | 10 | 18.0 | 00.0 | 04.0 | 12.0 | 10.0 | 02.0 |
| % 100 | | 35.7 | 64.3 | 00.0 | 14.2 | 42.8 | 35.7 | 07.1 |

'ಬಿಟ್ಟಿ ಚಾಕ್ರಿ' ಮಾಡುವವರಲ್ಲಿ ಮೂರೂ ಹಳ್ಳಿಗಳಲ್ಲಿ ಒಟ್ಟಾರೆಯಾಗಿ ಗಂಡಸರಿಗಿಂತ ಹೆಂಗಸರೇ ಸ್ವಲ್ಪ ಜಾಸ್ತಿ ಸಂಖ್ಯೆಯಲ್ಲಿದ್ದಾರೆ. ಒಟ್ಟಿಗೆ 95 ಮಂದಿಯಲ್ಲಿ 50 ಮಂದಿ ಹೆಂಗಸರು, 45 ಮಂದಿ ಗಂಡಸರು. ಆದರೆ ಚಿವಟಗುಂಡಿಯಲ್ಲಿ ಮಾತ್ರ ಹೆಂಗಸರಿಗಿಂತ ಗಂಡಸರೇ ಸ್ವಲ್ಪ ಜಾಸ್ತಿ – ಗಂಡಸರು 20 ಮಂದಿ ಇದ್ದರೆ ಹೆಂಗಸರು 16 ಮಂದಿ. 'ಬಿಟ್ಟಿ ಚಾಕ್ರಿ' ಮಾಡುವವರ ವಯಸ್ಸನ್ನು ಗಮನಿಸಿದರೆ 26ರಿಂದ 60 ವರ್ಷ ತನಕದ ವಯಸ್ಸಿನವರಿದ್ದೇ ಸಿಂಹಪಾಲು. ಅಂದರೆ ಒಟ್ಟಿಗೆ 95 ಮಂದಿಯಲ್ಲಿ 79 ಮಂದಿ ಅಥವ ಶೇಕಡಾ 83. ಜಾಲಿಕೊಪ್ಪದಲ್ಲಿ ಮಾತ್ರ 15ರಿಂದ 18 ವರ್ಷ ವಯಸ್ಸಿನವರು ಒಬ್ಬರು ಮಾತ್ರ. ಉಳಿದ ಊರುಗಳಲ್ಲಿ ಆ ವಯಸ್ಸಿನವರು ಯಾರೂ ಇಲ್ಲ. ಅದೇ ರೀತಿ ಜಾಲಿಕೊಪ್ಪ ಮತ್ತು ಚಿವಟಗುಂಡಿಯಲ್ಲಿ 60 ವರ್ಷ ದಾಟಿದವರು ಕ್ರಮವಾಗಿ ಮೂರು (9.9%) ಮತ್ತು ನಾಲ್ಕು (10.4%). ಚಿಕ್ಕ ಬಾಗೇವಾಡಿಯಲ್ಲಿ ಆ ವಯಸ್ಸಿನಲ್ಲಿ ಕೇವಲ ಇಬ್ಬರೇ ಇಬ್ಬರು ಇದ್ದಾರೆ. ಅಂದರೆ ಯುವಕರು ಯುವತಿಯರು ಹಾಗೂ ವಯಸ್ಸಾದವರು 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗುವುದಿಲ್ಲ ಎಂದಾಯಿತು. ಹದಿ ಹರೆಯದವರು, ಯುವಕ–

ಯುವತಿಯರು ಹೆಚ್ಚಾಗಿ ದಿನಗೂಲಿಗೆ ಹೋಗುತ್ತಿರಬಹುದು. ಅಥವಾ ಅವರು ಈಗೀಗ ಶಿಕ್ಷಣ ಪಡೆಯುತ್ತಿದ್ದಾರೆಯೇ ಎಂಬುದಕ್ಕೆ ಮುಂದೆ ಇಡೀ ಊರಿಗೆ ಸಂಬಂಧಪಟ್ಟ ಕೊಷ್ಟಕಗಳಲ್ಲಿಯ ವಯಸ್ಸು ಮತ್ತು ಶಿಕ್ಷಣ ಆಧಾರಿತ ಮಾಹಿತಿಗಳನ್ನು ಗಮನಿಸಬೇಕಾಗುತ್ತದೆ.

**ಕೋಷ್ಟಕ 9 : 'ಬಿಟ್ಟಿ ಚಾಕ್ರಿ'ಯಲ್ಲಿರುವವರ ಶೈಕ್ಷಣಿಕ ಮಟ್ಟ**

| ಊರು | 'ಬಿಟ್ಟಿಚಾಕ್ರಿ' – ದಿನಗೂಲಿ | ಲಿಂಗ | | ಶಿಕ್ಷಣ | | | | | |
|---|---|---|---|---|---|---|---|---|---|
| | | ಗ | ಹೆ | ಅನಕ್ಷರತೆ | 1–5 | 06–08 | 09–10 | 11–18 | 13+ |
| ಜಾಲಿಕೊಪ್ಪ | 30 | 14.0 | 16.0 | 17 | 10 | 1 | 2 | 0 | 0 |
| % 100 | | 46.7 | 53.3 | 56.7 | 33.3 | 3.3 | 6.6 | 0 | 0 |
| ಚಿವಟಗುಂಡಿ | 37 | 21 | 16 | 26 | 09 | 02 | 0 | 0 | 0 |
| % 100 | | 56.8 | 43.2 | 70.3 | 24.3 | 5.4 | | | |
| ಚಿಕ್ಕ ಬಾಗೇವಾಡಿ | 28 | 10.0 | 18 | 19.0 | 07 | 02 | 0 | 0 | 0 |
| % 100 | | 35.7 | 64.3 | 67.8 | 25 | 7.2 | 0 | 0 | 0 |

'ಬಿಟ್ಟಿ ಚಾಕ್ರಿ' ಮಾಡುವವರ ಶಿಕ್ಷಣ ಮಟ್ಟವನ್ನು ಗಮನಿಸಿದರೆ ಅವರಲ್ಲಿ ದೊಡ್ಡ ಸಂಖ್ಯೆಯಲ್ಲಿ ಅನಕ್ಷರರಿದ್ದಾರೆ. ಒಟ್ಟು 95 ಮಂದಿಯಲ್ಲಿ 62 ಮಂದಿ ಅಥವಾ ಶೇಕಡಾ 65. ಅಕ್ಷರಸ್ಥರೆನಿಸಿ ಕೊಂಡವರಲ್ಲೂ ಹೆಚ್ಚಿನವರು ಅಂದರೆ 26 ಮಂದಿ (27%) ಕಿರಿಯ ಪ್ರಾಥಮಿಕ ಶಿಕ್ಷಣ ಪಡೆದವರು. ಹಿರಿಯ ಪ್ರಾಥಮಿಕ ಶಿಕ್ಷಣ ಪಡೆವರು ಕೇವಲ ಐದೇ ಮಂದಿ ಮತ್ತು ಪ್ರೌಢ ಶಾಲೆಯ ಮೆಟ್ಟಲು ಹತ್ತಿದವರು ಇಬ್ಬರೇ ಇಬ್ಬರು. ಅದಕ್ಕಿಂತ ಹೆಚ್ಚಿನ ಶಿಕ್ಷಣ ಯಾರಿಗೂ ಇಲ್ಲ. ಇಡೀ ದಲಿತ ಕೇರಿಗಳ ಶಿಕ್ಷಣ ಗುಣಮಟ್ಟವನ್ನು ಗಮನಿಸಿದರೆ ಪ್ರೌಢ ಮತ್ತು ಉನ್ನತ ಶಿಕ್ಷಣದಲ್ಲಿ ಸ್ವಲ್ಪವೇ ಸ್ವಲ್ಪ ಬದಲಾವಣೆಯನ್ನು ನಾವು ಕಾಣುತ್ತೇವೆ.

**2.7 ಮೂರು ಊರುಗಳ ಒಟ್ಟಾರೆ ಕುಟುಂಬಗಳ ಸಾಮಾಜಿಕ ಆರ್ಥಿಕ ಪರಿಸ್ಥಿತಿ**

**2.7.1 ಒಟ್ಟು ಜನಸಂಖ್ಯೆ – ಲಿಂಗವಾರು, ವಯಸ್ಸುವಾರು ಶಿಕ್ಷಣ ಮತ್ತು ಕೆಲಸಗಳು** (ಕೋಷ್ಟಕಗಳು 10, 11, 12 ಕ್ರಮವಾಗಿ – ಪುಟ 43, 44–45, 46–47)

ಮೂರೂ ಊರುಗಳ ದಲಿತರ ಪರಿಸ್ಥಿತಿ ಸಾಧಾರಣವಾಗಿ ಒಂದೇ ತೆರನಾದುದು. ಸರಾಸರಿಯಾಗಿ ನಾಲ್ಕರಿಂದ ಐದು ಮಂದಿ ಇರುವ ಚಿಕ್ಕ ಕುಟುಂಬಗಳೇ ದಲಿತರ ಕುಟುಂಬಗಳು. ಅವರ ಶಿಕ್ಷಣ ಮಟ್ಟ ಅತ್ಯಂತ ನಿಕೃಷ್ಟವಾದುದು. 20–30% ಅನಕ್ಷರಸ್ಥರಾದರೆ, ಅನಕ್ಷರರೇ ಎಂದು ಪರಿಗಣಿಸಬಹುದಾದ ಕೇವಲ ಕೆಳಹಂತದ ಪ್ರಾಥಮಿಕ ಶಿಕ್ಷಣವನ್ನು ಪಡೆದವರನ್ನೂ ಲೆಕ್ಕಕ್ಕೆ ಹಿಡಿಯುವುದಾದರೆ ಅನಕ್ಷರಸ್ಥೆಯ ಪ್ರಮಾಣ 80% ಶೇಕಡಾವನ್ನು ದಾಟುತ್ತದೆ. ಜೀವನೋಪಾಯಕ್ಕೆ ಅರ್ಧಕ್ಕಿಂತಲೂ ಹೆಚ್ಚು ಮಂದಿ ದಿನಗೂಲಿಯನ್ನೇ ನಂಬಿದವರು. ಶೇಕಡಾ 30 ಮಂದಿ ವಿದ್ಯಾರ್ಥಿಗಳು.

ತಿಂಗಳ ಸಂಬಳ ಪಡೆದು ನೌಕರಿ ಮಾಡುವವರು ಕೆಲವೇ ಕೆಲವು ಮಂದಿ. ಸ್ವ ಉದ್ಯೋಗ ಮಾಡಿಕೊಂಡಿರುವವರು ಬೆರಳೆಣಿಕೆಯಷ್ಟು ಮಂದಿ ಮಾತ್ರ.

**ಕೋಷ್ಟಕ 10**

| ಜಾಲಿಕೊಪ್ಪ | | ಲಿಂಗ | | ವಯಸ್ಸು | | | | | | | | ಕೆಲಸ | | | | | | | ಅಕ್ಷರತೆ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಸ | ಜನ ಸಂಖ್ಯೆ | ಗ | ಹೆ | 0–5 | 6 – 14 | 15– 18 | 19– 25 | 26–40 | 41–60 | 61+ | ದಿನಗೂಲಿ – ಬೆಳಗಿನ ಸೇವೆ | ದಿನಗೂಲಿ | ತಿಂಗಳ ಸಂಬಳ | ಜೀತ | ಕೆಲಸ ಮಾಡುತ್ತಿಲ್ಲ | ಸ್ವ ಉದ್ಯೋಗ | ವಿದ್ಯಾರ್ಥಿ | ಮನೆಗೆಲಸ | ಅನಕ್ಷರತೆ | ಮಗು | ಅಂಗನವಾಡಿ | 1 – 5 | 6 – 8 | 9 – 10 | 11 – 12 | 13+ |
| 1 | 1 | 0 | 1 | 0 | 0 | 0 | 0 | 0 | 0 | 1 | 0 | 0 | 0 | 0 | 1 | 0 | 0 | 0 | 1 | 0 | 0 | 0 | C | 0 | 0 | 0 |
| 2 | 4 | 3 | 1 | 0 | 0 | 1 | 1 | 1 | 1 | 0 | 2 | 1 | 0 | 0 | 0 | 0 | 1 | 0 | 2 | 0 | 0 | 1 | 1 | 0 | 0 | 0 |
| 3 | 8 | 1 | 7 | 4 | 0 | 0 | 2 | 1 | 1 | 0 | 2 | 1 | 0 | 0 | 3 | 0 | 1 | 1 | 2 | 3 | 1 | 1 | 0 | 1 | 0 | 0 |
| 4 | 2 | 1 | 1 | 0 | 0 | 0 | 1 | 0 | 0 | 1 | 1 | 1 | 0 | 0 | 0 | 0 | 0 | 0 | 1 | 0 | 0 | 0 | 1 | 0 | 0 | 0 |
| 5 | 5 | 1 | 4 | 2 | 0 | 0 | 1 | 1 | 1 | 0 | 0 | 2 | 0 | 0 | 1 | 0 | 1 | 1 | 1 | 1 | 1 | 1 | 1 | 0 | 0 | 0 |
| 6 | 5 | 4 | 1 | 0 | 3 | 0 | 0 | 2 | 0 | 0 | 1 | 1 | 0 | 0 | 0 | 0 | 3 | 0 | 0 | 0 | 0 | 1 | 4 | 0 | 0 | 0 |
| 7 | 6 | 5 | 1 | 1 | 1 | 1 | 0 | 2 | 0 | 1 | 2 | 0 | 0 | 0 | 1 | 0 | 3 | 0 | 3 | 0 | 1 | 1 | 0 | 1 | 0 | 0 |
| 8 | 5 | 3 | 2 | 1 | 2 | 0 | 0 | 1 | 0 | 1 | 2 | 0 | 0 | 0 | 0 | 0 | 3 | 0 | 1 | 0 | 1 | 2 | 1 | 0 | 0 | 0 |
| 9 | 5 | 3 | 2 | 0 | 1 | 0 | 1 | 1 | 1 | 1 | 0 | 1 | 1 | 0 | 2 | 0 | 0 | 1 | 2 | 0 | 0 | 1 | 0 | 1 | 1 | 0 |
| 10 | 5 | 3 | 2 | 0 | 3 | 0 | 0 | 0 | 2 | 0 | 1 | 0 | 0 | 0 | 4 | 0 | 0 | 0 | 1 | 0 | 0 | 1 | 2 | 1 | 0 | 0 |
| 11 | 3 | 0 | 3 | 0 | 0 | 1 | 0 | 1 | 1 | 0 | 2 | 0 | 0 | 0 | 0 | 0 | 1 | 0 | 2 | 0 | 0 | 0 | 0 | 1 | 0 | 0 |
| 12 | 3 | 2 | 1 | 0 | 0 | 1 | 0 | 2 | 0 | 0 | 3 | 0 | 0 | 0 | 0 | 0 | 0 | 0 | 0 | 0 | 0 | 1 | 1 | 1 | 0 | 0 |
| 13 | 11 | 8 | 3 | 1 | 2 | 0 | 5 | 2 | 1 | 0 | 1 | 6 | 0 | 0 | 1 | 0 | 2 | 1 | 1 | 1 | 0 | 6 | 2 | 0 | 1 | 0 |
| 14 | 7 | 3 | 4 | 1 | 1 | 1 | 0 | 2 | 1 | 1 | 2 | 2 | 0 | 0 | 1 | 0 | 2 | 0 | 1 | 1 | 0 | 4 | 0 | 1 | 0 | 0 |
| 15 | 4 | 3 | 1 | 0 | 1 | 1 | 0 | 2 | 0 | 0 | 1 | 2 | 0 | 0 | 0 | 0 | 1 | 0 | 1 | 0 | 0 | 0 | 1 | 2 | 0 | 0 |
| 16 | 5 | 2 | 3 | 1 | 2 | 0 | 0 | 2 | 0 | 0 | 0 | 2 | 0 | 0 | 1 | 0 | 2 | 0 | 0 | 1 | 0 | 4 | 0 | 0 | 0 | 0 |
| 17 | 4 | 2 | 2 | 0 | 2 | 0 | 0 | 1 | 1 | 0 | 1 | 1 | 0 | 0 | 0 | 0 | 2 | 0 | 1 | 0 | 0 | 1 | 2 | 0 | 0 | 0 |
| 18 | 4 | 2 | 2 | 0 | 2 | 0 | 0 | 2 | 0 | 0 | 2 | 0 | 0 | 0 | 0 | 0 | 2 | 0 | 1 | 0 | 0 | 2 | 0 | 1 | 0 | 0 |
| 19 | 4 | 3 | 1 | 0 | 0 | 0 | 2 | 1 | 1 | 0 | 2 | 0 | 0 | 0 | 0 | 0 | 2 | 0 | 1 | 0 | 0 | 1 | 0 | 0 | 0 | 2 |
| 20 | 7 | 5 | 2 | 0 | 2 | 0 | 3 | 1 | 1 | 0 | 1 | 3 | 0 | 0 | 0 | 0 | 3 | 0 | 0 | 0 | 0 | 3 | 1 | 1 | 1 | 1 |
| 21 | 5 | 2 | 3 | 0 | 0 | 3 | 0 | 2 | 0 | 0 | 2 | 0 | 0 | 0 | 0 | 0 | 3 | 0 | 2 | 0 | 0 | 0 | 0 | 3 | 0 | 0 |
| 22 | 5 | 3 | 2 | 0 | 1 | 2 | 0 | 1 | 1 | 0 | 2 | 2 | 0 | 0 | 0 | 0 | 1 | 0 | 1 | 0 | 0 | 1 | 2 | 1 | 0 | 0 |
| ಒಟ್ಟು | 108 | 59 | 49 | 11 | 23 | 11 | 16 | 28 | 13 | 6 | 30 | 25 | 1 | 0 | 15 | 0 | 33 | 4 | 25 | 7 | 4 | 32 | 19 | 15 | 3 | 3 |
| | 108 | | 108 | | | | | | | 108 | | | | | | | | 108 | | | | | | | | 108 |

**ಕೋಷ್ಟಕ 11**

| ಚಿವಟಗುಂಡಿ | | ಲಿಂಗ | | ವಯಸ್ಸು | | | | | | | ಕೆಲಸ | | | | | | | | ಅಕ್ಷರತೆ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಸ | ಜನ ಸಂಖ್ಯೆ | ಗ | ಹೆ | 0 – 5 | 6 – 14 | 15–18 | 19–25 | 26–40 | 41–60 | 61+ | ದಿನಗೂಲಿ – ಬೆಳಗಿನ ಸೇವೆ | ದಿನಗೂಲಿ | ತಿಂಗಳ ಸಂಬಳ | ಜೀತ | ಕೆಲಸ ಮಾಡುತ್ತಿಲ್ಲ | ಸ್ವ ಉದ್ಯೋಗ | ವಿದ್ಯಾರ್ಥಿ | ಮನೆಗೆಲಸ | ಅನಕ್ಷರತೆ | ಮಗು | ಅಂಗನವಾಡಿ | 1 – 5 | 6 – 8 | 9 – 10 | 11 – 12 | 13+ |
| 1 | 4 | 2 | 2 | 1 | 0 | 0 | 2 | 0 | 1 | 0 | 2 | 0 | 0 | 0 | 1 | 0 | 0 | 1 | 1 | 1 | | 1 | 1 | 0 | 0 | 0 |
| 2 | 6 | 2 | 4 | 0 | 0 | 2 | 0 | 2 | 2 | 0 | 1 | 2 | 0 | 0 | 0 | 0 | 2 | 1 | 2 | 0 | 0 | 2 | 0 | 1 | 1 | 0 |
| 3 | 5 | 2 | 3 | 1 | 1 | 0 | 0 | 2 | 1 | 0 | 3 | 0 | 0 | 0 | 1 | 0 | 1 | 0 | 2 | 1 | 1 | 1 | 0 | 0 | 0 | 0 |
| 4 | 3 | 2 | 1 | 0 | 0 | 1 | 0 | 1 | 1 | 0 | 0 | 3 | 0 | 0 | 0 | 0 | 0 | 0 | 2 | 0 | 0 | 1 | 0 | 0 | 0 | 0 |
| 5 | 4 | 2 | 2 | 0 | 0 | 1 | 1 | 2 | 0 | 0 | 1 | 1 | 0 | 0 | 1 | 0 | 1 | 0 | 2 | 0 | 0 | 0 | 0 | 1 | 1 | 0 |
| 6 | 4 | 3 | 1 | 0 | 0 | 0 | 0 | 2 | 2 | 0 | 0 | 3 | 0 | 1 | 0 | 0 | 0 | 0 | 2 | 0 | 0 | 1 | 1 | 0 | 0 | 0 |
| 7 | 5 | 3 | 2 | 0 | 0 | 1 | 2 | 2 | 0 | 0 | 0 | 2 | 0 | 2 | 0 | 0 | 1 | 0 | 3 | 0 | 0 | 0 | 2 | 0 | 0 | 0 |
| 8 | 2 | 1 | 1 | 0 | 0 | 0 | 0 | 0 | 2 | 0 | 2 | 0 | 0 | 0 | 0 | 0 | 0 | 0 | 2 | 0 | 0 | 0 | 0 | 0 | 0 | 0 |
| 9 | 5 | 4 | 1 | 0 | 1 | 2 | 0 | 1 | 1 | 0 | 1 | 2 | 0 | 0 | 0 | 0 | 2 | 0 | 1 | 0 | 1 | 0 | 1 | 2 | 0 | 0 |
| 10 | 7 | 4 | 3 | 1 | 2 | 0 | 0 | 2 | 1 | 1 | 0 | 3 | 0 | 0 | 1 | 0 | 3 | 0 | 2 | 0 | 1 | 3 | 1 | 0 | 0 | 0 |
| 11 | 4 | 3 | 1 | 0 | 0 | 1 | 1 | 1 | 1 | 0 | 1 | 2 | 0 | 1 | 0 | 0 | 0 | 0 | 4 | 0 | 0 | 0 | 0 | 0 | 0 | 0 |
| 12 | 4 | 3 | 1 | 0 | 0 | 2 | 1 | 1 | 0 | 0 | 1 | 1 | 1 | 0 | 0 | 1 | 0 | 0 | 1 | 0 | 0 | 0 | 3 | 0 | 0 | 0 |
| 13 | 4 | 2 | 2 | 1 | 0 | 0 | 0 | 2 | 1 | 0 | 0 | 2 | 0 | 0 | 1 | 0 | 0 | 1 | 2 | 1 | 0 | 1 | 0 | 0 | 0 | 0 |
| 14 | 4 | 2 | 2 | 0 | 2 | 0 | 0 | 1 | 1 | 0 | 0 | 2 | 0 | 0 | 0 | 0 | 2 | 0 | 1 | 0 | 0 | 1 | 2 | 0 | 0 | 0 |
| 15 | 4 | 2 | 2 | 2 | 0 | 0 | 1 | 1 | 0 | 0 | 0 | 2 | 0 | 0 | 2 | 0 | 0 | 0 | 0 | 2 | 0 | 2 | 0 | 0 | 0 | 0 |
| 16 | 2 | 1 | 1 | 0 | 0 | 0 | 0 | 0 | 1 | 1 | 2 | 0 | 0 | 0 | 0 | 0 | 0 | 0 | 2 | 0 | 0 | 0 | 0 | 0 | 0 | 0 |
| 17 | 6 | 3 | 3 | 1 | 2 | 0 | 0 | 2 | 0 | 1 | 2 | 0 | 0 | 0 | 3 | 0 | 1 | 0 | 2 | 2 | 0 | 2 | 0 | 0 | 0 | 0 |
| 18 | 6 | 4 | 2 | 2 | 0 | 1 | 0 | 2 | 0 | 1 | 3 | 1 | 0 | 0 | 2 | 0 | 0 | 0 | 2 | 2 | 0 | 1 | 1 | 0 | 0 | 0 |
| 19 | 5 | 2 | 3 | 1 | 2 | 0 | 0 | 2 | 0 | 0 | 0 | 2 | 0 | 0 | 1 | 0 | 2 | 0 | 2 | 1 | 0 | 2 | 0 | 0 | 0 | 0 |
| 20 | 6 | 2 | 4 | 0 | 2 | 0 | 0 | 1 | 2 | 1 | 2 | 1 | 0 | 0 | 1 | 0 | 2 | 0 | 4 | 0 | 0 | 0 | 2 | 0 | 0 | 0 |
| 21 | 4 | 2 | 2 | 0 | 2 | 0 | 0 | 2 | 0 | 0 | 0 | 2 | 0 | 0 | 0 | 0 | 2 | 0 | 0 | 0 | 0 | 1 | 2 | 1 | 0 | 0 |
| 22 | 5 | 2 | 3 | 0 | 1 | 0 | 0 | 2 | 2 | 0 | 0 | 0 | 2 | 0 | 1 | 0 | 0 | 2 | 2 | 0 | 0 | 0 | 0 | 1 | 2 | 0 |
| 23 | 2 | 1 | 1 | 0 | 0 | 0 | 0 | 2 | 0 | 0 | 1 | 1 | 0 | 0 | 0 | 0 | 0 | 0 | 2 | 0 | 0 | 0 | 0 | 0 | 0 | 0 |
| 24 | 2 | 1 | 1 | 1 | 0 | 0 | 1 | 0 | 0 | 0 | 0 | 0 | 0 | 0 | 1 | 1 | 0 | 0 | 0 | 1 | 0 | 0 | 0 | 1 | 0 | 0 |
| 25 | 4 | 2 | 2 | 0 | 0 | 1 | 1 | 1 | 1 | 0 | 2 | 0 | 0 | 0 | 0 | 0 | 1 | 1 | 1 | 0 | 0 | 1 | 1 | 0 | 1 | 0 |
| 26 | 4 | 2 | 2 | 1 | 1 | 0 | 0 | 2 | 0 | 0 | 2 | 0 | 0 | 0 | 1 | 0 | 1 | 0 | 2 | 0 | 1 | 0 | 1 | 0 | 0 | 0 |
| 27 | 4 | 1 | 3 | 0 | 0 | 2 | 0 | 1 | 1 | 0 | 0 | 2 | 0 | 0 | 0 | 0 | 2 | 0 | 2 | 0 | 0 | 0 | 0 | 1 | 1 | 0 |
| 28 | 5 | 2 | 3 | 1 | 0 | 0 | 2 | 1 | 1 | 0 | 1 | 3 | 0 | 0 | 1 | 0 | 0 | 0 | 2 | 1 | 0 | 1 | 0 | 1 | 0 | 0 |

| ಚಿವಟಗುಂಡಿ | | ಲಿಂಗ | | ವಯಸ್ಸು | | | | | | | ಕೆಲಸ | | | | | | | | ಅಕ್ಷರತೆ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಸ | ಜನ ಸಂಖ್ಯೆ | ಗ | ಹೆ | 0 – 5 | 6 – 14 | 15–18 | 19–25 | 26–40 | 41–60 | 61+ | ದಿನಗೂಲಿ – ಬೆಳಗಿನ ಸೇವೆ | ದಿನಗೂಲಿ | ತಿಂಗಳ ಸಂಬಳ | ಜೀತ | ಕೆಲಸ ಮಾಡುತ್ತಿಲ್ಲ | ಸ್ವ ಉದ್ಯೋಗ | ವಿದ್ಯಾರ್ಥಿ | ಮನೆಗೆಲಸ | ಅನಕ್ಷರತೆ | ಮಗು | ಅಂಗನವಾಡಿ | 1 – 5 | 6 – 8 | 9 – 10 | 11 – 12 | 13+ |
| 29 | 8 | 3 | 5 | 2 | 1 | 0 | 0 | 3 | 2 | 0 | 2 | 3 | 0 | 0 | 2 | 0 | 1 | 0 | 1 | 2 | 0 | 4 | 1 | 0 | 0 | 0 |
| 30 | 3 | 1 | 2 | 0 | 0 | 0 | 2 | 0 | 1 | 0 | 0 | 3 | 0 | 0 | 0 | 0 | 0 | 0 | 3 | 0 | 0 | 0 | 0 | 0 | 0 | 0 |
| 31 | 5 | 2 | 3 | 0 | 1 | 0 | 1 | 1 | 1 | 1 | 4 | 0 | 0 | 0 | 0 | 0 | 1 | 0 | 4 | 0 | 0 | 1 | 0 | 0 | 0 | 0 |
| 32 | 4 | 2 | 2 | 0 | 2 | 0 | 1 | 1 | 0 | 0 | 1 | 0 | 0 | 1 | 0 | 0 | 2 | 0 | 2 | 0 | 0 | 1 | 1 | 0 | 0 | 0 |
| 33 | 5 | 3 | 2 | 0 | 0 | 1 | 2 | 0 | 2 | 0 | 0 | 3 | 0 | 0 | 1 | 0 | 0 | 1 | 1 | 0 | 0 | 1 | 1 | 2 | 0 | 0 |
| 34 | 5 | 3 | 2 | 0 | 0 | 0 | 3 | 1 | 1 | 0 | 0 | 2 | 2 | 0 | 0 | 0 | 0 | 1 | 0 | 0 | 0 | 1 | 1 | 2 | 1 | 0 |
| 35 | 3 | 2 | 1 | 0 | 0 | 0 | 1 | 0 | 2 | 0 | 1 | 2 | 0 | 0 | 0 | 0 | 0 | 0 | 3 | 0 | 0 | 0 | 0 | 0 | 0 | 0 |
| 36 | 4 | 1 | 3 | 0 | 0 | 1 | 1 | 1 | 1 | 0 | 1 | 0 | 0 | 1 | 0 | 0 | 1 | 1 | 0 | 0 | 0 | 1 | 1 | 1 | 1 | 0 |
| 37 | 4 | 3 | 1 | 0 | 1 | 0 | 1 | 1 | 0 | 1 | 1 | 2 | 0 | 0 | 0 | 0 | 1 | 0 | 2 | 0 | 0 | 2 | 0 | 0 | 0 | 0 |
| 38 | 5 | 4 | 1 | 0 | 2 | 1 | 0 | 2 | 0 | 0 | 0 | 3 | 0 | 0 | 1 | 0 | 1 | 0 | 2 | 0 | 0 | 1 | 2 | 0 | 0 | 0 |
| 39 | 5 | 3 | 2 | 1 | 2 | 0 | 0 | 2 | 0 | 0 | 0 | 2 | 0 | 0 | 0 | 2 | 1 | 0 | 2 | 0 | 1 | 1 | 1 | 0 | 0 | 0 |
| 40 | 2 | 1 | 1 | 0 | 0 | 0 | 0 | 0 | 2 | 0 | 0 | 1 | 0 | 1 | 0 | 0 | 0 | 0 | 1 | 0 | 0 | 1 | 0 | 0 | 0 | 0 |
| 41 | 5 | 3 | 2 | 0 | 2 | 0 | 0 | 2 | 0 | 1 | 0 | 0 | 1 | 0 | 2 | 0 | 1 | 1 | 1 | 0 | 1 | 1 | 1 | 1 | 0 | 0 |
| 42 | 10 | 6 | 4 | 4 | 0 | 0 | 2 | 3 | 1 | 0 | 0 | 2 | 2 | 0 | 2 | 0 | 2 | 2 | 2 | 2 | 2 | 0 | 2 | 1 | 1 | 0 |
| ಒಟ್ಟು | 188 | 99 | 89 | 20 | 27 | 17 | 26 | 55 | 35 | 8 | 37 | 60 | 8 | 7 | 26 | 4 | 34 | 12 | 74 | 16 | 8 | 36 | 29 | 16 | 9 | 0 |
| | 188 | | 188 | | | | | | | 188 | | | | | | | | 188 | | | | | | | | 188 |

ಕೋಷ್ಟಕ 12

| ಚಿಕ್ಕ ಬಾಗೇವಾಡಿ | | ಲಿಂಗ | | ವಯಸ್ಸು | | | | | | | ಕೆಲಸ | | | | | | | | ಅಕ್ಷರತೆ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಸ | ಜನ ಸಂಖ್ಯೆ | ಗ | ಹೆ | 0–5 | 6 – 14 | 15–18 | 19–25 | 26–40 | 41–60 | 61+ | ದಿನ ಗೂಲಿ –ಬೆಳಗಿನ ಸೇವೆ | ದಿನ ಗೂಲಿ | ತಿಂಗಳ ಸಂಬಳ | ಜೀತ | ಕೆಲಸ ಮಾಡುತ್ತಿಲ್ಲ | ಸ್ವ ಉದ್ಯೋಗ | ವಿದ್ಯಾರ್ಥಿ | ಮನೆ ಗೆಲಸ | ಅನಕ್ಷರತೆ | ಮಗು | ಅಂಗನ ವಾಡಿ | 1 – 5 | 6 – 8 | 9 – 10 | 11 – 12 | 13+ |
| 1 | 2 | 1 | 1 | 0 | 0 | 0 | 1 | 1 | 0 | 0 | 2 | 0 | 0 | 0 | 0 | 0 | 0 | 0 | 2 | 0 | 0 | 0 | 0 | 0 | 0 | 0 |
| 2 | 4 | 2 | 2 | 0 | 1 | 0 | 1 | 2 | 0 | 0 | 1 | 2 | 0 | 0 | 0 | 0 | 1 | | 2 | | | 0 | 0 | 2 | 0 | 0 |
| 3 | 4 | 3 | 1 | 0 | | 0 | 3 | 1 | | 0 | 1 | 3 | | | | | | | 1 | | | | 2 | | | 1 |
| 4 | 5 | 3 | 2 | 0 | 2 | 1 | | 2 | | 0 | | 2 | | | | | 3 | | 1 | | | 1 | 2 | 1 | | |
| 5 | 6 | 4 | 2 | 2 | 0 | 0 | 2 | 2 | | 0 | | 4 | | | 1 | | 1 | | | 1 | 1 | 2 | | 1 | | 1 |
| 6 | 5 | 3 | 2 | | | 1 | 1 | 2 | | 1 | | 1 | 1 | | | | 2 | 1 | 1 | 0 | 0 | 0 | | 1 | 2 | 1 |
| 7 | 1 | | 1 | | | | | | | 1 | 1 | | | | | | | | 1 | | | | | | | |
| 8 | 4 | 2 | 2 | | 1 | 1 | 1 | 1 | | 0 | | 3 | | | | | | 1 | 1 | | | | 1 | 1 | 1 | |
| 9 | 2 | | 2 | | | 1 | | 1 | | 0 | 1 | | | | | | 1 | | | | | 1 | 1 | | | |
| 10 | 2 | 1 | 1 | | 1 | | | 1 | | 0 | | 1 | | | | | 1 | | 1 | | | 1 | | | | |
| 11 | 5 | 2 | 3 | | 2 | 1 | | 2 | | 0 | 1 | 2 | | | | | 2 | | 1 | | | 2 | 1 | 1 | | |
| 12 | 4 | 3 | 1 | | | 2 | | 2 | | | 2 | 2 | | | | | | | 2 | | | | 1 | 1 | | |
| 13 | 4 | 2 | 2 | | 2 | | 1 | 1 | | | 2 | | | | | | 2 | | | | | 3 | 1 | | | |
| 14 | 4 | 3 | 1 | | | 2 | | 1 | 1 | | | 2 | | | | | 2 | | 1 | | | | 1 | 1 | 1 | |
| 15 | 4 | 3 | 1 | | | | 1 | 1 | 2 | | 2 | 1 | | | | | 1 | | | | | 3 | | | | 1 |
| 16 | 2 | 1 | 1 | | | | | 1 | 1 | | | 1 | 1 | | | | | | 1 | | | | | | | 1 |
| 17 | 2 | 1 | 1 | | | | | | 2 | | 2 | | | | | | | | 2 | | | | | | | |
| 18 | 4 | 3 | 1 | | | 1 | 1 | 2 | | | | 2 | 1 | | 1 | | | | | | | 2 | 1 | | | 1 |
| 19 | 3 | 2 | 1 | | | 1 | | | 2 | | 2 | | | | | | 1 | | 2 | | | | 1 | | | |
| 20 | 5 | 3 | 2 | 1 | 2 | | | 2 | | | 1 | 1 | | | 1 | | 2 | | | 1 | | 3 | | 1 | | |

| ಚಿಕ್ಕ ಬಾಗೇವಾಡಿ | | ಲಿಂಗ | | ವಯಸ್ಸು | | | | | | | ಕೆಲಸ | | | | | | | | ಅಕ್ಷರತೆ | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಸ | ಜನ ಸಂಖ್ಯೆ | ಗ | ಹೆ | 0–5 | 6 – 14 | 15–18 | 19–25 | 26–40 | 41–60 | 61+ | ದಿನ ಗೂಲಿ –ಬೆಳಗಿನ ಸೇವೆ | ದಿನ ಗೂಲಿ | ತಿಂಗಳ ಸಂಬಳ | ಜೀತ | ಕೆಲಸ ಮಾಡುತ್ತಿಲ್ಲ | ಸ್ವ ಉದ್ಯೋಗ | ವಿದ್ಯಾರ್ಥಿ | ಮನೆ ಗೆಲಸ | ಅನಕ್ಷರತೆ | ಮಗು | ಅಂಗನ ವಾಡಿ | 1 – 5 | 6 – 8 | 9 – 10 | 11 – 12 | 13+ |
| 21 | 6 | 2 | 4 | 1 | 1 | | | 2 | 2 | | 2 | | 2 | | 1 | | 1 | | 1 | 1 | | 2 | | | | 2 |
| 22 | 2 | 1 | 1 | | | | 1 | | 1 | | | 2 | | | | | | | 2 | | | | | | | |
| 23 | 4 | 3 | 1 | | | | 2 | | 2 | | | 2 | | | | | 1 | 1 | 1 | | | 2 | | | | 1 |
| 24 | 6 | 3 | 3 | | 1 | 2 | | 2 | 1 | | | 2 | | | 1 | 1 | 2 | | 3 | | | | 1 | 2 | | |
| 25 | 4 | 1 | 3 | | 2 | | | 2 | | | | 3 | | | | | 1 | | 1 | | 1 | | 2 | | | |
| 26 | 1 | | 1 | | | | | | 1 | | 1 | | | | | | | | 1 | | | | | | | |
| 27 | 2 | 1 | 1 | | | | | 2 | | | | 2 | | | | | | | | | | 2 | | | | |
| 28 | 4 | 2 | 2 | 2 | | | 2 | | | | 2 | | | | 2 | | | | 2 | 2 | | | | | | |
| 29 | 4 | 2 | 2 | | | 1 | 1 | | 1 | 1 | 1 | 1 | | | | | 2 | | 2 | | | | | 1 | 1 | |
| 30 | 7 | 2 | 5 | | 1 | 3 | | 1 | 1 | 1 | 1 | 1 | 1 | | | | 3 | 1 | 3 | | | 2 | | 1 | 1 | |
| 31 | 5 | 2 | 3 | | 2 | 1 | | 2 | | | 2 | | | | | | 3 | | 2 | | | 1 | 1 | | 1 | |
| 32 | 8 | 2 | 6 | 2 | 2 | | | 2 | 1 | 1 | | | 1 | | 2 | | 3 | 2 | 2 | 1 | 2 | 1 | | 1 | 1 | |
| 33 | 4 | 2 | 2 | | | 1 | 1 | 2 | | | 1 | 3 | | | | | | | 1 | | | | | 3 | | |
| 34 | 1 | | 1 | | | | | | 1 | | | 1 | | | | | | | 1 | | | | | | | |
| ಒಟ್ಟು | 130 | 65 | 65 | 8 | 20 | 19 | 19 | 40 | 19 | 5 | 28 | 44 | 7 | 0 | 9 | 1 | 35 | 6 | 41 | 6 | 4 | 28 | 16 | 18 | 8 | 9 |
| | | | 130 | | | | | | | 130 | | | | | | | | 130 | | | | | | | | 130 |

**ಚಾಲಿಕೊಪ್ಪದ** 22 ಮನೆಗಳಲ್ಲಿ 108 ಮಂದಿಯಿದ್ದು ಅವರಲ್ಲಿ 59 ಮಂದಿ ಗಂಡಸರು ಮತ್ತು 49 ಮಂದಿ ಹೆಂಗಸರು. ಅವರಲ್ಲಿ 45 ಮಂದಿ 18 ವರ್ಷ ಕೆಳಗಿನವರು (11 ಮಂದಿ 5 ವರ್ಷ ಕೆಳಗಿವರು, 23 ಮಂದಿ ಆರರಿಂದ 14 ವರ್ಷ ವರೆಗಿನವರು, 11 ಮಂದಿ 15ರಿಂದ 18 ವರ್ಷ ವರೆಗಿನವರು), 57 ಮಂದಿ 19ರಿಂದ 60 ವರ್ಷ ವರೆಗಿನವರು (16 ಮಂದಿ 19ರಿಂದ 25 ವರ್ಷ ವರೆಗೆ, 28 ಮಂದಿ 26ರಿಂದ 40 ವರ್ಷ ವರೆಗೆ, 13ಮಂದಿ 41ರಿಂದ 60 ವರ್ಷ ವರೆಗೆ), ಮತ್ತು ಕೇವಲ ಆರು ಮಂದಿ ಆರು ವರ್ಷ ಮೇಲ್ಪಟ್ಟವರು.

108 ಮಂದಿಯ ಶಿಕ್ಷಣ ಮಟ್ಟವನ್ನು ಗಮನಿಸಿದರೆ ಅವರಲ್ಲಿ 32 ಮಂದಿ ಅನಕ್ಷರಸ್ಥರು (ಇವರಲ್ಲಿ 7 ಮಂದಿ ಅಂಗನವಾಡಿಗೆ ಹೋಗದ 6 ವರ್ಷ ಕೆಳಗಿನ ಮಕ್ಕಳೂ ಸೇರಿದ್ದಾರೆ), 55 ಮಂದಿ ಪ್ರಾಥಮಿಕ ಶಿಕ್ಷಣ ಪಡೆದವರು (ಇವರಲ್ಲಿ ಅಂಗನವಾಡಿಗೆ ಹೋಗುವ ನಾಲ್ಕು ಮಂದಿಯೂ ಸೇರಿಕೊಳ್ಳುತ್ತಾರೆ) ಮತ್ತು 18 ಮಂದಿ ಪ್ರೌಢ ಶಾಲೆ ಓದಿದವರು (ಇವರಲ್ಲಿ ಕೇವಲ ಮೂರು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು). ಇನ್ನೊಂದು ಮೂರು ಮಂದಿ ಮಾತ್ರ ಪದವಿ ಪೂರ್ವ ಶಿಕ್ಷಣದ ನಂತರ ಸ್ವಲ್ಪ ಉನ್ನತ ಶಿಕ್ಷಣ ಪಡೆದವರು.

**ಚಿವಟಗುಂಡಿಯ** 42 ಮನೆಗಳಲ್ಲಿ 188 ಮಂದಿಯಿದ್ದು ಅವರಲ್ಲಿ 99 ಮಂದಿ ಗಂಡಸರು ಮತ್ತು 89 ಮಂದಿ ಹೆಂಗಸರು. ಅವರಲ್ಲಿ 64 ಮಂದಿ 18 ವರ್ಷ ಕೆಳಗಿನವರು (20 ಮಂದಿ 5 ವರ್ಷ ಕೆಳಗಿವರು, 27 ಮಂದಿ ಆರರಿಂದ 14 ವರ್ಷ ವರೆಗಿನವರು, 17 ಮಂದಿ 15ರಿಂದ 18 ವರ್ಷ ವರೆಗಿನವರು), 116 ಮಂದಿ 19ರಿಂದ 60 ವರ್ಷ ವರೆಗಿನವರು (26 ಮಂದಿ 19ರಿಂದ 25 ವರ್ಷ ವರೆಗೆ, 55 ಮಂದಿ 26ರಿಂದ 40 ವರ್ಷ ವರೆಗೆ, 35 ಮಂದಿ 41ರಿಂದ 60 ವರ್ಷ ವರೆಗೆ), ಮತ್ತು ಕೇವಲ 8 ಮಂದಿ 60 ವರ್ಷ ಮೇಲ್ಪಟ್ಟವರು.

188 ಮಂದಿಯ ಶಿಕ್ಷಣ ಮಟ್ಟವನ್ನು ಗಮನಿಸಿದರೆ 90 ಮಂದಿ ಅನಕ್ಷರಸ್ಥರು (ಇವರಲ್ಲಿ 16 ಮಂದಿ ಅಂಗನವಾಡಿಗೆ ಹೋಗದ 6 ವರ್ಷ ಕೆಳಗಿನ ಮಕ್ಕಳೂ ಸೇರಿದ್ದಾರೆ), 73 ಮಂದಿ ಪ್ರಾಥಮಿಕ ಶಿಕ್ಷಣ ಪಡೆದವರು (ಇವರಲ್ಲಿ ಅಂಗನವಾಡಿಗೆ ಹೋಗುವ ಎಂಟು ಮಂದಿಯೂ ಸೇರಿಕೊಳ್ಳುತ್ತಾರೆ) ಮತ್ತು 25 ಮಂದಿ ಪ್ರೌಢ ಶಾಲೆ ಓದಿದವರು (ಇವರಲ್ಲಿ ಒಂಭತ್ತು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು). ಪದವಿ ಪೂರ್ವ ಶಿಕ್ಷಣದ ನಂತರ ಸ್ವಲ್ಪ ಉನ್ನತ ಶಿಕ್ಷಣ ಪಡೆದವರು ಒಬ್ಬರೂ ಇಲ್ಲ.

**ಚಿಕ್ಕ ಬಾಗೇವಾಡಿಯ 34** ಮನೆಗಳಲ್ಲಿ 138 ಮಂದಿಯಿದ್ದು ಅವರಲ್ಲಿ 65 ಮಂದಿ ಗಂಡಸರು ಮತ್ತು 65 ಮಂದಿ ಹೆಂಗಸರು. ಅವರಲ್ಲಿ 47 ಮಂದಿ 18 ವರ್ಷ ಕೆಳಗಿನವರು (8 ಮಂದಿ 5 ವರ್ಷ

ಕೆಳಗಿವರು, 20 ಮಂದಿ ಆರರಿಂದ 14 ವರ್ಷ ವರೆಗಿನವರು, 19 ಮಂದಿ 15ರಿಂದ 18 ವರ್ಷ ವರೆಗಿನವರು), 78 ಮಂದಿ 19ರಿಂದ 60 ವರ್ಷ ವರೆಗಿನವರು (19 ಮಂದಿ 19ರಿಂದ 25 ವರ್ಷ ವರೆಗೆ, 40 ಮಂದಿ 26ರಿಂದ 40 ವರ್ಷ ವರೆಗೆ, 19 ಮಂದಿ 41ರಿಂದ 60 ವರೆಗೆ), ಮತ್ತು ಕೇವಲ ಐದು ಮಂದಿ 60 ವರ್ಷ ಮೇಲ್ಪಟ್ಟವರು.

130 ಮಂದಿಯ ಶಿಕ್ಷಣ ಮಟ್ಟವನ್ನು ಗಮನಿಸಿದರೆ 47 ಮಂದಿ ಅನಕ್ಷರಸ್ಥರು (ಇವರಲ್ಲಿ ಆರು ಮಂದಿ ಅಂಗನವಾಡಿಗೆ ಹೋಗದ ಆರು ವರ್ಷ ಕೆಳಗಿನ ಮಕ್ಕಳೂ ಸೇರಿದ್ದಾರೆ), 48 ಮಂದಿ ಪ್ರಾಥಮಿಕ ಶಿಕ್ಷಣ ಪಡೆದವರು (ಇವರಲ್ಲಿ ಅಂಗನವಾಡಿಗೆ ಹೋಗುವ ನಾಲ್ಕು ಮಂದಿಯೂ ಸೇರಿಕೊಳ್ಳುತ್ತಾರೆ) ಮತ್ತು 26 ಮಂದಿ ಪ್ರೌಢ ಶಾಲೆ ಓದಿದವರು (ಇವರಲ್ಲಿ ಎಂಟು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು). ಪದವಿ ಪೂರ್ವ ಶಿಕ್ಷಣದ ನಂತರ ಪದವಿ ಮತ್ತಿತರ ಉನ್ನತ ಶಿಕ್ಷಣ ಪಡೆದವರು ಒಂಬತ್ತು ಮಂದಿ.

ಚಿಕ್ಕ ಬಾಗೇವಾಡಿ ಒಂದು ಊರನ್ನು ಬಿಟ್ಟರೆ ಒಟ್ಟಾರೆಯಾಗಿ ಶಿಕ್ಷಣದ ಮಟ್ಟ ಬಹಳ ಕಡಿಮೆ ಎನಿಸಿದರೂ ವಯಸ್ಸು ಮತ್ತು ವಿದ್ಯಾರ್ಥಿಗಳ ಸಂಖ್ಯೆಯನ್ನು ಗಮನಿಸಿದರೆ ಸ್ವಲ್ಪ ಮಟ್ಟಿಗಿನ ಒಂದು ಉತ್ತೇಜನಕಾರಿ ಅಂಶ ಗಮನಕ್ಕೆ ಬರುತ್ತದೆ. 6ರಿಂದ 14 ವರ್ಷ ಮತ್ತು 15ರಿಂದ 18 ವರ್ಷ ವಯಸ್ಸಿನವರ ಸಂಖ್ಯೆಗೂ ವಿದ್ಯಾರ್ಥಿಗಳಾಗಿರುವವರ ಸಂಖ್ಯೆಗೂ ತಾಳೆಯಾಗುತ್ತದೆ. ಜಾಲಿಕೊಪ್ಪದಲ್ಲಿ ಆ ವಯಸ್ಸಿನವರ ಸಂಖ್ಯೆ ಕ್ರಮವಾಗಿ 23 ಮತ್ತು 11 ಆದರೆ ವಿದ್ಯಾರ್ಥಿಗಳ ಸಂಖ್ಯೆ 33 ಇದೆ. ಚಿವಟಗುಂಡಿಯಲ್ಲಿ ಆ ಸಂಖ್ಯೆಗಳು ಕ್ರಮವಾಗಿ 27 – 17 ಮತ್ತು 34; ಚಿಕ್ಕ ಬಾಗೇವಾಡಿಯಲ್ಲಿ 20– 19 ಮತ್ತು 35.

ಪದವಿಪೂರ್ವ ಶಿಕ್ಷಣವನ್ನೊಳಗೊಂಡಂತೆ ಪ್ರೌಢ ಶಿಕ್ಷಣ ಪಡೆದವರು ಜಾಲಿಕೊಪ್ಪದಲ್ಲಿ 18 ಮಂದಿ (ಇವರಲ್ಲಿ ಮೂರು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು), ಚಿವಟಗುಂಡಿಯಲ್ಲಿ 25 ಮಂದಿ (ಇವರಲ್ಲಿ ಒಂಭತ್ತು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು) ಮತ್ತು ಚಿಕ್ಕಬಾಗೇವಾಡಿಯಲ್ಲಿ 26 ಮಂದಿ (ಇವರಲ್ಲಿ ಎಂಟು ಮಂದಿ ಪದವಿ ಪೂರ್ವ ಶಿಕ್ಷಣ ಪಡೆದವರು). ಚಿವಟಗುಂಡಿಯಲ್ಲಿ ಪದವಿಪೂರ್ವ ಶಿಕ್ಷಣದ ನಂತರ ಯಾವುದೇ ಉನ್ನತ ಶಿಕ್ಷಣ ಪಡೆದವರು ಒಬ್ಬರೂ ಇಲ್ಲ. ಜಾಲಿಕೊಪ್ಪದಲ್ಲಿ ಸ್ವಲ್ಪ ಮಟ್ಟಿಗಿನ ಉನ್ನತ ಶಿಕ್ಷಣ ಪಡೆದವರು ಮೂರು ಮಂದಿ ಇದ್ದರೆ ಚಿಕ್ಕ ಬಾಗೇವಾಡಿಯಲ್ಲಿ ಸ್ನಾತಕ ಪದವಿ ಪಡೆದವರು ಒಂಭತ್ತು ಮಂದಿ ಇದ್ದಾರೆ.

**2.7.2 ವಿವಿಧ ಕೆಲಸ ಮಾಡುವವರು**

ಮೂರು ಊರುಗಳ ಕೆಲಸಗಳಲ್ಲಿ ಅಷ್ಟೊಂದು ವೈವಿಧ್ಯವಿಲ್ಲ. 'ಬಿಟ್ಟಿಚಾಕ್ರಿ' ಜತೆ ದಿನಗೂಲಿ, 'ಬಿಟ್ಟಿ ಚಾಕ್ರಿ' ಇಲ್ಲದೇ ದಿನಗೂಲಿ, ವಾರ್ಷಿಕ ಸಂಬಳ (ಜೀತ), ಇವೇ ಹೆಚ್ಚಿನವರು ಮಾಡುವ ಕೆಲಸಗಳು. ಕೆಲವೇ ಕೆಲವು ಮಂದಿ ಸರ್ಕಾರಿ ಅಥವಾ ಖಾಸಗಿ ನೌಕರಿಯಲ್ಲಿರುವವರು, ಅದು ಕೂಡಾ ಬಹಳ ಕೆಳಮಟ್ಟದ ಕೆಲಸದಲ್ಲಿರುವವರು ಹಾಗೂ ಸ್ವ ಉದ್ಯೋಗ ಮತ್ತು ಮನೆಗೆಲಸ ಮಾಡುವವರಾಗಿದ್ದಾರೆ.

ಕೆಲಸಗಳ ಆಧಾರದಲ್ಲಿ ಜಾಲಿಕೊಪ್ಪದ 108 ಮಂದಿಯನ್ನು ನೋಡಿದರೆ 15 ಮಂದಿ ಯಾವುದೇ ಕೆಲಸ ಮಾಡುತ್ತಿಲ್ಲ (ಇವರಲ್ಲಿ ಅಂಗನವಾಡಿಗೆ ಹೋಗದ ನಾಲ್ಕು ಮಕ್ಕಳೂ ಸೇರಿದ್ದಾರೆ), 33 ಮಂದಿ ವಿದ್ಯಾರ್ಥಿಗಳು, ಮನೆಗೆಲಸ ಮಾಡುವವರು ನಾಲ್ಕು ಮಂದಿ, 55 ಮಂದಿ ದಿನಗೂಲಿ ಮಾಡುವವರು (ಇವರಲ್ಲಿ 30 ಮಂದಿ 'ಬಿಟ್ಟಿ ಚಾಕ್ರಿ' ಮಾಡುವವರೂ ಸೇರಿದ್ದಾರೆ). ತಿಂಗಳ ಸಂಬಳ ಲೆಕ್ಕದಲ್ಲಿ ಕೆಲಸ ಮಾಡುವವರು ಕೇವಲ ಒಬ್ಬರೇ ಒಬ್ಬರು. ಒಬ್ಬರೂ ಯಾವುದೇ ಸ್ವ ಉದ್ಯೋಗ ಮಾಡುತ್ತಿಲ್ಲ.

ಕೆಲಸಗಳ ಆಧಾರದಲ್ಲಿ ಚಿವಟಗುಂಡಿಯ 188 ಮಂದಿಯನ್ನು ನೋಡಿದರೆ 26 ಮಂದಿ ಯಾವುದೇ ಕೆಲಸ ಮಾಡುತ್ತಿಲ್ಲ (ಇವರಲ್ಲಿ ಅಂಗನವಾಡಿಗೆ ಹೋಗದ 16 ಮಕ್ಕಳೂ ಸೇರಿದ್ದಾರೆ), 34 ಮಂದಿ ವಿದ್ಯಾರ್ಥಿಗಳು, ಮನೆಗೆಲಸ ಮಾಡುವವರು 12 ಮಂದಿ, 97 ಮಂದಿ ದಿನಗೂಲಿ ಮಾಡುವವರು (ಇವರಲ್ಲಿ 37 ಮಂದಿ 'ಬಿಟ್ಟಿ ಚಾಕ್ರಿ' ಮಾಡುವವರೂ ಸೇರಿದ್ದಾರೆ). ತಿಂಗಳ ಸಂಬಳ ಲೆಕ್ಕದಲ್ಲಿ ಕೆಲಸ ಮಾಡುವವರು ಎಂಟು ಮಂದಿ ಇದ್ದಾರೆ. ಸ್ವ ಉದ್ಯೋಗ ಮಾಡುವವರು ನಾಲ್ಕು ಮಂದಿ ಇದ್ದಾರೆ. ಚಿವಟಗುಂಡಿಯಲ್ಲಿ ಮಾತ್ರ ಜೀತಕ್ಕಿರುವವರು ಏಳು ಮಂದಿ ಇದ್ದಾರೆ.

ಕೆಲಸಗಳ ಆಧಾರದಲ್ಲಿ ಚಿಕ್ಕ ಬಾಗೇವಾಡಿಯ 130 ಮಂದಿಯನ್ನು ನೋಡಿದರೆ ಒಂಭತ್ತು ಮಂದಿ ಯಾವುದೇ ಕೆಲಸ ಮಾಡುತ್ತಿಲ್ಲ (ಇವರಲ್ಲಿ ಅಂಗನವಾಡಿಗೆ ಹೋಗದ ಆರು ಮಕ್ಕಳೂ ಸೇರಿದ್ದಾರೆ), 35 ಮಂದಿ ವಿದ್ಯಾರ್ಥಿಗಳು, ಮನೆಗೆಲಸ ಮಾಡುವವರು ಆರು ಮಂದಿ, 72 ಮಂದಿ ದಿನಗೂಲಿ ಮಾಡುವವರು (ಇವರಲ್ಲಿ 28 ಮಂದಿ 'ಬಿಟ್ಟಿ ಚಾಕ್ರಿ' ಮಾಡುವವರೂ ಸೇರಿದ್ದಾರೆ). ತಿಂಗಳ ಸಂಬಳ ಲೆಕ್ಕದಲ್ಲಿ ಕೆಲಸ ಮಾಡುವವರು ಏಳು ಮಂದಿ ಇದ್ದಾರೆ. ಸ್ವ ಉದ್ಯೋಗ ಮಾಡುವವರು ಒಬ್ಬನೇ ಒಬ್ಬ ವ್ಯಕ್ತಿ ಇದ್ದಾನೆ.

ಮೂರೂ ಊರುಗಳ ಹೆಚ್ಚಿನ ಕುಟಂಬಗಳ ಆದಾಯಕ್ಕೆ ದಿನಗೂಲಿ ಬಿಟ್ಟರೆ ಒಟ್ಟಾರೆಯಾಗಿ ಬೇರೆ ಯಾವುದೇ ಆಧಾರವಿಲ್ಲ. ಮೂರು ಊರುಗಳಲ್ಲಿ ಯಾರಿಗೂ ಭೂಮಿ ಇಲ್ಲ. ಬಹಳ ಕಡಿಮೆ ಮಂದಿ ಬಿಟ್ಟು ಹೆಚ್ಚಿನವರಿಗೆ ತಮ್ಮದೇ ಆದ ಮನೆ ಇದೆ. ಈಗ ಇರುವ ಎಲ್ಲಾ ಮನೆಗಳನ್ನು ಬೇರೆ ಬೇರೆ ಕಾಲಗಳಲ್ಲಿ ಸರ್ಕಾರಿ ಅನುದಾನದಿಂದ ಕಟ್ಟಲಾಗಿತ್ತು. ಕುಟುಂಬಗಳು ಒಡೆದು ಬೇರೆಯಾಗುತ್ತಿದ್ದಂತೆ ಹೊಸ ಹೊಸ ಮನೆಗಳನ್ನು ಪ್ರಚಲಿತ ಸರ್ಕಾರಿ ಅನುದಾನದಿಂದ ಕಟ್ಟಲಾಗುತ್ತಿದೆ. ಆದರೆ ಆ ಮನೆಗಳಲ್ಲಿಯ ಆಸ್ತಿ ಒಡವೆ ಸಾಕುಪ್ರಾಣಿಗಳ ಕೊರತೆ, ಅಥವಾ ಇದ್ದರೂ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಮತ್ತು ಬಹಳ ಕಡಿಮೆ ಮಂದಿಯಲ್ಲಿ ಅವುಗಳನ್ನು ಕಾಣುವುದಕ್ಕೆ ಅವರ ತೀವ್ರ ಬಡತನವೇ ಕಾರಣ.

**2.7.3 ಮನೆಗಳ ಪರಿಸ್ಥಿತಿ**

ಮನೆನಿವೇಶನ ಹಂಚಿಕೆ, ಮನೆ ಕಟ್ಟಲಿಕ್ಕೆ ಸರ್ಕಾರವು ಹಲವಾರು ವರ್ಷಗಳಿಂದ ಕೊಡುತ್ತಿದ್ದ ಅನುದಾನಗಳಿಂದ ಬಹುತೇಕ ಮಂದಿಗೆ ಹಂಚಿನ ಮನೆಯ ಆಶ್ರಯವಾದರೂ ಇದೆ (ಕೋಷ್ಟಕ 13, 14

ಪುಟ 49). ಹಲವಾರು ಸರ್ಕಾರಿ ಸೌಲಭ್ಯಗಳೂ ಅವರಿಗೆ ದೊರಕುತ್ತಿಲ್ಲ. ಬಿಪಿಎಲ್-ಅನ್ನಭಾಗ್ಯವೊಂದೇ ಅವರನ್ನು ರಕ್ಷಿಸುವ ಹಾಗಿದೆ. ಎನ್.ಆರ್.ಇ.ಜಿ.ಎ. ಕೂಡಾ ಅವರನ್ನು ಅಷ್ಟಾಗಿ ಮುಟ್ಟುತ್ತಿಲ್ಲ (ಕೋಷ್ಟಕ 15 ಪುಟ 49). ಮನೆ ಬಿಟ್ಟು ಅವರ ಇತರ ಆಸ್ತಿಗಳು, ಒಡವೆಗಳು, ಬೆಲೆಬಾಳುವ ವಸ್ತುಗಳು, ಸಾಕುಪ್ರಾಣಿಗಳನ್ನು ಗಮನಿಸಿದರೆ ಅವರ ಚಿಂತಾಜನಕ ಬದುಕು ಸುಸ್ಪಷ್ಟವಾಗುತ್ತದೆ (ಕೋಷ್ಟಕ 16 ಪುಟ 50). ಮನೆ ಕುರಿತಾದ ಮುಂದೆ ಕೊಟ್ಟಿರುವ ಎರಡು ಕೋಷ್ಟಕಗಳು, ಸರ್ಕಾರಿ ಸೌಲಭ್ಯಗಳು ಮತ್ತು ಚರ ಸ್ಥಿರಾಸ್ತಿಗಳ ಕುರಿತಾದ ನಂತರದ ಇನ್ನೆರಡು ಕೋಷ್ಟಕಗಳು ಈ ಅಂಶಗಳನ್ನು ಸ್ಪಷ್ಟಪಡಿಸುತ್ತವೆ. ಅವುಗಳ ಪ್ರತ್ಯೇಕ ವಿಶ್ಲೇಷಣೆ ಅಗತ್ಯವಿಲ್ಲ.

**ಕೋಷ್ಟಕ 13 : ಮನೆಯ ಒಡೆತನ**

| | ಜಾಲಿಕೊಪ್ಪ | % | ಚಿವಟಗುಂಡಿ | % | ಚಿಕ್ಕಬಾಗೇವಾಡಿ | % |
|---|---|---|---|---|---|---|
| ಸ್ವಂತ | 20 | 90.9 | 37 | 88.2 | 30 | 88.2 |
| ಸಂಬಂಧಿಕರದ್ದು | 00 | 00.0 | 04 | 09.5 | 04 | 11.8 |
| ಬಾಡಿಗೆ | 02 | 9.1 | 00 | 00.0 | 00 | 00.0 |
| ಇಲ್ಲ | 00 | 00.0 | 01 | 02.3 | 00 | 00.0 |
| ಒಟ್ಟು | 22 | 100. | 42 | 100. | 34 | 100.0 |

**ಕೋಷ್ಟಕ 14 : ಮನೆಯ ವಿಧಗಳು**



| | ಜಾಲಿಕೊಪ್ಪ | % | ಚಿವಟಗುಂಡಿ | % | ಚಿಕ್ಕಬಾಗೇವಾಡಿ | % |
|---|---|---|---|---|---|---|
| ಗುಡಿಸಲು | 00 | 00. | 01 | 2.4 | 00 | 00. |
| ಹಂಚಿನ ಮನೆ | 22 | 100 | 41 | 97.6 | 34 | 100 |
| ಕಲ್ನಾರು | 00 | 00. | 00 | 00.0 | 00 | 00. |
| ಒಟ್ಟು | 22 | 100 | 42 | 100 | 34 | 100 |

**2.7.4 ಕೋಷ್ಟಕ 15 : ಪಡೆದ ಸರ್ಕಾರಿ ಸೌಲಭ್ಯಗಳು**

| ಸರ್ಕಾರಿ ಸೌಲಭ್ಯಗಳು | ಜಾಲಿಕೊಪ್ಪ (22 ಕುಟುಂಬ) | ಚಿವಟಗುಂಡಿ (42ಕುಟುಂಬ) | ಚಿಕ್ಕಬಾಗೇವಾಡಿ (34 ಕುಟುಂಬ) |
|---|---|---|---|
| ಮನೆ ನಿವೇಶನಗಳು | 9 | 3 | 10 |
| ಮನೆಗಳು | 20 | 35 | 27 |
| ಶೌಚಾಲಯ | 14 | 12 | 21 |
| ಬಿಪಿಎಲ್ | 19 | 36 | 29 |
| ಅನ್ನಭಾಗ್ಯ | 19 | 34 | 23 |
| ವೃದ್ಧಾಪ್ಯ ವೇತನ | 1 | 2 | 5 |
| ವಿಧವಾ ವೇತನ | 3 | 1 | 3 |
| ಅಂಗವಿಕಲ ವೇತನ | 1 | 1 | 5 |
| ಭಾಗ್ಯ ಲಕ್ಷ್ಮಿ | 4 | 7 | 2 |
| ರಾಷ್ಟ್ರೀಯಬಿಮಾ ಯೋಜನೆ | 2 | 5 | 2 |
| ಎನ್ ಆರ್.ಎ.ಜಿ.ಯಲ್ಲಿ ಕೆಲಸ | 14 | 13 | 1 |
| ಭೂಮಿ (ಸ್ವಂತ ಭೂಮಿ ಇಲ್ಲ) | 0 | 0 | 0 |

### 2.7.5 ಕೋಷ್ಟಕ 16: ಚರ ಸ್ಥಿರಾಸ್ತಿಗಳು

| | ಜಾಲಿಕೊಪ್ಪ: ಒಟ್ಟು 22 ಕುಟುಂಬಗಳು | | ಚವಟಗುಂಡಿ: ಒಟ್ಟು 42 ಕುಟುಂಬಗಳು | | ಚಿಕ್ಕಬಾಗೇವಾಡಿ: ಒಟ್ಟು 34 ಕುಟುಂಬಗಳು | |
|---|---|---|---|---|---|---|
| | ಸಂಖ್ಯೆ | ಕುಟುಂಬಗಳು | ಸಂಖ್ಯೆ | ಕುಟುಂಬಗಳು | ಸಂಖ್ಯೆ | ಕುಟುಂಬಗಳು |
| ಹಸು | 1 | 3 | 0 | 0 | 1 | 5 |
| | 2 | 1 | 0 | 0 | 2 | 1 |
| ಎತ್ತು | 0 | | 0 | 0 | 1 | 2 |
| | 0 | | 0 | 0 | 2 | 2 |
| ಎಮ್ಮೆ | 1 | 3 | 0 | 0 | 1 | 9 |
| | 2 | | 0 | 0 | 2 | 3 |
| ಕೋಣ | | | 0 | 0 | 1 | 1 |
| ಕರು | 1 | 2 | 0 | 0 | 1 | 1 |
| ಕುರಿ | 1 | 1 | 25 | 1 | 1 | 1 |
| ಮೇಕೆ | 0 | 0 | 1 | 2 | 2 | 1 |
| | 0 | 0 | 2 | 2 | 3 | 2 |
| | 0 | 0 | 4 | 3 | 0 | 0 |
| | 0 | 0 | 6 | 1 | 0 | 0 |
| | 0 | 0 | 10 | 1 | 0 | 0 |
| ಕೋಳಿ | 2 | 1 | 1 | 2 | 2 | 3 |
| | 3 | 1 | 2 | 2 | 3 | 1 |
| | 0 | 0 | 9 | 1 | 5 | 1 |
| ಸೈಕಲ್ | 1 | 5 | 1 | 2 | 1 | 10 |
| ಮೋ. ಸೈಕಲ್ | 1 | 3 | 1 | 7 | 1 | 8 |
| ಟಿವಿ | 1 | 8 | 1 | 11 | 1 | 14 |
| ಡಿವಿಡಿ | 0 | 0 | 0 | 0 | 1 | 1 |
| | 0 | 0 | 0 | 0 | 2 | 1 |
| ಕಪಾಟು | 1 | 1 | 0 | 0 | 1 | 2 |
| | 0 | 0 | 0 | 0 | 2 | 1 |
| ಮಂಚ | 1 | 1 | 1 | 5 | 1 | 1 |
| ಮೇಜು | 0 | 0 | 1 | 1 | 1 | 4 |
| | 0 | 0 | 0 | 0 | 2 | 3 |
| ಕುರ್ಚಿ | 2 | 4 | 1 | 2 | 2 | 7 |
| | 0 | 0 | 2 | 2 | 3 | 2 |
| | 0 | 0 | 0 | 0 | 4 | 2 |
| ಬಂಗಾರ | 5 | 1 | 1 | 1 | 1 | 1 |
| | 0 | 0 | 2 | 1 | 2 | 1 |
| | 0 | 0 | 3 | 2 | | |
| ಬೆಳ್ಳಿ | 0 | 0 | 1 | 1 | 1 | 1 |
| | 0 | 0 | 2 | 1 | 2 | 2 |
| | 0 | 0 | 3 | 1 | 0? | 0? |

## 2.8 ಮೂರು ಊರುಗಳ ಇತರ ಜಾತಿಗಳ ಆದಾಯ ಮೂಲಗಳು (ಕೋಷ್ಟಕ 17–19 ಪುಟ 54)

ಮೂರೂ ಊರಗಳಲ್ಲಿ ಅನುಸೂಚಿತ ಜಾತಿಯವರಿಗೆ ಕೂಲಿ ಬಿಟ್ಟು ಬೇರೆ ಜೀವನೋಪಯಗಳು ಬಹಳ ಕಡಿಮೆ. ಭೂಮಿ ಅಂತೂ ಇಲ್ಲವೇ ಇಲ್ಲ ಎಂದು ಹೇಳಬಹುದು. ಇದ್ದ ಭೂಮಿ ಇರುವುದು ಬಲಿಷ್ಠ ವರ್ಗ/ಜಾತಿಗಳ ಹಿಡಿತದಲ್ಲಿ. ಅನುಸೂಚಿತ ಜನಾಂಗದವರಲ್ಲಿಯೂ ಹೆಚ್ಚಿನ ಮಂದಿಗೆ ಭೂಮಿ ಇದೆ. ಬಲಿಷ್ಠ ವರ್ಗದವರ ಇನ್ನೊಂದು ವೈಶಿಷ್ಟ್ಯವೇನೆಂದರೆ ಭೂ ಹಿಡುವಳಿಗಳ ಜೊತೆ ಭೂಮಿ ಇದ್ದ ಹೆಚ್ಚಿನ ಮಂದಿಗೆ ಭೂಮಿಯ ಹೊರತಾಗಿ ಬೇರೆ ಆದಾಯದ ಮೂಲಗಳೂ ಇವೆ. ಅವು ಖಾಸಗಿ ಅಥವಾ ಸರ್ಕಾರಿ ನೌಕರಿ ಇರಬಹುದು ಅಥವಾ ಸ್ವ ಉದ್ಯೋಗ ಇರಬಹುದು.

ದಲಿತರ ಪರಿಸ್ಥಿತಿಗೆ ಹೋಲಿಸಿದರೆ ದಲಿತರಲ್ಲಿ ಕೆಲವೇ ಕೆಲವು ಮಂದಿ ನೌಕರಿಯಲ್ಲಿ ಇದ್ದಾರೆ. ಅದೂ ಕೂಡಾ ತೀರಾ ಇತ್ತೀಚೆಗಿನ ಬೆಳವಣಿಗೆ. ಆ ನೌಕರಿಗಳೂ ಕೂಡಾ ಅಷ್ಟೊಂದು ಹೇಳಿ ಕೊಳ್ಳುವ ನೌಕರಿಗಳಲ್ಲ. ಬಹುಶಃ ಕನಿಷ್ಠ ವೇತನ ಪ್ರಕಾರ ತಿಂಗಳ ಸಂಬಳ ಸಿಗುವ ನೌಕರಿಗಳು. ಬಹಳ ಸಣ್ಣ ಪ್ರಮಾಣದ ನೌಕರಿ ಪಡೆದರೂ ತಮ್ಮ ಹಿಂದಿನ ಬದುಕು, ತಮ್ಮ ಪೂರ್ವಜರು ಮತ್ತು ಈಗಲೂ 'ಬಿಟ್ಟಿಚಾಕ್ರಿ'ಯಲ್ಲಿ ತೊಡಗಿರುವ ತಮ್ಮ ತಂದೆ ತಾಯಿ, ಅಣ್ಣ ತಮ್ಮಂದಿರ ಬದುಕಿನ ಬಗ್ಗೆ ಅವರು ತೀವ್ರ ಜಿಗುಪ್ಸೆ ತಾಳುತ್ತಿದ್ದಾರೆ.

ಮೂರೂ ಊರುಗಳಲ್ಲಿ ಅತಿ ದೊಡ್ಡ ಸಂಖ್ಯೆಯಲ್ಲಿರುವವರು ಮತ್ತು ಇರುವ ಕುಟುಂಬಗಳಗಲ್ಲಿ ಭೂಮಿ ಇರುವ ಹೆಚ್ಚಿನ ಕುಟುಂಬಗಳು ಇರುವ ಸಮುದಾಯವೆಂದರೆ ಲಿಂಗಾಯತರು. ಇವರಲ್ಲಿಯೂ ನೌಕರಿ, ಪ್ರತ್ಯೇಕವಾಗಿ ಸರ್ಕಾರಿ ನೌಕರಿಯನ್ನು ದೊಡ್ಡ ಪ್ರಮಾಣದಲ್ಲಿ ಕಾಣುತ್ತೇವೆ. ಅಪವಾದವೆಂಬಂತೆ ಜಾಲಿಕೊಪ್ಪದಲ್ಲಿ ಅನುಸೂಚಿತ ಜನಾಂಗಕ್ಕೆ ಸೇರಿದ ಬೇಡರು ಮಾತ್ರ ಕುಟುಂಬ ಸಂಖ್ಯೆಯಲ್ಲಿಯೂ ಜನಸಂಖ್ಯೆಯಲ್ಲಿಯೂ ಭೂಒಡೆತನವಿರುವವರ ಸಂಖ್ಯೆಯಲ್ಲಿಯೂ ನೌಕರಿಗಳಲ್ಲಿಯೂ ಲಿಂಗಾಯತರ ನಂತರದ ಸಮುದಾಯವಾಗಿ ಆದರೆ ಅವರಿಗೆ ಪೈಪೋಟಿ ಕೊಡುವ ರೀತಿಯಲ್ಲಿ ಇದ್ದಾರೆ. ಚಿವಟಗುಂಡಿಯಲ್ಲಿ ಅವರ ಸಂಖ್ಯೆ ಬಹಳ ಕಡಿಮೆ. ಚಿಕ್ಕ ಬಾಗೇವಾಡಿಯಲ್ಲಿ ಅವರು ಇಲ್ಲವೇ ಇಲ್ಲ. 'ಬಿಟ್ಟಿ ಚಾಕ್ರಿ' ಮಾಡಿಸುವ ಕುಟುಂಬಗಳಲ್ಲಿ ಮೂರೂ ಊರುಗಳಲ್ಲಿ ಅತಿ ಹೆಚ್ಚಿನವರೇ ಲಿಂಗಾಯತರು. ಜಾಲಿಕೊಪ್ಪದ 21 ಮಾಲಿಕರಲ್ಲಿ 14 ಮಂದಿ ಲಿಂಗಾಯತರು, ಇಬ್ಬರು ಅನುಸೂಚಿತ ಜನಾಂಗದವರು ಮತ್ತು ನಾಲ್ಕು ಮಂದಿ ಹಿಂದುಳಿದ ವರ್ಗಕ್ಕೆ ಸೇರಿದವರು. ಚಿವಟಗುಂಡಿಯ 30 ಮಂದಿ ಮಾಲಿಕರಲ್ಲಿ 24 ಮಂದಿ ಲಿಂಗಾಯಿತರಾಗಿದ್ದು ಇನ್ನುಳಿದ ಆರು ಮಂದಿ ಹಿಂದುಳಿದ ಜಾತಿಗೆ ಸೇರಿದವರು (ನಾಲ್ಕು ಮಂದಿ ಕುರುಬರು, ಒಬ್ಬರು ಹಡಪದರು ಮತ್ತು ಒಬ್ಬರು ಒಕ್ಕಲಿಗರು). ಚಿಕ್ಕ ಬಾಗೇವಾಡಿಯ 25 ಮಂದಿ ಮಾಲಿಕರಲ್ಲಿ 17 ಮಂದಿ ಲಿಂಗಾಯತರು, ಮೂರು ಮಂದಿ ಜೈನರು ಮತ್ತು ಒಬ್ಬರು ಮರಾಠರು ಆಗಿದ್ದಾರೆ. ಭೂಒಡೆತನಕ್ಕೂ 'ಬಿಟ್ಟಿ ಚಾಕ್ರಿ' ಮಾಡಿಸುವುದಕ್ಕೂ ಹಾಗೂ ಬಿಟ್ಟಿ ಚಾಕ್ರಿ ಮಾಡುವುದಕ್ಕೂ ನೇರ ಸಂಬಂದವಿದ್ದಂತಾಯಿತು.

ಕೋಷ್ಟಕ 17 : ಜಾಲಿಕೊಪ್ಪದಲ್ಲಿರುವ ಬೇರೆ ಬೇರೆ ಜಾತಿಗಳಲ್ಲಿಯ ಮನೆಗಳ ಕೆಲವು ವಿವರಗಳ

| ಕ್ರಸ | ಜಾತಿ | ಮನೆ | ಜನಸಂಖ್ಯೆ | ಭೂಮಿ | % | ಭೂರಹಿತ | ದಿನಗೂಲಿ (ಜೀತ, ಚಾಕ್ರಿ) | ಸರ್ಕಾರಿ ನೌಕರಿ | ಖಾಸಗಿ ನೌಕರಿ | ಸ್ವ ಉದ್ಯೋಗ |
|---|---|---|---|---|---|---|---|---|---|---|
| 1 | ಅನುಸೂಚಿತ ಜಾತಿ ಹಿಂದು ಮಾದರ | 22 | 244 | 2 | 9.0 | 20 | 22 | 0 | 2 | 0 |
| 2 | ಅನುಸೂಚಿತ ಜನಾಂಗ–ಬೇಡರ | 80 | 300 | 50 | 62.0 | 30 | 70 | 5 | 8 | 5 |
| 3 | ಲಿಂಗಾಯತ | 85 | 324 | 60 | 70.6 | 25 | 40 | 10 | 15 | 10 |
| 4 | ಛತ್ರಿ | 10 | 70 | 5 | 50.0 | 5 | 8 | 0 | 0 | 0 |
| 5 | ಅಂಬಿಗ | 10 | 98 | 6 | 60.0 | 3 | 5 | 2 | 2 | 2 |
| 6 | ಬ್ರಾಹ್ಮಣ | 1 | 8 | 1 | 100.0 | 0 | 0 | 1 | 0 | 0 |
|  | ಒಟ್ಟು | 208 | 744 | 124 | 59.61 | 83 | 145 | 18 | 27 | 16 |

ಕೋಷ್ಟಕ 18 : ಚಿವಟಗುಂಡಿಯಲ್ಲಿರುವ ಬೇರೆ ಬೇರೆ ಜಾತಿಗಳಲ್ಲಿಯ ಮನೆಗಳ ಕೆಲವು ವಿವರಗಳು

| ಕ್ರಸ | ಜಾತಿ | ಮನೆ | ಜನಸಂಖ್ಯೆ | ಭೂಮಿ | % | ಭೂರಹಿತ | ದಿನಗೂಲಿ (ಜೀತ,ಚಾಕ್ರಿ) | ಸರ್ಕಾರಿ ನೌಕರಿ | ಖಾಸಗಿ ನೌಕರಿ | ಸ್ವ ಉದ್ಯೋಗ |
|---|---|---|---|---|---|---|---|---|---|---|
| 1 | ಅನುಸೂಚಿತ ಜಾತಿ | 42 | 200 | 0 | 0 | 42 | 41 | 2 | 2 | 1 |
| 2 | ಅನುಸೂಚಿತ ಜನಾಂಗ | 5 | 50 | 4 | 80 | 1 | 2 | 1 | 0 | 1 |
| 3 | ಲಿಂಗಾಯತ | 190 | 1122 | 170 | 89.5 | 20 | 20 | 110 | 30 | 25 |
| 4 | ಕುರುಬ | 47 | 200 | 25 | 53.1 | 22 | 30 | 12 | 0 | 2 |
| 5 | ಛತ್ರಿ | 4 | 20 | 3 | 75 | 1 | 2 | 1 | 0 | 2 |
| 6 | ಅಂಬಿಗ | 3 | 24 | 0 | 0 | 3 | 3 | 1 | 0 | 0 |
| 7 | ಮುಸ್ಲಿಂ | 4 | 25 | 3 | 75 | 1 | 2 | 1 | 0 | 0 |
|  | ಒಟ್ಟು | 295 | 1911 | 205 | 69.4 | 90 | 100 | 128 | 32 | 31 |

ಕೋಷ್ಟಕ 19 : ಚಿಕ್ಕಬಾಗೇವಾಡಿಯಲ್ಲಿರುವ ಬೇರೆ ಬೇರೆ ಜಾತಿಗಳಲ್ಲಿಯ ಮನೆಗಳ ಕೆಲವು ವಿವರಗಳು

| ಕ್ರಸ | ಜಾತಿ | ಮನೆ | ಜನಸಂಖ್ಯೆ | ಭೂಮಿ | % | ಭೂರಹಿತ | ದಿನಗೂಲಿ (ಜೀತ,ಚಾಕ್ರಿ) | ಸರ್ಕಾರಿ ನೌಕರಿ | ಖಾಸಗಿ ನೌಕರಿ | ಸ್ವ ಉದ್ಯೋಗ |
|---|---|---|---|---|---|---|---|---|---|---|
| 1 | ಅನುಸೂಚಿತ ಜಾತಿ (ಮಾದಿಗರು) | 34 | 200 | 3 | 8.8 | 31 | 30 | 2 | 2 | 0 |
| 2 | ಲಿಂಗಾಯತ | 300 | 1500 | 200 | 66.6 | 0 | 50 | 100 | 25 | 25 |
| 3 | ಕುರುಬ | 100 | 400 | 30 | 30.0 | 0 | 0 | 5 | 5 | 0 |
| 4 | ಜೈನರು | 40 | 100 | 10 | 25.0 | 0 | 0 | 1 | 0 | 0 |
| 5 | ಮುಸ್ಲಿಂ | 10 | 100 | 3 | 30.0 | 07 | 0 | 1 | 0 | 07 |
|  | ಒಟ್ಟು | 484 | 2300 | 246 | 50.8 | 38 | 80 | 109 | 32 | 32 |

### 2.9 'ಬಿಟ್ಟಿ ಚಾಕ್ರಿ' ಮಾಡುವವರ ವಿವಿಧ ಅನುಭವಗಳು

'ಬಿಟ್ಟಿ ಚಾಕ್ರಿ' ಮಾಡುವವರ ಬದುಕಿನ ಬೇರೆ ಬೇರೆ ಮುಖಗಳನ್ನು ಅವರು ಕಟ್ಟಿಕೊಡುವ ಮಾತುಗಳಲ್ಲೇ ಗ್ರಹಿಸಲು ಮುಂದೆ ಪ್ರಯತ್ನಿಸಲಾಗಿದೆ.

#### 2.9.1 'ಬಿಟ್ಟಿ ಚಾಕ್ರಿ'ಯಲ್ಲಿರುವವರ ಬಡತನದ ಅನುಭವಗಳು:

'ಬಿಟ್ಟಿ ಚಾಕ್ರಿ' ಮಾಡುವ ಕುಟುಂಬಗಳ ಸರ್ವೇಸಾಮಾನ್ಯ ಚಿತ್ರ ಅವರನ್ನು ಕಿತ್ತು ತಿನ್ನುವ ಬಡತನ: ಹೊಟ್ಟೆಗೆ ಊಟ ದೊರಕಿಸುವುದೇ ಮೊದಲ ಆದ್ಯತೆ: "ನಮಗೆ ಬಡತನ ಪರಿಸ್ಥಿತಿ ಇದ್ದು ನಾವು 'ಬಿಟ್ಟಿ ಚಾಕರಿ' ಮಾಡುವುದರಿಂದ ನಾವು ಜೀವನವನ್ನು ನಡೆಸುತ್ತಿದ್ದೇವೆ. ನನಗೆ ಎರಡು ಗಂಡು ನಾಲ್ಕು ಹೆಣ್ಣು ಮಕ್ಕಳು. ಒಟ್ಟು ಆರು ಮಂದಿ ಮಕ್ಕಳನ್ನು ಜೋಪಾನ ಮಾಡುವುದು. ನಮಗೆ ಹೊಲ, ಆಸ್ತಿ ಇಲ್ಲ. ಆಗ ನಮಗೆ ತುಂಬಾ ಬಡತನ ಇತ್ತು." "ಬಡತನ ಪರಿಸ್ಥಿತಿ. ಹೊಟ್ಟೆಗೆ ಕಾಳುಕಡಿ ಬೇಕಲ್ಲರಿ. ಅದಕ್ಕೆ ಹೋಗುತ್ತಿದ್ದೇವೆ." "ನಾನು ಬಸುರಿ ಆದಾಗ ಮಕ್ಕಳು ಮೊಲೆ ಕುಡಿಯುವಾಗ ಎಲ್ಲಿಲ್ಲದ ಕಷ್ಟ ಅನುಭವಿಸಿದ್ದೆ. ಇದೆಲ್ಲಾ ಬಡತನದಿಂದ ಅನುಭವಿಸಬೇಕಾಗಿತ್ತು." "ಬಡತನ ಬಾಳ ಅನುಭವ ಆತರಿ. ನನಗೆ ಎಂಟು ಮಕ್ಕಳು. ಆರು ಮಕ್ಕಳು ಹೆರಿಗೆ ಆದ ಕೂಡಲೇ ತೀರಿಕೊಂಡವು. ಈ ವೇಳೆ ನನ್ನ ಕಷ್ಟ ದೇವರಿಗೆ ಬ್ಯಾಡ. ಸರಿಯಾಗಿ ಹೊಟ್ಟೆಗೆ ಊಟ ಇಲ್ಲ. ಆರೋಗ್ಯ ಇಲ್ಲ. ಇದೆಲ್ಲ ನನಗೆ ದು:ಖ ತಂದಿತ್ತು." "ಏನು ಮಾಡುವುದು? ನಾವು ಈ ಕೆಲಸ ಮಾಡಿದರೆ ನಮ್ಮ ಹೊಟ್ಟೆ ತುಂಬುವುದು. ಇಲ್ಲದಿದ್ದರೆ ಬಹಳ ಕಷ್ಟ ಇದೆ." "ಈ ಕೆಲಸ ಮಾಡುವಾಗ ಕಷ್ಟ ಅನಿಸುತ್ತದೆ. ಕೂಲಿ ಮಾಡಿ ಸಾಕಿದೆವು. ಮನೆ ತುಂಬಾ ಮಕ್ಕಳು. ತುಂಬ ಬಡತನ ಕಷ್ಟ ಇರುವುದರಿಂದ ಈ ಬಿಟ್ಟಿ ಚಾಕ್ರಿ ಮಾಡುತ್ತಾ ಇದ್ದೇವೆ." "ಆ ಪರಿಸ್ಥಿತಿ ಕೇಳ ಬೇಡಿರಿ ಹರಿದು ತಿನ್ನುವ ಬಡತನ. ಮನೆಯಲ್ಲಿ ಸಣ್ಣ ಮಕ್ಕಳು. ಮೂರು ರೊಟ್ಟಿಗಾಗಿ ಬಿಟ್ಟಿ ಮಾಡಿದ್ದೇವೆ. ನಾಳಿನ ಒಂದು ರೊಟ್ಟಿ ಇವತ್ತೇ ಕೊಡಿರಿ. ನಾಳಿಗೆ ಒಂದು ರೊಟ್ಟಿಯ ಕಡಿಮೆ ಕೊಡಿ ಎನ್ನುವ ಸ್ಥಿತಿ ಇತ್ತು." "ವರ್ಷದ ಹಿಂದೆ ನನ್ನ ಮಗನ ಹೆರಿಗೆ ಆದಾಗ ಎಣ್ಣೆ ಇಲ್ಲ. ಹೊಟ್ಟೆಗೆ ಇಲ್ಲ. ಒಂದು ತಿಂಗಳು ಹೆರಿಗೆ ಆದದ್ದಕ್ಕೆ ಮನೆಯಲ್ಲಿ ಇದ್ದೆ. ನನ್ನ ಮಗ ಚಿಕ್ಕವ ಇದ್ದ. ಮನೆಯಲ್ಲಿ ಊಟ ಇಲ್ಲ. ಬಸವೇಶ್ವರ ಜಾತ್ರೆಯಲ್ಲಿ ಅನ್ನ ತಂದು ನನಗೆ ಕೊಟ್ಟಿದ್ದರು."

"ನಮಗೆ ಭೂಮಿ ಇಲ್ಲ. ನಾವು 'ರೈತರ ಬಿಟ್ಟಿ' ಮಾಡಿದರೆ ನಮಗೆ ಊಟಕ್ಕೆ ಜೋಳ ಕೊಡುತ್ತಾರೆ. ನಾವು ಈ ಕೆಲಸ ಮಾಡದೇ ಇದ್ದರೆ ನಾವು ಉಪವಾಸ ಇರಬೇಕಾಗುತ್ತದೆ. ಮನೆಯಲ್ಲಿ ಸಣ್ಣ ಸಣ್ಣ ಮಕ್ಕಳು ಇದ್ದಾವೆ. ಕೂಲಿಗೆ ಹೋದರೆ ಕಡಿಮೆ ಕೂಲಿ ಕೊಡುತ್ತಾರೆ. ಸಗಣಿ ತೆಗೆಯುವಾಗ ಅಯ್ಯೋ ಅನಿಸುತ್ತದೆ. ಏನು ಮಾಡುವುದು. ನಮ್ಮ ಪರಿಸ್ಥಿತಿ. ತುಂಬ ಬಡತನ ಇದೆ." "ನಾವು ಕುಟುಂಬದಿಂದ ಬೇರೆ ಆದ ತಕ್ಷಣ ಬಡತನ ತುಂಬಾ ಅನುಭವಿಸಿದ್ದೇವೆ. ಊಟಕ್ಕೂ ಗತಿ ಇಲ್ಲದೇ ಒದ್ದಾಡಿದ್ದೇವೆ. ನಮಗೆ ಕೂಲಿ ಸರಿಯಾಗಿ ಬರುತ್ತಿರಲಿಲ್ಲ, ಆದ್ದರಿಂದ ಯಾರೂ ಕೂಲಿಗೆ ಕರೆಯುತ್ತಿರಲಿಲ್ಲ. ಇದರಿಂದ ತುಂಬಾ ಬಡತನ ಅನುಭವಿಸಿದ್ದೇವೆ." "ನಮಗೆ ಬಡತನ ಪರಿಸ್ಥಿತಿ ಇರುವುದರಿಂದ ನಾವು ಬಿಟ್ಟಿ ಚಾಕರಿ ಮಾಡುವುದರಿಂದ

ನಾವು ಜೀವನವನ್ನು ನಡೆಸುತ್ತಿದ್ದೇವೆ." "ನಮ್ಮ ಕುಟುಂಬದಲ್ಲಿ ಬಡತನವನ್ನು ಬಹಳ ಅನುಭವಿಸಿದ್ದೇವೆ. ನಮ್ಮ ತಂದೆ ತಾಯಿಗಳು ನಮ್ಮನ್ನು ಬ್ಯಾರೆ ಇಟ್ಟು ನಮ್ಮ ಊಟಕ್ಕೆ ತೊಂದರೆ ಅನುಭವಿಸಿದ್ದೇವೆ. ಕಷ್ಟಗಳನ್ನು ಅನುಭವಿಸಿದ್ದೇವೆ." "ತುಂಬಾ ಬಡತನವನ್ನು ಅನುಭವಿಸಿದ್ದೇವೆ. ಚಾಕ್ರಿ ಕೆಲಸ ಮಾಡಿಯೇ ಜೀವನ ನಡೆಸುತ್ತಿದ್ದೆವು." "ನಮಗೆ ಇರಲಿಕ್ಕೆ ಮನೆ ಇರಲಿಲ್ಲ. ಒಪ್ಪತ್ತು ಊಟಕ್ಕೂ ಗತಿ ಇರಲಿಲ್ಲ. ನಾವು ಹೊಟ್ಟೆ ಪಾಡಿಗಾಗಿ ಈ ಕೆಲಸ ಮಾಡಲೇ ಬೇಕು." "ಮನೆಯಲ್ಲಿ ಊಟ ಸಮಸ್ಯೆ, ಮಕ್ಕಳ ಬೆಳೆಸುವುದು, ಮಕ್ಕಳ ಮದುವೆ ಮಾಡುವುದು."

"ನಮ್ಮ ಕುಟುಂಬದಲ್ಲಿ ತುಂಬಾ ಬಡತನ ಇರುವ ಕಾರಣ 'ಬಿಟ್ಟಿ ಚಾಕ್ರಿ' ಮಾಡಿ ಬರುವ ಅಲ್ಪಸ್ವಲ್ಪ ಕಾಳು ಬರುವುದರಿಂದ ಜೀವನ ನಡೆಸಬೇಕಾಗಿತ್ತು." "ತುಂಬಾ ಬಡತನ. ಸಗಣಿ ತೆಗೆದರೆ ಮಾತ್ರ ಆಯಗಾಗಿ ಕರೆಯುತ್ತಾರೆ. ಕಣ ಮನಿಗಳಿಗೆ ಕರೆಯುತ್ತಾರೆ. ಇಲ್ಲದಿದ್ದರೆ ಇಲ್ಲ." "ನಮ್ಮ ಕುಟುಂಬ ತುಂಬಾ ಬಡತನ ಪರಿಸ್ಥಿತಿಯಲ್ಲಿತ್ತು. ಆವಾಗಿನ ಸಮಯದಲ್ಲಿ ಅರ್ಧ ಹೊಟ್ಟೆ ತಿಂದು ಡಬ್ಬ ಮಲಗುತ್ತಿದ್ದೆವು. ನಿದ್ರೆ ಬರುತ್ತಿರಲಿಲ್ಲ."

"ನಮ್ಮ ಕುಟುಂಬದಲ್ಲಿ 50 ವರ್ಷಗಳಿಂದ ಬಡತನ ಅನುಭವಿಸುತ್ತಲೇ ಬಂದಿದ್ದೇವೆ. ಊಟಕ್ಕೆ ತೊಂದರೆ ಅನುಭವಿಸಿದ್ದೇವೆ. ಹೆಣ್ಣು ಮಕ್ಕಳ ಮದುವೆ ಮಾಡಿಕೊಡುವುದಕ್ಕೆ ಗತಿ ಇಲ್ಲದಂತೆ." "ಬಡತನ ಎಂದರೆ ಅದನ್ನು ನಾವು ಬಹಳ ಅನುಭವಿಸುತ್ತಿದ್ದೇವೆ. ಕೆಲವೊಂದು ಹೊತ್ತು ಊಟ ಇಲ್ಲದೆ ಹಾಗೇ ಜೀವನ ನಡೆಸಿದ್ದೇವೆ." "ಮೊದಲು ನಮಗೆ ಬಡತನ ಪರಿಸ್ಥಿತಿ ತುಂಬಾ ಇತ್ತು, ನಮಗೆ ಹೊಲ ಇಲ್ಲ. ಕೂಲಿಯೂ ಕಡಿಮೆ ಇತ್ತು."

ಊಟದ ಜೊತೆ ಬೇರೆ ಅಗತ್ಯಗಳಿಗೆ ಹಣದ ಅವಶ್ಯಕತೆಯೂ ಜೀವನವನ್ನು ಅತಂತ್ರಗೊಳಿಸುತ್ತಿತ್ತು: "ನಮ್ಮ ಕುಟುಂಬದಲ್ಲಿ ಬಡತನ ಬಹಳ ಅನುಭವಿಸಿದ್ದೇವೆ. ನನ್ನ ಗಂಡನನ್ನು ದವಾಖಾನೆಗೆ ಸೇರಿಸಲು ದುಡ್ಡಿನ ಸಮಸ್ಯೆಯನ್ನು ಅನುಭವಿಸಿದ್ದೇವೆ." "ನಮ್ಮ ಹೆಣ್ಣು ಮಕ್ಕಳು ತವರಿಗೆ ಬಂದರೆ ಹಬ್ಬದಲ್ಲಿ ಮಕ್ಕಳಿಗೆ ಬಟ್ಟೆ ಕೊಡಿಸಲು ಸಾಲ ಮಾಡಬೇಕು." "ಈ 'ಬಿಟ್ಟಿ ಚಾಕ್ರಿ' ಕೆಲಸವನ್ನು ಮಾಡಿದರೆ ರೊಕ್ಕ ಸಿಗುವುದಿಲ್ಲ. ಕೂಲಿ ಇಲ್ಲದಾಗ ದುಡ್ಡಿಗಾಗಿ ಬಹಳ ಕಷ್ಟ ಪಡಬೇಕಾಗಿರುತ್ತದೆ." "ಬಡ್ಡ್ಯಾಗಿನಿಂದ ಹಿರಿಯರು ಮಾಡಿಕೊಂಡು ಬಂದಿರುವ ಕಾರಣ ಮತ್ತು ಬಡತನ ಇರುವುದರಿಂದ ನಮಗೆ ಕೂಲಿ ಕಡಿಮೆ ಇತ್ತು."

ಮಕ್ಕಳಿಗೆ ಶಿಕ್ಷಣ ಒದಗಿಸುವ ಕಾಳಜಿಯೂ 'ಬಿಟ್ಟಿ ಚಾಕ್ರಿ' ಮಾಡುವವರನ್ನು ಕಾಡುತ್ತದೆ: "ಊಟದ ಸಮಸ್ಯೆ ಎದುರಿಸಿದ್ದೇವೆ. ಶಾಲೆಗೆ ಕಳಿಸಲು ಸಮಸ್ಯೆ." "ನಮ್ಮ ಕುಟುಂಬದಲ್ಲಿ ನಾವು ಐದು ಜನರು. ಮೂರು ಮಕ್ಕಳು ಶಾಲೆಗೆ ಹೋಗಬೇಕು. ನಮಗೆ ಜಮೀನು, ಆಸ್ತಿ ಇಲ್ಲ." "ಊಟದ ಸಮಸ್ಯೆ. ಮನೆ ಬಾಳು ನಡೆಯುವುದಿಲ್ಲ. ಅನಾರೋಗ್ಯದ ಸಮಸ್ಯೆ. ಮಕ್ಕಳನ್ನು ಶಾಲೆಗೆ ಕಳಿಸುವುದರ ಬಗ್ಗೆ." "ಬಡತನಕ್ಕಾಗಿ

ಈ ಕೆಲಸ ಮಾಡುವುದು ನನಗೆ ನೋವಾಗುತ್ತದೆ ನಮಗೆ ಹೊಲ ಇಲ್ಲ. ಸರಿ ಕೂಲಿ ಇಲ್ಲ. ಮಕ್ಕಳಿಗೆ ಓದಿಸಲು ಆಗುತ್ತಿಲ್ಲ ಎಂದು ದುಃಖವಾಗುತ್ತದೆ." "ನಮ್ಮ ಕುಟುಂಬದಲ್ಲಿ ನಾನು, ನನ್ನ ಹೆಂಡತಿ, ಮತ್ತೆ ಕೂಲಿ ಕೆಲಸಕ್ಕೆ ಹೋಗುವುದು ತಡವಾಗುತ್ತದೆ ಎಂದು ನನ್ನ ಮಗನು ಸಹಿತ ಬಿಟ್ಟಿ ಚಾಕ್ರಿಗೆ ಬರುತ್ತಾನೆ. ನಮಗೆ ಜಮೀನು ಏನಾದರೂ ಇದ್ದರೆ ನಾವೇಕೆ ಬಿಟ್ಟಿ ಚಾಕ್ರಿಗೆ ಬರಬೇಕಿತ್ತು?"

ಮನೆಯಲ್ಲಿ ಕೂಲಿ ಸಂಪಾದನೆ ಮಾಡುವವರೂ ಇಲ್ಲದ ಪರಿಸ್ಥಿತಿ: "ನಮಗೆ ತುಂಬಾ ಬಡತನ ಇದೆ. ನಮಗೆ ಭೂಮಿ ಇಲ್ಲ. ಜೋಳ ಕೊಡುತ್ತಿರಲಿಲ್ಲ. ಕಡಿಮೆ ಕೂಲಿ. ಸಣ್ಣ ಸಣ್ಣ ಮಕ್ಕಳು. ನಮ್ಮ ಮನೆಯಲ್ಲಿ ಬೇರೆ ಕೆಲಸ ಮಾಡಿ ಜೀವನ ಸಾಗಿಸುವರು ಇಲ್ಲ. ಆದ್ದರಿಂದ ಈ ಸಗಣಿ ಬಳಿದು ಕೊಂಡು ಹೋಗಬೇಕು."

'ಬಿಟ್ಟಿ ಚಾಕ್ರಿ' ಮಾಡಲಿಕ್ಕೆ ಮಾಲಿಕರ ಒತ್ತಡ ಯಾವಾಗಲೂ ಇರುತ್ತಿತ್ತು: "ನಾವು ಒಂದೆರೆಡು ದಿನ ಸಗಣಿ ಕೆಲಸಕ್ಕೆ ಹೋಗದಿದ್ದರೆ, ನಮ್ಮ ಜೊತೆ ಜಗಳ ಮಾಡುತ್ತಾರೆ. ನಮ್ಮ ಮನೆಗೆ ನೀವು ಬರಲೇ ಬೇಕು. ನಮ್ಮ ಹೊಲಕ್ಕೆ ಬರಲೇ ಬೇಕು. ನಿಮಗೆ ಆಗುವುದಿಲ್ಲ ಅಂದರೆ ನಮಗೆ ಬೇರೆ ಹೊಲೆಯರನ್ನು ನಮಗೆ ಕಳುಹಿಸಿ ಕೊಡಿ ಎಂದು ಕೇಳುತ್ತಾರೆ. ಇಲ್ಲವಾದ್ದರೆ ನೀವೇ ಮಾಡಿ ಎಂದು ಒತ್ತಾಯ ಮಾಡುತ್ತಾರೆ."

ಉಪವಾಸ ತಪ್ಪಿಸಲಿಕ್ಕೆ ಬಿಟ್ಟಿ ಚಾಕ್ರಿಯ ಮೊರೆ ಹೋಗಿರುವುದು: "ನಮಗೆ ತಿನಲಿಕ್ಕೆ ಕೂಳು ಸಿಗುತ್ತಿರಲಿಲ್ಲ. ಕೂಲಿ ಸಿಗುತ್ತಿರಲಿಲ್ಲ. ಮನೆಯಲ್ಲಿ ಜನ ಬಹಳ. ಒಂದೊಂದು ವೇಳೆ ಉಪವಾಸ ಇರಬೇಕಾಗಿತ್ತು. ಅದಕ್ಕಾಗಿ ನಮ್ಮ ಅಜ್ಜ, ಮುತ್ತಜ್ಜರು ಬಿಟ್ಟಿ ಚಾಕ್ರಿ ಮಾಡಿಕೊಂಡು ಉಪಜೀವನ ಮಾಡುತ್ತಿದ್ದೇವೆ."

'ಬಿಟ್ಟಿ ಚಾಕ್ರಿ'ಗಾಗಿ ಮಕ್ಕಳನ್ನು ಶಾಲೆಗೆ ಕಳುಹಿಸದಿದ್ದುದು ಅಥವಾ ಶಾಲೆಯಿಂದ ಬಿಡಿಸುವುದೂ ನಡೆಯುತ್ತದೆ.: "ನಮಗೆ ತುಂಬ ಬಡತನದ ಜೀವನ. ನನ್ನ ಗಂಡ ತೀರಿಕೊಂಡಾಗ, ನನ್ನ ಮಕ್ಕಳು ತುಂಬ ಸಣ್ಣವರು ಇದ್ದರು. ಹೀಗಾಗಿ ನನಗೆ ತುಂಬ ನೋವು ಆಗುತ್ತಿತ್ತು. ನನ್ನ ಮಕ್ಕಳಿಗೆ ಶಾಲೆ ಕಲಿಸಬೇಕು ಎಂದು ವಿಚಾರಗಳು ಇದ್ದರೂ ಕೂಡ ನನ್ನ ಗಂಡ ಕುಡುಕ. ಅಂತವನ ಜೊತೆ ನಾನು ಜೀವನ ಮಾಡಿ ಇಬ್ಬರು ಮಕ್ಕಳಿಗೆ ಜೀವನವಿತ್ತು ತುಂಬ ಕಷ್ಟವನ್ನು ಅನುಭವಿಸಿದ್ದೇನೆ." "ನಮಗೆ ಇರಲಿಕ್ಕೆ ಮನೆ ಇರಲಿಲ್ಲ. ನಮ್ಮ ತಂದೆ ತಾಯಿ ಇಡೀ ದಿನ ಮಾಲೀಕರ ಮನೇಲಿ ಹೊಟ್ಟೆ ಪಾಡಿಗಾಗಿ, ನಮ್ಮನ್ನು ಅವರ ಮನೆಯ ಅನೇಕ ಕೆಲಸಗಳನ್ನು ಮಾಡಲಿಕ್ಕೆ, ಊಟಕ್ಕಾಗಿ, ಬಟ್ಟೆಗಾಗಿ ನಮ್ಮ ತಂದೆ ನನ್ನನ್ನು ಶಾಲೆ ಬಿಡಿಸಿ ಸಗಣಿ ಬಳಿಯುವ ಕೆಲಸಕ್ಕೆ ಸೇರಿಸಿದರು."

'ಬಿಟ್ಟಿ ಚಾಕ್ರಿ' ಜೊತೆ ದಿನಗೂಲಿಗೂ ಹೋಗುವ ಅನಿವಾರ್ಯತೆ ಇದೆ: "ನಮಗೆ 'ಬಿಟ್ಟಿ ಚಾಕ್ರಿ' ಮಾಡದಿದ್ದರೆ ಹೊಟ್ಟೆ ತುಂಬುವುದಿಲ್ಲ. ವರ್ಷಕ್ಕೆ ಒಂದು ಚೀಲ ಜೋಳ, ಪ್ರತಿ ದಿನ ರೊಟ್ಟಿ ಪಲ್ಯ ಕೊಡುತ್ತಾರೆ. ಅದನ್ನು ತಿಂದು ಮಕ್ಕಳು ಅಂಗನವಾಡಿಗೆ ಹೋಗುತ್ತಾರೆ. ನಾವು ಕೂಲಿಗೆ ಹೋಗಿ ನಮ್ಮ ಮನೆಯ ಉಪಜೀವನ

ಸಾಗಿಸುತ್ತೇವೆ. ನಮಗೆ ಯಾವುದೇ ಆಸ್ತಿ ಪಾಸ್ತಿ ಇಲ್ಲ. ಬಹಳ ಬಡತನ ಇದೆ. ಕೂಲಿ ಮಾಡದಿದ್ದರೆ ಉಪವಾಸ ಇರಬೇಕು." "ನನ್ನ ಮದುವೆ ಆದಾಗ ಊಟಕ್ಕೆ ತೊಂದರೆಯನ್ನು ಅನುಭವಿಸಿದ್ದೇವೆ. ಕೂಲಿ ಮಾಡಿದರೆ ಮಾತ್ರ ಸಂಜೆ ಊಟಕ್ಕೆ ಸಿಗುತ್ತಿತ್ತು. ಇಲ್ಲದಿದ್ದರೆ ಇಲ್ಲ. ಅನೇಕ ಕಷ್ಟಗಳನ್ನು ಅನುಭವಿಸಿದ್ದೇವೆ." "ನನ್ನ ಗಂಡನ ಮನೆಯಲ್ಲಿ ತುಂಬಾ ಬಡತನ ಪರಿಸ್ಥಿತಿ ಇದೆ. ಒಂದು ಹೊತ್ತು ಊಟಕ್ಕೂ ಗತಿ ಇಲ್ಲದೆ ಇತ್ತು. ಅದಕ್ಕಾಗಿ ನನ್ನ ಗಂಡನನ್ನು ತವರು ಮನೆಗೆ ಕರೆದುಕೊಂಡು ಬಂದು ಇಲ್ಲಿ 'ಬಿಟ್ಟಿ ಚಾಕ್ರಿ' ಮತ್ತು ಕೂಲಿ ಮಾಡಿ ಜೀವನ ನಡೆಸುತ್ತಿದ್ದೇವೆ." "ಮೊದಲು ಬಹಳ ಬಡತನ ಇತ್ತು. ಅದಕ್ಕೆ ಈ ಕೆಲಸ ಮಾಡಿಕೊಂಡು ಕೂಲಿ ಮಾಡುತ್ತಿದ್ದು." "ನಾನು 'ಬಿಟ್ಟಿ ಚಾಕ್ರಿ' ಮಾಡಿಕೊಂಡು ಬಂದು ಹೊಲದ ಕೆಲಸಕ್ಕೆ ಹೋಗಬೇಕಾದರೆ 'ಬಿಟ್ಟಿ ಚಾಕರಿ' ಮಾಡುವಾಗ ಕೊಟ್ಟಿರುವ ರೊಟ್ಟಿಯನ್ನು ತಿಂದು ಕಟ್ಟಿಕೊಂಡು ಕೂಲಿ ಕೆಲಸಕ್ಕೆ ಹೋಗಿ ಬಂದು ಜೀವನ ನಡೆಸುತ್ತಿದ್ದೆ. "ಊರಲ್ಲಿ ಸರಿಯಾಗಿ ಕೂಲಿ ಸಿಗದಿದ್ದರೆ ಹೊಟ್ಟೆ ತುಂಬಿಕೊಳ್ಳುವುದಕ್ಕೆ ಊರು ಬಿಟ್ಟು ಬೇರೆ ಕಡೆ ದುಡಿಯಲು ಹೋಗಬೇಕು. ಹೆಂಡತಿ ಮಕ್ಕಳನ್ನು ಬಿಟ್ಟು ಹೋಗಬೇಕು. ನಾನು ಹಿಂದೆ ಬೆಳಗಾವಿಗೆ ದುಡಿಯಲು ಹೋಗಿದ್ದೆ. ಅಲ್ಲಿ ಬಹಳ ಕಷ್ಟ. ಬೆಳಗ್ಗೆ 6ಕ್ಕೆ ಕೆಲಸಕ್ಕೆ ಹೋದರೆ ರಾತ್ರಿ 8ಕ್ಕೆ ಬಿಡುತ್ತಿದ್ದರು. 170 ರೂ. ಕೂಲಿ ಕೊಡುತ್ತಿದ್ದರು. ಊಟಕ್ಕಾಗಿ ಮನೆ ನಡೆಸುವುದಕ್ಕಾಗಿ ನಾನು ಬಹಳ ತೊಂದರೆ ಅನುಭವಿಸಿದ್ದೇನೆ." "ನನಗೆ ಹೊಲ, ಮನೆ ಇಲ್ಲ. ಬೆಳಿಗ್ಗೆ ಒಂದು ತಾಸು ಕಾಲಿ ಕೂಡ್ರದ ಸಗಣಿ ಬಳಿಯುವ ಕೆಲಸ ಮಾಡಿದರೆ ಒಂದು ಚೀಲ ಜೋಳ ಹೊಟ್ಟೆಗೆ ಆಗತಾವ. ಮತ್ತು 10 ಗಂಟೆಯಿಂದ ಕೂಲಿಗೆ ಹೋಗುತ್ತೇವ. 100 ರೂ. ಕೊಡುತ್ತಾರ. ಇದು ಸಂತಿ ಬಾಳ ಸಾಗತೈತಿ. ನಮಗೆ ಮನೆ ಇಲ್ಲ. ಹೆಚ್ಚಿಗೆ ಊಟ ಮಾಡಕ್ಕೆ ಕಾಳು ಇರುದಿಲ್ಲ. ಆದ್ದರಿಂದ ನಮ್ಮ ಪರಿಸ್ಥಿತಿ ಬಹಳ ಅತಂತ್ರ ಪರಿಸ್ಥಿತಿ ಇದೆ." "ಕೂಲಿ ಕಡಿಮೆ ಇತ್ತು. ಬೆಲ್ಲದ ಚಹಾ, ಎಂಟ ಆಣಿ, ನಾಲ್ಕ ಆಣಿ ತಗೊಂಡು ಊರೆಲ್ಲ ತಿರುಗಾಡುತ್ತಿದ್ದೆವು."

"ದುಡಿಯಲು ನನಗೆ ಆಗುವುದಿಲ್ಲ ಮತ್ತು ಈ ಕೆಲಸ ಮಾಡದಿದ್ದರೆ ಕಣಕ್ಕೆ ಕರೆಯುವುದಿಲ್ಲ. ಕಣಕ್ಕೆ ಕರೆಯದಿದ್ದರೆ ಕಾಳು ಸಿಗುವುದಿಲ್ಲ. ಮೇಲಾಗಿ ಬಡತನ. ನನಗೆ ಯಾರೂ ದಿಕ್ಕು ಇರುವುದಿಲ್ಲ." "ನಾವು ಇಬ್ಬರು ಅಣ್ಣ-ತಮ್ಮ ಬ್ಯಾರೆ ಆದ ಮೇಲೆ ತುಂಬಾ ಬಡತನ ಪರಿಸ್ಥಿತಿಯನ್ನು ಅನುಭವಿಸಿದ್ದೇವೆ. ಊಟಕ್ಕೆ ಗತಿ ಇಲ್ಲದೆ ಒಂದೊಂದು ಹೊತ್ತು ಉಪವಾಸ ಕೂಡ ಮಲಗಿ ಕೊಂಡಿದ್ದೇವೆ." "ಈ 'ಬಿಟ್ಟಿ ಚಾಕರಿ' ಮಾಡುವುದರಿಂದ ಮನಸ್ಸಿಗೆ ನೋವಾಗುತ್ತದೆ. ಆದರೆ ಬಿಡುವ ಹಾಗಿಲ್ಲ. ಬಿಟ್ಟರೆ ರೈತರಿಂದ ಏನೂ ಸಿಗುವುದಿಲ್ಲ. ಅದಕ್ಕೆ ಮನಸ್ಸಿಗೆ ಕಷ್ಟ ಅನಿಸಿದರೂ ಮಾಡಬೇಕಾಗಿದೆ."

"ನಾವು ಹಿಂದೆ 'ಬಿಟ್ಟಿ ಚಾಕ್ರಿ' ಮಾಡುವಾಗ ಬಹಳ ಕಷ್ಟಗಳನ್ನು ಅನುಭವಿಸಿದ್ದೇವೆ. ಯಾಕಾದರೂ ಈ ಬಡತನವಿದೆ? ನಮಗೆ ರೊಟ್ಟಿ ಎಂದರೆ ಕೊಬ್ಬರಿ ಚೂರುಗಳಂತೆ ಅಷ್ಟು ಕಡು ಬಡತನವಿತ್ತು. ಆಗ ರೈತರ ಚಪ್ಪಲಿ ಹರಿದಿದ್ದರೆ ಅವುಗಳನ್ನು ರಿಪೇರಿ ಮಾಡಿ ಕೊಡುತ್ತಿದ್ದೆವು. ಒಂದು ಚಪ್ಪಲಿಗೆ ಒಂದು ರೊಟ್ಟಿ

ಕೊಡುತ್ತಿದ್ದರು. ಅವುಗಳನ್ನು ನಾವೇ ಕೇಳಿ ತರುತ್ತಿದ್ದೆವು." "ಬಡತನ ಪರಿಸ್ಥಿತಿ ಇರುವುದು ಹೆಚ್ಚಾಗಿ ಇತ್ತು. ಅದಕ್ಕಾಗಿ ಏನೇ ಆದರೂ 'ಬಿಟ್ಟಿ ಚಾಕ್ರಿ' ಮಾಡಲೇ ಬೇಕಾಗಿತ್ತು."

"ನನ್ನ ಗಂಡನು ಕಿವುಡ ಇದ್ದರೂ ಕೂಡಾ ನಾನು ಅಂತವರ ಜೊತೆಗೆ ಜೀವನ ತೆಗೆದು ಇಬ್ಬರು ಗಂಡು ಮಕ್ಕಳ ಮದುವೆ ಮಾಡಿ ಇಬ್ಬರು ಹೆಣ್ಣು ಮಕ್ಕಳ ಮದುವೆ ಮಾಡಿ ಕೊಟ್ಟಿದ್ದೇನೆ. ನನ್ನ ವನವಾಸ ಪಾಂಡವರಿಗೆ ಬಂದಿಲ್ಲ."

ಈ ಎಲ್ಲ ಅನುಭವಗಳು ಮೂರೂ ಊರುಗಳ ತೀರ ಬಡತನದ ಪರಿಸ್ಥಿತಿಯನ್ನು ಸ್ಪಷ್ಟಪಡಿಸುತ್ತವೆ. ಯಾರಿಗೂ ಭೂಮಿ ಇಲ್ಲ. ಸ್ವಲ್ಪ ಕಾಲದ ಹಿಂದೆ 'ಮನೆ ಇಲ್ಲ, ಆಸ್ತಿ ಇಲ್ಲ' ಎಂಬ ಉದ್ಗಾರ ಸರ್ವೇ ಸಾಮಾನ್ಯ ಆಗಿತ್ತು. ಈಗ ಬಹುತೇಕ ಹಂಚಿನ ಮನೆಗಳಿದ್ದರೂ ಭೂಮಿ ಒಡೆತನ ಇಲ್ಲವೇ ಇಲ್ಲ. ಕೂಲಿ ಕೆಲಸದ ಅಭಾವವೂ ಅವರ ಜೀವನದ ಅಭದ್ರತೆಯನ್ನು ಇನ್ನೂ ಹೆಚ್ಚಿಸುತಿದ್ದುದು ಅವರನ್ನು 'ಬಿಟ್ಟಿ ಚಾಕ್ರಿ'ಗೆ ಒಪ್ಪಿಕೊಳ್ಳುವಂತೆ ಮಾಡುತ್ತಿದೆ ಎಂಬುದು ಹೆಚ್ಚಿನವರ ಅಭಿಪ್ರಯ. ಕೂಲಿ ಸಿಕ್ಕಿದರೂ ಅದಕ್ಕೆ ಸಿಗುವ ವೇತನ ಬಹಳ ಕಡಿಮೆ. ಈಗಲು ಕೂಡಾ ಸಾಮಾನ್ಯವಾಗಿ ಗಂಡಸರಿಗೆ 150 ರೂ.ಗಳಿದ್ದರೆ ಹೆಂಗಸರಿಗೆ ಸಿಗುವುದು ಕೇವಲ 100 ರೂ. ಬಿತ್ತುವ, ಕಾಳು ಕೀಳುವ, ಹತ್ತಿ ಬಿಡಿಸುವ ಕಾಲಗಳಲ್ಲಿ ಸ್ವಲ್ಪ ಹೆಚ್ಚಿನ ಕೂಲಿ ಸಿಗುತ್ತದೆ. ಜೊತೆಗೆ ಈಗಿನ ಕಾಲದಲ್ಲೂ ವ್ಯಾಪಕವಾದ ಅನಕ್ಷರತೆ ಎದ್ದು ಕಾಣುತ್ತದೆ. ಚಿಕ್ಕ ಮಕ್ಕಳಿದ್ದಾಗಲೇ ತಂದೆ ತಾಯಿಗಳ ಜೊತೆಗೆ ಅವರಿಗೆ ನೆರವಾಗಲು 'ಬಿಟ್ಟಿ ಚಾಕ್ರಿ'ಗೆ ಹೋಗಲು ತೊಡಗಿ, ಪ್ರಾಥಮಿಕ ಹಂತದಲ್ಲೇ ತಮ್ಮ ಶಿಕ್ಷಣ ಮುಗಿಸಿ, 'ಬಿಟ್ಟಿ ಚಾಕ್ರಿ' ಅಥವಾ ಜೀತಕ್ಕಿದ್ದು ತಮ್ಮ ಜೀವನದ ಸಾಧ್ಯತೆಗಳನ್ನು ಮೊಟಕುಗೊಳಿಸಿರುವುದನ್ನು ನಾವು ಕಾಣುತ್ತೇವೆ. ಬಿಟ್ಟಿ ಚಾಕ್ರಿಯಿಂದ ಬಡತನ ನೀಗಲಿಕ್ಕೆ ಅಲ್ಪಸ್ವಲ್ಪವಾದರೂ ನೆರವಾಗುತ್ತದೆ.

'ಬಿಟ್ಟಿ ಚಾಕ್ರಿ' ಮಾಡಲಿಕ್ಕೆ ಮುಖ್ಯ ಪ್ರಲೋಭನೆ ಸುಗ್ಗಿಯ ಕಾಲದಲ್ಲಿ ಪ್ರತಿ ವರ್ಷ ಹೊಲದ ಫಸಲಿನಿಂದ ಸಾಂಪ್ರದಾಯಿಕವಾಗಿ ಮತ್ತು ರೈತರ ಮನೆಯಲ್ಲಿರುವ ಆಕಳುಗಳಿಗನುಸಾರವಾಗಿ ಇಂತಿಷ್ಟು ಚೀಲ ಜೋಳ ಮತ್ತು ಇತರೆ ದವಸಧಾನ್ಯಗಳನ್ನು ಪಡೆಯುತ್ತೇವೆಂಬ ಭರವಸೆ. "ಈ ಕೆಲಸ ಮಾಡದಿದ್ದರೆ ಕಣಕ್ಕೆ ಕರೆಯುವುದಿಲ್ಲ. ಕಣಕ್ಕೆ ಕರೆಯದಿದ್ದರೆ ಕಾಳು ಸಿಗುವುದಿಲ್ಲ." "ಸಗಣಿ ತೆಗೆದರೆ ಮಾತ್ರ ಆಯಗಾಗಿ ಕರೆಯುತ್ತಾರೆ. ಕಣ ಮನಿಗಳಿಗೆ ಕರೆಯುತ್ತಾರೆ." ಎಂಬ ಉದ್ಗಾರ ಕೆಲವು ಮಂದಿ 'ಬಿಟ್ಟಿ ಚಾಕ್ರಿ' ಮಾಡುವವರಿದ್ದು.

**2.9.2 'ಬಿಟ್ಟಿ ಚಾಕ್ರಿ' ಮಾಡುವವರ ನೋವಿನ ಅನುಭವಗಳು:**

'ಬಿಟ್ಟಿ ಚಾಕ್ರಿ' ಒಂದು ತುಂಬಾ ನೋವಿನ ಸಂಗತಿ. 'ಬಿಟ್ಟಿ ಚಾಕ್ರಿ' ಮಾಡುವುದು ಹಲವಾರು ರೀತಿಗಳಲ್ಲಿ ಒಂದು ನೋವಿನ ಸಂಗತಿ. ಕುಟುಂಬದ ಹಲವಾರು ಮಂದಿ ಮೇಲೆ, ಪ್ರತ್ಯೇಕವಾಗಿ ಚಿಕ್ಕ ಮಕ್ಕಳು, ಶಾಲೆಗೆ ಹೋಗುವ ಮಕ್ಕಳು, ಅನಾರೋಗ್ಯದಿಂದ ಬಳಲುವ ಗಂಡ, ತಂದೆ ತಾಯಿಗಳಿಗೆ

ಸಮಯಕ್ಕೆ ಸರಿಯಾಗಿ ಆರೈಕೆ ಮಾಡಲಿಕ್ಕಾಗದೇ ನೋವನ್ನು ತಿನ್ನುವ ಪರಿಸ್ಥಿತಿ ಅದು ಒದಗಿಸುತ್ತದೆ. ಅದರ ಹಲವಾರು ಮುಖಗಳನ್ನು ಬಿಟ್ಟಿಚಾಕ್ರಿ ಮಾಡುವವರು ತೋಡಿಕೊಂಡಿದ್ದಾರೆ: "ಚಿಕ್ಕ ಮಕ್ಕಳನ್ನು ಬಿಟ್ಟು ಹೊಲದಲ್ಲಿ ಕೆಲಸ ಮಾಡಿಕೊಂಡು ಹೋಗಿ 'ಬಿಟ್ಟಿ ಚಾಕರಿ' ಮಾಡಿ ಬಂದು ಕೂಲಿ ಕೆಲಸಕ್ಕೆ ಹೋಗುತಿದ್ದೆವು. 'ಚಾಕ್ರಿ' ಮಾಡುವುದು ಒಂದು ನೋವಿನ ಸಂಗತಿ." "ಇದು ತುಂಬಾ ನೋವಿನ ಸಂಗತಿ. ಏಕೆಂದರೆ ನಾವು ಬರುವುದಿಲ್ಲವೆಂದರೂ ಮಾಲಿಕರು ಬಂದು ನಮಗೆ ಕೇಳುತ್ತಾರೆ. ನಿಮಗೆ ನಮ್ಮ ಕೆಲಸ ಮಾಡಲು ಆಗದಿದ್ದರೆ ನೀವೇ ಬೇರೆಯವರನ್ನ ಕಳಿಸಿ ಕೊಡಿ. ನಮ್ಮ ಮನೆಯಲ್ಲಿ ನಮ್ಮ ಹೆಂಡತಿ ಮಕ್ಕಳು ಬಳಿಯಬೇಕೇನು? ಎಂದು ಕೇಳುತ್ತಾರೆ ಅದಕ್ಕಾಗಿ ಹೋಗಲೇಬೇಕು." "ನಮ್ಮ ತಂದೆ ಅನಾರೋಗ್ಯದಿಂದ ಬಳಲುವಾಗ ನಮಗೆ ಬಹಳ ಹಣದ ಸಮಸ್ಯೆ ಎದುರಿಸಿದ್ದೇವೆ. ಊಟಕ್ಕಾಗಿ ಪರದಾಡಿದ್ದೇವೆ." "ಮಳೆಕಾಲದಲ್ಲಿ ತುಂಬಾ ತ್ರಾಸ ಆಗತೈತಿ. ಅಡಿಗೆ ಹೋಗಬೇಕಾದ್ರೆ ತಲೆ ಮೇಲೆ ಸಗಣಿ ಬುಟ್ಟಿ ಹೊತ್ತು ಕೈಯಲ್ಲಿ ಉಚ್ಚಿ ಬಿಂದಿಗೆ ಗಂಜಲ ಕೊಡ ಹೊರಬೇಕು. ನನ್ನ ಮಗ ಕೆಲಸ ಮಾಡುತ್ತಾನೆ. ಇದರಿಂದ ಮುಜುಗರ ಆಗುತ್ತದೆ. ನನ್ನ ಮಗ ಶಾಲೆಗೆ ಹೋಗಬೇಕು ಅಂತಾ ಅವಸರ ಮಾಡುತ್ತಾನೆ. ಇದನ್ನು ನೋಡಿ ನೋವಾಗುತ್ತೆ." "ಮುಂಜಾನೆ ಎದ್ದು ಕೂಡಲೇ ಸಗಣಿ ಮೈಮೇಲೆ ಸೋರುತ್ತೆ. ವಾಸನೆ ಬರುತ್ತೆ. ಇದರಿಂದ ನನಗೆ ಬಹಳ ನೋವಾಗುತ್ತದೆ. ಮತ್ತು ನನ್ನ ಹೆಂಡತಿ, ತಾಯಿಗೂ ಕೂಡ ನೋವು ಆಗುತ್ತೆ." "ನನ್ನ ಗಂಡನಿಗೆ ಲಕ್ವ ಹೊಡೆದಿದ್ದರೂ ಕೆಲವು ದಿನ ನಾನು ಸಗಣಿ ಕೆಲಸಕ್ಕೆ ಹೋಗಲೇ ಬೇಕಾಗಿತ್ತು. ನಾನು ಬರುವ ಹೊತ್ತಿಗೆ ನನ್ನ ಗಂಡ ಹಾಸಿಗೆಯಲ್ಲಿ ರೋಜು ಮಾಡಿಕೊಳ್ಳುತ್ತಿದ್ದರು. ಇದರಿಂದ ತುಂಬಾ ನೋವು ಅನುಭವಿಸಿದ್ದೇನೆ." "ನನ್ನ ಗಂಡ ಸಣ್ಣ ವಯಸ್ಸಿನಲ್ಲಿ ಮಾನಸಿಕ ಖಾಯಿಲೆಯಿಂದ ಬಳಲಿ ತೀರಿಹೋದರು." "ಗಂಡನು ತೀರಿಕೊಂಡ ಎಂಟು ದಿನಗಳಲ್ಲಿ ನಾನು ನನ್ನ ತವರು ಮನೆಗೆ ಬಂದೆನು. ಆವಾಗ ನನ್ನ ಮಗಳಿಗೆ ಆರು ವರ್ಷ. ಮಗನಿಗೆ ಒಂಬತ್ತು ತಿಂಗಳ ವಯಸ್ಸಾಗಿತ್ತು. ಅವರನ್ನು ಜೋಪಾನ ಮಾಡಬೇಕೆಂದರೆ ನಾನು ಸಗಣಿ ಮನೆಗೆ ಹೋಗಬೇಕಾಯಿತು." "ನನಗೆ ನಾಲ್ಕು ಜನರು ಹೆಣ್ಣು ಮಕ್ಕಳು ಇಬ್ಬರು ಗಂಡು ಮಕ್ಕಳು. ಅವರು ಸಣ್ಣವರಿದ್ದಾಗ ಅವರನ್ನು ಬೆಳೆಸುವುದು, ಶಾಲೆಗೆ ಕಳಿಸಲು ಆಗಲಿಲ್ಲ. 2ನೇ–3ನೇ ಕಲಿತು ಬಿಟ್ಟಿದ್ದಾರೆ."

'ಬಿಟ್ಟಿ ಚಾಕ್ರಿ' ಮಾಡುವವರು ಬೀಗರ ಕೊಂಕು ನುಡಿಗಳಿಗೆ ಬಲಿಯಾಗಿ ವಿಪರೀತ ನೋವು ತಿನ್ನುವಂತಾಗುತ್ತದೆ. ಜೊತೆಗೆ ಒಳ್ಳೆಯ ಮದುವೆ ಸಂಬಂಧ ಕಳೆದು ಕೊಳ್ಳಲುತ್ತಿದ್ದೇವೆ ಎಂಬ ಇನ್ನೊಂದು ನೋವು ಬೇರೆ: "ನಮಗೆ ಈ ಸಗಣಿ ಬಳಿಯುವ ಕೆಲಸ ತುಂಬಾ ಅಸಹ್ಯವಾದ ಕೆಲಸ. ನಮಗೆ ಬೀಗರು ಅಥವಾ ಮನೆಗೆ ಮಕ್ಕಳಿಗೆ ಹೆಣ್ಣು ಕೊಡಲು ಬಂದಾಗ ನೀವು ಏನು ಮಾಡುತ್ತೀರಿ ಎಂದು ಕೇಳಿದಾಗ ನಮಗೆ ಹೇಳಲಿಕ್ಕೆ ತುಂಬಾ ಮುಜುಗರ ಅನಿಸುತ್ತದೆ. ಏನು ಮಾಡುವುದು? ನಾವು ಈ ಕೆಲಸ ಮಾಡಿದರೆ ನಮ್ಮ ಹೊಟ್ಟೆ ತುಂಬುವುದು. ಇಲ್ಲದಿದ್ದರೆ ಬಹಳ ಕಷ್ಟ ಇದೆ." "'ಬಿಟ್ಟಿ ಚಾಕ್ರಿ' ಮಾಡುವುದರಿಂದ ನಮಗೆ ಬಹಳ ನೋವಾಗುತ್ತೆ. ಬೇರೆ ಊರಿನ ಜನ ನೀವು ಇನ್ನೂ ಯಾಕೆ ಸಗಣಿ ಬಳಿಯುತ್ತೀರಿ? ಎಂದು ಕೇಳುತ್ತಾರೆ. ನಮ್ಮ ಊರಿಗೆ ಹೆಣ್ಣು ಮಕ್ಕಳನ್ನು ಕೊಡುವುದಕ್ಕೆ ಹಿಂಜರಿಯುತ್ತಾರೆ." "ನನ್ನ ಹೆಂಡತಿ ತವರು

ಮನೆ ಧಾರವಾಡ ಜಿಲ್ಲೆ ಕರಡಿಗುಡ್ಡ. 'ಇಲ್ಲಿ ಯಾರು 'ಬಿಟ್ಟಿ ಚಾಕ್ರಿ' ಮಾಡುತ್ತೀರಿ? ಅದನ್ನು ಬಿಡಬೇಕು' ಎಂದು ತಿಳಿಸಿದರು. ನಮ್ಮ ಊರಿಗೆ ಹೆಣ್ಣು ಕೊಡಲು ಯೋಚನೆ ಮಾಡುತ್ತಾರೆ."

'ಬಿಟ್ಟಿ ಚಾಕ್ರಿ'ಯಿಂದ ಜೀವನ ಸಾಗಿಲಿಸಕ್ಕಾಗದೇ ಮಗಳ ಮದುವೆಗಾಗಿ ಸಾಲ ಮಾಡಿ ಮಗನನ್ನು ಜೀತಕ್ಕೆ ಕಳುಹಿಸಿದ ನೋವು ಒಬ್ಬ ತಂದೆಗಿದೆ: "ಈ 'ಬಿಟ್ಟಿ ಚಾಕರಿ' ಕೆಲಸ ಮತ್ತು ನನ್ನ ಕಡಿಮೆ ಕೂಲಿಯಿಂದಾಗಿ ನನ್ನ ಮಗ ರವಿಯನ್ನು ಜೀತಕ್ಕೆ ಕಳಿಸಿದ್ದೆವು. ನನ್ನ ಮಗಳ ಮದುವೆಗೆ ಸಾಲಕ್ಕಾಗಿ ನನ್ನ ಮಗನನ್ನು ಜೀತಕ್ಕೆ ಇಟ್ಟೆವು. 60 ಸಾವಿರ ರೂ. ಸಾಲ ಮಾಡಿದ್ದೆವು. ಆರು ತಿಂಗಳು ದುಡಿಸಿಕೊಂಡು ಏನು ಕೊಡದೇ ಕಳುಹಿಸಿದರು. ಇಂಚಲದಲ್ಲಿ ಕೆಲಸಕ್ಕೆ ಹೋಗಿ ಅವರ ಸಾಲ ತೀರಿಸಿ ನನ್ನ ಮಗನನ್ನು ಬಿಡಿಸಿದ್ದೆವು."

ಹೊಸದಾಗಿ ಮದುವೆಯಾಗಿ ಬಂದ ಹೆಣ್ಣು ಮಗುವಿಗೆ ಮಾರನೇ ದಿನವೇ ಗಂಡನ ಮನೆಯವರು 'ಬಿಟ್ಟಿ ಚಾಕ್ರಿ'ಗೆ ಕಳುಹಿಸಿಕೊಟ್ಟ ನೋವು ಇನ್ನೂ ಇದೆ: "ಮದುವೆಯಾದ ತಕ್ಷಣವೇ ಮಾರನೇ ದಿನ ಗೌಡರ ಮನೆಗೆ ಕರೆದುಕೊಂಡು ಹೋಗಿ ನನ್ನ ಪರಿಚಯ ಮಾಡಿಕೊಟ್ಟು ಸಗಣಿಗೆ ಇನ್ನೂ ಇವಳು ಬರುತ್ತಾಳೆ. ನಿಮ್ಮ ಹೊಲದ ಹೊಲತಿ ಈಕೆ ಎಂದು ಪರಿಚಯ ಮಾಡಿಕೊಟ್ಟರು."

'ಬಿಟ್ಟಿ ಚಾಕ್ರಿ'ಯು ಸ್ವಾತಂತ್ರ್ಯ ಇಲ್ಲದ ಬದುಕು ಎಂಬ ನೋವನ್ನು ಸರಿಯಾಗಿಯೇ ಗುರುತಿಸಿದ್ದಾರೆ ಒಬ್ಬ ಗಂಡಸರು: "'ಬಿಟ್ಟಿ ಚಾಕ್ರಿ' ಮಾಡುವುದು ಬಿಟ್ಟು ಊರಿಗೆ ಎಂಟು ದಿನಗಳ ನಂತರ ಹೋದರೆ ಫೋನ್ ಮಾಡಿ ಬೈದು ಕರೆಸಿಕೊಂಡರು. ನಮಗೆ ಸ್ವತಂತ್ರವು ಇಲ್ಲದಾಗಿರುವುದು ನಮಗೆ ನೋವಿನ ಸಂಗತಿಯಾಗಿದೆ." ಹಬ್ಬ ಹರಿದಿನಗಳಲ್ಲೂ ಬಿಟ್ಟಿ ಚಾಕ್ರಿ ಮಾಡುವವರನ್ನು ಕಟ್ಟಿಹಾಕಿ ಇಡುತ್ತದೆ: 'ಚಾಕ್ರಿ' ಮಾಡುವುದು ಒಂದು ನೋವಿನ ಸಂಗತಿ. ನಮ್ಮಲ್ಲಿ ಹಬ್ಬಗಳನ್ನು ಮಾಡುವುದು ಬಿಟ್ಟು ನಾವು ರೈತರ ಮನೆಗೆ ಹೋಗಿ ಈ ಚಾಕ್ರಿ ಕೆಲಸವನ್ನು ಮಾಡಬೇಕು. ಇದರಿಂದ ನಮಗೆ ನೋವು ಆಗಿತ್ತು." ಇನ್ನೂ ಬಿಟ್ಟಿ ಚಾಕ್ರಿಯಿಂದ ಮುಕ್ತರಾಗಿಲ್ಲ ಎಂಬ ನೋವು, ಕೊರಗು ಒಬ್ಬರಿಗಿದೆ: "ಅಷ್ಟು ವರ್ಷದಿಂದ ಮಾಡಿಕೊಂಡು ಬರುತ್ತಿರುವ ಈ 'ಚಾಕ್ರಿ' ಕೆಲಸವನ್ನು ನಾವು ಇನ್ನೂ ಮಾಡುತ್ತಿದ್ದೇವೆ ಎಂಬುದು ನಮಗೆ ಬಹಳ ನೋವು ಅನಿಸುತ್ತದೆ."

'ಬಿಟ್ಟಿ ಚಾಕ್ರಿ'ಯವರು ಸಗಣಿ ಬಾಚುವಾಗ ಮಾನವ ಹೇಸಿಗೆಯನ್ನೂ ಬಾಚಬೇಕಾಗಿರುವುದು 'ಬಿಟ್ಟಿ ಚಾಕ್ರಿ'ಯ ಇನ್ನೊಂದು ವಿಲಕ್ಷಣ ಮುಖವನ್ನು ತೋರಿಸುತ್ತದೆ: "ಬೇಸರ ಬರುತ್ತದೆ. ಸಗಣಿಯಲ್ಲಿ ವಯಸ್ಸಾದವರು ಅಲ್ಲಿಯೇ ಹೇಸಿಗೆಯನ್ನು ಒಗೆಯುತ್ತಾರೆ. ಅದನ್ನು ತೆಗೆಯಬೇಕು."

ಬಡತನವು 'ಬಿಟ್ಟಿಚಾಕ್ರಿ'ಯ ಬದುಕಿಗೆ ದಲಿತರನ್ನು ಒಡ್ಡಲಿಕ್ಕೆ ಒಂದು ಮುಖ್ಯವಾದ ಕಾರಣವಾಗಿದೆ. "ನನ್ನ ಕುಟುಂಬದಲ್ಲಿ ಕೂಲಿ ಕಡಿಮೆ. ಆವಾಗ ಆಣೆ ಕೂಲಿ ಕೊಡುತ್ತಿದ್ದರು. ಬಹಳ ಕಷ್ಟವಾಗುತ್ತಿತ್ತು ಜೀವನ ನಡೆಸಲು. ಏಕೆಂದರೆ ತುಂಬಾ ಮಳೆಗಾಲ ಇರುತ್ತಿತ್ತು. ಹೊರಗೆ ಹೋಗಲು

ಬಿಡುತ್ತಿರಲಿಲ್ಲ ಅಷ್ಟು ಮಳೆಗಾಲ." "ರೊಕ್ಕ ಕೊಟ್ಟು ಜೋಳ ಕೊಂಡು ಕೊಳ್ಳಲು ಆಗುವುದಿಲ್ಲ ಎಂದು ಮತ್ತು ಮಕ್ಕಳು ತುಂಬಾ ಸಣ್ಣವರಿದ್ದರು. ಈಗ ಸ್ವಲ್ಪ ದೊಡ್ಡವರಾಗಿದ್ದಾರೆ." "ನಮಗೆ ಜಮೀನು ಇದ್ದಿದ್ದರೆ ನಾವೇಕೆ ಬಿಟ್ಟಿ ಚಾಕರಿ ಕೆಲಸವನ್ನು ಮಾಡಬೇಕಾಯಿತು ಎಂಬುದು ತುಂಬಾ ನೋವಿನ ಸಂಗತಿ." "ನಮಗೂ ಭೂಮಿ ಅದು ಇದ್ದಿದ್ದರೆ ನಾವು ಒಳ್ಳೆಯ ರೀತಿಯಲ್ಲಿ ದುಡಿದು ಜೀವನ ನಡೆಸುತ್ತಿದ್ದೆವು." "ಮಗನನ್ನು ದವಾಖಾನೆಗೆ ತೋರಿಸುವುದಕ್ಕೆ ರೊಕ್ಕ ಇರಲಿಲ್ಲ. ಊರಿನ ದೊಡ್ಡ ದೊಡ್ಡ ರೈತರ ಕೈ ಕಾಲುಗಳನ್ನು ಬೇಡಿಕೊಂಡು ಅವರ ಕಡೆಯಿಂದ 10,000 ರೂ. ತೆಗೆದುಕೊಂಡು ಮಗನನ್ನು ದವಾಖಾನೆಗೆ ತೋರಿಸಿದ್ದೇನೆ."

ಜಾತಿಯ ಕಾರಣದಿಂದ ಮಾಲಿಕರು ಮಾಡುವ ಅವಮಾನವೂ ನೋವಿಗೆ ಕಾರಣ: "ನಾವು ಭೂಮಿ, ಆಸ್ತಿ ಇಲ್ಲದವರು. ನಾವು ತುಂಬಾ ಬಡತನದಿಂದ ಬಂದವರು. ನಮಗೆ ಮಾಲಿಕರು ಅಂತರದಿಂದ ರೊಟ್ಟಿ ಕೊಡುತ್ತಾರೆ. ಮತ್ತು ಹೊಲೆಯ ಎಂದು ಕರೆಯುವಾಗ ನನ್ನ ಮನಸಿಗೆ ತುಂಬಾ ನೋವಾಗುತ್ತದೆ."

'ಬಿಟ್ಟಿ ಚಾಕ್ರಿ'ಯ ಕೆಲಸ ದೈಹಿಕ ಕಾಯಿಲೆಗೂ ತಳ್ಳುತ್ತದೆ: "ನನಗೆ ನಾನು ಚಿಕ್ಕವ ಇರುವಾಗಲಿಂದಲೂ ಈ ಸಗಣಿ ಕೆಲಸ ಮಾಡುತ್ತಾ ಬಂದಿರುವುದರಿಂದ ನನಗೆ ನಡನೋವು ಬಂದಿರುತ್ತದೆ."

ಎಷ್ಟು ಕಷ್ಟ ಪಟ್ಟರೂ ಬಿಟ್ಟಿ ಚಾಕ್ರಿಯವರಿಗೆ ಮಾಲಿಕರು ಸರಿಯಾಗಿ ವರ್ಷದ ಕಾಳು ಕೊಡದೇ ಇರುವುದು ಅಪರೂಪವೇನೂ ಅಲ್ಲ. "ನಾವು ಎಷ್ಟು ಬೆಳಿಗ್ಗೆ ಹೋಗಿ ಸಗಣಿ ಕೆಲಸ ಮಾಡಿದರೂ ಮಾಲೀಕರು ನಮಗೆ ಸರಿಯಾದ ರೀತಿಯಲ್ಲಿ ಕಾಳು ಕೊಡುತ್ತಿರಲಿಲ್ಲ ಇದರಿಂದ ಬಹಳ ನೋವು ಅನುಭವಿಸಿದ್ದೇವೆ."

ಹೀಗೆ ಬೆಳಿಗ್ಗೆ ಹೊತ್ತು ಕುಟುಂಬದ ಆರೈಕೆಯ ಬಗ್ಗೆ ಗಮನವನ್ನು ಬದಿಗಿಡಬೇಕಾಗುತ್ತದೆ. ಚಿಕ್ಕ ಮಕ್ಕಳಿರಲಿ, ಶಾಲೆಗೆ ಹೋಗುವ ಮಕ್ಕಳಿರಲಿ, ವಯಸ್ಸಾದ ತಂದ ತಾಯಿ ಇರೊಇ, ಕಾಯಿಲೆಯಿಂದ ನರಳುವ ಗಂಡನಿರಲಿ, ಅವರನ್ನು ಹಾಗೆಯೇ ಬಿಟ್ಟು ಮೊದಲು 'ಬಿಟ್ಟಿ ಚಾಕ್ರಿ' ಕೆಲಸ ಪೂರೈಸಿ ನಂತರ ಅವರ ಕಡೆ ಗಮನ ಕೊಡಬೇಕು. ಅನಿವಾರ್ಯದಿಂದ ತಪ್ಪಿಸಿಕೊಂಡರೂ ಮಾಲಿಕರು ಒತ್ತಾಯದಿಂದ ಕರೆಸಿಕೊಳ್ಳುತ್ತಾರೆ ಅಥವಾ ಬದಲಿ ಆಳನ್ನು ಕಳುಹಿಸಲು ನಿರ್ಬಂಧಿಸುತ್ತಾರೆ. ಬಗ್ಗಿ ಬಗ್ಗಿ ದಿನಾಲೂ ಸೆಗಣಿ ಎತ್ತುವ ಹೊರುವ ಕೆಲಸ ಮಾಡುತ್ತಾ ನಡುನೋವಿನಿಂದ ನರಳುವುದನ್ನು ಒಬ್ಬರು ಹೇಳಿಕೊಂಡಿದ್ದಾರೆ.

'ಬಿಟ್ಟಿಚಾಕ್ರಿ'ಯನ್ನು ಕೆಲವು ಮಹಿಳೆಯರು ಮಾಡಲೇ ಬೇಕಾದ ಅನಿವಾರ್ಯತೆ ಇದೆ. ಸಣ್ಣ ವಯಸ್ಸಿನಲ್ಲೇ ಗಂಡ ತೀರಿದ್ದರಿಂದ ಚಿಕ್ಕ ಮಕ್ಕಳೊಂದಿಗೆ ತವರಿಗೆ ಬಂದಾಗ ಅವರನ್ನು ಸಾಕಲು 'ಬಿಟ್ಟಿ ಚಾಕ್ರಿ'ಯ ಮೊರೆ ಹೋಗಿರುವುದನ್ನು ನೋವಿನಿಂದ ಹೇಳಿಕೊಂಡಿದ್ದಾರೆ ಒಬ್ಬ ಮಹಿಳೆ. ಮದುವೆಯಾಗಿ

ಗಂಡನ ಮನೆಗೆ ಬಂದ ಮಾರನೇ ದಿನದಿಂದಲೇಕ್ತೆ ಸೊಸೆಯನ್ನು ಮಲಿಕರಿಗೆ 'ಇವಳು ನಿಮ್ಮ ಮನೆಯ ಹೊಲತಿ' ಎಂದು ಪರಿಚಯಿಸಿ 'ಬಿಟ್ಟಿ ಚಾಕ್ರಿ'ಗೆ ಹಚ್ಚಿದ್ದನ್ನು ಈಗಲೂ ದು:ಖದಿಂದ ಒಬ್ಬರು ನೆನಪಿಸಿಕೊಳ್ಳುತ್ತಾರೆ.

ಸೆಗಣಿ ಬಾಚುವಾಗ ಕೆಲವು ಮನೆಗಳಲ್ಲಿ ಮನೆಯವರೂ ತಾವು ಅಲ್ಲೇ ಹೇಸಿಗೆ ಮಾಡಿದ್ದನ್ನು ಬಾಚಬೇಕಾಗಿರುವುದು ತುಂಬ ಹಿಂಸೆ ನೀಡುತ್ತದೆ ಎಂದು ಒಬ್ಬರು ಹೇಳಿಕೊಂಡಿದ್ದಾರೆ. ಸೆಗಣಿ ಹೊರುವುದಂತೂ ತುಂಬಾ ಹೇಸಿಗೆಯ ಕೆಲಸ. ಮಳೆಗಾಲದಲ್ಲಂತೂ ಕೊಟ್ಟಿಗೆಯಿಂದ ತಿಪ್ಪೆ ಗುಂಡಿ ತನಕ ಅದನ್ನು ಎತ್ತಿಕೊಂಡು ಹೋಗುವಾಗ ಮಳೆನೀರಿನೊಂದಿಗೆ ಸೆಗಣಿ ನೀರು ತಲೆಯಿಂದ ಹಿಡಿದು ಬಟ್ಟೆ ಮೈಯೆಲ್ಲಾ ತೊಯ್ದು ಅದರ ವಾಸನೆಯಿಂದ  ನರಳಬೇಕಾಗುತ್ತದೆ. ಎಷ್ಟು ತೊಳೆದರೂ ಆ ವಾಸನೆ ಸುಲಭದಲ್ಲಿ ಹೋಗುವುದಿಲ್ಲ. ಇದೆಲ್ಲಾ ದೈಹಿಕ ಹಿಂಸೆಯಾದರೆ, ಜಾತಿ ಹೆಸರಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರನ್ನು ಬೈಯುವುದು ಅವಮಾನದ ಮಾನಸಿಕ ಹಿಂಸೆಯ ಸಂಗತಿ.

ಇಷ್ಟೆಲ್ಲಾ ಕಷ್ಟ ಪಟ್ಟರೂ ವರ್ಷದ ಕಾಳು ಕೊಡುವಾಗ ಕೊಡುವ ಪ್ರಮಾಣದಲ್ಲಿ ವಂಚನೆಗಳು ನಡೆಯುತ್ತಾ ಇರುತ್ತವೆ. ಇವನ್ನೇ ನೆಪ ಮಾಡಿ ಬಿಟ್ಟಿ ಚಾಕ್ರಿಯಿಂದ ಕ್ರಮೇಣ ಹೊರಬಂದ ಪ್ರಕರಣಗಳನ್ನು ನಾವು ಕಾಣುತ್ತೇವೆ.

### 2.9.3 'ಬಿಟ್ಟಿ ಚಾಕ್ರಿ' ಮಾಡುವವರ ಅವಮಾನದ ಅನುಭವಗಳು

'ಬಿಟ್ಟಿ ಚಾಕ್ರಿ' ಮಾಡುವ ಬದುಕು ಒಂದು ಅವಮಾನದ ಬದುಕು: 'ಬಿಟ್ಟಿಚಾಕ್ರಿ' ಶೋಷಣೆಯ ಬದುಕಿನ ಜೊತೆ ಅದು ಒಂದು ಅವಮಾನದ ಬದುಕು ಎಂಬುದು ಅದನ್ನು ಮಾಡುವವರ ಹಲವಾರು ಅನುಭವಗಳು ದೃಢೀಕರಿಸುತ್ತವೆ. ಸಾಮಾನ್ಯ ಕೆಲಸವೇ ಅವಮಾನಕರ: "30 ಆಕಳುಗಳ ಸಗಣಿ ಕಸ ಮಾಡುತ್ತಿದ್ದೆ. ನಮ್ಮನ್ನು ಪ್ರಾಣಿಗಳಂತೆ ಕಂಡರು." "ಅವಮಾನದ ಪರಿಸ್ಥಿತಿ ಎಂದು ಬಿಡಬೇಕೆನ್ನಿಸುತ್ತದೆ ಆದರೆ ಹೊಟ್ಟೆಗೆ ಬೇಕಲ್ಲರಿ ಕಾಳುಕಡಿ. ಅದಕ್ಕಾಗಿ ಆಗುವ ಅವಮಾನ ಸಹಿಸಿಕೊಂಡು 'ಬಿಟ್ಟಿ ಚಾಕರಿ'ಯನ್ನು ಮುಂದುವರೆಸಿಕೊಂಡು ಹೋಗುತ್ತಿರುವೆವು."

ಜೊತೆಗೆ ಯಜಮಾನರ ಬೈಗುಳಗಳು: "ಹಿಂದೆ 'ಚಾಕ್ರಿ' ಮಾಡುವಾಗ ಮಾಲೀಕರಿಂದ ಅವಮಾನಕರ ಬೈಗುಳಗಳನ್ನು ಅನುಭವಿಸಿದ್ದೇನೆ. ಲೇಟಾಗಿ ಹೋದಾಗ ಅವಾಚ್ಯ ಶಬ್ದದಿಂದ ಬಯ್ಯುತ್ತಿದ್ದರು. ಇದರಿಂದ ನನಗೆ ಅವಮಾನದಿಂದ ನೋವಾಗುತ್ತಿತ್ತು." "ತಡವಾಗಿ ಹೋದರೆ ಬೈಗಳ ಬೈಯುತ್ತಿದ್ದರು. ಹೊಲೇರ ಎಂದು ಹೇಳುವಾಗ ತುಂಬಾ ಅವಮಾನ ಅಸಹ್ಯಗಳು ಆಗುತ್ತಿದ್ದವು." "ನಮಗೆ ಹೊಲ್ಯಾ ಸೂಳಿಮಕ್ಕಳಿಗ್ಯಾ ಎಂದಾಗ ಅವಮಾನವಾಗುತ್ತದೆ. ಏಕೆಂದರೆ ನಮಗೆ ಬೈದರೂ ನಮಗೆ ಅಸಹ್ಯವಾದರೂ ನಾವು ಅನಿವಾರ್ಯದಿಂದ ಸಗಣಿಯನ್ನು ತೆಗೆದು ಹಾಕ ಬೇಕು." "ಸರಿಯಾಗಿ ಕೆಲಸ ಮಾಡಿದರೂ ಕೂಡ ಬೈಯುತ್ತಿದ್ದರು. ಏಕ ವಚನದಲ್ಲಿ ಮಾತನಾಡುತ್ತಿದ್ದರು. ಇದನ್ನೆಲ್ಲಾ ಕೇಳಿದರೆ ನನಗೆ

ತುಂಬಾ ಮರ್ಯಾದೆ ಕಡಿಮೆ ಆಗುತ್ತಿತ್ತು. ಯಾರಿಗೆ ಹೇಳುವುದು ಬಡತನ ಪರಿಸ್ಥಿತಿ ನನ್ನಂಥ ಪರಿಸ್ಥಿತಿ ಯಾರಿಗೂ ಬರಬಾರದು." "ನಾವು ಸಗಣಿ ತೆಗೆಯುವಾಗ ಅವಮಾನ ಅಸಹ್ಯದ ಕೆಲಸ ಆಗುತ್ತಿತ್ತು. ಮೇಲಿನ ಜಾತಿಯವರು ಬೈಯುವಾಗ ಬಹಳ ಅವಮಾನವಾಗುತ್ತಿತ್ತು."

'ಬಿಟ್ಟಿ ಚಾಕ್ರಿ' ಮಾಡುವವರನ್ನು ಜನರು ಕೂಡಾ ಹೀಯಾಳಿಸುವುದೂ ಸಾಮಾನ್ಯವಾಗಿದೆ: "ನಾನು ಹೊಸದಾಗಿ ಮದುವೆ ಆದ ಮೇಲೆ 'ಬಿಟ್ಟಿ ಚಾಕ್ರಿ' ಕೆಲಸಕ್ಕೆ ಹೋದಾಗ ನನ್ನ ಹೆಂಡತಿಯನ್ನು ಜೊತೆ ಕರೆದುಕೊಂಡು ಹೋಗುವಾಗ ಊರಿನ ಜನ ನಮ್ಮನ್ನು ಹೀಯಾಳಿಸಿ ಮಾತಾಡುತ್ತಿದ್ದರು. ಇದರಿಂದ ನಮಗೆ ಅವಮಾನವಾಗಿತ್ತು." "ನಾವು ಓಣಿಯಲ್ಲಿ ಸಗಣಿ ಬುಟ್ಟಿಯನ್ನು ಹೊತ್ತು ಕೊಂಡು ಹೋಗುವುದು ನಮಗೆ ತುಂಬಾ ಅಸಹ್ಯದ ಕೆಲಸ." "ನನ್ನ ತವರು ಮನೆಯಲ್ಲಿ ಬಡತನ ಮತ್ತು ಕೂಲಿ ಸಮಸ್ಯೆ. ಅಲ್ಲಿಯೇ ಬೇರೆ ಹಳ್ಳಿಗೆ ಹೋಗಿ ಕೆಲಸ ಮಾಡಬೇಕಾಗುತ್ತದೆ. ನನ್ನ ತವರು ಮನೆಗೆ ಬಂದು 'ಬಿಟ್ಟಿ ಚಾಕ್ರಿ' ಮಾಡುವುದರಿಂದ ಊರಿನ ನನಗೆ ಅವಮಾನ ಬಹಳ ಆಗಿದೆ. ಆದರೂ ಹೇಗಾದರು ಮಾಡಿ ಜೀವನ ನಡೆಸುವುದು ನಮಗೆ ಅನಿವಾರ್ಯವಾಗಿದೆ. ಅದಕ್ಕಾಗಿ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದೇವೆ."

ಸೆಗಣಿ ಹೊರುವುದರಿಂದ ಅದರ ವಾಸನೆ ಅಸಹ್ಯಕರ: "'ಚಾಕ್ರಿ' ಕೆಲಸ ಮಾಡುವುದರಿಂದ ಅವಮಾನ ಆಗುತ್ತೆ. ಸಗಣಿ ಮೈ ಮೇಲೆ ಸೋರುತ್ತೆ, ವಾಸನೆ ಬರುತ್ತೆ." "ಸಗಣಿ ತುಂಬಿಕೊಂಡು ಹೋಗುವಾಗ ಮೈಮೇಲೆ ಸೋರಿ ವಾಸನೆ ಬರುತ್ತದೆ ಇದಕ್ಕೆ ನಮಗೆ ಬಹಳ ಅವಮಾನದ ಸಂಗತಿಯಾಗಿದೆ. ಇದರಿಂದ ನಾವು ಕೇರಿ ಮತ್ತು ಊರಿನಲ್ಲಿ ತುಂಬ ಅವಮಾನವಾಗಿದೆ." "ನಾವು ಬೆಳಿಗ್ಗೆ ಹೋಗಿ ಗೌಡ್ರು ಮನೆ ಸಗಣಿ ಬಳಿಯುವುದರಿಂದ ದನದ ಉಚ್ಚೆಗಳ ತುಂಬುವುದರಿಂದ, ನಾವು ಸಗಣಿ ನಾರುತ್ತೇವೆ. ಇದರಿಂದ ಅವಮಾನವಾಗುತ್ತದೆ." "ಸಗಣಿ ಬುಟ್ಟಿಯನ್ನು ಓಣಿಯಲ್ಲಿ ಹೊತ್ತುಕೊಂಡು ಹೋಗುವುದು ಒಂದು ದೊಡ್ಡ ಅಸಹ್ಯಕರವಾದದ್ದು. 'ಬಿಟ್ಟಿ ಚಾಕ್ರಿ' ಮನೆಯವರು ಮತ್ತು ತಿಪ್ಪೆಗಳು ದೂರವಿರುತ್ತವೆ."

ಬೀಗರ ಮುಂದೆ 'ಬಿಟ್ಟಿ ಚಾಕ್ರಿ'ಯನ್ನು ಒಪ್ಪಿಕೊಳ್ಳುವುದು ಇನ್ನೊಂದು ರೀತಿಯ ಅವಮಾನಕ್ಕೆ ಅವರನ್ನು ಒಳಗಾಗಿಸುತ್ತದೆ. "ನನಗೆ ಬೆಳಿಗ್ಗೆ ಎದ್ದು ರೈತರ ಮನೆಗೆ ಹೋಗುವಾಗ ನಮ್ಮ ಮನೆಗೆ ಬೀಗರು ಬಂದಿದ್ದಾಗ ಅವತ್ತು 'ಎಲ್ಲಿಗೆ ಹೋಗುತ್ತಿ?' ಎಂದಾಗ ಮನಸ್ಸಿಗೆ ತುಂಬಾ ನೋವಾಗುತ್ತದೆ. ಮತ್ತು ನಮ್ಮ ಮನೆಗೆ ಹೆಣ್ಣು ಕೇಳಲು ಹೋದಾಗ 'ಏನು ಕೆಲಸ ಮಾಡುತ್ತೀರಿ?' ಎಂದಾಗ ನಮಗೆ ಬಹಳ ಅವಮಾನವಾಗುತ್ತದೆ." "ನಮ್ಮ ಬೀಗರು ನಮ್ಮ ಊರಿಗೆ ಬಂದಾಗ ಅವರು ನಾವು ಸಗಣಿ ಉಗಿಯುವುದನ್ನು ನೋಡಿ, ಅವರು ಇನ್ನೂ ರೈತರ ಸಗಣಿ ಉಗಿಯುತ್ತಿದ್ದೀರಾ ಎಂದು ನಮಗೆ ಮಾತನಾಡಿದ್ದಾರೆ. ಇದರಿಂದ ನಮಗೆ ಅವಮಾನವಾಗಿದೆ." "ನಮ್ಮ ಬೀಗರು ನಾವು ಸಗಣೆ ಬಳೆಯುವುದು ನೋಡಿ ಬೈದಿದ್ದಾರೆ. 'ಇನ್ನೂ ನೀವು ಈ ಸಗಣಿ ಕೆಲಸ ಬಿಟ್ಟಿಲ್ಲ, ನೀವು ಯಾವಾಗ ಮುಂದೆ ಬರುತ್ತೀರಿ?' ಎಂದು ನಮ್ಮ ಬೀಗರು ಅವಮಾನ ಮಾಡಿದ್ದಾರೆ." "ನನಗೆ ರೈತರು ನಮ್ಮ ಮನೆಯ ಬಾಗಿಲಿಗೆ ಬಂದು,

'ಲೇ ಬಸ್ಯ ಇನ್ನೂ ಕೆಲಸಕ್ಕೆ ಬಂದಿಲ್ಲ?' ಎಂದು ಕೇಳುವಾಗ ನನ್ನ ಬೀಗರ ಮುಂದೆ ನನಗೆ ತುಂಬಾ ಅವಮಾನವಾಗಿತ್ತು." "ನಾನು 'ಬಿಟ್ಟಿಚಾಕ್ರಿ' ಮಾಡುವಾಗ ನನ್ನ ಕೆಲಸಗಳ ಬಗ್ಗೆ ನಮ್ಮ ಬೀಗರು ಕೇಳಿದರು. ಆವಾಗ ನನ್ನ ತಂದೆ, 'ರೈತರ ಸಗಣಿ ಬಳಿಯುತ್ತೇವೆ' ಎಂದಾಗ ಬೀಗರು ನಕ್ಕರು. ಆವಾಗ ನನಗೆ ಅವಮಾನವಾಗಿದೆ."

ಪ್ರತ್ಯೇಕವಾಗಿ 'ಬಿಟ್ಟಿ ಚಾಕ್ರಿ' ಮಾಡುವವರ ಮನೆಗೆ ಹೆಣ್ಣು ಕೊಡುವುದಕ್ಕೆ ಮುಂದೆ ಬರುವುದಿಲ್ಲ ಎಂಬ ಕೊರಗು ಯಾವಾಗಲೂ ಹಲವರನ್ನು ಕಾಡುತ್ತಿರುತ್ತದೆ ಎಂಬುದಕ್ಕೆ ಈ ಮುಂದಿನ 'ಬಿಟ್ಟಿ ಚಾಕ್ರಿ' ಮಾಡುವವರ ಪ್ರತಿಕ್ರಿಯೆಗಳೇ ಸಾಕ್ಷಿ. "ನನ್ನ ಹೆಂಡತಿ ಊರು ಮಲ್ಲಾಪುರದವರು,'ನೀವು ಯಾಕೆ ಸಗಣಿ ಕಸ ಮಾಡುತ್ತೀರಿ? ಅದನ್ನೆಲ್ಲಾ ಬಿಡಬೇಕು' ಎಂದು ಹೇಳುತ್ತಾರೆ. ನಾವು 'ಚಾಕ್ರಿ' ಮಾಡುವುದರಿಂದ ಹೆಣ್ಣು ಮಕ್ಕಳನ್ನು ಕೊಡುವುದಕ್ಕೆ ಹಿಂಜರಿಕೆ ಮಾಡುತ್ತಾರೆ." "ನಮಗೆ ನಮ್ಮ ಮಕ್ಕಳಿಗೆ ಹೆಣ್ಣು ಕೇಳಲಿಕ್ಕೆ ಹೋದಾಗ,'ನಮ್ಮನ್ನು ಏನು ಮಾಡುತ್ತೀರಿ?' ಎಂದಾಗ 'ನಾವು 'ಬಿಟ್ಟಿ ಚಾಕ್ರಿ' ಕೆಲಸ ಮಾಡುತ್ತೇವೆ' ಎಂದು ಹೇಳಿದಾಗ ಅವರು 'ನಿಮ್ಮ ಮಕ್ಕಳಿಗೆ ಹೆಣ್ಣು ಕೊಡುವುದಿಲ್ಲ' ಎಂದು ಹೋಗುತ್ತಾರೆ. ಆವಾಗ ನಮಗೆ ತುಂಬ ಅವಮಾನವಾಯಿತು." "'ಬಿಟ್ಟಿ ಚಾಕ್ರಿ' ಮಾಡುವುದರಿಂದ ನಮಗೆ ಬಹಳ ನೋವಾಗುತ್ತೆ. ಬೇರೆ ಊರಿನ ಜನ, 'ನೀವು ಇನ್ನೂ ಯಾಕೆ ಸಗಣಿ ಬಳಿಯುತ್ತೀರಿ?' ಎಂದು ನಮ್ಮ ಊರಿಗೆ ಹೆಣ್ಣು ಮಕ್ಕಳನ್ನು ಕೊಡುವುದಕ್ಕೆ ಹಿಂಜರಿಯುತ್ತಾರೆ." "ನಾವು ದುಡಿದು ಹೊಟ್ಟೆ ತುಂಬಿಸಿ ಕೊಳ್ಳುವುದು ಈ 'ಬಿಟ್ಟಿ ಚಾಕರಿ'ಯಿಂದ. ಆದರೆ ನಮ್ಮ ಊರಿಗೆ ಯಾರೂ ಹೆಣ್ಣು ಕೊಡುತ್ತಿರಲಿಲ್ಲ." "ನಮ್ಮ ಮನೆಗೆ ಹೆಣ್ಣು ಕೊಡಲಿಕ್ಕೆ ಬಂದಾಗ 'ನೀವು ಮಾಡುವ ಕೆಲಸ ಏನು?' ಎಂದು ಕೇಳಿದಾಗ ನಮಗೆ ತುಂಬಾ ಅವಮಾನ ಅನಿಸುತ್ತದೆ. ಸಗಣಿ ಬಳಿಯುವ ಕೆಲಸ ತುಂಬಾ ಕಷ್ಟದ ಕೆಲಸ." "ನಮಗೆ ಈ ಸಗಣಿ ಬಳಿಯುವ ಕೆಲಸ ತುಂಬಾ ಅಸಹ್ಯವಾದ ಕೆಲಸ. ನಮಗೆ ಬೀಗರು ಅಥವಾ ಮನೆಗೆ ಮಕ್ಕಳಿಗೆ ಹೆಣ್ಣು ಕೊಡಲು ಬಂದಾಗ 'ನೀವು ಏನು ಮಾಡುತ್ತೀರಿ?' ಎಂದು ಕೇಳಿದಾಗ ನಮಗೆ ಹೇಳಲಿಕ್ಕೆ ತುಂಬಾ ಮುಜುಗರ ಅನಿಸುತ್ತದೆ."

ಸೆಗಣಿ ಹೊರುವ ಅಸಹ್ಯದ ಜೊತೆಗೆ ಜಾತಿ ಅವಮಾನವನ್ನೂ ನುಂಗಿಕೊಂಡು ಹೋಗುವಂತೆ ಮಾಡುತ್ತದೆ 'ಬಿಟ್ಟಿ ಚಾಕ್ರಿ'. "ನನಗೆ ಈ ಕೆಲಸ ಮಾಡುವುದು ತುಂಬ ಕಷ್ಟಕರ ಕೆಲಸ. ನಾನು ಬೆಳಿಗ್ಗೆ ಆರು ಗಂಟೆಗೆ ಎದ್ದು ಮನೆಯಲ್ಲಿ ಸಗಣಿ ಬಳಿಯುವ ಕೆಲಸಕ್ಕೆ ಹೋಗುತ್ತೇನೆ. ನನ್ನ ಹೆಂಡತಿ ಹೋಗೊಲ್ಲ. ಮಕ್ಕಳು ಹೋಗೊಲ್ಲ. ಎಲ್ಲರ ಜೊತೆ ಜಗಳ ಮಾಡಿ ಕೊನೆಗೆ ನಾನೇ ಹೋಗುವುದು. ಊಟ ಹಾಕುವಾಗ ನೀರು ಕೊಡುವಾಗ ಅಂತರದಿಂದ ಕೊಡುವುದು ನನಗೆ ತುಂಬ ಅವಮಾನವಾಗುವುದು." "ಕೀಳಾಗಿ ನೋಡುತ್ತಾರೆ, ನಮಗೆ ಮರ್ಯಾದೆ ಕೊಡುವುದಿಲ್ಲ. ನಾವು ಹೊಟ್ಟೆ ಪಾಡಿಗಾಗಿ ಈ ಕೆಲಸ ಮಾಡಲೇ ಬೇಕು."

ಆದರೆ ಅವಮಾನವು ಹಲವರಿಗೆ ಎಷ್ಟು ಸಾಮಾನ್ಯವಾಗಿ ಬಿಟ್ಟಿದೆ ಎಂದರೆ ಅವಮಾನದ ಬದುಕಿಗೆ ಒಗ್ಗಿ ಕೊಂಡು ಅದನ್ನು ಮರೆತು ಬಿಡುವ ಮನಸ್ಥಿತಿಗೆ ಅವರು ಬಂದಿದ್ದಾರೆ: "ಸಗಣಿ ಬಳಿಯುವುದು

ಏಕೆಂದರೆ ವರ್ಷಕ್ಕೆ 1000 ರೂ.ಗಳು, ಕಣದಲ್ಲಿ ಕಾಳು ಕಡಿ ಸಿಗುವ ಆಸೆಯಿಂದ ಬಳಿಯುತ್ತಿದ್ದೆನು. ಈ ಕೆಲಸವನ್ನು ಬಹಳ ದಿನಗಳಿಂದ ಮಾಡುತ್ತಿರುವುದರಿಂದ ಅವಮಾನ ನಾಚಿಕೆ ಎನ್ನುವುದನ್ನು ಮರೆತು ಬಿಟ್ಟಿದ್ದೇನೆ." ಒಬ್ಬರ ಪ್ರತಿಕ್ರಿಯೆ ಅವಮಾನವನ್ನೇ ಗುರುತಿಸಲಿಕ್ಕೆ ಆಗದ ಪರಿಸ್ಥಿತಿಗೆ ಅವರನ್ನು ತಂದು ಬಿಟ್ಟಿದೆಯೇನೋ ಎಂಬ ಸಂಶಯ ಬಂದು ಆಶ್ಚರ್ಯವಾಗುತ್ತದೆ. "ಸರಿ ಅಂತಾ ಹೇಳಲಿಕ್ಕೆ ಬರುವುದಿಲ್ಲ. ತಪ್ಪು ಎಂದು ಹೇಳಲು ಬರುವುದಿಲ್ಲ. ಒಟ್ಟು ಮೊದಲಿನಿಂದ ಬಂದ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದೇವೆ."

ಹೀಗೆ ಅವಮಾನದ ಮೂಲಗಳು ನೋವುಗಳ ಮೂಲದಂತೆ. ಮುಖ್ಯವಾಗಿ ನಾವು ಗಮನಿಸಬೇಕಾದ ಸಂಗತಿ ಎಂದರೆ 'ಬಿಟ್ಟಿ ಚಾಕ್ರಿ' ಮಾಡದೇ ಇರುವ ಬೀಗರ ಪ್ರತಿಕ್ರಿಯೆಗಳು ಮತ್ತು ಹೊಸ ಸಂಬಂಧಗಳನ್ನು ಕಟ್ಟಿಕೊಳ್ಳಲು ಹೊರಡುವಾಗ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ಸಂಗತಿ ತೀವ್ರ ಮುಜುಗರಕ್ಕೆ ಒಳಗಾಗಿಸುತ್ತದೆ. ಹೊಸ ಸಂಬಂಧ ಹುಡುಕುವ ಆ ಪ್ರಯತ್ನ ಅಲ್ಲಿಯೇ ನಿಲ್ಲುತ್ತದೆ. ಇದರ ಜೊತೆಜೊತೆಗೆ ಮಾಲಿಕರು ಆಡು ಬೈಗುಳ ಮಾತುಗಳು, ಕೀಳಾಗಿ ನೋಡುವ, ಮರ್ಯಾದೆ ಕೊಡದೇ ಇರುವ ವರ್ತನೆಗಳು ಮತ್ತು ಸ್ಪಷ್ಟವಾಗಿ 'ನೀವು ಕೀಳು, ಅಸ್ಪೃಷ್ಯ' ಎಂದು ತೋರಿಸಲು ಊಟವನ್ನು, ನೀರನ್ನು ಮೇಲಿನಿಂದ ಹಾಕುವುದು, ದಲಿತರ ರೂಢಿಗತ ಹೆಸರುಗಳನ್ನು ಬಳಸಿ ಏಕವಚನದಿಂದ ಕರೆಯುವುದುಮುಂತಾದ ವರ್ತನೆಗಳು ಬಿಟ್ಟಿ ಚಾಕ್ರಿ ಮಾಡುವವರಿಗೆ ಅವಮಾನಕರವಾದರೆ, ಒಟ್ಟಾರೆಯಾಗಿ 'ಬಿಟ್ಟಿ ಚಾಕ್ರಿ' ಬದುಕು ಜಾತಿ ವ್ಯವಸ್ಥೆಯೊಂದಿಗೆ ಹೆಣೆದು ಕೊಂಡಿರುವುದನ್ನು ಸ್ಪಷ್ಟಪಡಿಸುತ್ತವೆ. ಜಾತಿ ವ್ಯವಸ್ಥೆಯಲ್ಲಿ ತಾವು ಮನುಷ್ಯರಲ್ಲ; ಪ್ರಾಣಿಗಳಿಗಿಂತಲೂ ಕೀಳು ಎಂಬುದನ್ನು 'ಬಿಟ್ಟಿ ಚಾಕ್ರಿ' ಮಾಡುವವರಿಗೆ ಸ್ಪಷ್ಟಪಡಿಸುವಂತೆ ಇರುತ್ತವೆ ಮಾಲಿಕರ ನಡವಳಿಕೆಗಳು.

### 2.10 'ಬಿಟ್ಟಿ ಚಾಕ್ರಿ' ಮಾಡುವವರ ಜೀವನ ಚಿತ್ರಗಳು

'ಬಿಟ್ಟಿ ಚಾಕ್ರಿ'ಯ ಕುರಿತು ನಾಲ್ಕು ಮಂದಿಯ ನೇರ ಅನುಭವಗಳು, ಏಳೆಂಟು ತಿಂಗಳ ಅವಧಿಯಲ್ಲಿ ಹತ್ತು ಹದಿನೈದು ದಿನಕ್ಕೊಮ್ಮೆ ಮೂರು ಮಂದಿಯಿಂದ ಬರೆಯಿಸಿದ ದಿನಚರಿಗಳು, ಹಾಗೂ ಹಲವಾರು ಮಂದಿಯಿಂದ ಅವರ ಕುಟುಂಬದ ಬಿಟ್ಟಿ ಚಾಕ್ರಿ ಕುರಿತು ಬರೆಯಿಸಿದ ಅಭಿಪ್ರಾಯಗಳು 'ಬಿಟ್ಟಿ ಚಾಕ್ರಿ'ಯ ಕರಾಳ ಮುಖವನ್ನು ನಮ್ಮ ಮುಂದೆ ಇಡುತ್ತವೆ. 'ಬಿಟ್ಟಿ ಚಾಕ್ರಿ'ಯ ವಿವಿಧ ಮುಖಗಳನ್ನು ಅವು ಸ್ಪಷ್ಟವಾಗಿ ಅನಾವರಣ ಮಾಡುತ್ತವೆ.

#### 2.10.1 ನಾಲ್ಕು ಮಂದಿಯ ವಿವರವಾದ 'ಜೀವನಚಿತ್ರ'ಗಳು

'ಬಿಟ್ಟಿ ಚಾಕ್ರಿ' ಕುರಿತು ಒಬ್ಬ ಶಿಕ್ಷಿತ ಸಂಘಟನಕಾರರು ಕಟ್ಟಿಕೊಟ್ಟ ಅವರದೇ ಅನುಭವಗಳು ಮತ್ತು ಅವರ ತಂದೆಯ ಅನಭವಗಳು ಅದರ ಹಲವಾರು ಮುಖಗಳನ್ನು ಹಸಿಹಸಿಯಾಗಿಯೇ ನಮ್ಮ ಮುಂದೆ ತೆರೆದಿಡುತ್ತವೆ. ಪ್ರತಿ ದಿನ ಕೊಡುವ ತಂಗಳು ರೊಟ್ಟಿ ಅಥವಾ ಆ ದಿವಸದ ಟೀ ಉಪ್ಪಿಟ್ಟು ಹೆಚ್ಚಿನ ಪಾಲು

ಮಕ್ಕಳಿಗೇ ಹೋಗುತ್ತಿತ್ತು. ಹಿರಿಯರು ಮತ್ತು ಮಕ್ಕಳು ಕೂಡಾ ಅರೆ ಹೊಟ್ಟೆಯಲ್ಲೋ ಬರಿ ಹೊಟ್ಟೆಯಲ್ಲೋ ಬಹುತೇಕ ದಿನಗಳನ್ನು ಕಳೆಯಬೇಕಾಗಿತ್ತು. ಏಳೆಂಟು ಮನೆಗಳ ಚಾಕ್ರಿ ಮಾಡಿ ವರ್ಷಕ್ಕೆ ಸಿಗುವ ಒಂದೆರಡು ಚೀಲ ಭತ್ತ ಎರಡು ಮೂರು ತಿಂಗಳಲ್ಲಿ ಕಾಣೆಯಾಗುತ್ತಿತ್ತು. ಕಾರಣ ಹಣದ ಅವಶ್ಯಕತೆ ಪೂರೈಸಲು ಆ ಭತ್ತವನ್ನು ಮಾರಿ ನೀಗಿಸುತ್ತಿದ್ದರು. ಇಷ್ಟೆಲಲಾ ಇದ್ದರೂ 'ಬಿಟ್ಟಿ ಚಾಕ್ರಿ'ಯನ್ನು ತಪ್ಪಿಸುವಂತಿರಲಿಲ್ಲ. ದಲಿತರ ಮೇಲೆ ಈಡಿ ಊರಿನ ಒತ್ತಡ ಇತ್ತು. ತಮ್ಮ ಮೆಲೆ ಬಹೀಷ್ಕಾರದ ಭಯವಿತ್ತು. ಬಡತನದ ಕರಾಳ ಚಿತ್ರದ ಜೊತೆ ಸ್ವಾತಂತ್ರ್ಯ, ಗೌರವ ಕೀಳುವ, ಅವಮಾನದ ಬದುಕು 'ಬಿಟ್ಟಿ ಚಾಕ್ರಿ'ಯದೆಂದು ಬಸವರಾಜುರವರು ಗುರುತಿಸಿದ್ದಾರೆ. ಜೊತೆಗೆ ಜಾತಿ ವ್ಯವಸ್ಥೆಯ ಗೋಡೆಗಳನ್ನು ಭದ್ರಗೊಳಿಸುವ ತರಹ 'ಬಿಟ್ಟಿ ಚಾಕ್ರಿ' ಕೆಲಸ ನಿರ್ವಹಿಸುತ್ತದೆ. ಮನೆ ಆವರಣವನ್ನೆಲ್ಲಾ ಸ್ವಚ್ಛಗೊಳಿಸಿದರೂ ಸ್ವಚ್ಛಗೊಳಿಸಿದವರನ್ನು ಊಟಕ್ಕೆ ಕುಳ್ಳಿರಿಸುವುದು ತಿಪ್ಪೆಗುಂಡಿ ಬಳಿ. ಮದುವೆ ಮಂಟಪಕ್ಕೆ ಸಿಂಗಾರ ತಂದರೂ ಅದರ ಒಳಗೆ ಮಾತ್ರ ಹೋಗು ಹಾಗಿಲ್ಲ. 'ಬಿಟ್ಟಿ ಚಾಕ್ರಿ' ಮಾಡುವ ತಂದೆ ಶಾಲಾ ಆವರಣ ಮೈದಾನ ಸ್ವಚ್ಛಗೊಳಿಸಿ ಮಕ್ಕಳಿಗೆ ಆಟ ಆಡಲು ಅನುವು ಮಾಡಿಕೊಟ್ಟರೆ, ಮಗನು ಇತರ ಮಕ್ಕಳ ಜೊತೆ ಕಬಡಿ ಆಡುತ್ತಾ ಇತರ ಮಕ್ಕಳ ಮೈ ಮುಟ್ಟುವ ಹಾಗಿಲ್ಲ; ಕಾಲಿನಿಂದ ತುಳಿಯುವ ಹಾಗಿಲ್ಲ. ಇತರ ಮಕ್ಕಳು ಸ್ವಾಭಾವಿಕ ಅಕ್ಕರೆಯಿಂದ ಜೊತೆಗೂಡಿದರೆ, ಅವರ ತಾಯಂದಿರು ಬಸವರಾಜುವಿನಿಂದ ಸೆಳೆದು ಕೊಂಡು ಹೋಗುವ ದಾರುಣ ವರ್ತನೆ. ಇದೆಲ್ಲಾ ಒಳಕಣ್ಣಿನಿಂದ ಗಮನಿಸುತ್ತಿದ್ದ ಎಳೆ ಸೂಕ್ಷ್ಮ ಮನಸ್ಸಿನ ಮುಂದಿನ ಸಂಘಟನಕಾರನಿಗೆ ಇದನ್ನೆಲ್ಲ ಆಗಲೇ ಪ್ರತಿಭಟಿಸಿ ಹೊರಬರಬೇಕೆಂಬ ಸಂಕಲ್ಪ. ಅವರ ತಂದೆಯೂ ಚಿಕ್ಕಪ್ಪನವರೂ ಸಾಮಾನ್ಯ ವ್ಯಕ್ತಿ ಅಲ್ಲ. ಕೂಲಿ ಕಡಿಮೆಯೆಂದು ಪ್ರತಿಭಟಿಸಿ ತಮ್ಮ ಸಮುದಾಯದ ಇತರರು ಸಹಕಾರ ನೀಡದಿದ್ದರೂ ತಾವೂ ಮಾತ್ರ ಏಕಾಂಗಿಯಾಗಿ 'ಬಿಟ್ಟಿ ಚಾಕ್ರಿ' ವ್ಯವಸ್ಥೆಯಿಂದ ಹೊರಬಂದು ಸ್ವತಂತ್ರ ಗೌರವಯುಕ್ತ ಬಾಳನ್ನು ಕಟ್ಟಲು ಪ್ರಯತ್ನಿಸಿದವರು.

ಜಾಲಿಕೊಪ್ಪದ ಮೂರು ಮಂದಿಯಿಂದ 2015ರ ಜುಲೈ ತಿಂಗಳಲ್ಲಿ ಪಡೆದ ವಿವರವಾದ ಜೀವನ ಚಿತ್ರಗಳು 'ಬಿಟ್ಟಿ ಚಾಕ್ರಿ'ಯ ವಿವಿಧ ಮುಖಗಳನ್ನು ಪರಿಚಯಿಸುತ್ತವೆ. ಅವರಲ್ಲಿ ಮೊದಲನೆಯದಾಗಿ ತಾಯಿ-ಮಗ ಜೋಡಿ ಇಬ್ಬರೂ ಅನಕ್ಷರಸ್ಥೆಯಾಗಿದ್ದರೆ, ಇನ್ನಿಬ್ಬರು ಪ್ರಾಥಮಿಕ ಶಾಲೆಯಲ್ಲಿಯೇ ಶಾಲೆ ಬಿಟ್ಟು ಜೀತನೋ 'ಬಿಟ್ಟಿ ಚಾಕ್ರಿ'ನೋ ಮಾಡಲಿಕ್ಕೆ ತೊಡಗಿದವರು. ಶಾಲೆಗೆ ಹೋಗುವಾಗಲೂ ತಂದೆ ತಾಯಿಗಳ ಬಿಟ್ಟಿ ಚಾಕ್ರಿಯಲ್ಲೋ ಜೀತದಲ್ಲೋ ನೆರವು ನೀಡುತ್ತಿದ್ದರು. 'ಬಿಟ್ಟಿ ಚಾಕ್ರಿ' ಅಥವಾ ಜೀತ ಮಾಡುವಾಗ ಏನಾದರೂ ಅಪಘಾತ ಆದರೆ ಯಜಮಾನರು ಔಷಧದ ಅಥವಾ ಕೆಲಸ ಮಾಡದೇ ಇರುವ ದಿನಗಳ ಖರ್ಚುಗಳನ್ನು ನೋಡುತ್ತಿರಲಿಲ್ಲ. 'ಬಿಟ್ಟಿ ಚಾಕ್ರಿ' ನಿರಂತರ ನಡೆಯುತ್ತಿರಬೆಕು. ತಾವು ತಪ್ಪಿದರೆ ಬೇರೆಯವರನ್ನು ಬದಲಿಗೆ ಕಳುಹಿಸಬೇಕು. ನಿಲ್ಲಿಸಿದರೆ ಸಮಾಜ ಬಹಿಷ್ಕಾರದ ಬೆದರಿಕೆ ಸರ್ವೇಸಾಮಾನ್ಯ. ವರ್ಷಕ್ಕೆ ಕೊಡುವ ಕಾಳುಗಳು ಸುಗ್ಗಿ ಕಾಲದಲ್ಲಿ ವಾರಗಟ್ಟಲೆ ಒಂದು ತಿಂಗಳ ತನಕ ಕೂಲಿ ಇಲ್ಲದೇ ಮಾಡುವ ಕೆಲಸದ ಮಜೂರಿಗೆ ಸರಿಹೋಗುತ್ತಿದ್ದು ವರ್ಷವಿಡೀ ಮಾಡಿದ ಬಿಟ್ಟಿಚಾಕ್ರಿಗೆ ಏನೂ ಪ್ರತಿಫಲ ಇಲ್ಲದಂತಾಗುತ್ತಿತ್ತು. ಕೆಲವು ದಿನ 'ಬಿಟ್ಟಿ ಚಾಕ್ರಿ' ಜಾಸ್ತಿ ಇದ್ದರೆ ಕೂಲಿ ಕೆಲಸಕ್ಕೂ ಹೋಗುವ ಹಾಗಿರಲಿಲ್ಲ.

ಸಾಮಾನ್ಯವಾಗಿ 'ಬಿಟ್ಟಿ ಚಾಕ್ರಿ' ಮಾಡುವರ ಮನೆಯಲ್ಲಿ ಸಾಲ ಮಾಡಿದ್ದಿದ್ದರೆ ಅವರಲ್ಲಿಯೇ ಕೂಲಿ ಕೆಲಸಕ್ಕೆ ಹೋಗಬೇಕು. ಇಲ್ಲದಿದ್ದರೆ ಸಾಲ ತಕ್ಷಣ ತೀರಿಸಬೇಕೆಂಬ ಬೆದರಿಕೆ. ಕೂಲಿ ಈಗಲೂ ಬಹಳ ಕಡಿಮೆ. ಗಂಡಸರಿಗೆ 150 ರೂ. ಆದರೆ ಹೆಂಗಸರಿಗೆ 100ರೂ ಮಾತ್ರ.

ಕೊಡುವ ಕಾಳುಕಡಿಗಳನ್ನು ಸರಿಯಾದ ಪ್ರಮಾಣದಲ್ಲಿ ಕೊಡದೇ ಇರುವ ಕಾರಣ 'ಬಿಟ್ಟಿ ಚಾಕ್ರಿ' ನಿರ್ಬಂಧದಿಂದ ಹೊರ ಬಂದ ನಿದರ್ಶಗಳಿವೆ. ದಲಿತ ಕುಟುಂಬಗಳಲ್ಲಿ ಅಣ್ಣ ತಮ್ಮಂದಿರು ಬೇರೆಯಾದಾಗ ಪಾಳಿಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ರೂಢಿ ಇದೆ. ಅದಕ್ಕೆ ತಿರುಗು ಮನೆ ಎಂತಲೂ ಕರೆಯುತ್ತಾರೆ.

'ಬಿಟ್ಟಿ ಚಾಕ್ರಿ' ಜೊತೆ ಸಾಮಾಜಿಕ ಅನಿಷ್ಟಗಳೂ ತಾಳೆ ಹಾಕಿವೆ. 'ಬಿಟ್ಟಿ ಚಾಕ್ರಿ' ಮಾಡುವವರೆಲ್ಲರೂ ದಲಿತರಾಗಿ ಅಸ್ಪೃಶ್ಯತೆಗೆ ಗುರಿಯಾದವರು. ಮಕ್ಕಳಾಗಿ ಶಾಲೆಗೆ ಹೋಗುವಾಗ ತರಗತಿಯಲ್ಲಿ ದಲಿತ ಮಕ್ಕಳು ಎಲ್ಲರಿಗಿಂತ ಹಿಂದೆ ಕೂತು ಕೊಳ್ಳುವ ಪದ್ಧತಿ ಚಾಲ್ತಿಯಲ್ಲಿತ್ತು. ಅದರಲ್ಲಿ ಈಗಿನ ಹೊಸ ತಲೆಮಾರಿನಲ್ಲಿ ಸ್ವಲ್ಪ ಬದಲಾವಣೆ ಕಾಣುತ್ತೇವೆ. ತರಗತಿಯಲ್ಲಿ ತಾರತಮ್ಯವಿಲ್ಲದಿದ್ದರೂ ಹೊರಗೆ ಊಟ ಮಾಡುವಾಗ ದಲಿತ ವಿದ್ಯಾರ್ಥಿಗಳು ದಲಿತೇತರ ವಿದ್ಯಾರ್ಥಿಗಳ ಜೊತೆ ಕೂತು ಊಟ ಮಾಡುವ ಹಾಗಿಲ್ಲ. ನಾವು ಗಮನಿಸಬೇಕಾದ ಇನ್ನೊಂದು ಅನಿಷ್ಟವೇನೆಂದರೆ ಹೆಣ್ಣು ಮಕ್ಕಳಿಗೆ ತೊಟ್ಟಿಲಲ್ಲೇ ಅಥವಾ ಒಂದು ವರ್ಷದ ಕೆಳಗೇ ಬಾಸಿಂಗ ಕಟ್ಟುವ ಪದ್ಧತಿ.

ಹೊಸ ಸೊಸೆ ಮನೆಗೆ ಬಂದ ಮರುದಿನವೇ 'ಬಿಟ್ಟಿ ಚಾಕ್ರಿ'ಗೆ ಹೋಗುವ ಅನುಭವ ಹೆಣ್ಣು ಮಕ್ಕಳಿಗೆ ಕಸಿವಿಸ ತರುವಂತಹದ್ದು. ತವರು ಮನೆಯಲ್ಲೂ 'ಬಿಟ್ಟಿ ಚಾಕ್ರಿ' ಗಂಡನ ಮನೆಯಲ್ಲೂ 'ಬಿಟ್ಟಿ ಚಾಕ್ರಿ' ಇದೆ ಎಂದು ಗಮನಿಸಿದಾಗ ತಮ್ಮ ಬವಣೆ ನೆನೆದು ದುಃಖ ಪಟ್ಟು ಪರಿಸ್ಥಿತಿಗೆ ಹೊಂದುಕೊಳ್ಳುವ ಅನಿವಾರ್ಯತೆ ಹೆಣ್ಣುಮಕ್ಕಳದ್ದು.

**2.10.1.1 ಬೈಲಹೊಂಗಲ ತಾಲೂಕಿನ ಕಿತ್ತೂರಿನ 45 ವರ್ಷ ಶಿಕ್ಷಿತ, ಸಂಘಟನಕಾರರ 'ಬಿಟ್ಟಿ ಚಾಕ್ರಿ' ಅನುಭವ:**

"'ಬಿಟ್ಟಿ ಚಾಕರಿ' ಅನ್ನುವುದು ದಲಿತ ಸಮುದಾಯಕ್ಕೆ ಕಟ್ಟಿಟ್ಟ ಒಂದು ಕೆಲಸ. ಊರಿನ ಪ್ರಮುಖ ಕುಟುಂಬಗಳ ಮನೆಗಳ ಅಂಗಳ ಬಾಗಿಲು, ಹಿತ್ತಲು ಮುಂಚೆ, ಎಲ್ಲಾ ಕಡೆ ಸ್ವಚ್ಛ ಮಾಡುವ ಕೆಲಸ ದಲಿತರದೇ. ಆದರೂ ಮದುವೆ, ಮುಂಜುವೆ, ಹಬ್ಬ ಹರಿದಿನಗಳು ಮತ್ತು ಸತ್ತಾಗ ಹುಟ್ಟಿದಾಗ ಅವರ ಮನೆಗಳಿಗೆ ಬೇಕಾಗುವ ಸೌದೆ, ಕಸ ಗುಡಿಸಲು ಕಸಬರಿಗೆ, ಪೂಜಾ ಸಾಮಗ್ರಿಗಳು (ಕಬ್ಬು, ಹೂ, ಹುಣಸೆಕಾಯಿ, ಹಣ್ಣು ನೆಲ್ಲಿಕಾಯಿ ಬಾಳೆ/ಮಾವು ತಳಿರು) ತಮಟೆ ಬಾರಿಸುವುದು ಮದು ಮಕ್ಕಳಿಗೆ ಪಾದರಕ್ಷೆ ತೊಡಿಸುವುದು, ದನ ಕರುಗಳ ಪಾಲನೆ ಮಾಡುವುದು, ಬೆಳೆಗಳ ಕಾವಲು ನೋಡಿಕೊಳ್ಳುವುದು, ದೇವಾಲಯಗಳ ಸ್ವಚ್ಚತೆ ಮಾಡುವುದು (ಹೊರಗಡೆ ಮಾತ್ರ) ಮುಂತಾದ ಕಾರ್ಯಗಳನ್ನು ದಲಿತರು ಮಾಡಲೇ ಬೇಕು. ಒಂದು ವೇಳೆ ಈ ಕಾರ್ಯಗಳನ್ನು ಮಾಡಲು ಒಪ್ಪದೇ ಹೋದರೆ ಅವರನ್ನು

ಊರಿನಿಂದ ಬಹಿಷ್ಕಾರ ಹಾಕುವುದು ವಾಡಿಕೆ. ಇದು ಈಗ ಕಡಿಮೆ ಆದರೂ ಇನ್ನೂ ಹಲುವಾರು ಉತ್ತರ ಕರ್ನಾಟಕ ಹಳ್ಳಿಗಳಲ್ಲಿ ಆಚರಣೆಯಲ್ಲಿ ಇದೆ. ಇಂತಹ ಒಂದು 'ಬಿಟ್ಟಿ ಚಾಕರಿ' ಕೆಲಸ ಮಾಡುವುದು ನನ್ನ ಕುಟುಂಬದ ಕಾರ್ಯವಾಗಿತ್ತು ನಮ್ಮ ತಂದೆ ಮತ್ತು ಇಬ್ಬರು ಚಿಕ್ಕಪ್ಪಗಳು ಈ ಕಾರ್ಯದಲ್ಲಿ ತೊಡಗಿದ್ದರು.

"ನಮ್ಮ ಮನೆಯಲ್ಲಿ ನಮ್ಮ ಅಜ್ಜ ಮುತ್ತಜ್ಜರಿಂದ ಈ ಕೆಲಸ ಆಚರಣೆಯಲ್ಲಿತ್ತು. ಇದಕ್ಕಾಗಿ ಮಾಲಿಕರು ಅಲ್ಪ ಸ್ವಲ್ಪ ಕಾಳು ಕಡಿ ಉಳಿದ ತಂಗಳು ಊಟ ಕೊಡುತ್ತಿದ್ದರು. ನಮ್ಮ ಮನೆಯಲ್ಲಿ ನನ್ನ ತಂದೆಯವರು ಈ ಕೆಲಸವನ್ನು ಮಾಡುತ್ತಿದ್ದರು. ಕೂಲಿ ಕೆಲಸ ಮಾಡಿದರೂ ಈ 'ಬಿಟ್ಟಿ ಚಾಕರಿ' ಕೆಲಸ ಮಾಡಲೇ ಬೇಕಾಗಿತ್ತು. ಇಲ್ಲಿ ಊರಿನ ಪ್ರಮುಖರ ಒತ್ತಡ ಇತ್ತು.

"ನಮ್ಮ ತಂದೆಯ ಅನುಭವಗಳನ್ನು ಅವರದೇ ಮಾತುಗಳಲ್ಲಿ ನಾನು ಹೀಗೆ ಸೆರೆ ಹಿಡಿದಿದ್ದೇನೆ:

"ನಾನು ಮುಖ್ಯವಾಗಿ ಎಂಟು ಮಂದಿ ಮಾಲಿಕರ ಮನೆಗಳಲ್ಲಿ ಕೆಲಸ ಮಾಡುತ್ತಿದ್ದೆನು. ಒಬ್ಬರ ಮನೆ 'ಬಿಟ್ಟಿ ಚಾಕರಿ' ಬಂದರೇ ನಮ್ಮ ಊರಿನಿಂದ ಮೂರು ಕಿ.ಮೀ. ಕಿತ್ತೂರಿನಲ್ಲಿರುವ ಮನೆಗೆ ನಡೆದು ಹೋಗಬೇಕು. ಅವರ ಹಿತ್ತಲನ್ನು ಪ್ರತಿ ಮೂರು ತಿಂಗಳಿಗೆ, ಎರಡು ತಿಂಗಳಿಗೆ ಹಸನು ಮಾಡಬೇಕು. ದೀಪಾವಳಿ, ಆಯುಧ ಪೂಜೆ, ತುಳಸಿ ಲಗ್ನ ಇಂತಹ ಹಬ್ಬಗಳಲ್ಲಿ ಕಡ್ಡಾಯವಾಗಿ ಅವರ ಮನೆ ಹಿತ್ತಲು, ಬಚ್ಚಲು ನೀರು ಹೋಗುವ ಕಾಲುವೆ (ಗಟಾರ), ಅಂಗಳದ ಕಸ ಕಡಿ ಹಸನು ಮಾಡಿ, ಪೂಜೆಗೆ ಬೇಕಾಗುವ ಸಾಮಗ್ರಿಗಳನ್ನು (ಹಬ್ಬದ ನಿಯಮದಂತೆ) ಹೊತ್ತುಕೊಂಡು ಹೋಗಬೇಕು. ಮುತ್ತಲ ಎಲೆ, ಸಿಬುರ ಕಡ್ಡಿ, ಕಬ್ಬು, ಹುಣಸೆಕಾಯಿ, ನೆಲ್ಲಿಕಾಯಿ, ಬಾಳೆ ಗಿಡ, ಕಸಬರಿಗೆ ತೆಗೆದುಕೊಂಡು ಹೋಗಬೇಕು. ಅವರು ಒಂದು ಆಕಳು ಸಾಕಿದ್ದರು. ಹಬ್ಬದಲ್ಲಿ ಅದಕ್ಕೆ ಹುಲ್ಲು ಹೊತ್ತುಕೊಂಡು ಹೋಗುತ್ತಿದ್ದೆನು. ಇವೆಲ್ಲ ನಾನು ಕಡ್ಡಾಯವಾಗಿ ಮಾಡಬೇಕಾಗಿತ್ತು. ಅಷ್ಟು ದೂರ ಇವೆಲ್ಲ ಹೊತ್ತುಕೊಂಡು, ಅವರ ಮನೆಯಲ್ಲಿ ನಮಗೆ ಪ್ರವೇಶ ಇಲ್ಲ, ನಾವು ಕೊಟ್ಟ ವಸ್ತುಗಳಿಗೆ ನೀರು ಚುಮುಕಿಸಿ ಒಳಗೆ ತೆಗೆದುಕೊಳ್ಳುತ್ತಿದ್ದರು. ಸ್ವಲ್ಪ ಅವಲಕ್ಕಿ/ಚೂಡಾ ಕೊಟ್ಟು ಕಳುಹಿಸತ್ತಿದ್ದರು. ಮತ್ತೆ ಮೂರು ಕಿ.ಮೀ. ನಡೆದುಕೊಂಡು ಬರಬೇಕು. ಇದಕ್ಕಾಗಿ ಸುಗ್ಗಿ ವೇಳೆಯಲ್ಲಿ ಒಂದರಿಂದ ಒಂದುವರೆ ಚೀಲ ಭತ್ತ, ಎರಡು ಹೊರೆ ಒಣಹುಲ್ಲು ಕೊಡುತ್ತಿದ್ದರು.

"ಹೀಗೆ ಆರರಿಂದ ಏಳು ಜನ ಕುಟುಂಬಗಳ (ಮಾಲಿಕರ) 'ಚಾಕರಿ' ಮಾಡಿದಾಗ ಏಳರಿಂದ ಹತ್ತು ಚೀಲ ಭತ್ತ ಬರುತ್ತಿತ್ತು. ಇದು ನಮ್ಮ ಕುಟುಂಬದ ಮೂಲ ಉತ್ಪನ್ನವಾಗಿತ್ತು. ಇದರಲ್ಲಿ ಜೀವನ ಸಾಗಿಸುವುದು ತುಂಬಾ ಕಷ್ಟವಾಗಿತ್ತು. ಭತ್ತದ ಸುಗ್ಗಿ ಮುಗಿದು ಒಂದರಿಂದ ಎರಡು ತಿಂಗಳಿಗೆ ಭತ್ತ ತೀರಿ ಹೋಗುತ್ತಿತ್ತು. ಕಾರಣ ಬೇರೆ ಯಾವುದಾರೂ ಖರ್ಚಿಗೆ ಹಣ ಬೇಕಾದರೆ ಭತ್ತ ಮಾರುತ್ತಿದ್ದೆವು. ಭತ್ತ ತೀರಿದಾಗ ಊಟಕ್ಕೆ ಅಕ್ಕಿ ಕಡಿಮೆ ಆಗಿ ಕೇವಲ ರೊಟ್ಟಿ ಮಾತ್ರ ತಿನ್ನುತ್ತಿದ್ದೆವು. ಮಕ್ಕಳಿಗೆ ಮಾತ್ರ ಅಕ್ಕಿ ಕೊಂಡು ತಂದು ಅನ್ನ ಮಾಡುತ್ತಿದ್ದೆವು. ಒಂದೇ ಜೊತೆ ಬಟ್ಟೆ ಇರುತ್ತಿತ್ತು. ಟವೆಲು ಸುತ್ತಿಕೊಂಡು ತೊಟ್ಟ ಬಟ್ಟೆ ತೊಳೆದು ಒಣ ಹಾಕಿ ಸ್ನಾನ ಮಾಡಿ ಅದು ಆರಿದ ನಂತರ ಮತ್ತೆ ಅದನ್ನೇ ತೊಟ್ಟುಕೊಳ್ಳುತ್ತಿದ್ದೆವು.

ಸಾಕಷ್ಟು ಹರುಕಲ ಬಟ್ಟೆ ತೊಡುತ್ತಿದ್ದೆವು. ಹೊಟ್ಟೆ ತುಂಬಾ ಊಟ ಮಾಡುವುದು ವಾರದಲ್ಲಿ ಎರಡು ಅಥವಾ ಮೂರು ಸಾರಿ ಮಾತ್ರ. ಒಂದೊಂದು ಬಾರಿ ಜೋಳ/ರಾಗಿ ಅಂಬಲಿ (ಹುಳಿ ಹಾಕಿ ಒಂದು ದಿನ ಕಳಿ ಇಟ್ಟ ಹಿಟ್ಟಿನಿಂದ) ಕಾಯಿಸಿ ಕುಡಿಯುತ್ತಿದ್ದೆವು. ಇದ್ದ ಆಹಾರ ಹಂಚಿ ತಿನ್ನುವುದು ರೂಢಿ ಆಗಿಬಿಟ್ಟಿತ್ತು. ಹೊಟ್ಟೆ ತುಂಬುವಷ್ಟು ಅಲ್ಲ ಪಾಲಿಗೆ ಬಂದಷ್ಟು ತಿಂದು ಬದುಕುವುದು. 'ಚಾಕರಿ' ಮಾಡುವ ಮನೆಯಿಂದ ಅಳಿಉಳಿದ ಹಬ್ಬದ ಊಟ ನೀಡಿಸಿಕೊಂಡು ಬಂದು ತಿನ್ನುತ್ತಿದ್ದೆವು. ಹಾಗೂ 'ಚಾಕರಿ' ಮನೆ ತಂಗಳು ಊಟ ಸಿಗುತ್ತಿತ್ತು.

"ಇಷ್ಟೆಲ್ಲ ಇದ್ದರೂ 'ಬಿಟ್ಟಿ ಚಾಕರಿ' ಕೆಲಸ ಮಾತ್ರ ಬಹಳ ಸರಾಗವಾಗಿ ನಡೆಯುತ್ತಿತ್ತು. ಒಂದು ಹೊತ್ತಿನ ಊಟಕ್ಕಾಗಿ ಇಡೀ ದಿನ ಬಿಟ್ಟಿ ಚಾಕರಿ ಕೆಲಸ ಮಾಡಿದ್ದು ನೆನಪಿದೆ. ನಮ್ಮ ಮನೆಯಲ್ಲಿ ಎಂತಾ ಕಷ್ಟವಿದ್ದರೂ ಚಾಕರಿ ಕೆಲಸಕ್ಕೆ ಹೋಗುವುದು ಕಡ್ಡಾಯವಾಗಿತ್ತು. ಒಂದು ವೇಳೆ 'ಚಾಕರಿ' ಕೆಲಸಕ್ಕೆ ಹೋಗಲು ಆಗದಿದ್ದರೆ ಸದರಿ ಕೆಲಸಕ್ಕೆ ನಮ್ಮ ಮತ್ತೊಬ್ಬ ದಲಿತ ಸಂಬಂಧಿಯನ್ನು ಕಳುಹಿಸಿ ಕೊಡಬೇಕಾಗಿತ್ತು. ಉದಾ:– 'ಚಾಕರಿ' ಮಾಡುವ ಸೌಕಾರರ (ಮಾಲೀಕನ) ಮನೆಯಲ್ಲಿ ಯಾರಾದರೂ ತೀರಿಕೊಂಡರೆ ಅಲ್ಲಿ ತಮಟೆ ಬಾರಿಸುವುದು ನಮಗೆ ಆಗದೇ ಇದ್ದರೆ ಅದಕ್ಕಾಗಿ ಬೇರೆಯವರನ್ನು ಕಳುಹಿಸಿಕೊಡಬೇಕು. ಮಾಲೀಕರು ಕೊಡುವ ದಾನದ ಕಾಳು, ನಾಲ್ಕಾಣೆ ಅಥವಾ ಏಂಟಾಣೆ ಹಣ ಅವನಿಗೆ ಸೇರುತ್ತಿತ್ತು.

"ಆದರೆ ಮನೆಯ ಶಗಣಿ ಕಸ ಹೊತ್ತುಕೊಂಡು ಹೋದ ನಂತರ ಅಂಗಳ ಬಾಗಿಲು ಸ್ವಚ್ಛದ ಕೆಲಸ, ದನ ಕರುಗಳಿಗೆ ನೀರು ಹಾಕುವುದು ಹೀಗೆ ಸುಮಾರು ಎಂಟರಿಂದ 15 ದಿನತನಕ (ಅವರ ಮನೆಗೆ ಬಂದ ಬಳಗ ಹೋಗುವ ತನಕ) ಕೆಲಸ ಮಾಡಲೇ ಬೇಕು. ಕಟ್ಟಿಗೆ ಒಡಿಯುವುದು ಆಗಾಗ ಮಾಮೂಲಿ ಕೆಲಸವಾಗಿತ್ತು. ಹೀಗೆ ಹೊಟ್ಟೆ ಪಾಡಿಗೆ ಬಿಟ್ಟಿ ಚಾಕರಿ ಮಾಡುವುದು ನಮ್ಮ ಕಾರ್ಯವಾಗಿತ್ತು. ಮತ್ತು ಈ ಕಾರ್ಯ ಮಾಡಲು ಊರಿನ ಒತ್ತಡವೂ ಇತ್ತು. ಸತ್ತ ದನಕರ, ಪ್ರಾಣಿಪಕ್ಷಿ, ಇಲಿಹೆಗ್ಗಣ ಹುಳಗಳನ್ನು ತಿನ್ನುವ ಬೆಕ್ಕು ನಾಯಿಗಳಿಗೆ ಅವರ ಮನೆಯಲ್ಲಿ ಎಲ್ಲಾ ಕಡೆ ಪ್ರವೇಶವಿತ್ತು. ನಮಗೆ ಮಾತ್ರ ದನದ ಕೊಟ್ಟಿಗೆ ಬಿಟ್ಟು ಬೇರೆ ಕಡೆ ಎಲ್ಲಿಯೂ ಪ್ರವೇಶವಿರಲಿಲ್ಲ. ಇದರಿಂದ ನನಗೆ ತುಂಬಾ ದುಃಖವಾಗುತ್ತಿತ್ತು. ಇದು ನನ್ನ 15–20 ವಯಸ್ಸಿನ ತನಕ. ನಂತರ ಇದು ನಮಗೆ ಅಸಹ್ಯ ಅನಿಸಿ ನಾನು ನನ್ನ ತಮ್ಮ ಸುಬ್ಬಣ್ಣ ಬಿಡಲು ಪ್ರಯತ್ನಿಸಿದೆವು. ಇದು 30 ವರ್ಷಗಳ ಹಿಂದೆ. ಕಾರಣ ಜೊತೆಗೆ ಅವರು ಕೊಡುವ ಕೂಲಿಯೂ ಸಹ ಕಡಿಮೆ ಅನಿಸಿತ್ತು. ಇದನ್ನು ವಿರೋಧಿಸಿ ನಮ್ಮ ಕೇರಿಯಲ್ಲಿ ನಾವೇ ಪ್ರಥಮ ಇಂತಹ 'ಬಿಟ್ಟಿ ಚಾಕರಿ' ಕೆಲಸ ಬಿಟ್ಟವರು. ನಮ್ಮ ಮಾಲೀಕರು ನಮಗೆ ಒತ್ತಡ ತಂದರೂ ನಾವು ಅದಕ್ಕೆ ಬಗ್ಗಲಿಲ್ಲ. ಆಗಲೇ 10–15 ವರ್ಷಗಳ ಹಿಂದೆ ಕ್ರಿಶ್ಚಿಯನ್ ಸಂಸ್ಥೆಯೊಂದು (ಮೆಥೋಡಿಸ್ಟ್) ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ, ಕೆಲಸಗಳನ್ನು ಮಾಡಲು ನಮ್ಮ ಹಳ್ಳಿಯಲ್ಲಿ ಪ್ರವೇಶ ಮಾಡಿತ್ತು. ಅವರಿಂದ ಕೆಲವು ಹೊಸ ವಿಷಯಗಳು ನಮ್ಮ ಅರಿವೆಗೆ ಬಂದಿತ್ತು. ನಮಗೆ ಒಂದು ಒಳ್ಳೆಯ ದೇವಾಲಯ ಕಟ್ಟಿಸಿದರು. ಕುಡಿಯುವ ನೀರಿಗಾಗಿ

ಒಂದು ಬಾವಿಯನ್ನು ತೊಡಿಸಿಕೊಟ್ಟರು. ಇದರಿಂದ ಅಸ್ಪೃಶ್ಯತೆ ಪಿಡುಗು ಇಲ್ಲದ ಒಂದು ಧಾರ್ಮಿಕ ಮಾರ್ಗ ನಮಗೆ ಪುಷ್ಟಿಕೊಟ್ಟಿತು. 'ತಲೀ ಮ್ಯಾಲ್ ಇದ್ದ ಅವಮಾನದ ಹೊರಿ ಹೆಗಲ ಮ್ಯಾಲೆ ಬಂದ್ಹಾಂಗ್ ಆತೀ.' ಉಳಿದ ದಲಿತ ಕುಟುಂಬದವರು ಊರಿನ ಸಂಪ್ರದಾಯದಂತೆ ದಲಿತರು ಮಾಡಬೇಕಾದ ಎಲ್ಲಾ ಕಾರ್ಯಗಳಲ್ಲಿ ತೊಡಗಿದರು. ನಾವು ಮಾತ್ರ ಅದನ್ನು ವಿರೋಧಿಸುತ್ತಾ ಬಂದು ಈಗ ಅಸ್ಪೃಶ್ಯತೆಯನ್ನು, 'ಬಿಟ್ಟಿ ಚಾಕರಿ'ಯನ್ನು ವಿರೋಧಿಸುತ್ತಾ ಸ್ವಾವಲಂಬಿಗಳಾಗಿ ಬದುಕುತ್ತಿದ್ದೇವೆ. ಇದರಿಂದ ಸವರ್ಣೀಯ ಕೆಲ ಮುಖಂಡರಿಗೆ ಆಂತರಿಕ ಜಿಗುಪ್ಸೆ ಹಾಗೂ ಅಸಮಾಧಾನ ಉಂಟಾಗಿರುವುದು ನಿಜ."

"ಹೀಗೆ ನಮ್ಮ ತಂದೆ ಚಿಕ್ಕಪ್ಪರ ಅನಭವದಂತೆ ನಮ್ಮ ಕೇರಿಯಲ್ಲಿ ಸವರ್ಣೀಯ ಆಚಾರ ವಿಚಾರಗಳಿಗೆ ಬಗ್ಗದೆ ತಮ್ಮದೇ ಸ್ವಾವಲಂಬಿತನ ಹಾಗೂ ಕೇರಿಗೆ ಭೇಟಿ ನೀಡುವ ಸಂಘ-ಸಂಸ್ಥೆಗಳ ಹೊಸ ವಿಚಾರಗಳಿಂದ ತಿಳಿವಳಿಕೆ ಹೊಂದಿ, ಗೊಡ್ಡು ಸಂಪ್ರದಾಯ ಹಾಗೂ 'ಬಿಟ್ಟಿ ಚಾಕರಿ'ಗಳನ್ನು ಬಹಳ ನಾಜೂಕಾಗಿ ಸೂಕ್ಷ್ಮವಾಗಿ ಎದುರಿಸುತ್ತಾ ಬಿಟ್ಟಿದ್ದಾರೆ."

'ಬಿಟ್ಟಿ ಚಾಕರಿ' ಬಗ್ಗೆ ತಮ್ಮ ಸ್ವಂತ ಅನುಭವವನ್ನು ಸಂಘಟನಕಾರರು ಹೀಗೆ ಮುಂದುವರಿಸುತ್ತಾರೆ: "'ಬಿಟ್ಟಿ ಚಾಕರಿ' ವಿಷಯದಲ್ಲಿ ನನಗೆ ಅಲ್ಪ-ಸ್ವಲ್ಪ ಅರಿವು ಇದೆ. ಏಕೆಂದರೆ ನನಗೆ ತಿಳಿವಳಿಕೆ ಬರುವ ಹೊತ್ತಿಗೆ ಈ ಕೆಲಸವನ್ನು ನನ್ನ ಕುಟುಂಬವು ಬಿಡುವ ಕೊನೆಯ ಹಂತವಾಗಿತ್ತು. ಈ 'ಚಾಕರಿ'ಯ ಬಗ್ಗೆ ನನ್ನ ತಾಯಿಯ ತವರು ಮನೆಯಲ್ಲಿದ್ದಾಗ ಮತ್ತು ನನ್ನ ತಂದೆ ಮನೆಯಲ್ಲಿದ್ದಾಗಿನ ಅನುಭವ ನನಗಿದೆ. ತಾಯಿಯ ಮನೆಯಲ್ಲಿದ್ದಾಗ (ಸಿದ್ದಸಮುದ್ರ ಗ್ರಾಮ) ಅವರು 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದರು. ಅಡಿವೆಪ್ಪ ಬೋಗೂರ ಎಂಬ ಸಾಹುಕಾರ (ಮಾಲೀಕ)ರ ಮನೆಯಲ್ಲಿ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದರು. ನನ್ನ ತಾಯಿ ಜೊತೆ 2-3 ತಿಂಗಳು ಅಲ್ಲಿದ್ದ ನೆನಪು ಬರುತ್ತದೆ. ದಿನ ಬೆಳಿಗ್ಗೆ ಆರು ಗಂಟೆಗೆ ಒಬ್ಬ ಮಾಲಿಕರ ಮನೆ ಶಗಣಿ ಅಂಗಳ ಕಸ ಮಾಡಲು ನನ್ನ ಅಮ್ಮ (ಅಜ್ಜಿ) ಮತ್ತು ನನ್ನ ತಾಯಿ ಹೋಗುತ್ತಿದ್ದರು. ಅವರ ಜೊತೆಗೆ ನಾನೂ ಹೋಗುತ್ತಿದ್ದೆ. ಅವರು ನಮ್ಮ ಮನೆಯ ಅಂಗಳ ಕಸ ಬಗ್ಗೆ ಯೋಚನೆ ಮಾಡದೇ ಮುಖ ತೊಳೆದುಕೊಳ್ಳದೇ ಮೊದಲು ಮಾಲೀಕರ ಮನೆಯ ಕೆಲಸಕ್ಕೆ ಹೋಗುತ್ತಿದ್ದರು. ಕೆಲಸ ಮುಗಿದ ನಂತರ ಉಪ್ಪಿಟ್ಟು ಪೇಪರ್‌ದಲ್ಲಿ ಕೊಡುತ್ತಿದ್ದರು. ಅದು ನನಗೆ ಒಬ್ಬನಿಗೆ ಸಾಲುತ್ತಿತ್ತು. ಒಂದರಿಂದ ಎರಡು ಗಂಟೆ ಕೆಲಸ ಮಾಡಿ ಮನೆಗೆ ಬಂದು ಕೈ ತೊಳೆದುಕೊಳ್ಳುತ್ತಿದ್ದರು. ನಂತರ ದನಗಳನ್ನು ಮೇಯಲು ಹೊರಗೆ ಹೋಗಿ ಮತ್ತೆ ಒಂದು ಗಂಟೆ ಕೆಲಸ ಮಾಡಿ ತಂಗಳು ರೊಟ್ಟಿ ಪಲ್ಯ ನೀಡಿಸಿಕೊಂಡು ಬರುತ್ತಿದ್ದರು. ಅದನ್ನು ನಾನು ಬಹಳ ಆಸೆಯಿಂದ ತಿನ್ನುತ್ತಿದ್ದೆ.

"ಒಮ್ಮೆ ನನ್ನ ತಾಯಿಗೆ ತುಂಬಾ ಆರಾಮ ಇಲ್ಲದಾಗ ಎಂಟು ದಿನ ಹಾಸಿಗೆ ಹಿಡಿದಿದ್ದಳು. ಆಗ ನನ್ನ ಅಮ್ಮ ಎರಡು ದಿನ ಕೆಲಸಕ್ಕೆ ಹೋಗಿರಲ್ಲಿಲ್ಲ. ತಕ್ಷಣ ಮಾಲೀಕನ ಹೆಂಡತಿ ಬಂದು ಮನೆಯ ಅಂಗಳದಲ್ಲಿ ನಿಂತು ಬಾಯಿಗೆ ಬಂದಂತೆ ಬೈಯ್ದು ಈಗಲೇ ಕೆಲಸಕ್ಕೆ ಬರಲೇ ಬೇಕೇಂದು ಹಠಹಿಡಿದಳು. ಆಗ ನನ್ನ ಅಜ್ಜಿ ತಾಯಿಗೆ ಕೊಡಲು ಬಿಸಿನೀರನ್ನು ಕಾಯಿಸುತ್ತಿದ್ದಳು. ಒಲೆ ಹೊತ್ತಿಸಿದ್ದನ್ನು ಅರ್ಧಕ್ಕೆ ಬಿಟ್ಟು

'ನಾನು ದೌಡನೇ ಹೋಗಿ ಕೆಲಸಮಾಡಿ ಬರುತ್ತೇನೆ' ಎಂದು ನನ್ ತಾಯಿಗೆ ಹೇಳಿದಳು. ಆಗ 'ನಾನೂ ಬರುತ್ತೇನೆ' ಎಂದು ಬೆನ್ನು ಹತ್ತಿದೆ. ಆಗ ಅವಳು 'ಬರಬೇಡ. ಸಾಹುಕಾರತಿ ಸಿಟ್ಟ್ ಆಗ್ಯಾಳ' ಎಂದು ಹೇಳಿದಳು. ಆಗ ಸಾಹುಕಾರತಿ ಬೈಯ್ದ ಬೈಗುಳ ಅವಳ ಮುಖಚಹರೆ ನನ್ನ ನೆನಪಿಗೆ ಬಂದು ಭಯವಾಗಿ ಹೋಗಲಿಲ್ಲ. ಅಮ್ಮ ಉಪ್ಪಿಟ್ಟು ತರುವಳೆಂದು ಕಾಯುತ್ತಾ ತಾಯಿಯ ತಲೆದಿಂಬಿನ ಹತ್ತಿರ ಕುಳಿತೆನು. ಹೊತ್ತಿಸಿದ ಒಲೆ ಆರಹೋಗಿತ್ತು. ತಾಯಿ ಬಿಸಿನೀರು ಕೇಳಿದಾಗ ಕಾದಿರಲಿಲ್ಲ. ನಂತರ ಅಮ್ಮ ಕೆಲಸ ಮಾಡಿ ಉಪ್ಪಿಟ್ಟು ಇಲ್ಲದೇ ಬರೀ ಕೈಯಲ್ಲಿ ಬಂದಳು. ನಾನು ಕೇಳಿದಾಗ ಅವರು 'ಈ ದಿನ ಏನೂ ಕೊಡುವದಿಲ್ಲ. ನಮ್ಮ ಮನೆಯಲ್ಲಿಯೇ ಏನಾದರೂ ಮಾಡಿಕೊಡುತ್ತೇನೆ ತಾಳು' ಎಂದು ಸಮಾಧಾನ ಮಾಡಿ ಒಲೆ ಹೊತ್ತಿಸಿ ಬಿಸಿನೀರು ಕಾಯಿಸಿ ಸಾವಿ ಅಕ್ಕಿಯ ಅನ್ನಕ್ಕೆ ವಗ್ಗರಣೆ ಕೊಟ್ಟು ತಿನ್ನಲು ನನಗೂ ನನ್ನ ತಾಯಿಗೂ ಕೊಟ್ಟಳು. ಹೀಗೆ ಬಿಟ್ಟಿ ಚಾಕರಿ ಎನ್ನುವುದು ಸ್ವಾತಂತ್ರ್ಯ, ಗೌರವವನ್ನೇ ಕಿತ್ತುಕೊಳ್ಳುವಂತಹ ಒಂದು ಅಮಾನವೀಯ ಶೋಷಣೆ ಎಂದು ಈಗ ನನಗೆ ಗೋಚರವಾಗಿದೆ.

"'ಬಿಟ್ಟಿ ಚಾಕರಿ' ಕೆಲಸ ಏನಾದರು ನೆಪ ಹೇಳಿ ತಪ್ಪಿಸಿಕೊಳ್ಳುವಂತಹದು ಆಗಿರಲಿಲ್ಲ. ನನ್ನ ತಂದೆ ಮತ್ತು ಚಿಕ್ಕಪ್ಪಗಳು ನಾನು ಚಿಕ್ಕವನಿದ್ದಾಗ (7–8 ವರ್ಷ) ಒಂದಿಲ್ಲಾ ಒಂದು ರೀತಿ 'ಬಿಟ್ಟಿ ಚಾಕರಿ' ಪ್ರತಿ ದಿನ ಸದರಿ ಮಾಲೀಕರ ಮನೆಯಲ್ಲಿ ಮಾಡುತ್ತಿದ್ದರು. ಕಟ್ಟಿಗೆ ಒಡೆಯುವುದು, ಸತ್ತ ದನ ಎಳೆಯುವುದು, ತಮಟೆ ಬಾರಿಸುವುದು, ಅಂಗಳ–ಹಿತ್ತಲು ಸ್ವಚ್ಛ ಮಾಡುವುದು, ಶಗಣೀ–ಕಸ ಹೀಗೆ ಹಲವಾರು 'ಬಿಟ್ಟಿ ಚಾಕರಿ' ಕೆಲಸದಲ್ಲಿ ತೊಡಗಿರುತ್ತಿದ್ದರು. ಆದರೆ ಇದರ ಲಾಭ ಬರುವುದು ಮಾತ್ರ ಸುಗ್ಗಿಯ ಕಣದಲ್ಲಿ ಒಂದರಿಂದ ಒಂದುವರೆ ಚೀಲ ಭತ್ತಕ್ಕೆ ಸಮವಾಗಿರುತ್ತಿತ್ತು.

"ಇಂತಹ ಸಮಯದಲ್ಲಿ ನಾನು ಅವರ ಬೆನ್ನು ಹತ್ತಿಹೋದಾಗ ಸಾಹುಕಾರರ ಮಕ್ಕಳು ನನ್ನ ಬಳಿಗೆ ಬರುತ್ತಿದ್ದರು. ಆಗ ಅವರ ತಾಯಂದಿರು ಓಡಿ ಬಂದು ಅವರನ್ನು ಮುಟ್ಟಬಾರದೆಂದು ಎಳೆದು ಎತ್ತಿಕೊಂಡು ಹೋಗುತ್ತಿದ್ದರು. ಒಮ್ಮೆ ಮಹಾದೇವಿ ತಳವಾರ ಎಂಬುವರ ಮಕ್ಕಳ ಮದುವೆಯಾಗುತ್ತಿತ್ತು. ಆಗ ನಮ್ಮ ತಂದೆ ಮದುವೆ ಮುಂಚೆ ಸತತ ಎಂಟು ದಿನಗಳ ವರೆಗೆ ಹಿತ್ತಲ ಬಾಗಿಲನ್ನು ಸ್ವಚ್ಛ ಮಾಡಿ ನಾನು ಅವರ ಜೊತೆ ಹೋಗುತ್ತಿದ್ದೆ. ಮದುವೆ ಊಟಕ್ಕೆ ತಂದೆ ಜೊತೆ ಹೋದಾಗ ಒಂದು ತಿಪ್ಪೆಗುಂಡಿ ಬಳಿ ನಮ್ಮನ್ನು ಕೂರಿಸಿ ಊಟಕ್ಕೆ ಹಾಕಿದರು. ಇದರಿಂದ ನನಗೆ ತುಂಬಾ ನೋವಾಯಿತು. ನಾವೂ ಅಲ್ಲಿ ಕುಳಿತು ಊಟ ಮಾಡೋಣ ಎಂದು ನಮ್ಮ ತಂದೆಯನ್ನು ಒತ್ತಾಯಿಸಿದೆ. ಆಗ ನಮ್ಮ ತಂದೆ ಅಲ್ಲಿಗೆ ಹೋಗಲು ನಮ್ಮನ್ನು ಬಿಡುವುದಿಲ್ಲ ಎಂದರು. ಮದುವೆ ಹಂದರಕ್ಕೆ ಹುಲಗಲು (ಹೊಂಗೆ) ಎಲೆ ತಂದು ಕೊಟ್ಟವರು ನಮ್ಮ ತಂದೆ. ಆದರೆ ಹಂದರದಲ್ಲಿ ನಮಗೆ ಹೋಗಲು ಬಿಡಲಿಲ್ಲ. ಇದೆಲ್ಲ ನೋಡಿ ನಾನು ಯಾರ ಮದುವೆಯ ಊಟಕ್ಕೂ ಹೋಗಬಾರದೆಂದು ಬಿಟ್ಟು ಬಿಟ್ಟೆ. ಆಗ ನನಗೆ 10 ವರ್ಷ.

"ಮತ್ತೆ ಒಂದು ದಿನ ನಾನು ಎರಡನೇ ಕ್ಲಾಸ್ ಓದುತ್ತಿದ್ದಾಗ 1978ರಲ್ಲಿ ನನ್ನ ತಂದೆ ಮತ್ತು ಕೇರಿಯವರು ಶಾಲೆಯ ಆವರಣ ಸ್ವಚ್ಛ ಮಾಡಲು ಬಂದಿದ್ದರು. ಇದು ಸಹ ಬಿಟ್ಟಿಯಾಗಿಯೇ. ಅವರು

ಸ್ವಚ್ಛ ಮಾಡಿ ಮನೆಗೆ ಹೋದರು. ಶಾಲೆ ಬಿಟ್ಟಿತು. ನಮಗೆ ತುಂಬಾ ಸಂತೋಷವಾಯಿತು. ಆಗ ಅಸ್ಪೃಶ್ಯ ಜಾತಿಗೆ ಸೇರಿದವನು ನಾನು ಮಾತ್ರ, ಶಾಲೆಯ ಮಕ್ಕಳೆಲ್ಲರೂ ಸೇರಿ ಆವರಣದಲ್ಲಿ ಕಬ್ಬಡ್ಡಿ ಆಟ ಶುರು ಮಾಡಿದೆವು. ಆಟ ಆಡುವಾಗ ವೀರಬಸಪ್ಪ ದಾಸ್ತಿಕೊಪ್ಪ ಎಂಬ ಊರಿನ ಒಬ್ಬ ಹಿರಿಯ ನಮ್ಮ ಹತ್ತಿರ ಬಂದು ನನ್ನನ್ನೇ ಗುರಿ ಮಾಡಿಕೊಂಡು 'ಏ ಮಗನಾ ನೀನು ಅವರಿಗೆಲ್ಲಾ ಒದಿಯುವುದು, ಕಾಲಿನಿಂದ ಮುಟ್ಟಿ ಆಟ ಆಡುವುದು ಸರಿ ಅಲ್ಲ. ನಿನ್ನ ಜಾತಿ ಯಾವುದು? ಅವರ ಜಾತಿ ಯಾವುದು? ಅವರನ್ನ ಒದ್‌ಕೊಂಡು ಆಟ ಆಡುತಿ?' ಎಂದು ಸಿಟ್ಟಿಗೆದ್ದು ಅವರ ಜೊತೆ ನಾನು ಆಟವಾಡುವುದನ್ನು ನಿಲ್ಲಿಸಿ ಬಿಟ್ಟ. ಇದರಿಂದ ನನಗೆ ಬಹಳ ನೋವಾಯಿತು.

"ನನ್ನ ತಂದೆ ಮತ್ತು ಇನ್ನುಳಿದ ದಲಿತರು ಬಂದು ಮೈದಾನ ಹಸನು ಮಾಡಿಕೊಟ್ಟಿದ್ದರು. ಈ ಮೈದಾನದಲ್ಲಿ ಸವರ್ಣೀಯ ಮಕ್ಕಳ ಜೊತೆ ಆಟ ಆಡುವುದು ಜಾತಿ ವ್ಯವಸ್ಥೆಯಿಂದ ಅಪರಾಧವಾಗಿತ್ತು. ಇದರಿಂದ ಒಂದು ಶಾಲೆಯ ಕಂಭಕ್ಕೆ ಮುದುಡಿಕೊಂಡು ಕುಳಿತೆನು. ಆದರೆ ಊರ ಹಿರಿಯ ನನ್ನನ್ನು ಬೈಯ್ದ ಬೈಗುಳಗಳು, ಅವನು ನಡೆದುಕೊಂಡ ವರ್ತನೆ ಅಚ್ಚಳಿಯದೆ ನನ್ನ ಮನಸ್ಸಿನಲ್ಲಿ ಉಳಿಯಿತು. ಅವನ ಜೊತೆ ನಾನು 1996ನೇ ಇಸ್ವಿಯ ವರೆಗೂ ನೇರವಾಗಿ ಮಾತನಾಡಿರಲಿಲ್ಲ. 1996ರಲ್ಲಿ ಸಿಂಡಿಕೇಟ್ ಬ್ಯಾಂಕ್ ಇವರು ನಮ್ಮ ಹಳ್ಳಿಯನ್ನು ದತ್ತು ಪಡೆದು ನನ್ನನ್ನು ಮತ್ತು ಕಲ್ಲಪ್ಪ ಕುಗಟಿ ಎಂಬ ಊರಿನ ಪ್ರಮುಖರನ್ನು ಹಳ್ಳಿಯ ಅಭಿವೃದ್ಧಿ ಸಮಿತಿಯಲ್ಲಿ ಸದಸ್ಯರನ್ನಾಗಿ ಮಾಡಿದರು. ಆಗ ಸದಸ್ಯರ ಕಾರ್ಯಕ್ರಮ ನಡೆದಾಗ ಮಾಲಾರ್ಪಣೆ ಮಾಡುವ ಸಂದರ್ಭದಲ್ಲಿ ಕಾರ್ಯಕ್ರಮ ನಿರ್ವಾಹಕರಾದ ಬ್ಯಾಂಕಿನ ಕೃಷಿ ವಿಸ್ತರಣಾಧಿಕಾರಿ ಅನಂತಕುಮಾರ ಅವರು ನನಗೆ ಮಾಲಾರ್ಪಣೆ ಮಾಡಲು ಸದರಿ ವ್ಯಕ್ತಿ ಹೆಸರನ್ನೇ ಸೂಚಿಸಿದರು. ಅವರು ಅನಿವಾರ್ಯವಾಗಿ ಬಂದು ಮಾಲಾರ್ಪಣೆ ಮಾಡಿ ಕೈ ಕುಲುಕಿದರು. ಕಾರ್ಯಕ್ರಮ ಮುಗಿದ ನಂತರ 15 ವರ್ಷದಿಂದ 'ನಾನು ನೀನು ಮಾತಾಡಿರಲಿಲ್ಲ. ಕಾಲ ಹೆಂಗ್ ಬರುತ್ತದೋ ಹೇಳಾಕ್ ಬರೋಲ್ಲ. ಅದೆಲ್ಲಾ ಹಳೇ ಮಾತು. ಎಲ್ಲ ಸಂಪ್ರದಾಯ ಈಗ ಮಾಡುವುದು ಸರಿ ಅಲ್ಲ. ಎಲ್ಲರೂ ಒಂದೇ ತರ ಇದ್ದಾಂಗ್ ಇರೋಣ' ಎಂದು ಹೇಳಿದಾಗ ನನಗೆ ಗೆಲುವು ಸಿಕ್ಕಿತ್ತೆಂದು ಬಹಳ ಸಂತೋಷವಾಯಿತು .

"ಹೀಗೆ 'ಬಿಟ್ಟಿ ಚಾಕರಿ'ಯಲ್ಲಿ ತೊಡಗಿದ ನನ್ನ ಕುಟುಂಬದವರ ಜೊತೆ ಹೋಗಿ ಅನೇಕ ಅವಮಾನಕ್ಕೆ ಒಳಗಾಗಿ ಜಾತೀಯತೆಯ ಕ್ರೂರ ಮುಖದ ಪರಿಣಾಮವನ್ನು ಅನುಭವಿಸದ್ದೇನೆ. ನಂತರ 1984ರ ಹೊತ್ತಿಗೆ ಇಡೀ ಗೊಡ್ಡು ಸಂಪ್ರದಾಯ ಮತ್ತು ಕುರುಡು ಭೇದಭಾವ ಹುಟ್ಟಿಸುವ ಧರ್ಮದ ಆಚರಣೆಯನ್ನು ವೈಯಕ್ತಿಕವಾಗಿ ಸಂಪೂರ್ಣ ತ್ಯಜಿಸಿದ್ದೇನೆ.

"ನೂರಾರು ಅವಮಾನದ ಸಂದರ್ಭಗಳನ್ನು ಎದುರಿಸುತ್ತಾ ಬಂದಿದ್ದೇನೆ. 1999ರ ಡಿಸೆಂಬರನಲ್ಲಿ ಜೀತ ಪದ್ದತಿ ಬಗ್ಗೆ ಆಯ್.ಎಸ್.ಆಯ್. ಕಟ್ಟಡದಲ್ಲಿ ನಡೆದ ಎರಡು ದಿನದ ತರಬೇತಿಯಲ್ಲಿ ಜೀವಿಕದ ಸಂಚಾಲಕರು ಜೀತ ಪದ್ಧತಿ ಬಗ್ಗೆ ವಿವರಿಸಿದಾಗ ತುಂಬಾ ದುಃಖವಾಯಿತು. 'ಬಿಟ್ಟಿ ಚಾಕರಿ'ನೂ ಒಂದು

ಜೀತ ಪದ್ಧತಿಯೇ ಎಂಬ ವಿಚಾರ ಹೊಳೆಯಿತು. ಕೊನೆಗೂ ಜೀವಿಕದಲ್ಲಿ ಕಾರ್ಯಕರ್ತನಾಗಿ ಕೆಲಸಕ್ಕೆ ಸೇರಿಕೊಂಡೆ. ಈಗ ಜೀವಿಕ ಸಂಚಾಲಕರ 'ಬಿಟ್ಟಿ ಚಾಕರಿ' ಬಗ್ಗೆ ಇರುವ ಹೊಸ ವಿಚಾರಗಳು ಚಿಂತನೆಗಳು 'ಬಿಟ್ಟಿ ಚಾಕರಿ' ಬೆಳಕಿಗೆ ಬರಲು ಮತ್ತು ಹೋಗಲಾಡಿಸಲು ಪೂರಕವಾಗುತ್ತಿವೆ ಎಂಬ ಸಂತೋಷವಿದೆ.

"ಈಗ ಹಂಚಿಕೊಂಡ ಅನುಭವ ಕೇವಲ ಶೇಕಡಾ ಒಂದರಷ್ಟು ಮಾತ್ರ. ಹಲವಾರು ನೋವುಗಳು ನನ್ನ ಎದೆ ಗೂಡಿನಲ್ಲಿವೆ. 'ಬಿಟ್ಟಿ ಚಾಕರಿ'ಯ ಪ್ರತಿ ಕೆಲಸದ ಹಿಂದೆ ನನ್ನದೇ ಒಂದು ಕಥೆಯಿದೆ. ಕಣ್ಣು ತುಂಬಿ ಬರುತ್ತವೆ. ಜಾತಿ ವ್ಯವಸ್ಥೆಗೂ 'ಬಿಟ್ಟಿ ಚಾಕರಿ'ಗೂ ಅತ್ಯಂತ ಸಂಬಂಧವಿದೆ. ನನ್ನ ಕುಟುಂಬದವರ 'ಬಿಟ್ಟಿ ಚಾಕರಿ'ಯಿಂದ ತಂಗಳು ಅನ್ನ, ರೊಟ್ಟಿಪಲ್ಯದ ಸಿಹಿ ಜೊತೆ ಅದನ್ನು ಮಾಡಲೇ ಬೇಕಾದ ಒತ್ತಾಯದ ಬಗ್ಗೆ ಹಾಗೂ ಅಸ್ಪೃಶ್ಯತೆಯ ಕ್ರೂರ ಮುಖ, ಗೊಡ್ಡು ಸಂಪ್ರದಾಯ, ಕುರುಡು ಧಾರ್ಮಿಕ ನೀತಿಗಳು ನನಗೆ ಗೋಚರವಾದವು. ಇದೇ ಅನುಭವ ಜೀತ, 'ಬಿಟ್ಟಿ ಚಾಕ್ರಿ' ಕುರಿತು ದೃಢಮನಸ್ಸಿನಿಂದ ಕೆಲಸ ಮಾಡಲು ಹುರುಪು, ಮತ್ತು ಚೈತನ್ಯ ನೀಡುತ್ತಿದೆ. ಆರ್ಥಿಕ ಪರಿಸ್ಥಿತಿ ನನ್ನನ್ನು ಕೆಳಮಟ್ಟಕ್ಕೆ ದೂಡಿದರೂ ನನ್ನ ಧ್ವನಿ ಮಾತ್ರ ಶೋಷಣೆಯ ವಿರುದ್ಧ ಸಾಯುವ ತನಕ ಕುಗ್ಗುವುದಿಲ್ಲ.

"ನನ್ನ ಕುಟುಂಬ 'ಬಿಟ್ಟಿ ಚಾಕರಿ' ಕೆಲಸದಿಂದ ಹೊರ ಬರಲು 1986ರ ವರೆಗೆ ಕಾಯಬೇಕಾಯಿತು. ನನ್ನ ಚಿಕ್ಕಪ್ಪ ಹೇಳುವ ಪ್ರಕಾರ ಧಾರ್ಮಿಕ ಶೋಷಣೆಯಿಂದ ನನ್ನ ಕುಟುಂಬವು ಹೊರ ಬರುವ ಪಥದಲ್ಲಿ 1965ರಿಂದ ಸಾಗಿ ಬಂದಿದ್ದರೂ 'ಬಿಟ್ಟಿ ಚಾಕರಿ' ಕೆಲಸದಿಂದ ಹೊರ ಬರಲು ಆಗಲಿಲ್ಲ. ಕಾರಣ ನಮ್ಮ ಆರ್ಥಿಕ ಮುಗ್ಗಟ್ಟು."

**2.10.1.2 ಅನಕ್ಷರಸ್ಥರಾದರೂ ತೀಕ್ಷ್ಣಮತಿಯ 'ಬಿಟ್ಟಿ ಚಾಕ್ರಿ' ಕುಟುಂಬದ ಯಜಮಾನನ(38ವರ್ಷ) ಅನುಭವ**

"ನಮ್ಮ ಕುಟುಂಬದಲ್ಲಿ ಐದು ಮಂದಿ ಇರುತ್ತೇವೆ. ನಾವು ಮುಖ್ಯವಾಗಿ 'ಬಿಟ್ಟಿ ಚಾಕರಿ' ಜೊತೆ ಕೂಲಿ ಕೆಲಸ ಮಾಡಿಕೊಂಡು ಬದುಕುತ್ತೇವೆ. ನಾನು ಒಬ್ಬ ಮಾಲಿಕರ ಮನೆ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದೇನೆ. 'ಬಿಟ್ಟಿ ಚಾಕರಿ' ಮಾಡುವುದು ನಮ್ಮ ಪೂರ್ವಜರಿಂದಲೂ ಬಂದ ಕೆಲಸ. ನಮ್ಮ ಅಜ್ಜ, ಅಮ್ಮ, ನಮ್ಮ ತಂದೆ ತಾಯಿ ಇದೇ ಕೆಲಸ ಮಾಡಿಕೊಂಡು ಬಂದಿದ್ದಾರೆ. ಹಾಗೇ ನಾನೂ ಇದೇ ಕೆಲಸ ಮಾಡಿಕೊಂಡು ಹೊರಟಿದ್ದೇನೆ.

"'ಬಿಟ್ಟಿ ಚಾಕರಿ' ಕೆಲಸದ ನನ್ನ ಅನುಭವ ಹೇಳಬೇಕೆಂದರೆ ನನ್ನ ಸಣ್ಣ ವಯಸ್ಸಿನಿಂದಲೇ ಪ್ರಾರಂಭವಾಗುತ್ತದೆ. ನಾನು ನನ್ನ ತಂದೆ ತಾಯಿ ಜೊತೆ ಮಾಲಿಕರ ಮನೆಯ ಶಗಣಿ 'ಬಿಟ್ಟಿ ಚಾಕರಿ'ಗೆ ಹೋಗುತ್ತಿದ್ದೆನು. ಅವರು ಬುಟ್ಟಿಯಲ್ಲಿ ಶಿಗಣಿ ತುಂಬಿ ನನ್ನ ಮೇಲೆ ಹೊರಿಸುತ್ತಿದ್ದರು. ಅದನ್ನು ಹೊತ್ತುಕೊಂಡು ಹೋಗಿ ಅಡಿಗೆ (ತಿಪ್ಪೆಗುಂಡಿಗೆ) ಒಗೆದು ಬರುತ್ತಿದ್ದೆ. ಮುಂಜಾನೆ ಆರು ಘಂಟೆಗೆ ಹೋಗಿ ನನ್ನ ತಂದೆ ಜೊತೆ ಹೋಗುತ್ತಿದ್ದೆ. 10–11 ಘಂಟೆವರೆಗೆ ಕೆಲಸ. ಮತ್ತೆ ಮಧ್ಯಾಹ್ನ ಹೋಗಬೇಕು. ನನ್ನ ತಂದೆ ಹೊಲದ ಕೆಲಸಕ್ಕೆ ಕೂಲಿಗೆ ಹೋದರೆ ನನ್ನ ತಾಯಿ ಮಧ್ಯಾಹ್ನದ ಶಗಣಿ ಕೆಲಸಕ್ಕೆ ಹೋಗಬೇಕು.

"ಬೆಳಿಗ್ಗೆ 'ಬಿಟ್ಟಿ ಚಾಕರಿ' ಕೆಲಸ ಮಾಡಿ ಬರುವಾಗ ಎರಡು ತಂಗುಳ ರೊಟ್ಟಿ, ಪಲ್ಯ ಕೊಡುತ್ತಿದ್ದರು. ಮನೆಗೆ ಬಂದಾಗ ನಾವು ಆರು ಜನ ಮಕ್ಕಳು. ಆದರೆ ರೊಟ್ಟಿ ಇರುವುದು ಎರಡು ಮಾತ್ರ. ಆಗ ರೊಟ್ಟಿ ಹಂಚಿ ತಿನ್ನಬೇಕು. ಒಂದು ವೇಳೆ ಮನೆಯಲ್ಲಿ ಯಾರಿಗಾದರೂ ಹುಷಾರ್ ಇಲ್ಲದಾಗ ಅವರಿಗೆ ಕೊಡುತ್ತಿದ್ದೆವು. ಹೊಸ ಬಟ್ಟೆಗಳು ಅಪರೂಪ. ಮಾಲಿಕರ ಮನೆಯ ಹಳೆ ಬಟ್ಟೆಗಳನ್ನು ಬೇಡಿ ತಂದು ನಮ್ಮ ತಂದೆ ತಾಯಿ ಕೊಡುತ್ತಿದ್ದರು. ಎಲ್ಲರಿಗೂ ಒಂದೇ ಜೊತೆ ಬಟ್ಟೆ ಇರುತ್ತಿತ್ತು. ಬಟ್ಟೆಗಳಲ್ಲಿ ಕೂರಿ ಆಗುತ್ತಿದ್ದವು. ಮೈಯಲ್ಲಾ ಕಡಿತ್ತಿದ್ದವು. ನಮ್ಮ ತಾಯಿ ನೀರು ಕಾಯಿಸಿ ಅದರಲ್ಲಿ ಅದ್ದಿ ತೆಗೆದಾಗ ಸತ್ತು ಕಡಿಮೆ ಆಗುತ್ತಿದ್ದವು. 2ನೇ ತರಗತಿ ವರೆಗೆ ಶಾಲೆಗೆ ಹೋಗಿದ್ದೇನೆ. ಆ ಸಂದರ್ಭದಲ್ಲಿ ಆಗಾಗ ನನ್ನ ತಂದೆ ಜೊತೆ 'ಬಿಟ್ಟಿ ಚಾಕರಿ'ಗೆ ಹೋಗುತ್ತಿದ್ದೆ.

"ನನ್ನ ಅಣ್ಣ ತಮ್ಮಂದಿರೂ ಹೀಗೆ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದರು. ನನ್ನ ಅಣ್ಣ ಮೆಟ್ರಿಕ್ ಪಾಸ್ ಆಗಿದ್ದಾನೆ. ಈಗ ಅವನಿಗೆ 48 ವರ್ಷ. ಅವನೂ ಈಗ ಸದ್ಯ 'ಬಿಟ್ಟಿ ಚಾಕ್ರಿ' ಮಾಡುತ್ತಾನೆ. ನಾಲ್ಕರಿಂದ ಎಂಟು ದಿನಕ್ಕೆ ಒಮ್ಮೆ ಹೊಳೆಯಲ್ಲಿ ಸ್ನಾನ ಮಾಡುತ್ತಿದ್ದೆವು. ಕುಡಿಯಲು ಊರಿಗೆ ಒಂದೇ ಸಿಹಿ ನೀರಿನ ಬಾವಿ ಇತ್ತು. ಅಲ್ಲಿ ನಾವು ನೀರಿಗೆ ಹೋದಾಗ ಊರಿನವರು ಹನಿಸಿದಾಗ ನಮಗೆ ನೀರು ಸಿಗುತ್ತಿತ್ತು– ಅವರು ಬಾವಿಯಿಂದ ನೀರು ಎತ್ತಿ ನಮ್ಮ ಕೊಡಕ್ಕೆ ಹಾಕಿದಾಗ ನಾವು ನೀರು ತರಬೇಕು. ನಮಗೆ ಬಾವಿ ಮುಟ್ಟುವ ಅವಾಕಾಶ ಇರಲಿಲ್ಲ.

"ಹೀಗೆ 'ಬಿಟ್ಟಿ ಚಾಕ್ರಿ' ಮಾಡುವುದನ್ನು ತಂದೆ ತಾಯಿಯಿಂದ ಚೆನ್ನಾಗಿ ಕಲಿತುಕೊಂಡೆ. ನನಗೆ 10 ವರ್ಷ ತುಂಬುವುದರೊಳಗೆ 2ನೇ ತರಗತಿ ಜತೆಗೆ 'ಬಿಟ್ಟಿ ಚಾಕರಿ' ಕೆಲಸ ಕಲಿತುಕೊಂಡೆ.

"ನಂತರ ಎಮ್ಮೆ ಕಾಯಲು ಜೀತಕ್ಕೆ ಅದೇ ಮಾಲಿಕರ ಮನೆಯಲ್ಲಿ ನಮ್ಮ ತಂದೆ ಇದ್ದರು. ಆಗ ಬೆಳಿಗ್ಗೆ 10ರಿಂದ 11 ಘಂಟೆಗೆ ಎಮ್ಮೆಗಳನ್ನು ಹೊಡೆದುಕೊಂಡು ಮೇಯಿಸಲು ಹೋಗುತ್ತಿದ್ದೆ. ನಾಲ್ಕರಿಂದ ಐದು ದನಗಳು ಇರುತ್ತಿದ್ದವು. ಎಮ್ಮೆ ಕಾಯಲು ಹೋಗುವಾಗ ಮಾಲಿಕರ ಮನೆಯಲ್ಲಿ ಊಟ ಮಾಡುತ್ತಿದ್ದೆ. ಅದರಲ್ಲಿಯೂ ಒಮ್ಮೊಮ್ಮೆ ತಂಗಳ ಊಟ ಇರುತ್ತಿತ್ತು. ಐದು ಘಂಟೆ ಸುಮಾರಿಗೆ ಎಮ್ಮೆ ಹೊಡೆದುಕೊಂಡು ಬಂದು ಕಟ್ಟಿ ಹಾಕುತ್ತಿದ್ದೆ. ಮನೆಗೆ ಬರುವಾಗ ಎರಡು ರೊಟ್ಟಿ ನನ್ನ ಉಡಿಯಲ್ಲಿ ನೀಡುತ್ತಿದ್ದರು. ಏಳು ವರ್ಷಗಳ ವರೆಗೆ ಎಮ್ಮೆ ಕಾಯುತ್ತ ಜೀತ ಮಾಡಿದೆ. ಆಗ ನನಗೆ ಬಾಯಿ ಕಟ್ಟಿ ಒಂದು ಚೀಲ ಜೋಳ ವರ್ಷಕ್ಕೆ ಕೊಡುತ್ತಿದ್ದರು.

"ಎಮ್ಮೆ ಕಾಯುವಾಗ ಒಂದು ಎಮ್ಮೆ ಬೆಳೆ ಮೇಯಲು ಹೊಲ ಹೊಕ್ಕಿತ್ತು. ಅಗ ಅದನ್ನು ಹೊಡೆಯಲು ಅವಸರದಿಂದ ಓಡಿದೆ. ಕಾಲು ತೊಡಕಾಗಿ ಬಿದ್ದೆ. ನನ್ನ ಎಡ ಮುಂಗೈ ಮೂಳೆ ಮುರಿಯಿತು. ಮೂರು ತಿಂಗಳು ಎಮ್ಮೆ ಮೇಯಿಸಲು ಹೋಗಲಿಲ್ಲ. ನನ್ನ ಅಣ್ಣ ಕಲ್ಲಪ್ಪ ನನ್ನ ಬದಲು ಮೂರು ತಿಂಗಳು ಎಮ್ಮೆ ಕಾಯಲು ಜೀತ ಮಾಡಿದನು. ಮಾಲಿಕರು ನನ್ನ ಕೈ ಪೆಟ್ಟಾದಕ್ಕೆ ಒಂದು ಪೈಸೆನೂ ಕೊಡಲಿಲ್ಲ.

ನಮ್ಮ ತಂದೆ ನನ್ನನ್ನು ದೇವಲಾಪುರ ಗ್ರಾಮಕ್ಕೆ ಕರೆದುಕೊಂಡು ಹೋಗಿ ನಾಟಿ ಔಷದ ಮಾಡಿದರು. ಒಂದು ವೇಳೆ ಔಷಧಕ್ಕೆ ಮಾಲಿಕರಿಂದ ಕಾಸು ತೆಗೆದುಕೊಂಡಿದ್ದರೆ ಅದನ್ನು ಸಾಲದ ಹಣಕ್ಕೆ ಜಮಾ ಮಾಡುತ್ತಿದ್ದರು. ನಂತರ ನಾನು ದೊಡ್ಡವನಾದೆ. 16–17 ವರ್ಷ ನನಗೆ. ಆಗ ತಂದೆ ತಾಯಿ ನನ್ನನ್ನು ಜೀತ ಬಿಡಿಸಿ ಕೂಲಿ ಕೆಲಸಕ್ಕೆ ಹಚ್ಚಿದರು. ಬೆಳೆದು ದೊಡ್ಡವನಾದೆ. ಅಂದಾಜು 22–23ನೇ ವಯಸ್ಸಿನಲ್ಲಿ ಮದುವೆ ಆಯಿತು. ಮದುವೆಗೆ 60 ಸಾವಿರ ಸಾಲ ಮಾಡಿದೆವು.

"ನಮ್ಮ ಕೂಲಿ ಹಣದಲ್ಲಿ ಮುರಿಯುತ್ತಾ ಬಂದು ಮೂರು ವರ್ಷಕ್ಕೆ ಸಾಲ ತೀರಿತು. ವಾರದ ಹಾಜರಿಗಳಲ್ಲಿ 2–4 ಹಾಜರಿ ಕೂಲಿ ಹಣ ಸಾಲಕ್ಕೆ ವಜಾ ಮಾಡುತ್ತಿದ್ದೆವು, ನಂತರ ನಾವು, ಗಂಡ-ಹೆಂಡತಿ-ಮಕ್ಕಳು ಬೇರೆ ಉಳಿದೆವು. ಈಗ ಖಾಯಂ ಆಗಿ ಮಾರುತಿ ಮುರುಗೋಳ ಇವರ ಮನೆ ಬಿಟ್ಟಿಚಾಕರಿಮಾಡುತ್ತೇವೆ. ನಾನು ನನ್ನ ಹೆಂಡತಿ. ಒಂದೊಂದು ಬಾರಿ ಮಕ್ಕಳ ಸಹಾಯ ಪಡೆಯುತ್ತೇವೆ.

"ಮುಂಜಾನೆ ಆರು ಘಂಟೆಗೆ ಹೋಗತ್ತೇನೆ. 4–5 ದನಗಳು ಇವೆ. ಅಂಗಳ ಕಸ, ಹಿತ್ತಲ ಕಸ, ಹುಸಿ (ಮನೆ ಬಾಗಿಲುಗಳ ಮುಂದೆ ಇರುವ ಜಾಗ) ಕಸ, 7–8 ಬುಟ್ಟಿ ಶಗಣಿ ಕಸ ತುಂಬಿ ಅಡಿಗೆ ಹಾಕುತ್ತೇವೆ. ಕಟ್ಟಿಗೆ ಒಡೆಯುವುದು – ತಿಥಿಮತಿ ಇದ್ದಾಗ ಜಾಸ್ತಿ ಒಡೆಯುವುದು, ಹತ್ತಿ ಕಟ್ಟಿಗೆ ಕಡಿಯುವುದು ಮಾಮೂಲಿ ಇರುತ್ತಿತ್ತು. ಅವರ ಮನೆಯಲ್ಲಿ ಕಾರ್ಯಕ್ರಮ ಇದ್ದಾಗ – ಮದುವೆ-ಕುಬಸಾ, ಹುಟ್ಟಿದರೆ, ದೊಡ್ಡವಾದರೆ, ತೀರಿಕೊಂಡರೆ, 2–3 ದಿನ 24 ತಾಸುಗಳೂ ನಾವು ಕೆಲಸ ಮಾಡಬೇಕು. ಅವರು ಕರೆದಾಗ ಅಲ್ಲಿಯೇ ಇರಬೇಕು. ಮದುವೆಯಲ್ಲಿ ನಾಲ್ಕರಿಂದ ಏಳು ದಿನ ಕೆಲಸ ಅದೂ ಅತಿಯಾದ ಕೆಲಸ ಹಚ್ಚುತ್ತಾರೆ. ಇದ್ಯಾವುದೂ ನಮಗೆ ಪಗಾರ ಇರುವುದಿಲ್ಲ. ಉಳಿದ ತಂಗಳಬಂಗಳ ಕೂಳು ಕೊಡುತ್ತಾರೆ. ಉಂಡ ಮುಸುರಿ ಎತ್ತುವ ಕೆಲಸ ನಮ್ಮದೇ.

"ಪ್ರತಿ ಅಮವಾಸ್ಯೆ ಹುಣ್ಣಿಮೆಗಳಲ್ಲಿ ಹಬ್ಬಗಳಲ್ಲಿ ಅವರ ಮನೆಗಳನ್ನು ಸಾರಿಸಬೇಕು, ತೊಳೆಯಬೇಕು. ನಮಗೆ ಎಲ್ಲಿಯ ವರೆಗೆ ಪ್ರವೇಶ ಇದೆಯೋ ಅಲ್ಲಿಯವರೆಗೂ ನಾವೇ ಮಾಡಬೇಕು. ಅಡುಗೆ ಮನೆ ಮತ್ತು ಪಡಸಾಲೆಗಳಿಗೆ (ನಡುಮನೆ ಬಿಟ್ಟು) ಪ್ರವೇಶ ಇಲ್ಲ. ದನಗಳ ಮೈ ತೊಳೆಯಬೇಕು. ಪ್ರತಿ 4–5 ದಿನಗಳಿಗೆ ಒಮ್ಮೆ ದನಗಳ ಮೈ ತೊಳೆಯಬೇಕು. ಒಂದೇ ವರ್ಷದಲ್ಲಿ ಮೂರು ತಿಂಗಳು ದನಗಳ ಮೈ ತೊಳೆದಂತಾಗುವುದು.

"ಸುಗ್ಗಿಕಾಲದಲ್ಲಿ ಕನಿಷ್ಟ 15 ದಿನ ರಾತ್ರಿ ಹಗಲು ದುಡಿಯಬೇಕು. ಈ ವೇಳೆಯಲ್ಲಿ ನನಗೆ ಬಹಳ ತ್ರಾಸ ಆಗುವುದು. ಕಣದ ಜಾಗ ಹಸನು ಮಾಡಬೇಕು, ಕಣ ಸಾರಿಸಬೇಕು. ಎಂಟು ದಿನ ತೆನೆ ಒಣಗಿಸಬೇಕು ದಿನಾಲು ಅದನ್ನು ಬಿಸಿಲಿಗೆ ಹಾಕುವುದು. ಸಂಜೆ ಮತ್ತು ಮಳೆ ಬಂದರೆ ಗುಂಪು ಹಾಕುವುದು, ಮಸಿನಿಗೆ ಹಾಕುವುದು, ನಂತರ 2–7 ದಿನ ಒಣಗಿಸುವುದು, ರಾಶಿ ಮಾಡಿದ ಹೊಟ್ಟು ಮನೆಗೆ ತಂದು ಬಣವಿ ಹಾಕುವುದು. ಇಷ್ಟೆಲ್ಲ ಕೆಲಸ ಮಾಡಿದರೂ ಇದಕ್ಕೆ ಪ್ರತ್ಯೇಕ ಕೂಲಿ ಇಲ್ಲ. ಇದೆಲ್ಲಾ

ನಮ್ಮ ಬಿಟ್ಟಿ ಚಾಕರಿ ಲೆಕ್ಕದಲ್ಲಿಯೇ ಮಾಡಬೇಕು. ರಾಶಿ ತುಂಬುವಾಗ ನಮಗೆ 2–3 ಚೀಲ ಜೋಳ ಕೊಡುತ್ತಾರೆ. ಇಲ್ಲಿಯೂ ನಮ್ಮ ಕೂಲಿ ವರ್ಷಕ್ಕೆ ಇಂತಿಷ್ಟು ಅಂತಾ ನಿರ್ಧಾರವಿಲ್ಲ. ಬೆಳೆ ಚೆನ್ನಾಗಿ ಬಂದರೆ 3–4 ಚೀಲ ಜೋಳ, ಬರದೇ ಇದ್ದರೆ 2–3 ಚೀಲ ಜೋಳ, ಅಲ್ಪ ಸ್ವಲ್ಪ ಗೋದಿ ಕಡಲೆ ಇತ್ಯಾದಿ. ಇದೇ ನಮ್ಮ ವರ್ಷದ ಕೂಲಿಯ ಲೆಕ್ಕ. ಈ ಕೂಲಿ 15 ದಿನ ಕೂಲಿ ಇಲ್ಲದೇ ಕೆಲಸ ಮಾಡಿದ್ದಕ್ಕೆ ಸರಿ ಹೋಗುತ್ತದೆ. ಇನ್ನುಳಿದದ್ದು ಕೇವಲ ವರ್ಷವಿಡೀ ಮಾಡಿದ ಬಿಟ್ಟಿ ಕೆಲಸ.ಇದರಿಂದ ನಮಗೆ ತುಂಬಾ ತೊಂದರೆ ಆಗುತ್ತದೆ. ಹೀಗೆ ಕೂಲಿ ಇಲ್ಲದೆ 15–20 ದಿನ ರೈತರ ಹೊಲದಲ್ಲಿ ಕೆಲಸ ಮಾಡಿದ್ದರಿಂದ ನನ್ನ ಮನೆ ಖರ್ಚಿಗೆ ಸಾಲಮಾಡಿರುತ್ತೇನೆ. ತಕ್ಷಣ ಒಂದು ಚೀಲ ಜೋಳ ಮಾರಿ ಅದನ್ನು ತೀರಿಸುತ್ತೇನೆ. ಅವರ ಎಮ್ಮೆ ಆಕಳು ಕರು ಹಾಕಿದಾಗ ಈಗಲೂ ಅದರ ಮಾಸ ತೆಗೆದುಕೊಂಡು ಹೋಗಿ ಹೊಳೆಯಲ್ಲಿ ಹುಗಿದು ಬರಬೇಕು. ಆದರೆ ಗಿಣ್ಣ ಊಟ ಮಾಡುವುದು ಕನಸು.

"ಎಂತಹ ಕಷ್ಟ ಇದೆ ಎಂದರೂ ನನ್ನ 'ಬಿಟ್ಟಿ ಚಾಕರಿ' ಕೆಲಸ ನಿಲ್ಲುವುದಿಲ್ಲ. ನನ್ನ ತಂದೆ ತೀರಿಕೊಂಡಾಗ ಎರಡೇ ಎರಡು ದಿನ ಚಾಕರಿಗೆ ಹೋಗುವುದನ್ನು ಬಿಟ್ಟಿದ್ದೆ. ನಂತರ ಬೆಳಿಗ್ಗೆ ಮಾಲಿಕ ಮನೆಗೆ ಬಂದುಕರೆದುಕೊಂಡು ಹೋದನು. ಇದರಿಂದ ನನಗೆ ತುಂಬಾ ದುಃಖ ಆಯಿತು.

"ನಾನು ಮುಂಜಾನೆ ಹೊತ್ತು 'ಬಿಟ್ಟಿ ಚಾಕರಿ' ಕೆಲಸ ಮಾಡಿ ಕೂಲಿಗೆ ಹೋದರೆ ಮದ್ಯಾಹ್ನ ನನ್ನ ಹೆಂಡತಿ ಆ ಕೆಲಸ ಮಾಡುತ್ತಾಳೆ. ನಮ್ಮ ಮಕ್ಕಳನ್ನು ಆ ಕೆಲಸಕ್ಕೆ ಬಳಸಿಕೊಳ್ಳುತ್ತೇವೆ. ಒಂದೊಂದು ದಿವಸ ಇಬ್ಬರೂ ಕೂಲಿಗೆ ಹೋದಾಗ ಮಕ್ಕಳು ಮಧ್ಯಾಹ್ನ ಊಟಕ್ಕೆ ಬಿಟ್ಟಾಗ ಬಂದು ಶಗಣಿ ಕಸ ಮಾಡುತ್ತಾರೆ.

"ಈಗ ಕೂಲಿ 100 ರೂ. ಕೊಡುತ್ತಾರೆ. ಹೆಣ್ಣು ಮಕ್ಕಳಿಗೂ 100 ರೂ. ಇದು ಒಂದು ವರ್ಷದಿಂದ ಈಚೆಗೆ ಕೊಡುತ್ತಿದ್ದಾರೆ. ಇದರಿಂದ ಮನೆ ಖರ್ಚಿಗೆ ತೊಂದರೆ ಆಗುತ್ತಿದೆ. ಕೂಲಿ ಕೆಲಸಕ್ಕೆ ಸರಿಯಾಗಿ ಹೋಗಲು ಅಗುವುದಿಲ್ಲ. ಏಕೆಂದರೆ ಮಾಲಿಕರ ಮನೆ 'ಬಿಟ್ಟಿ ಕೆಲಸ' ಕಡಿಮೆ ಇದ್ದಾಗ ಮಾತ್ರ ಕೂಲಿಗೆ ಹೋಗಬೇಕು.

"ಈಗ ನನ್ನ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಒಬ್ಬ ಮಗಳು ಎಸ್.ಎಸ್.ಎಲ್.ಸಿ. ಓದುತ್ತಿದ್ದಾಳೆ. 'ಬಿಟ್ಟಿ ಚಾಕರಿ'ಯಿಂದ ನಮ್ಮ ಹಣದ ತೊಂದರೆ ನೀಗುತ್ತಿಲ್ಲ.

"ಈ ಕೆಲಸ ಕಷ್ಟವಾದರೆ ಅದನ್ನು ಬಿಟ್ಟು ಬೇರೆ ಕೆಲಸಕ್ಕೆ ಹೋಗಬಹುದಲ್ಲ" ಎಂದು ಕೇಳಿದ್ದಕ್ಕೆ ಶಿವಪ್ಪರವರು, "ಮಾಲಿಕರು ನಮಗೆ ನಿಮ್ಮ ಕೇರಿಯೊಳಗೆ ಎಷ್ಟು ಜನರು ಈ ಕೆಲಸ ಮಾಡುತ್ತಾರೊ ಅವರನ್ನೆಲ್ಲಾ ಬಿಡಿಸು. ಊರಾಗ ಹಾಯಿರಿ ನೋಡೋಣ. ಹೊಲದಲ್ಲಿ ಹಾಯಿರಿ ನೋಡೋಣ. ನಮ್ಮ ಹೊಲದಾಗ ಏನೂ (ಸೌದೆ ಕಟ್ಟಿಗೆ ಇತ್ಯಾದಿ) ಮುಟ್ಟುವಂತಿಲ್ಲ. ಮುಟ್ಟಿದರೆ ನಿಮ್ಮ ಕಾಲು ಕಡಿಯುತ್ತೇವೆ ಎನ್ನುತ್ತಾರೆ. ನಮ್ಮನ್ನು ಊರಿನಿಂದ ಹೊರಗಿಡುವ (ಬಹಿಷ್ಕಾರ ಹಾಕುವ) ಮಾತಾಡಿ ಭಯ ಹುಟ್ಟಿಸುತ್ತಾರೆ."

'ಬಿಟ್ಟಿ ಚಾಕ್ರಿ'ಯವರ ಅನುಭವಗಳಲ್ಲಿ ಚಿಕ್ಕಂದಿನಿಂದ ಕೊನೆಯ ತನಕದ 'ಬಿಟ್ಟಿ ಚಾಕ್ರಿ' ಮಾಡುವವರ ಜೀವನಚಕ್ರವನ್ನು ಗುರುತಿಸಬಹುದು. ಕುಟುಂಬದಲ್ಲಿ ಅಜ್ಜ ಅಜ್ಜಿ, ತಂದೆ ತಾಯಿ, ಅಣ್ಣ ತಮ್ಮಂದಿರೆಲ್ಲರೂ 'ಬಿಟ್ಟಿ ಚಾಕ್ರಿ' ಮಾಡಿದವರು. ಎಳೆ ಮಗುವಾಗಿದ್ದಾಗಲೇ ತಂದೆ ತಾಯಿ ಜೊತೆ 'ಬಿಟ್ಟಿ ಚಾಕ್ರಿ' ಮಾಡುವ ಅನುಭವ ಪ್ರಾರಂಭವಾಗುತ್ತದೆ. 2ನೇ ತರಗತಿಗೆ ಶಿಕ್ಷಣ ಮೊಟಕುಗೊಳ್ಳುತ್ತದೆ. ಆದರೆ ಹತ್ತನೆ ತರಗತಿ ಓದಿದ ಅಣ್ಣನಿಗೂ 'ಬಿಟ್ಟಿ ಚಾಕ್ರಿ' ತಪ್ಪಿಲ್ಲ. ನಂತರ 9–10 ವರ್ಷಕ್ಕೆ ಎಮ್ಮೆ ಕಾಯಲು ಜೀತಕ್ಕೆ ತೊಡಗುತ್ತಾನೆ. 17–18 ವರ್ಷಕ್ಕೆ ತಂದೆ ಅವರನ್ನು ಜೀತದಿಂದ ಬಿಡಿಸಿ ಕೂಲಿ ಕೆಲಸಕ್ಕೆ ಕಳುಹಿಸುತ್ತಾರೆ. 22–23 ವರ್ಷಕ್ಕೆ 60 ರೂ. ಸಾಲ ಮಾಡಿ ಮನೆಯವರು ಮದುವೆ ಮಾಡಿಸುತ್ತಾರೆ. ಆದರೆ ಸಾಲ ತೀರಿಸಲು ಪುಣ್ಯಕ್ಕೆ ಜೀತಕ್ಕೆ ಸೇರಿಸುವುದಿಲ್ಲ. ಕೂಲಿಯ ಹಣದಿಂದಲೇ ವಾರಕ್ಕೆ ಮೂರು ಕೂಲಿಯನ್ನು ಸಾಲಕ್ಕೆ ಜೋಡಿಸಿ ಮೂರು ವರ್ಷಗಳಲ್ಲಿ ಸಾಲದ ಹೊರೆ ಇಳಿಯುವಂತೆ ನೋಡಿಕೊಳ್ಳುತ್ತಾರೆ. ಆದರೆ ಹೆಂಡತಿ ಮಕ್ಕಳೊಂದಿಗೆ ತನ್ನ ಸಂಸಾರ ಬೇರೆ ಆದಾಗ ಪುನಃ 'ಬಿಟ್ಟಿ ಚಾಕ್ರಿ' ಬದುಕಿಗೆ ಹೊಂದಿಕೊಳ್ಳುವ ಅನಿವಾರ್ಯತೆ ಬರುತ್ತದೆ. ಯಾವುದೇ ಕಾರಣಕ್ಕೂ 'ಬಿಟ್ಟಿ ಚಾಕ್ರಿ'ಯನ್ನು ತಪ್ಪಿಸುವ ಸಾಧ್ಯತೆ ಇಲ್ಲ ಎಂಬುದಕ್ಕೆ ಅವರ ತಂದೆ ಸತ್ತಾಗ ಕೇವಲ ಎರಡೇ ದಿನಕ್ಕೆ 'ಬಿಟ್ಟಿ ಚಾಕ್ರಿ'ಗೆ ಹೋಗುವಂತಾಗಿದ್ದ ಅವರ ಅನುಭವ ಸಾಕ್ಷಿಯಾಗಿದೆ. ಈಗ ಅವರ ಮಕ್ಕಳನ್ನೂ ಕೆಲವೊಮ್ಮೆ 'ಬಿಟ್ಟಿ ಚಾಕ್ರಿ'ಗೆ ಬಳಸಿಕೊಳ್ಳುತ್ತಾರೆ ಶಿವಪ್ಪರವರು. ಅಂದರೆ ಅವರ ಮಕ್ಕಳೂ ಮುಂದಿನ ಬಿಟ್ಟಿ ಚಾಕ್ರಿಯ ಆಳುಗಳಾಗಿ ದುಡಿಯಲು ಸಿದ್ಧರಾಗುತ್ತಿದ್ದಾರೆ ಎಂದು ಅರ್ಥ.

ಚಿಕ್ಕವರಿದ್ದಾಗ 'ಬಿಟ್ಟಿ ಚಾಕ್ರಿ'ಯ ಅನುಭವಗಳು ಕರುಳು ಹಿಂಡುತ್ತವೆ. ತಂದೆ ತಾಯಿಯವರು ದಿನಕ್ಕೆ ಎರಡು ತಂಗಳು ರೊಟ್ಟಿ 'ಬಿಟ್ಟಿ ಚಾಕ್ರಿ' ಸೇವೆ ಸಲ್ಲಿಸುತ್ತಿದ್ದ ಮನೆಯವರಿಂದ ತಂದು ಕೊಟ್ಟರೆ ಅದನ್ನು ಆರು ಜನ ಮಕ್ಕಳು ಹಂಚಿ ತಿನ್ನಬೇಕು. ಹಾಕಲಿಕ್ಕೆ ಮಾಲಿಕರ ಹಳೇ ಬಟ್ಟೆಗಳೇ ಗತಿ. ಆದರೆ ಅವುಗಳಲ್ಲಿ ಕೊರಿ ಬಿದ್ದು ಕಡಿಯುವುದನ್ನು ತಪ್ಪಿಸಲು ಬಟ್ಟೆಗಳನ್ನು ಬಿಸಿನೀರಿಗೆ ಹಾಕಿ ಕಾಯಿಸಿ ಅವನ್ನು ಸಾಯಿಸಬೇಕಿತ್ತು.

'ಬಿಟ್ಟಿ ಚಾಕ್ರಿ' ಜೊತೆ ಕೂಲಿಗೆ ಹೋಗಿ ಕಾಸಿನ ಸಂಪಾದನೆ ಮಾಡಬಹುದಾದರೂ ಸಿಗುವ ಕೂಲಿ ಬಹಳ ಕಡಿಮೆ. ಗಂಡಸರಿಗೂ ಹೆಂಗಸರಿಗೂ 100ರೂ. ಆದರೆ ಕೂಲಿ ಕೆಲಸವೂ ಎಲ್ಲಾ ದಿನ ಸಿಗುವುದಿಲ್ಲ. 'ಬಿಟ್ಟಿ ಚಾಕ್ರಿ' ಜಾಸ್ತಿ ಇದ್ದ ದಿನ ಬೇರೆ ಕೂಲಿಗೆ ಹೋಗಲಿಕ್ಕೆ ಆಗುವುದಿಲ್ಲ. ಬಿಟ್ಟಿ ಚಾಕ್ರಿಯ ಭಾಗವಾಗಿ ಮದುವೆ, ಸಾವು, ತಿಥಿ, ಹಬ್ಬಗಳಲ್ಲಿ 2–3 ದಿನ ಅಥವಾ 7–8 ದಿನ 24 ತಾಸೂ ಎಂಬಂತೆ ಮಾಲಿಕರ ಮನೆಯ ವಠಾರದಲ್ಲಿದ್ದು ಎಲ್ಲಾ ಸ್ವಚ್ಛತೆಯ ಮತ್ತು ದನಕರುಗಳ ಆರೈಕೆಯ ಕೆಲಸಗಳನ್ನು ಮಾಡುತ್ತಿರಬೇಕು. ಅದಕ್ಕೆ ಪ್ರತ್ಯೇಕ ಪಗಾರವೂ ಇಲ್ಲ; ಆ ದಿನಗಳಂದು ಸ್ಪಷ್ಟವಾಗಿ ಬೇರೆ ಕಡೆ ಕೂಲಿ ಕೆಲಸಕ್ಕೆ ಹೋಗುವ ಹಾಗೆಯೂ ಇಲ್ಲ. ಸುಗ್ಗಿಯ ಸಮಯದಲ್ಲಿ ಕನಿಷ್ಟ 15 ದಿನ ಕಣದ ಕೆಲಸವನ್ನೆಲ್ಲ ಮಾಡುತ್ತಿರಬೇಕು. ಅದಕ್ಕೂ ಪಗಾರವಿಲ್ಲ. ಆದರೆ ಕಣದ ಕಾಳಾಗಿ ಸಿಗುವ 2–3 ಅಥವಾ 3–4 ಚೀಲ

ಜೋಳ ಮತ್ತು ಕೆಲವು ಸೇರು ಬೇರೆ ದವಸಧಾನ್ಯಗಳು ಆ ತಿಂಗಳ ಪುಕ್ಕಟ ದುಡಿಮೆಯ ಕೂಲಿಗೆ ಸರಿ ಹೋಗುತ್ತದೆ. ವರ್ಷವಿಡೀ ಜೀವನ ಸಾಗಿಸಲು ಬೇರೆ ಆಧಾರಗಳ ಮೊರೆಹೋಗಬೇಕಾಗುತ್ತದೆ.

ನ್ಯಾಯುತವಾದ ಕೂಲಿಯ ಮಾತು ಬಿಡಿ. 'ಬಿಟ್ಟಿ ಚಾಕ್ರಿ' ಅಥವಾ ಜೀತ ಮಾಡುವಾಗ ಏನಾದರೂ ಅಪಘಾತವಾಗಿ ಕೈಕಾಲು ಮುರಿದುಕೊಂಡರೆ ಆಗುವ ಖರ್ಚನ್ನು ಮನೆಯವರೇ ನೋಡಿಕೊಳ್ಳಬೇಕು. ಹೊಲವನ್ನು ನುಗ್ಗಿ ಪೈರನ್ನು ತಿನ್ನುತ್ತಿದ್ದ ಎಮ್ಮೆಯನ್ನು ಓಡಿಸಲು ಹೋಗಿ ತನ್ನ ಕಾಲು ಮುರಿದ ಶಿವಪ್ಪನಿಗೆ ಮಾಲಿಕನು ಯಾವುದೇ ಚಿಕಿತ್ಸೆಯನ್ನು ನೀಡಲಿಲ್ಲ; ಔಷಧಿ ಖರ್ಚನ್ನು ತುಂಬಿಸಲಿಲ್ಲ; ಕೊನೆಗೆ ರಜೆಯನ್ನೂ ಕೊಟ್ಟಿಲ್ಲ. ಅವರ ಬದಲಿಗೆ ಅವರ ಅಣ್ಣ ಮೂರು ತಿಂಗಳು ಬದಲಿ ಜೀತದಾಳುವಾಗಿ ದುಡಿಯಬೇಕಾಯಿತು.

'ಬಿಟ್ಟಿ ಚಾಕರಿ'ಯವರ ಬದುಕಲ್ಲೂ ಅಸ್ಪೃಶ್ಯತೆಯ ಅನುಭವ ದಟ್ಟವಾಗಿದೆ. ಕುಡಿಯುವ ನೀರಿಗೆ ಊರ ಬಾವಿಯ ಹತ್ತಿರ ಹೋದರೆ ದಲಿತರಲ್ಲದವರು ನೀರು ಹನಿಯುವ ತನಕ ಕಾಯಬೇಕು. ಅವರು ನೀರು ಸೇದಿ ತಮ್ಮ ಬಿಂದಿಗೆಗಳಿಗೆ ನೀರು ತುಂಬಿಸಿದರೆ ಮಾತ್ರ ಅವನ್ನು ಎತ್ತಿಕೊಂಡು ಮನೆಗೆ ಹೋಗಬಹುದು. 'ಬಿಟ್ಟಿ ಚಾಕ್ರಿ'ಯಲ್ಲೇ ಜಾತಿ ವ್ಯವಸ್ಥೆಯ ಕ್ರೌರ್ಯ ಅಡಗಿದೆ. 'ಬಿಟ್ಟಿ ಚಾಕ್ರಿ' ನಿಲ್ಲಿಸುವ ಏನಾದರೂ ಸೂಚನೆ ಕೊಟ್ಟರೆ ಸಾಕು. "ಊರಾಗ ಹಾಯಿರಿ ನೋಡೋಣ. ಹೊಲ ಹಾಯಿರಿ ನೋಡೋಣ. ಸೌದೆ ಮುಟ್ಟಿರಿ ನೋಡೋಣ. ನಿಮ್ಮ ಕಾಲು ಮುರಿಯುತ್ತೇವೆ. ನಿಮ್ಮನ್ನು ಊರ ಹೊರಗೆ ಇಡುತ್ತೇವೆ. ಹುಷಾರ್" ಎಂಬ ಬೆದರಿಕೆಗಳು ಸದಾ ಸಿದ್ಧ.

**2.10.1.3. ಒಬ್ಬ 50 ವರ್ಷ ವಿಧವೆ ತಾಯಿಯ (ಮತ್ತು 28 ವರ್ಷ ಮಗನ) 'ಬಿಟ್ಟಿ ಚಾಕ್ರಿ'ಯ ಅನುಭವ**

"ನನ್ನ ಗಂಡತೀರಿಕೊಂಡಿದ್ದಾರೆ. ನನ್ನ ತವರು ಮನೆ ಕೆಂಗಾನೂರು ಗ್ರಾಮ. ನನ್ನ ತವರು ಮನೆಯಲ್ಲಿಯೂ ಒಬ್ಬ ಮಾಲಿಕರ ಮನೆಯಲ್ಲಿ ಬಿಟ್ಟಿಚಾಕರಿ ಕೆಲಸ ಮಾಡುತ್ತಿದ್ದರು. ನನ್ನನ್ನು ತೊಟ್ಟಿಲಿಗೆ ಬಾಸಿಂಗ ಕಟ್ಟಿ ಮದುವೆ ಮಾಡಿದ್ದಾರೆ. ಆಗ ನನ್ನ ವಯಸ್ಸು ಒಂದು ವರ್ಷದ ಒಳಗಿತ್ತು ಎನ್ನುತ್ತಾರೆ ನನ್ನ ತಾಯಿ. ನನ್ನ ಗಂಡನಿಗೆ ಅರವಳ್ಳಿ ಹೆಣ್ಣು ತೆಗೆದು ಮದುವೆ ಮಾಡುತ್ತಿದ್ದರಂತೆ. ಆಗ ಅವಳು ಮದುವೆ ಆಗಲು ನಿರಾಕರಿಸಿದಾಗ ತಕ್ಷಣ ಕಳ್ಳಗಿನ ಸಂಬಂಧ (ಕರಳು ಬಳ್ಳಿ ಸಂಬಂಧ) ಎಂದು ನಾನು 9–10 ತಿಂಗಳು ಕೂಸು ಇರಬೇಕಂತೆ. ಆಗ ನನ್ನ ತೊಟ್ಟಿಲಿಗೆ ಬಾಸಿಂಗ ಕಟ್ಟಿ ಮದುವೆ ಮಾಡಿದ್ದಾರೆ.

"ನಂತರ ನಾನು ಆಡು ಆಡುತ್ತಾ ದೊಡ್ಡವಳಾದೆ. ನನ್ನ ತಾಯಿ ತಂದೆ ಕೊರಳಿಗೆ ಗುಳಿದಾಳಿ (ಮಾಂಗಲ್ಯ) ಕಟ್ಟಿಕೊ ಎಂದಾಗ ನನಗೆ ಒಂದು ತರ ವಿಚಿತ್ರವಾಯಿತು. 'ನನ್ನ ಮದುವೆ ಯಾವಾಗ ಆಗಿದೆ ಯಾರ ಜೊತೆ ಆಗಿದೆ? ನನಗೆ ಯಾರೂ ಗೊತ್ತಿಲ್ಲ. ಹಿಂಗ್ ಯಾಕ ಮಾಡಿದಿರಿ?' ಎಂದು ನನ್ನ ತಾಯಿ ತಂದೆ ಜೊತೆ ವಿಚಾರಿಸಿದಾಗ ಅವರು ಈ ಕಥೆ ಹೇಳಿದರು. ಹೀಗೆ ಮದುವೆ ಅನುಭವ ನನಗೆ ಆಗಲೇ ಇಲ್ಲ. ಗುಳಿದಾಳಿ ಕಟ್ಟಿಕೊಂಡಾಗ ಊರಿಗೆ ಗೆಳತಿಯರು 'ಏ ನಿನ್ನ ಮದುವಿ ಯಾವಾಗ ಆತಿ? ಎಲ್ಲಿ

ಅದಾನ ನಿನ್ನ ಗಂಡ? ಹೆಂಗ ಅದಾನ? ಎನ ಮಾಡತಾನ?' ಎಂದು ಹಾಸ್ಯ ಮಾಡಿ ಕೇಳುತ್ತಿದ್ದರು. ಆದರೆ 'ಗೊತಿಲ್ಲ' ಅನ್ನುವ ಮಾತು ಬಿಟ್ಟರೆ ನನಗೆ ಏನೂ ಹೇಳಲು ಬರುತ್ತಿರಲಿಲ್ಲ.

"ಒಂದು ದಿನ ನನ್ನ ಗಂಡ ಮನೆಗೆ ಬಂದ. ಆಗ ಹಿರಿಯರೆಲ್ಲರೂ '...ಅವ್ವನ ಗಂಡ ಬಂದ' ಎಂದಾಗ ನಾನು ಆತುರದಿಂದ ಹೊರಬಂದು ನೋಡಿದಾಗ ಮನಸ್ಸಿಗೆ ಬಹಳ ಕಸಿವಿಸಿ ಆತ್ರಿ. 'ಕರ್‍ರಗೆ ಕೆಚ್ಚ ಆಗಿದ್ದ ಇವನನ್ನು ಯಾರ ಮದುವಿ ಆಗಾರ್‍ರ? ಇಂತವಂಗ ನನ್ನ ಮಾಡಿ ಕೊಟ್ಟಾರ' ಎಂದು ಮನಸ್ಸು ಮುದುಡಿತು. ಈಗ ಆಗಿದ್ದರೆ ನಾನು ಖಂಡಿತ ಒಪ್ಪುತ್ತಿರಲಿಲ್ಲ. ಆದರ ಹಿರ್‍ಯಾರ ಮರ್‍ಯಾದಿ. ಕಿಮ್ಮತ್ತು ಸುಮಾರ್ ಮಾಡಬಾರದು ಅಂತ ಒಪ್ಪನ್ರಿ. ಒಟ್ಟಾರೆ ಮದವಿ ಒಪ್ಪಕೊಂಡು ಬಾಳ್ವೆ ಮಾಡಿದೇನ್ರಿ, ತಂದಿ ತಾಯಿ ಕಿಮ್ಮತ್ತ ತರಬೇಕಂತ ಒಪ್ಪಕೊಂಡ ಬಾಳ್ವೆ ಮಾಡೇನ್ರಿ.

"ನಾನು ಗಂಡನ ಮನೆಗೆ ಬಂದಾಗ ಒಬ್ಬ ಮಾಲಿಕರ ಬಿಟ್ಟಿಚಾಕರಿ ಮಾಡುತ್ತಿದ್ದರು. ನನ್ನ ಮನೆಯವರು ಇಬ್ಬರು ಅಣ್ಣ ತಮ್ಮಂದಿರು. ರಾಮಪ್ಪ ನನ್ನ ಗಂಡನ ಅಣ್ಣ. ಹೊಸದಾಗೆ ಗಂಡನ ಮನೆಗೆ ಬಂದಾಗ ನನ್ನ ಅತ್ತೆ ಮಾಲಿಕರ ಮನೆಗೆ ಕರೆದುಕೊಂಡು ಹೋಗಿ ಪರಿಚಯ ಮಾಡಿದರು. ನಂತರ ಮಾಲಿಕರ ದನದ ಕೊಟ್ಟಿಗೆ, ಹಿತ್ತಲು, ಬಾಗಿಲು ಹುಸಿ, ದನಗಳು ಹೀಗೆ ಎಲ್ಲಾ ಪರಿಚಯ ಮಾಡಿಸಿದಳು. ಕಾಲ ಕಳೆದಂತೆ ಮುಂದೆ ನಾಲ್ಕಾರು ವರ್ಷಕ್ಕೆ ಕುಟುಂಬ ಬೇರೆ ಬೇರೆ ಅಯಿತು. ನಮ್ಮ ಪಾಲಿಗೆ ಒಬ್ಬರ ಬಿಟ್ಟಿಚಾಕರಿ ಕೆಲಸ ಬಂತು. ಇನ್ನೊಬ್ಬ ಮಾಲಿಕನ ಮನೆ ಅವರ ಪಾಲಿಗೆ ಬಂತು.

"ನನಗೆ ಐದು ಜನ ಮಕ್ಕಳಾದರು – ನಾಲ್ಕು ಹೆಣ್ಣು, ಒಬ್ಬ ಗಂಡು. ಗಂಡು ಮಧ್ಯದವ. ಇವರ್‍ಯಾರೂ ಶಾಲೆಗೆ ಹೋಗಲಿಲ್ಲ. ನನ್ನ ಕೊನೆ ಮಗಳು ನಾನು ಐದು ತಿಂಗಳ ಬಸುರಿ ಇದ್ದಾಗ ನನ್ನ ಗಂಡ ಮನೆ ಬಿಟ್ಟು ಹೋದ. ಕಾರಣ ಹೊಸೂರು ಗ್ರಾಮದಲ್ಲಿ ಬಡ್ಡಿ ಅಸಲು ಸೇರಿ 20 ಸಾವಿರದಷ್ಟು ಸಾಲ ಮಾಡಿದ್ದ. ಅವರು ಒಂದು ದಿನ ನಮ್ಮ ಮನೆಗೆ ಬಂದು ನನ್ನ ಗಂಡನನ್ನು ಕರೆದುಕೊಂಡು ಹೋದರು. ಆ ಕೇರಿಯ ಹಿರಿಯರು ಹೋಗಿ ಸಾಲ ತೀರಿಸುವ ಭರವಸೆ ಕೊಟ್ಟು ಬಿಡಿಸಿಕೊಂಡು ಬಂದರು. ಆದರೆ ಅವರು ಹೇಳಿದ ಅವಧಿಯೊಳಗೆ 30 ಸಾವಿರ ಕೊಡಲು ಆಗಲಿಲ್ಲ. ಆಗ ಮತ್ತೆ ಹೊಸೂರಿನ ಸಾಲಗಾರರು – ನಾವು ಪಾಲಿನಿಂದ ಬೇರೆಯವರ ಆಕಳು ಸಾಕಿದ್ದೆವು – ಅದೇ ಆಕಳುಗಳನ್ನು ಹೊಡೆದುಕೊಂಡು ಹೋದರು. 'ಇನ್ನೂ ನಮ್ಮ ಸಾಲ ಉಳಿದಿದೆ. ಬೇಗ ಕೊಡಿ' ಎಂದು ತಾಕೀತು ಮಾಡಿಹೋದರು. ಅಂದೆ ನನ್ನ ಗಂಡ ರಾತ್ರಿ ಮನೆ ಬಿಟ್ಟು ಹೋದರು. 'ಅವರು ಎಲ್ಲಿ ಇರುತ್ತಾರೆ?' ಎಂಬುದು ನಮಗೆ ಗೊತ್ತಾಗಲಿಲ್ಲ. 12–13 ವರ್ಷ ಆದಾಗ ಯಾರೋ ರಾತ್ರಿ ನಮ್ಮೂರ ಬಸ್ಸ ಸ್ಟ್ಯಾಂಡ್‌ನಲ್ಲಿ ನನ್ನ ಗಂಡನನ್ನು ಬಿಟ್ಟುಹೋಗಿದ್ದರು. ಅವರಿಗೆ ತುಂಬಾ ಆರಾಮ ಇರಲಿಲ್ಲ. ನಮ್ಮ ಓಣಿಯ ಜನ ಗುರ್ತು ಹಿಡಿದು 'ನಿನ್ನ ಗಂಡ' ಎಂದು ಹೇಳಿದಾಗ ಮನೆಗೆ ತಂದೆವು. ನಾಲ್ಕು ದಿನಗಳ ಬಳಿಕ ತೀರಿಕೊಂಡರು. ನಂತರ ಮದುವೆ ಆದ ನನ್ನ ಇಬ್ಬರು ಹೆಣ್ಣು ಮಕ್ಕಳು ದವಾಖಾನೆಗೆ ತೋರಿಸಲಾಗದೇ ತೀರಿಕೊಂಡರು. ಹೀಗೆ ಬಾಲ್ಯ ವಿವಾಹದ ನನ್ನ ಸಾಂಸಾರಿಕ ಜೀವನ. ಕಷ್ಟದಲ್ಲೇ ಇದ್ದೇವೆ.

"ಇಷ್ಟೆಲ್ಲಾ ಅದರೂ ನನ್ನ 'ಬಿಟ್ಟಿ ಚಾಕರಿ' ಕೆಲಸ ಮಕ್ಕಳೊಂದಿಗೆ ಸರಾಗವಾಗಿ ನಡೆಯುತ್ತಿತು. ಸದ್ಯ ನಾನು ನನ್ನ ಮಗನ ಜೊತೆ ಸೇರಿ ನಾಲ್ಕು ಮನೆ 'ಬಿಟ್ಟಿ ಚಾಕರಿ' ಮಾಡುತ್ತಿದ್ದೇವೆ. ಖಾಯಮ್ ಆಗಿ ಮಾಡುವುದು ಒಬ್ಬರ ಮನೆಯವರಲ್ಲಿ. ಅವರಲ್ಲಿ ಒಂದು ಲಕ್ಷ ರೂ. ಸಾಲ ಇದೆ. 'ಬಿಟ್ಟಿ ಚಾಕ್ರಿ'ಗೆ ಮೂರು ಚೀಲ ಜೋಳ ಕೊಡುತ್ತಾರೆ. ಇನ್ನುಳಿದ ಮೂರು ಮಂದಿಯಲ್ಲಿಯ ಸಾಲ ತೀರಿದಾಗ ಅವರಲ್ಲಿಯ 'ಬಿಟ್ಟಿ ಚಾಕರಿ' ಬಿಟ್ಟುಬಿಡಬಹುದು. ಒಬ್ಬರಲ್ಲಿ ಸಾಲ 20 ಸಾವಿರ ಇದೆ, ಅವರು 'ಬಿಟ್ಟಿ ಚಾಕರಿ'ಗೆ ಎರಡು ಜೀಲ ಜೋಳ; ಇನೊಬ್ಬರಲ್ಲಿ ಸಾಲ 25 ಸಾವಿರ ರೂ. ಇದೆ, ಅವರು 'ಬಿಟ್ಟಿ ಚಾಕ್ರಿ'ಗೆ ಎರಡು ಚೀಲ ಜೋಳ; ಮೂರನೆಯವರಲ್ಲಿ ಸಾಲ 20 ಸಾವಿರ ಇದೆ, ಬಿಟ್ಟಿಚಾಕರಿಗೆ ಮೂರು ಚೀಲ ಜೋಳ ಕೊಡುತ್ತಾರೆ.

"ನನ್ನ ಮಗನಿಗೆ ಎರಡು ಸಲ ಮದುವೆ ಆಯಿತು. ಮೊದಲ ಮಡದಿ ಮದುವೆ ಆಗಿ 16 ದಿನಗಳಿಗೆ ಸೊಸೆ ತೀರಿಕೊಂಡಳು. ನಂತರ ಒಂದು ವರ್ಷದಲ್ಲಿ ಮತ್ತೊಂದು ಮದುವೆ ಮಾಡಿದೆವು. ಆಗ ಇಷ್ಟೆಲ್ಲಾ ಸಾಲ ಆಯಿತು.

"'ಬಿಟ್ಟಿ ಚಾಕರಿ' ಮನೆಯಲ್ಲಿ ಗ್ಯಾಸ್‌ಗೆ ಸಗಣಿ ಕಲಸುವುದು, ಅಂಗಳ ಬಾಗಿಲು, ಕೊಟ್ಟಿಗೆ, ಹುಸಿ ಅಮವಾಸ್ಯೆ ಹುಣ್ಣಿಮೆಗೆ ಮನೆ ಸಾರಿಸುವುದು, ತೊಳೆಯುವುದು, ಮದುವೆ ಮುಂಜಿಗಳಲ್ಲಿ ಕಟ್ಟಿಗೆ ಒಡೆಯುವುದು ಮತ್ತು ದಿನ ನಿತ್ಯದ ಕಟ್ಟಿಗೆ ಕಡಿದು ಇಡುವುದು. ಸುಗ್ಗಿ ಕಾಲದಲ್ಲಿ 15–30 ದಿನಗಳ ವರೆಗೆ ಕಣದ ಕೆಲಸ ಮಾಡಿ ಹೊಟ್ಟು ಬಣವೆ ಹಾಕಿ 'ಬಿಟ್ಟಿ ಚಾಕರಿ'ಗೆ ಕೊಡುವ ಕಾಳು ಮನೆಗೆ ತರಬೇಕು. ಆ ಅವಧಿಯಲ್ಲಿ ಕೂಲಿ ಇರುವುದಿಲ್ಲ. ತಂದ ಕಾಳುಗಳನ್ನು ಮಾರಿ ಉಳಿದ ಮನೆ ಖರ್ಚು ನೀಗಿಸಬೇಕು."

ಮಗ: "ತಾಯಿ ಜೊತೆ ಚಿಕ್ಕಂದಿನಿಂದಲೂ ಶಗಣಿ ಬುಟ್ಟಿ ಹೊರುವುದು, ಬಳಿಯುವುದು, ಸಾರಿಸುವುದು, ಹುಣ್ಣಿಮೆ ಅಮವಾಸೆ ಹಬ್ಬಗಳಲ್ಲಿ ತುಂಬಾ ಕೆಲಸ ಮಾಡುವುದನ್ನು ಕಲಿತು ಕೊಂಡೆ. ನನಗೆ ಕೆಲಸ ಜಾಸ್ತಿ ಅನ್ನಿಸಿದಾಗ ಬೇರೆ ಒಬ್ಬ ದಲಿತನನ್ನು ಜೊತೆ ಕರೆದು ಕೊಂಡು ಹೋಗುತ್ತೇನೆ. ಆಗ ಅವನಿಗೆ ನಾನು 50 ರೂ. ಮತ್ತೆ ಮಾಲಿಕರಿಂದ 50 ರೂ. ಒಟ್ಟು 100 ರೂ. ಅ ದಿನದ ಕೂಲಿಯಾಗಿ ಕೊಡಬೇಕು. ಮಾಲಿಕರ 'ಮನೆ ಬಿಟ್ಟಿ' ಬೆಳಿಗ್ಗೆಯಿಂದ ಮದ್ಯಾಹ್ನ ತನಕ. ನಾವು ಒಂದು ವೇಳೆ ಈ ಕೆಲಸ ನೀಗುವುದಿಲ್ಲ ಎಂದರೆ ನಮ್ಮ ದುಡ್ಡು ಕೊಟ್ಟು ಹೋಗಿರಿ ಎನ್ನುತ್ತಾರೆ. ಅಷ್ಟು ದುಡ್ಡು ಎಲ್ಲಿಂದ ತರಬೇಕು. ಈ ನಾಲ್ಕು ಮನೆ 'ಬಿಟ್ಟಿ ಚಾಕರಿ'ಯಲ್ಲಿ ಕೂಲಿಗೂ ಸರಿಯಾಗಿ ಹೋಗಲು ಆಗವುದಿಲ್ಲ. ಇದೊಂದು ದೊಡ್ಡ ಚಿಂತೆ ಆಗಿದೆ. ಈ ಕಷ್ಟದಲ್ಲಿ ನಾನು ಶಾಲೆ ಮುಖ ನೋಡಲಿಲ್ಲ."

ತಾಯಿಯ ಬದುಕು 'ಬಿಟ್ಟಿ ಚಾಕ್ರಿ'ಯು ಜಾತಿ ವ್ಯವಸ್ಥೆ ಜೊತೆ ಸಮಾಜದ ವಿವಿಧ ಅನಿಷ್ಟಗಳೊಂದಿಗೆ ಹೇಗೆ ತಳಕು ಹಾಕಿದೆ ಎಂಬುದಕ್ಕೆ ಒಂದು ಉತ್ತಮ ಸಾಕ್ಷಿ. ತವರುಮನೆ, ಗಂಡನ ಮನೆಗಳೆರಡಲ್ಲೂ 'ಬಿಟ್ಟಿ ಚಾಕ್ರಿ'ಯಿಂದಲೇ ಜೀವನ ಕಟ್ಟಿಕೊಳ್ಳಬೇಕಾಗಿದ್ದ ಅನಿವಾರ್ಯತೆ, ಬಾಲ್ಯ

ವಿವಾಹದಿಂದ 9–10 ತಿಂಗಳಿಗೇ ತೊಟ್ಟಿಲಲ್ಲೇ ಬಾಸಿಂಗ ಕಟ್ಟಿಸಿದ್ದರಿಂದ – ಅನುಭವಿಸಿದ ನೋವು ಹಾಗೂ ಸುಂದರ ಬದುಕಿನ ಸ್ವಪ್ನದ ಭಗ್ನತೆ, ಗಂಡನು ತನ್ನ ಜವಾಬ್ದಾರಿಯನ್ನು ಮರೆತು ಅಥವಾ ಅದರಿಂದ ಪಾರಾಗಲು ಕೊನೆ ಮಗು ಬಸುರಿ ಆಗಿದ್ದಾಗಲೇ ಕುಟುಂಬದಿಂದ ಪಲಾಯನಗೊಂಡಾಗ ತನ್ನ ಎಳೆ ಮಕ್ಕಳೊಂದಿಗೆ ಸಾಲಗಾರರನ್ನೂ ಮಕ್ಕಳನ್ನೂ ನಿಭಾಯಿಸಿದ ದಿಟ್ಟತನ, ಸಾಲಗಾರರು ಪಾಲಿಗೆ ಇದ್ದ ಆಕಳನ್ನೂ ಹೊಡೆದುಕೊಂಡು ಹೋಗಿ ಇನ್ನೂ ಸಾಲ ಮರುಪಾವತಿಗೆ ಒತ್ತಾಯಿಸುವ ಕಟುಕತನ, ಇಬ್ಬರು ಚಿಕ್ಕ ಮಕ್ಕಳಿಗೆ ಕಾಯಿಲೆ ಬಂದಾಗ ಹಣದ ಅಭಾವದಿಂದ ಸರಿಯಾದ ರೀತಿಯಲ್ಲಿ ಚಿಕಿತ್ಸೆ ಕೊಡಲಿಕ್ಕಾಗದೇ ಮಕ್ಕಳನ್ನೇ ಕಳಕೊಳ್ಳಬೇಕಾದ ದಾರುಣ ಸನ್ನಿವೇಶ ಎದುರಿಸಬೇಕಾದ ಸಮಯದಲ್ಲಿ ಅನುಭವಿಸಿದ ಯಾತನೆ ಮತ್ತು ಬಡತನದ ಅಟ್ಟಹಾಸ, ಯಾವ ಮಕ್ಕಳೂ ಶಾಲೆಗೆ ಹೋಗಲಿಕ್ಕಾಗದೇ 'ಬಿಟ್ಟಿ ಚಾಕ್ರಿ'ಗೆ ಹೊಂದಿಕೊಂಡೇ ಜೀವಿಸಬೇಕಾದ ದಲಿತರ ಜೀವನದ ವಾಸ್ತವತೆ, ಸೊಸೆಯ ಅಕಾಲಿಕ ಮರಣವಾದಾಗ ಮಗನಿಗೆ ಇನ್ನೊಂದು ಮದುವೆ ಮಾಡಲು 3–4 ಮಾಲಿಕರಿಂದ ತೆಗೆದುಕೊಂಡ ಸಾಲ ತೀರಿಸಲು ಅವರೆಲ್ಲರ 'ಬಿಟ್ಟಿ ಚಾಕ್ರಿ'ಗೆ ಸಿಲುಕಿ ಇನ್ನೂ ಸಾಲ ಪಾವತಿಸಲಿಕ್ಕಾಗದೇ, ನಾಲ್ಕು ಮನೆಯ 'ಬಿಟ್ಟಿ ಚಾಕ್ರಿ'ಯಿಂದ ಸರಿಯಾಗಿ ಕೂಲಿಗೂ ಹೋಗಲಿಕ್ಕಾಗದೇ ತಾಯಿಯೂ ಮಗನೂ ಪರದಾಡುವ ಅವರ ನಿತ್ಯ ಬದುಕಿನ ಬವಣೆ ಕಣ್ಣ ಮುಂದೆ ನಿಲ್ಲುತ್ತದೆ. ದೊಡ್ಡವ್ವರದ್ದು ಒಬ್ಬ 'ಬಿಟ್ಟಿ ಚಾಕ್ರಿ' ಮಾಡುವವರ ಬದುಕಿನ ವಿವಿಧ ಕರಾಳ ಮುಖಗಳನ್ನು ಪರಿಚಯಿಸುತ್ತದೆ.

**2.10.1.4. ಗಂಡ (42 ವರ್ಷ), ಹೆಂಡತಿ (35 ವರ್ಷ) ಮತ್ತು ಅವರ ಮಗನ (10 ವರ್ಷ) ಅನುಭವ**

ಗಂಡ: "ಮುಖ್ಯ ಕೆಲಸ 'ಬಿಟ್ಟಿ ಚಾಕರಿ' ಮತ್ತು ಕೂಲಿ. ಈಗ ಒಂದು ವರ್ಷದಿಂದ ಸರಿಯಾಗಿ ಕೊಡದ ಕಾರಣ ಬಿಟ್ಟಿ ಚಾಕರಿ ಮಾಡುವುದನ್ನು ನಿಲ್ಲಿಸಿದೆ. ಈಗ ನನ್ನ ತಮ್ಮ ತಾಯಿ ತಂದೆ ಬೇರೆ ಇದ್ದಾರೆ. ನಾನು ನನ್ನ ಮಕ್ಕಳು ಹೆಂಡತಿ ಜನತಾ ಪ್ಲಾಟಿನಲ್ಲಿ ಬೇರೆ ಇದ್ದೇವೆ. ನಮ್ಮ ಊರಿನಲ್ಲಿ ಗಂಡಸರಿಗೆ ಹೆಂಗಸರಿಗೆ 100 ರೂ. ಕೊಡುತ್ತಾರೆ.

"ನನ್ನ ತಂದೆ ತಾಯಿ ಇದೇ ಕೆಲಸ ಮಾಡುತ್ತಿದ್ದರು. ನನಗೂ ಸಾಕಷ್ಟು ಅನುಭವ ಇದೆ. ನನ್ನ ತಂದೆ ಜೊತೆ ಹೋದರೆ ತಂಗಳು ಕೂಳು ಇದ್ದರೆ ಕೊಡುತ್ತಿದ್ದರು. ಇಲ್ಲದಿದ್ದರೆ ಇಲ್ಲ. ನಾನು ಶಾಲೆಗೆ ಹೋಗುವಾಗ ಬೆಳಿಗ್ಗೆ ಎಂಟು ಘಂಟೆಗೆ ಶಾಲೆ ಇತ್ತು. ಆರು ಘಂಟೆಗೆ ಎದ್ದು ತಂದೆ ಜೊತೆ 'ಬಿಟ್ಟಿ ಚಾಕರಿ'ಗೆ ಹೋಗುತ್ತಿದ್ದೆ. ಅಲ್ಲಿಂದ ಬೇಗನೇ ಬಂದು ಶಾಲೆಗೆ ಹೋಗುತ್ತಿದ್ದೆ. ಆದರೆ ಹೆಚ್ಚು ಶಾಲೆ ಕಲಿಯಲಿಲ್ಲ. 4ನೇ ತರಗತಿ ವರೆಗೆ ಓದ್ದಿದ್ದೇನೆ. ನಾನು ಶಾಲೆಗೆ ಹೋದಾಗ ನಮ್ಮ ಕೇರಿಯವರೆಲ್ಲ ಹಿಂದೆ ಕುಳಿತುಕೊಳ್ಳುತ್ತಿದ್ದೆವು. ಸವರ್ಣೀಯರು– ಒಕ್ಕಲಿಗರ ಮಕ್ಕಳು ಮುಂದೆ ಕುಳಿತುಕೊಳ್ಳುತ್ತಿದ್ದರು.

"ನಂತರ ಇನ್ನೊಬ್ಬ ಮಾಲಿಕರ ಮನೆ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದೆವು. ನಾನು ನನ್ನ ಹೆಂಡತಿ ಇಬ್ಬರು ಸೇರಿ 'ಬಿಟ್ಟಿ ಚಾಕರಿ' ಮಾಡುತ್ತಿದ್ದೆವು. 'ಬಿಟ್ಟಿ ಚಾಕರಿ' ಕೆಲಸ ಮಾಡಿ ಮತ್ತೆ ಅವರದ್ದೇ ಕೂಲಿಗೆ

ಹೋಗಬೇಕು. ಒಂದು ವೇಳೆ ಬೇರೆಯವರ ಕೂಲಿಗೆ ಹೋದರೆ 10 ಸಾವಿರ ಸಾಲ ತೀರಿಸಿ ಹೋಗು ಎನ್ನುತ್ತಿದ್ದರು. ನನಗೆ ಕೇವಲ 80–100 ರೂ. ಕೂಲಿ ಕೊಡುತ್ತಿದ್ದರು. ಮೊದಲು ನಾಲ್ಕರಿಂದ ಆರು ದಿನಗಳು ಇರುತ್ತಿದ್ದವು. ಈಗ ಎಂಟರಿಂದ 10 ದಿನಗಳು ಆಗಿವೆ. ಅವರು ನನಗೆ ಸರಿಯಾದ ಕೂಲಿ ಕೊಡದ ಕಾರಣ ಅವರ ಮನೆ 'ಬಿಟ್ಟಿ ಚಾಕರಿ' ಕೆಲಸ ಬಿಟ್ಟಿದ್ದೇನೆ. ಇನ್ನು 5–6 ಸಾವಿರ ಸಾಲ ಕೊಡಬೇಕು. ಲೆಕ್ಕ ಮಾಡಿಸಿಲ್ಲ. ಭೇಟಿಯಾದಾಗ ಸಾಲ ಕೊಡು ಎಂದು ಕೇಳುತ್ತಾರೆ. ನಾನು ಕೊಡುತ್ತೇನೆ ಎಂದು ಸುಮ್ಮನಾಗುತ್ತೇನೆ. 7–8 ವರ್ಷದ ಹಿಂದೆ ನನಗೆ ಕೇವಲ ವಾರಕ್ಕೆ 50 ರೂ. ಪಗಾರ ಕೊಡುತ್ತಿದ್ದರು."

**ಹೆಂಡತಿ:** "ನಾನು ನನ್ನ ಗಂಡ ಇಬ್ಬರು ಈ ಕೆಲಸ ಮಾಡುತ್ತಿದ್ದೆವು. ಮಾಲಿಕ ಸರಿಯಾಗಿ ಕೂಲಿ ಕೊಡದ ಕಾರಣ ಒಂದು ವರ್ಷದ ಹಿಂದೆ ಜಗಳ ಮಾಡಿ ಬಿಟ್ಟಿದ್ದೇನೆ. ನನ್ನ ಮಕ್ಕಳು ಬಹಳ ಸಣ್ಣವರು ಇದ್ದರು. ನಾವು 'ಬಿಟ್ಟಿ ಚಾಕರಿ' ಕೆಲಸ ಮಾಡಿ ಬರುವ ತನಕ ಮುಖ ತೊಳೆದು ಕೊಳ್ಳದೇ ಬಾಗಿಲಲ್ಲಿ ಆಡುತ್ತಿದ್ದರು. ನಾವು ಬಂದ ನಂತರ ನೀರು ಕಾಯಿಸಿ ಮುಖ ತೊಳೆಸಿ ತಿನ್ನಲು ಏನಾದರೂ ಕೊಡುತ್ತಿದ್ದೆವು. ಸಾವುಕಾರರ ಮನೆಯಿಂದ ತಂಗಳದ್ದು ಸಿಗುವುದು. ಆಗಾಗ ಮಾತ್ರ ಉಪ್ಪಿಟ್ಟು, ಅವಲಕ್ಕಿ. ಆಗಾಗ ಮಾತ್ರ ರೊಟ್ಟಿ ಪಲ್ಯ ಮಾಡಿ ಕೊಡುತ್ತಿದ್ದೆ. ಇದು ನನಗೆ ಬಹಳ ನೋವು ಅನಿಸುತ್ತಿತ್ತು.

"ನನ್ನ ಊರು ಧಾರವಾಡ ಜಿಲ್ಲೆ, ಧಾರವಾಡ ತಾಲೂಕಿನ ಕಬ್ಬೂರು ಗ್ರಾಮ. ಅಲ್ಲಿಯೂ ನನ್ನ ತಂದೆ ತಾಯಿ ಈಗಲೂ ಈ ಕೆಲಸ ಮಾಡುತ್ತಾರೆ. ನಾನು ನನ್ನ ಗಂಡನ ಮನೆಗೆ ಹೊಸದಾಗಿ ಬಂದ ಮೂರನೇ ದಿನವೇ ನನ್ನ ಅತ್ತೆಯ ಜೊತೆ 'ಬಿಟ್ಟಿ ಚಾಕರಿ'ಗೆ ಕೆಲಸಕ್ಕೆ ಹೋಗಿದ್ದೇನೆ. ನನ್ನ ತಂದೆ ತಾಯಿ ಜೊತೆ ಈ ಕೆಲಸ ಮಾಡಿದ್ದಕ್ಕಾಗಿ ನನಗೆ ಇದು ಹೊಸದು ಎನಿಸಲಿಲ್ಲ. ಆದರೆ ತವರು ಮನೆಯಲ್ಲಿಯೂ ಇದೇ ಕೆಲಸ, ಗಂಡನ ಮನೆಯಲ್ಲಿಯೂ ಇದೇ ಕೆಲಸ ಎಂದು ಮನಸ್ಸು ಹಳಹಳಿ ಆಯಿತು. ಬೇಸರ ಅಯಿತು. ನನ್ನ ಗಂಡನಿಗೆ ಆರಾಮ ಇಲ್ಲದಾಗ ಶಾಲೆಗೆ ಹೋಗುವ ನನ್ನ ಮಗನನ್ನು ಕರೆದುಕೊಂಡು ಹೋಗುತ್ತಿದ್ದೆನು."

**ಮಗ:** "ನಾನು 5ನೇ ತರಗತಿ ಶಾಲೆಗೆ ಹೋಗುತ್ತಿದ್ದೇನೆ. ನನ್ನ ತಂದೆ ತಾಯಿ ಬೆಳಿಗ್ಗೆ ಎದ್ದು ಹೋಗುತ್ತಿದ್ದರು. ಆಗ ಇನ್ನೂ ಮಲಗಿರುವ ಕಾರಣ ಅವರ ಜೊತೆ ಹೋಗುವುದಿಲ್ಲ. ಒಂದೊಂದು ದಿನ ನನ್ನ ತಂದೆ ಹೋಗದೇ ಇದ್ದಾಗ ಬೆಳಿಗ್ಗೆ ಮತ್ತು ತಂದೆ ಕೂಲಿಗೆ ಹೋದಾಗ ನನ್ನ ತಾಯಿ ಜೊತೆ ಮಧ್ಯಾಹ್ನ ಕೆಲಸಕ್ಕೆ ಹೋಗುತ್ತಿದ್ದೆ. 'ಬಿಟ್ಟಿ ಚಾಕರಿ'ಗೆ ಮನೆಯಲ್ಲಿ ನಾನು ಮಾಲಿಕರಿಗೆ ಸಾವಕಾರರೆ ಅವ್ವಗೋಳ ಎಂದು ಮಾತನಾಡುತ್ತಿದ್ದೆ. ನನ್ನ ತಾಯಿಗೆ ಬುಟ್ಟಿ ಹೊರಿಸುವ ಕೆಲಸ ಮಾಡುತ್ತಿದ್ದೆ. ಬರಲಿನಿಂದ ಕೊಟ್ಟಿಗೆ ಝಾಡಿಸುವ ಕೆಲಸ ಮಾಡುತ್ತಿದ್ದೆನು. ಉಪ್ಪಿಟ್ಟು ಚಹಾ ಕೊಡುತ್ತಿದ್ದರು.

"ನಮ್ಮ ಶಾಲೆಯಲ್ಲಿ ಎಲ್ಲ ಜಾತಿಯವರು ಕೂಡಿಯೇ ಕೂಡುತ್ತೇವೆ. ಆದರೆ ಮಧ್ಯಹ್ನ ಊಟಕ್ಕೆ ಮಾತ್ರ ನಮ್ಮ ಜಾತಿಯವರು ಈಗಲೂ ಬೇರೆ ಕೂಡುತ್ತೇವೆ. ಒಂದು ವೇಳೆ ಸಾವಕಾರರ ಮಕ್ಕಳ ಹತ್ತಿರ

ಊಟಕ್ಕೆ ಕೂಡಲು ಹೋದರೆ ಅವರು ಇಲ್ಲಿ ಬೇಡ ಅಲ್ಲಿಗೆ ಹೋಗಿ ಎಂದು ನಮ್ಮ ಹುಡುಗರ ಜೊತೆ ಕಳಿಸುತ್ತಾರೆ."

**ಗಂಡ–ಹೆಂಡತಿ:** "ಈಗ ಇವರ ಮನೆ 'ಬಿಟ್ಟಿ ಚಾಕರಿ' ಬಿಟ್ಟಿದ್ದೇವೆ. ಮುಂದೆ ಯುಗಾದಿಗೆ (2016) ಮಲ್ಲಪ್ಪ ಮುರಗೋಡ ಅವರ ಮನೆ 'ಬಿಟ್ಟಿ ಚಾಕರಿ' ನಾವು ಮಾಡಲೇ ಬೇಕು. ನಮ್ಮ ಪಾಳೆ ಇದೆ. ಒಂದು ವೇಳೆ ಒಪ್ಪದಿದ್ದರೆ. ನಡೆಯುವುದಿಲ್ಲ. ಬೇರೆ ಯಾರನ್ನಾದರೂ ಹಚ್ಚಿಕೊಡಬೇಕು. ಆದರೆ ಹಾಗೆ ಒಪ್ಪಿಕೊಂಡು ಒಂದು ವರ್ಷಕ್ಕೆ ಮಾತ್ರ. ನಂತರ ಮುಂದಿನ ವರ್ಷಕ್ಕಾದರೂ ನಾವು ಮಾಡಬೇಕು. ಇದಕ್ಕೆ ನಾವು ತಿರುಗ ಮನೆ ಎನ್ನುತೇವೆ. ಒಂದು ವರ್ಷಕ್ಕೆ ಒಬ್ಬರು ಮತ್ತೊಂದು ವರ್ಷಕ್ಕೆ ಇನ್ನೊಬ್ಬರು ಹೀಗೆ ಒಂದು ವೇಳೆ ಮಾಲಿಕರು ಬೇರೆ ಬೇರೆ ಅಣ್ಣ ತಮ್ಮಂದಿರು ಆಗಿದ್ದರೆ ನಾವು ಸಹ ಅಣ್ಣತಮ್ಮಂದಿರು ಇದ್ದರೆ 'ಬಿಟ್ಟಿ ಚಾಕರಿ' ಕೆಲಸವನ್ನು ಅಣ್ಣನ ಮನೆಗೆ ಒಬ್ಬರು ತಮ್ಮನ ಮನೆಗೆ ಒಬ್ಬರು ಎಂದು ಹಂಚಿಕೊಳ್ಳಬೇಕು. ಇಲ್ಲದೇ ಹೋದರೆ ನಾವೇ ಮಾಡಬೇಕು.

"ಇಲ್ಲಿ ಕೊಡುವ ಕೂಲಿ ಬೆಳೆ ಬೆಳೆದ ಆಧಾರದ ಮೇಲೆ ಇದೆ. ಚೆನ್ನಾಗಿ ಬಳೆದರೆ ಹೆಚ್ಚು ಕೂಲಿ. 4–5 ಚೀಲ. ಬೆಳೆ ಬೆಳೆಯದೇ ಇದ್ದರೆ 3–4 ಚೀಲ. ಈ ಕೆಲಸ ದಲಿತರಲ್ಲಿ ಯಾರು ಸತ್ತರೂ ನಿಲ್ಲುವುದಿಲ್ಲ. ಒಬ್ಬರಲ್ಲಿ ಒಬ್ಬರು ಮಾಡಲೇ ಬೇಕು. ಒಂದು ವೇಳೆ ಈ ಮನೆ 'ಬಿಟ್ಟಿ ಚಾಕರಿ' ಕೆಲಸ ದಲಿತರು ನಿಲ್ಲಿಸಿದರೆ ಅವರು ಊರಿನಲ್ಲಿ ಹೋಗುವುದನ್ನು ತಿರುಗಾಡುವುದನ್ನು ನಿಲ್ಲಿಸಬೇಕು. ಹೊಲಮನೆಗಳಿಗೆ ಹೋಗುವಂತಿಲ್ಲ. ಬಹಿಷ್ಕಾರನೂ ಹಾಕಬಹುದು. ಒತ್ತಡ ನಮ್ಮ ಮೇಲೆ ಇದೆ. ಎಲ್ಲ ಮಾಲಿಕರ ಒತ್ತಡ ಇದೆ.ಈಗ ನಾವು ಬಿಟ್ಟ ಮನೆ ಕೆಲಸ ಬೇರೆ ದಲಿತರು ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಮಾಲಿಕರು ಸುಮ್ಮನಿದ್ದಾರೆ. ಒಂದು 'ಬಿಟ್ಟಿ ಚಾಕರಿ' ಬಿಟ್ಟರೂ ಮುಂದಿನ ಯುಗಾದಿಗೆ ತಿರುಗಿ ಮನೆ 'ಬಿಟ್ಟಿ ಚಾಕರಿ' ಪಾಳೆ ನಮ್ಮದೇ ಇದೆ."

ಗಂಡ, ಹೆಂಡತಿಮತ್ತು ಅವರ ಮಗನ ಬಿಟ್ಟಿಚಾಕ್ರಿ ಬಗೆಗಿನ ಅನುಭವಗಳು 'ಬಿಟ್ಟಿ ಚಾಕ್ರಿ'ಯ ಬಗ್ಗೆ ನಾವು ಇಷ್ಟರ ವರೆಗೆ ತಿಳಿದು ಕೊಂಡ ಅನುಭವಗಳನ್ನು ಪುನರಾವರ್ತಿಸುತ್ತವೆ. 'ಬಿಟ್ಟಿ ಚಾಕ್ರಿ' ಗಂಡ ಹೆಂಡತಿಯ ಎರಡೂ ಮನೆಗಳಲ್ಲಿ ಪೂರ್ವಜರ ಕಾಲದಿಂದಲೂ ನಡೆದುಕೊಂಡು ಬಂದಿರುವ ಪರಿಸ್ಥಿತಿ. 'ಬಿಟ್ಟಿ ಚಾಕ್ರಿ' ಮತ್ತು ಕೂಲಿಗೆ ಹೋಗುವುದು ಬಡ ದಲಿತ ಕುಟುಂಬಗಳಿಗೆ ಅನಿವಾರ್ಯ. ತವರು ಮನೆಯಲ್ಲಿ ಬಿಟ್ಟಿ ಚಾಕ್ರಿ ಮಾಡುತ್ತಿದ್ದರೂ ಹೊಸದಾಗಿ ಮದುವೆಯಾದಾಗ ಆ ನಿರ್ಬಂಧದಿಂದ ಬಿಡುಗಡೆ ಹೊಂದುವ ನಿರೀಕ್ಷೆ ಮದುಮಗಳು ಇಟ್ಟು ಕೊಂಡಿರುತ್ತಾಳೆ. ಆದರೆ ಗಂಡನ ಮನೆಗೆ ಬಂದ ಎರಡು ಮೂರು ದಿನಗಳಲ್ಲೇ 'ಬಿಟ್ಟಿ ಚಾಕ್ರಿ'ಯ ಮಾಲಿಕರನ್ನು ಅತ್ತೆ ಪರಿಚಯ ಮಾಡಿಕೊಡುವುದು ಬೇಸರದ ಸಂಗತಿ.

ಪ್ರಾಥಮಿಕ ಶಿಕ್ಷಣ ಸಮಯದಲ್ಲಿ ಶಾಲೆ ಬಿಟ್ಟು 'ಬಿಟ್ಟಿ ಚಾಕ್ರಿ'ಗೆ ಸೇರಿ ಕೊಳ್ಳುವುದು ಸಾಮಾನ್ಯ. ಶಾಲೆಗೆ ಹೋಗುತ್ತಿದ್ದರೂ ತಂದೆಯ ಅಥವಾ ತಾಯಿಯ ಜಾಗದಲ್ಲಿ ಕೆಲವು ಸಾರಿ ಶಾಲೆಗೆ ಹೋಗುವ ಮೂಂಚೆಯೋ ಅಥವಾ ಶಾಲೆ ಬಿಟ್ಟೋ ಬಿಟ್ಟಿ ಚಕಾರಿಗೆ ನೆರವಾಗುವುದು ಚಿಕ್ಕ ಮಕ್ಕಳನ್ನು ಮುಂದಿನ 'ಬಿಟ್ಟಿ ಚಾಕ್ರಿ'ಗೆ ತರಬೇತಿ ನೀಡುತ್ತಿದ್ದಂತೆ ತೋರುತ್ತದೆ.

ಶಾಲೆಯಲ್ಲಿಯೂ ಜಾತಿ ತಾರತಮ್ಯ ಎದ್ದು ಕಾಣುತ್ತದೆ. ಕರೆಪ್ಪನ ಕಾಲದಲ್ಲಿ ತರಗತಿಯಲ್ಲಿ ಕುಳಿತು ಕೊಳ್ಳುವಾಗಲೇ ಬೇರೆ ಜಾತಿಯ ಸಹಪಾಠಿಗಳ ಜೊತೆ ಬೆರೆತು ಕುಳಿತು ಕೊಳ್ಳುವ ಹಾಗಿರಲಿಲ್ಲ. ಅವರಿಂದ ಪ್ರತ್ಯೇಕಗೊಂಡು ಎಲ್ಲರ ಹಿಂದುಗಡೆ ದಲಿತ ಮ್ಕಳು ಕುಳಿತುಕೊಳ್ಳಬೇಕರಿತ್ತು. ಆದರೆ ಅವರ ಮಗೆ ಮಂಜುನಾಥನ ಈಗಿನ ಕಾಲದಲ್ಲಿ ತರಗತಿಯಲ್ಲಿ ಕುಳಿತು ಕೊಳ್ಳುವಾಗ ತಾರತಮ್ಯವಿಲ್ಲದಿದ್ದರೂ ತರಗತಿಯ ಹೊರಗೆ ತಾರತಮ್ಯ ಮುಂದುವರಿಯುತ್ತದೆ. ಊಟ ಮಾಡುವಾಗ ಅವರಿಗೆ ದೂರ ಹೋಗಿ ಕುಳಿತುಕೊಳ್ಳುವಂತೆ ನಿರ್ದೇಶಿಸಲಾಗುತ್ತದೆ.

'ಬಿಟ್ಟಿ ಚಾಕ್ರಿ'ಯವರ ಮಾಲಿಕರಿಂದ ಸಾಲ ತೆಗೆದುಕೊಂಡಿದ್ದರೆ ಅವರಲ್ಲೇ ಕೂಲಿಗೆ ಹೋಗಬೇಕು. ಆದರೆ ಅಂತಹ ಮಾಲಿಕರು ಕೂಲಿ ಕೊಡುವಲ್ಲಿ ಅನ್ಯಾಯ ಅಥವಾ ಮೋಸ ಮಾಡುವುದೇ ಜಾಸ್ತಿ. ಈಗೀಗ 80ರಿಂದ 100 ರೂ. ಕೊಡುತ್ತಿದ್ದರೆ 7–8 ವರ್ಷ ಹಿಂದೆ ಕೇವಲ 50 ರೂ. ಕೊಡುತ್ತಿದ್ದ ಪರಿಸ್ಥಿತಿ. ಆದರೆ ಅದನ್ನೂ ಕೊಡುವಾಗ ಅನ್ಯಾಯವಾಗುತ್ತಿದ್ದುದನ್ನು ಖಂಡಿಸಿ ಒಂದು ಮನೆಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುವುದನ್ನು ನಿಲ್ಲಿಸಿದ್ದಾರೆ. ಆದರೆ ಪರಂಪರಾಗತವಾಗಿ 'ಬಿಟ್ಟಿ ಚಾಕ್ರಿ' ಮಾಡುವ ಮನೆಗಳನ್ನು ಅಷ್ಟು ಸುಲಭವಾಗಿ ಬಿಟ್ಟುಬಿಡಲಿಕ್ಕೆ ಆಗುವುದಿಲ್ಲ. ಮಾಲಿಕರಲ್ಲಿ ಅಣ್ಣತಮ್ಮಂದಿರು ಮತ್ತು 'ಬಿಟ್ಟಿ ಚಾಕ್ರಿ' ಮಾಡುವ ದಲಿತ ಕುಟುಂಬದಲ್ಲಿಯ ಅಣ್ಣ ತಮ್ಮಂದಿರು ಬೇರೆಬೇರೆ ಆದರೆ ವಿಭಜನೆಯಾದ ಮನೆಗಳಿಗನುಸಾರವಾಗಿ ಎರಡು ಒಂದು ಸಾರಿಯೋ ಮೂರು ವರ್ಷಕ್ಕೆ ಒಂದು ಸಾರಿಯೋ ಹೀಗೆ ಸರದಿಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುವ ಪದ್ಧತಿ ಇದೆ. ಅದಕ್ಕೆ ಪಾಳೆಯಲ್ಲಿ 'ಬಿಟ್ಟಿ ಚಾಕರಿ' ಮಾಡುವುದು ಅಥವಾ ತಿರುಗುಮನೆಗಳು ಎಂದು ಕರೆಯುತ್ತಾರೆ.

**2.10.2 'ಬಿಟ್ಟಿಚಾಕ್ರಿ' ಮಾಡುವ ಮೂರು ಕುಟುಂಬಗಳ ಏಳೆಂಟು ತಿಂಗಳುಗಳ ಅವಧಿಯಲ್ಲಿಯ ದಿನಚರಿಗಳು (ವಿವರಗಳಿಗೆ ಅನುಬಂಧ II ನೋಡಿ)**

'ಬಿಟ್ಟಿ ಚಾಕರಿ' ಮಾಡುವ ಮೂರು ಮಂದಿಯ ಸುಮಾರು ಏಳು–ಎಂಟು ತಿಂಗಳ ದಿನಚರಿಗಳು ಬಿಟ್ಟಿಚಾಕ್ರಿಯ ವಿವಿಧ ಸಂಕಷ್ಟಗಳನ್ನು ಮನದಟ್ಟು ಮಾಡುತ್ತವೆ. ಒಂದು ವರ್ಷದ ಕಾಲಘಟ್ಟದಲ್ಲಿ ವ್ಯವಸಾಯದ ಬೇರೆ ಬೇರೆ ಸಂದರ್ಭಗಳಲ್ಲಿ ಮತ್ತು ವರ್ಷ ಮಧ್ಯದ ವಿವಿಧ ಆಚರಣೆ ಸಂದರ್ಭಗಳಲ್ಲಿ 'ಬಿಟ್ಟಿ ಚಾಕ್ರಿ'ಯ ಸೇವೆಗಳಲ್ಲಿ ಇರುವ ವ್ಯತ್ಯಾಸಗಳನ್ನು ಕಂಡು ಹಿಡಿಯುವುದು ಉದ್ದೇಶವಾಗಿತ್ತು. ಆದರೆ

ಸಮಯದ ಅಭಾವದಿಂದ ವರ್ಷದ ಕೇವಲ 7–8 ತಿಂಗಳು ಮಾತ್ರ 10–15 ದಿನಗಳಿಗೊಮ್ಮೆ 'ಬಿಟ್ಟಿಚಾಕ್ರಿ' ಮಾಡುವ ಮೂರು ಮಂದಿಯ ಅನುಭವಗಳನ್ನು ದಾಖಲಿಸಲಾಗಿದೆ.

### 2.10.2.1 ಮಧ್ಯ ವಯಸ್ಸಿನ ಹೆಂಡತಿ –ಗಂಡನ ದಿನಚ

ಒಟ್ಟಾರೆಯಾಗಿ ಗಂಡ – ಹೆಂಡತಿ ಅವರ ಪೂರ್ವಜರ ಕಾಲದಿಂದಲೂ 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದು 2015ರ ಕೊನೆಗೆ ದಿನನಿತ್ಯ 'ಬಿಟ್ಟಿ ಚಾಕ್ರಿ' ಮಾಡುವುದನ್ನು ಬಿಟ್ಟು ಬಿಟ್ಟಿದ್ದಾರೆ. ಅದಕ್ಕೆ ಕಾರಣ ಮಾಲಿಕರು ಕೊಡುವ ಕಾಳುಕಡಿಯಲ್ಲಿ ಮೋಸ ಮಾಡುತ್ತಿದ್ದರು ಎಂದು. ಆದರೆ ವರ್ಷದ ಕಣದ ಕೆಲಸ ಪಾಳಿಯಲ್ಲಿ ಮಾಡಲು ಇನ್ನೂ ಹೋಗುತ್ತಾರೆ. 'ಬಿಟ್ಟಿ ಚಾಕ್ರಿ' ಮಾಡುವಾಗ ಸಮಯ ಇದ್ದರೆ ಮಾತ್ರ ಕೂಲಿಗೆ ಹೋಗುವ ಸಾಧ್ಯತೆ ಇತ್ತು. ಇಲ್ಲದಿದರೆ ಇಲ್ಲ. ತಮ್ಮ ಕುಟುಂಬದ ಕಾರ್ಯ ಮಾಡಲು ಜವಾಬ್ದಾರಿ ನೋಡಿಕೊಳ್ಳಲು ಒಂದು ದಿನ ದೂರ ಹೋದರೆ ಹೆಚ್ಚು. 'ಬಿಟ್ಟಿ ಚಾಕ್ರಿ' ತಪ್ಪಿಸಿದರೆ ಮಾಲಿಕರು ಬೈಯುತ್ತಾರೆ ಎಂಬ ಭಯ. ಬಿಟ್ಟಿ ಚಾಕ್ರಿ ಮಾಡುವಾಗ ಚಹಾಕ್ಕೆ ಕೊಡುವ ಲೋಟ ತೊಳೆದು ಅದರ ಪ್ರತ್ಯೇಕ ಜಾಗದಲ್ಲಿಯೇ ಇಡಬೇಕು. "ರೈತರ ಮನ್ಯಾಗ ಸಣ್ಣಗಾಗೋವ್ರಿ" ಎಂಬುದು ಅವರ ಅಂತರಾಳದ ನೋವನ್ನು ಎತ್ತಿ ತೋರಿಸುತ್ತದೆ. "ಸೆಗಣಿ ಕೆಲಸ ಬಿಟ್ಟಾಗಿನಿಂದ ನೆಮ್ಮದಿ ಜೀವನ ನಡೆಸುತ್ತಿದ್ದೇವೆ" ಎಂದು ಖುಷಿಯಿಂದ ಹೇಳಿಕೊಳ್ಳುತ್ತಾರೆ.

### 2.10.2.2 ತಾಯಿ (50 ವರ್ಷ), ಮಗ (28 ವರ್ಷ) ಇಬ್ಬರ ದಿನಚರಿ

ತಾಯಿಯ ಉದ್ಗಾರ "ನಾವು ಏನೇ ಕಷ್ಟ ಬಂದರೂ ಸಾಹುಕಾರರಿಗೆ ಕರುಣೆ ಇರುವುದಿಲ್ಲ. ತಮ್ಮ ಮನೆಯ ಕೆಲಸ ಮಾಡಿದರೆ ಸಾಕು. ಅವರು ಕಟುಕರು ಇದ್ದಂತೆ. ನಾವು ಏನು ಮಾಡೋದು ಸಾರ್. ನಮಗಾ ಇದನ್ನು ಬಿಟ್ಟರೆ ಬೇರೆ ಗತಿನೇ ಇಲ್ಲರಿ" ಸಾಮಾನ್ಯವಾಗಿ ಹೆಚ್ಚಿನವರ ಅನುಭವ. ಆದರೆ ಅದು ಪೂರ್ತಿ ಜೀವನಾಧಾರವೂ ಆಗುವುದಿಲ್ಲ. ಮಳೆ ಬಂದಾಗ ಕೂಲಿ ಇಲ್ಲ. ಮಾಲಿಕರ ಮನೆಯಲ್ಲಿ ಅಂಗಡಿಗೆ ಹೋಗಲು, ಹೊಲದಲ್ಲಿ ಕಾಯಿಪಲ್ಲೆ ಕೀಳಲು ಮತ್ತು ಬೇರೆ ಕೆಲಸ ಹೇಳಿದರೆ ಆ ದಿವಸವೂ ಕೂಲಿ ಇಲ್ಲ. ಅವರು ಕೊಡುವ ಕಾಯಿಪಲ್ಲೆ, ಹೊಲದಿಂದ ಎತ್ತಿಕೊಳ್ಳುವ ಹತ್ತಿ ಕಟ್ಟಿಗೆ ಒಂದು ಸಮಾಧಾನ. 'ಬಿಟ್ಟಿ ಚಾಕ್ರಿ' ಮಾಡಿ ಕೂಲಿಗೆ ಹೋಗಿ ಮನೆಗೆ ಬರುವಾಗ "ನನ್ನ ಕಣ್ಣೀರು ಕಪಾಳಕ್ಕೆ ಬರುತ್ತಿತ್ತು. ಆದರೂ ಯಾವುದೇ ಕಷ್ಟ ಬಂದರೂ ಈ ಸಗಣಿ ಕೆಲಸ ನಾವು ಬಿಡುವಂತಿಲ್ಲ" ಎಂದು ನಿಟ್ಟುಸಿರು ಸುರಿಸುತ್ತಾಳೆ. ಆದರೂ "ಮುಂದೆ ಕಾಳು ಕೊಡುವಾಗ ಕಡಿಮೆ ಕಾಳು ಕೊಡುತ್ತಾರೆ" ಎಂಬ ಮನಸ್ತಾಪವೂ ಇದೆ. ಆದರೆ ತಮ್ಮದೇ ಹೊಲ ಆಸ್ತಿ ಇಲ್ಲದ್ದರಿಂದ ಬಿಟ್ಟಿ ಚಾಕ್ರಿ ಬಿಟದಿರುವ ಅಸಹಾಯಕತೆ ಅವರದು. "ನಾವು ಈ ಕೆಲಸ ಬಿಟ್ಟರೆ ನಮ್ಮ ಬಾಳ್ವೆ ಎಲ್ಲ ಕಷ್ಟ ಆಗುತ್ತದೆ. ಅದಕ್ಕೆ ಹೆದರಿ ನಾ ಈ ಕೆಲಸ ಮಾಡಲೇ ಬೇಕು ನೋಡ್ರಿ" ಎಂಬುದು ಅವರ ಜೀವನಕ್ಕೆ ಕನ್ನಡಿ ಹಿಡಿಯುವ ಉದ್ಗಾರ.

### 2.10.2.3 ಮಧ್ಯ ವಯಸ್ಸಿನ ಹೆಂಡತಿ(36 ವರ್ಷ), ಗಂಡ (45 ವರ್ಷ) ಇಬ್ಬರ ದಿನಚರಿ

ಹೆಂಡತಿಯ 'ಬಿಟ್ಟಿ ಚಾಕ್ರಿ'ಯ ಎಂಟು ತಿಂಗಳ ಅನುಭವಗಳು ಪ್ರತಿ ದಿನ ಮಾಡಲೇ ಬೇಕಾದ ಅನಿವಾರ್ಯತೆಯನ್ನು ಮಾಡುವ ಕೆಲಸಗಳಲ್ಲಿರುವ ಏಕತಾನತೆಯನ್ನೂ ತೋರಿಸುತ್ತವೆ. 'ಬಿಟ್ಟಿ ಚಾಕ್ರಿ' ಮಾಡಿದ ಮೇಲೆ ಕೂಲಿ ಕೆಲಸಕ್ಕೆ ಹೋಗುವ ಸ್ವಾತಂತ್ರ್ಯವಿದ್ದರೂ ಬಿಟ್ಟಿ ಚಾಕ್ರಿಯಲ್ಲೇ ಹೆಚ್ಚಿನ ಸಮಯ ಹೋದರೆ, ಆ ದಿನ ಕೂಲಿ ಕೆಲಸಕ್ಕೆ ಹೋಗುವ ಹಾಗಿಲ್ಲ. ಮದುವೆ, ತಿಥಿ, ಸಾವು, ಹಬ್ಬದ ಸಮಯಗಳಲ್ಲೂ ಜಮೀನ್ದಾರರ ಮನೆಯಲ್ಲೇ ಕೂಲಿ ಇಲ್ಲದೇ 'ಬಿಟ್ಟಿ ಚಾಕ್ರಿ' ಮಾಡುತ್ತಿರಬೇಕು. ಬೇರೆಯವರು ಹಬ್ಬ ಮಾಡುವಾಗ ತಾವು ಬಿಟ್ಟಿ ಚಾಕ್ರಿ ಮಾಡಬೇಕೆಂಬ ಕೊರಗು ಅವರಲ್ಲಿ ಇದೆ. ಕಣ ಮಾಡುವಾಗಲೂ ದಿನಗಟ್ಟಲೆ 'ಬಿಟ್ಟಿ ಚಾಕ್ರಿ' ಮಾಡುತ್ತಿರಬೇಕು. ವರ್ಷಕ್ಕೆ ಇಂತಿಷ್ಟು ಚೀಲ ಜೋಳ ಸಿಗುವುದರ ಜೊತೆ"ರಾಶಿ ಮಾಡಿದಾಗ ಹಿಂದೂ ಮುಂದೆ ಇದ್ದ ಕಾಳುಗಳನ್ನು ಕೊಡುತ್ತಾರೆ" ಎಂಬುದರಲ್ಲೇ ಅವರು ತೃಪ್ತಿ ಪಡಬೇಕು. ಜೊತೆಗೆ ಸೌಕಾರನ ತೋಟದಿಂದ ಬೇಕಾದಾಗ ಮೇವು, ಉರುವಲು ತೆಗೆದುಕೊಂಡು ಬರಬಹುದು. ಗೌಂಡಿ ಕೆಲಸಕ್ಕೆ ಹೋಗಲು ಊಟಕ್ಕೆ ಕರೆಯಲು ಮಗನು ಸೌಕಾರನ ಮನೆಗೆ ಬಂದಾಗ ಅದನ್ನು ಸೌಕಾರತಿ ಕೇಳಿ ಮಗನಿಗೆ ರೊಟ್ಟಿ ಪಲ್ಯ ಕೊಟ್ಟು ಮಾನವೀಯತೆ ಮೆರೆಯುತ್ತಾರೆ. ಮಗಳ ಮದುವೆಗೆ ಕೇಳಿದ 10,000 ರೂ. ಸಾಲವನ್ನೂ ಸೌಕಾರರು ಕೊನೆಗೆ ಕೊಡಲು ಒಪ್ಪುತ್ತಾರೆ. ಅದನ್ನು ತೀರಿಸಲು ಮಗನು ಮಹಾರಾಷ್ಟ್ರಕ್ಕೆ ಗೌಂಡಿ ಕೆಲಸಕ್ಕೆ ಹೋಗುವ ಅನಿವಾರ್ಯತೆ ಬೇರೆ.

ಬೀಗರು, ಹೊಸ ಸಂಬಂಧ ಹುಡುಕಲು ಬಂದಾಗ ತಮಗಾಗುವ ಅವಮಾನಗಳನ್ನು ಹಲವು ಬಾರಿ ನೆನಪಿಸಿ ಕೊಳ್ಳುತ್ತಾರೆ ನಾಗವ್ವರವರು. ಆದರೆ ಏನು ಮಾಡುವುದು. ಯಾವುದೇ ಆಸ್ತಿ ಇಲ್ಲ. ಜಮೀನು ಇಲ್ಲ. 'ಬಿಟ್ಟಿ ಚಾಕ್ರಿ' ಮಾಡದಿದ್ದರೆ ಸೌಕಾರರು ಬೈಯುತ್ತಾರೆ; ತಮಗೆ ಬೇಕಾದಾಗ ಮೇವು, ಕಟ್ಟಿಗೆ ಮತ್ತಿತರ ಸೌಲಭ್ಯಗಳನ್ನು ಅವರ ಹೊಲಗಳಿಂದ ಪಡೆಯಲಿಕ್ಕಾಗದು ಎಂಬ ಭಯ ಅವರನನು ಬಿಟ್ಟಿ ಚಾಕ್ರಿಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ. ಆದರೂ ಕೆಲವು ಸಾರಿ ದಿನಗಟ್ಟಲೆ ಕೂಲಿ ಇಲ್ಲದೆ ಇಡೀ ದಿವಸ 'ಬಿಟ್ಟಿ ಚಾಕ್ರಿ' ಮಾಡಬೇಕಾದಾಗ ಬಿಟ್ಟಿ ಚಾಕರಿ ನಿಲ್ಲಿಸಬೇಕೆಂಬ ನಿರ್ಧಾರಕ್ಕೆ ಬರುತ್ತಾರೆ. ಬಹುಷಃ ಆ ನಿರ್ಧಾರ ಕೊನೆ ಮುಟ್ಟುವುದಿಲ್ಲ. ಮಕ್ಕಳು ಚೆನ್ನಾಗಿ ಓದಿ ನೌಕರಿ ಪಡೆದು ಸ್ವತಂತ್ರ ಜೀವನ ನಡೆಸಬೇಕೆಂಬ ಕನಸು ಕಾಣುತ್ತಿದ್ದಾರೆ.

### 2.10.3 'ಬಿಟ್ಟಿ ಚಾಕ್ರಿ'ಯಲ್ಲಿರುವ ಹಲವರ ಚುಟುಕು ಅನುಭವಗಳು (ವಿವರಗಳಿಗೆ ಅನುಬಂಧ III ನೋಡಿ)

ಇಪ್ಪತ್ತನಾಲ್ಕು ಮಂದಿ ಚಿವಟಗುಂಡಿಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುತ್ತಿರುವವರ ಅನುಭವಗಳನ್ನು ಚುಟುಕಾಗಿ ಕಲೆಹಾಕಲಾಗಿದೆ. ಅವರ ಅನುಭವಗಳು ಮೇಲೆ ದಾಖಲಿಸಿದ ಹಲವಾರು ಅನುಭವಗಳನ್ನೇ ಧೃಡಿಪಡಿಸುತ್ತವೆ. ಒಂದು ಕಡೆ 'ಬಿಟ್ಟಿ ಚಾಕ್ರಿ'ಯು ಜೀವನಕ್ಕೆ 'ಆಧಾರ' ಕೊಟ್ಟರೂ ಅದು ಅಸಹಾಯಕತೆಯ ಆಧಾರ. ಹೊಲ ಇಲ್ಲದೇ ಮಾಲಿಕರ ಜಮೀನನ್ನು ಹಲವಾರು ಅಗತ್ಯಗಳನ್ನು ಪೂರೈಸಲು ಬೇಕು. 'ಬಿಟ್ಟಿ ಚಾಕ್ರಿ' ಮಾಡದಿದ್ದರೆ, "ನಮಗೆ ಹೊಲ್‌ದಾಗ ಹಾಯರೀ ಅಂತಾರೀ. ಬೇಲಿ ಹಾಕತ್ತೇವಿ ಅಂತಾರೀ"

ಎನ್ನುವ ಭಯವಿದೆ. ಜೊತೆಗೆ "ಮಾಲಿಕರ ಹತ್ತಿರ ಅಡ್ವಾನ್ಸ ಕಾಳಕಡೀ ಕೊಡತ್ತಾರರೀ. ಅದಕ್ಕಾಗಿ ಸುಮ್ಮನೆ ಇರಬೇಕರಿ" ಎಂದು ತಮ್ಮ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾರೆ. "ಮಗನ ಮದವಿಗೆ 5000 ರೂ. ಸಾಲ ಅಂತ ಕೊಟ್ಟಾರಿ. ಅದನ ಮತ್ತ ವಾಪಾಸ ಕೊಡಬೇಕ. ಇಲ್ಲಾ ದುಡದ ಮುಟ್ಟಸಬೇಕರೀ. ಬಡ್ಡೀ ಅದು ಏನೂ ತೊಗೋದಿಲ್ಲಾ. ಆದ್ರೂ ಅವರ ಹಣ ಕೊಡಲೇ ಬೇಕರಿ." ಹೀಗೆ ಅಗತ್ಯವಿದ್ದಾಗ ಮಾಲಿಕರಿಂದ ಹಣ ಸಹಾಯ ಪಡೆಯುವುದರಿಂದ ಅವರ ಅಗತ್ಯ ಯಾವಾಗಲೂ ಇದ್ದೇ ಇದೆ.

ಬಡತನದಿಂದ ಮಕ್ಕಳನ್ನು ಶಾಲೆ ಕಲಿಸಲು ಆಗದೇ "ರೈತರ ಮನೆ ಸಗಣಿ ಬಳೆಯುದ್ದರಿಂದ ಏನೋ ಸ್ವಲ್ಪ ಕಾಳು ಕಡಿ ಹೊಟ್ಟೆಗೆ ಸಿಗತಾವರಿ. ಕೂಲಿ ಮಾಡಿದ ಹಣದಿಂದ ಸಂತೆ ಪ್ಯಾಟಿ ಆಗತೈತಿ. ಆದ್ದರಿಂದ ಈ ಕೆಲಸ ನಾನು ಮಾಡತ್ತೇನರಿ" ಎಂದು ಸಮಾಧಾನ ಪಟ್ಟುಕೊಳ್ಳುತ್ತಾರೆ. ಈ ಅಭಿಪ್ರಾಯ ಹೆಚ್ಚಿನವರದ್ದು.

ಒಬ್ಬ ಮಹಿಳೆಯನ್ನು ಅವರ ಗಂಡ 'ಜಗಳ ಮಾಡಿ ಹೊರಗೆ ಹಾಕಿದ' ಮೇಲೆ ತನ್ನ ಇಬ್ಬರು ಮಕ್ಕಳನ್ನು ತವರು ಮನೆಗೆ ಕರೆದುಕೊಂಡು ಬಂದು ಪುನಃ 'ಬಿಟ್ಟಿ ಚಾಕ್ರಿ'ಗೆ ಹೋಗುವಂತಾಯಿತು. ಇನ್ನೊಬ್ಬ ಮಹಿಳೆಯನ್ನು 'ಶಗಣಿ ಕಸ ಮಾಡಲು ಕಳಿಸುವುದಿಲ್ಲ ಎಂದು ಅವರ ತಂದೆ ತಾಯಿಗೆ ಕರಾರು ಮಾಡಿ ಮದುವೆ ಮಾಡಿಕೊಂಡು ಬಂದರೂ' ಅವರ ಅತ್ತೆ ಮಾವ ತೀರಿದ ಮೇಲೆ ಅವರು ಮಾಡುತ್ತಿದ್ದ ಚಾಕರಿ ಕೆಲಸ ಮುಂದುವರಿಸಬೇಕಾಗಿದೆ. ಈಗ ಅವರು ಗ್ರಾಮ ಪಂಚಾಯತಿ ಮೆಂಬರ್ ಆಗಿದ್ದರೂ 'ಬಿಟ್ಟಿ ಚಾಕ್ರಿ' ಬಿಡುವಂತಿಲ್ಲ. "ಶಾಲೆ ಕಲಿತ್ತಿದ್ದರೆ ಒಳ್ಳೆಯದು ಆಗುತ್ತದೆ" ಎಂದು ಈಗ ಹುಲುಬುತ್ತಾಳೆ.

ಮನೆಯಲ್ಲಿ ಏನೇ ಕಷ್ಟ ಬಂದರೂ 'ಬಿಟ್ಟಿ ಚಾಕ್ರಿ'ಯನ್ನು ಬಿಡುವ ಹಾಗಿಲ್ಲ. "ಮನಿಯೊಳಗ ಏನಾದ್ರೂ ಚಲೋ ಕೆಟ್ಟ ಇದ್ರ ಅಷ್ಟ ಬಿಡುದ, ಇಲ್ಲ ಅಂದ್ರ ಹೋಗಲೇಬೇಕ, ಬಿಟ್ಟರ ಕರಿಯಾಕ ಮನಿಗೆ ಬರತ್ತಾರ, ಮತ್ತ ಅವರ ಮನಿಯ್ಯಾಗ ಏನಾದ್ರ ಆದ್ರ ನಾವ ಅಲ್ಲೇ ಇರಬೇಕ" ಹೀಗೆ ತಮ್ಮ ಅಳಲನ್ನು ಒಬ್ಬಾಕೆ ತೋಡಿಕೊಂಡಿದ್ದಾರೆ. ಆದರೆ ಕೆಲವರು ಅದನ್ನು ಬಿಡಬೇಕೆಂದರೂ 'ತಾಯಿಯವರು ಇದು ವಂಶ ಪಾರಂಪರ್ಯದಿಂದ ಬಂದಿರುವುದರಿಂದ ಈ ಕೆಲಸವನ್ನು ಬಿಡಬಾರದೆಂದು ಒತ್ತಾಯ ಮಾಡುತ್ತಿದ್ದಾರೆ' ಎಂದು ಹೇಳಿಕೊಂಡಿದ್ದಾರೆ.

ಹಳೆಯ ಜಾತಿ ಅವಲಂಬಿಸಿದ ಕೆಲಸಗಳನ್ನು ಈಗಲೂ ಮಾಡಬೇಕು. "ಅವರ ದನಕರ ಸತ್ತರ ಅವನ ತಂದ ನಾವ ಒಗೀಬೇಕು. ಮೊದಲ ಅದನ್ನ ಕೊಯಿದು, ಚರ್ಮಾ ತಗದ, ಈಗ ಹದನ ಮಾಡುದಿಲ್ಲ, ಅವರವರ ಹೊಲದಾಗ ಚಲ್ಲಿ ಬರುತ್ತೇವರೀ. "ಇಷ್ಟೆಲ್ಲ ಮಾಡಿಯೂ ಒಂದ್ಯಾರಡ ದಿನಾ ಬಿಟ್ಟ್ರ ಮನಿಮಠಾ ಕರಯಾಕ ಬರತ್ತಾರ. ಸೊಕ್ಕ ಬಾಳ ಬಂದೇತಿ. ಈಗ ಅದಕ ಬರುಲ್ಲ ತಗೋ ಅಂತಾರಿ."ಇದನ್ನೆಲ್ಲಾ ಸಹಿಸಿಕೊಂಡು ಹೋಗಲು ಅವರು ಕೊಡುವ ಕಾರಣ ತಮಗೆ 'ಹೊಲ ಇಲ್ಲ' ಅಂತ. 'ಬಿಟ್ಟಿ ಚಾಕ್ರಿ' ಮಾಡದಿದ್ದರೆ 'ಬಾಳೆ ನಡಸುದ ಕಠಿಣ ಐತಿರಿ' ಎನ್ನುತ್ತಾರೆ.

ಇಷ್ಟೆಲ್ಲ ಇದ್ದರೂ 'ಬಿಟ್ಟಿ ಚಾಕ್ರಿ' ಬಗ್ಗೆ ಮಾಹಿತಿ ನೀಡುವುದರಿಂದ ಮಾಲಿಕರಿಗೆ ತೊಂದರೆ ಆಗಬಹುದು ಹಾಗೆ ಆಗಬಾರದು ಎಂದೂ ಒಬ್ಬರು ಹೇಳಿಕೊಂಡಿದ್ದಾರೆ. "ಮಾಹಿತಿ ನೀಡುವಾಗ ನನ್ನ ಹೊಟ್ಟೆ ಪಾಲಿನ ಕೆಲಸ ನಿಂತು ಹೋದೀತು. ರೈತರು ನಮಗೆ ತೊಂದರೆ ಕೊಟ್ಟಾರು ಎಂಬ ಭಯ ನನಗಿದೆ. ಯಾಕೆಂದರೆ ನಾವು ಎಲ್ಲದಕ್ಕೂ ನಮ್ಮ ಮಾಲಿಕರನ್ನೇ ನಂಬಿಕೊಂಡಿದ್ದೇವೆ. ನಿಮಗೆ ಮಾಹಿತಿ ನೀಡಿದರೆ ನಮ್ಮ ಮಾಲಿಕರಿಗೆ ತೊಂದರೆ ಕೊಡುತ್ತಾರೆ ಎಂಬ ಭಯ ನನಗೆ ಇದೆ. ಅದಕ್ಕೆ ನಮಗೆ ತೊಂದರೆ ಆಗದಂಗ ಮಾಡಿರಿ." 'ಬಿಟ್ಟಿ ಚಾಕ್ರಿ' ಬಗ್ಗೆ ಹೊರಗಿನವರಿಗೆ ಮಾಹಿತಿ ಕೊಟ್ಟರೆ ಮಾಲಿಕರಿಗೂ ತೊಂದರೆ ಆಗುತ್ತದೆ. ಮಾಲಿಕರಿಂದ ತಮಗೂ ತೊಂದರೆ ಎಂದು 'ಬಿಟ್ಟಿ ಚಾಕ್ರಿ' ಮಾಡುವ ಹೆಚ್ಚಿನವರ ಅಭಿಪ್ರಾಯ ಎಂದು ಅನಿಸುತ್ತದೆ.

ಮೇಲೆ ಉದ್ಧರಿಸಿದ 24 ಮಂದಿಯಲ್ಲಿ ಚಿವುಟಗುಂಡಿಯ ಅತಿ ಹಿರಿಯ ಮುದುಕನಾದ ಒಬ್ಬರ ಸವಿವರವಾದ ಅನುಭವಗಳನ್ನು ಇಲ್ಲಿ ದಾಖಲಿಸಿದ್ದೇನೆ.

**2.10.3.1 70 ವರ್ಷ ವಯಸ್ಸಿನ ಮುದುಕರ (ಹೆಂಡತಿ ವಯಸ್ಸು 65) ಅನುಭವ –**

"ಮಕ್ಕಳು ಮೂರು ಜನ. ಮೊದಲನೆವ ವಯಸ್ಸು 45. ಈತನ ಹೆಂಡತಿ 40 ವರ್ಷ. ಎರಡನ ೇವ 43 ವರ್ಷ. ಈತನ ಹೆಂಡತಿ 35 ವರ್ಷ. ಮೂರನೆಯವರು ಮಗಳು. ಈಕೆಯನ್ನು ಮದುವೆ ಮಾಡಿ ಕೊಟ್ಟಿದ್ದೇವೆ. ಮೊಮ್ಮಕ್ಕಳು ದೊಡ್ಡ ಮಗನಿಂದ ಮೂರು. ದೊಡ್ಡವನು ಕೆಲಸಕ್ಕೆ ಹೋಗುತ್ತಾನೆ. ಈತನಿಗೆ ತಿಂಗಳಿಗೆ 4000ಕೊಡುತ್ತಾರೆ.ಮೂರನೇಯವನುಶಾಲೆಗೆ ಹೋಗುತ್ತಾನೆ. ಒಬ್ಬಳು ಮಗಳು. ಚಿಕ್ಕ ಮಗನಿಂದ ಮೂರು ಮೊಮ್ಮಕ್ಕಳು ಗಂಡು ಮಕ್ಕಳು. ಒಬ್ಬನ 6ನೇ ತರಗತಿ ಹೋಗುತ್ತಾನೆ. ಎರಡನೆಯವನು 5ನೇ ತರಗಿತಿ ಓದುತ್ತಾನರಿ. ಮೂರನೆಯವನು ಆರು ತಿಂಗಳರಿ.

"ನಮ್ಮ ಕುಟುಂಬದ ಮುಖ್ಯ ಕಸಬು ಕೂಲಿ, ಬಿಟ್ಟಿ ಚಾಕರಿ. 'ಬಿಟ್ಟಿ ಚಾಕರಿ' ಕೆಲಸವನ್ನು ಎರಡನೇ ಸೊಸೆ ಮಾಡತ್ತಾಳರಿ. ನಮ್ಮ ತಂದೆ ಯಲ್ಲಪ್ಪ ಮತ್ತು ನಮ್ಮ ತಾಯಿ ಗಂಗಮ್ಮ ಇಬ್ಬರು ಚಾಕರಿ ಕೆಲಸ ಮಾಡುತ್ತಿದ್ದರು. ನಾವು ಅಣ್ಣ ತಮ್ಮಂದಿರು ಆರು ಜನ. ನಾನೇ ಕೊನೇ ಮಗ. ನಾವು ಯಾರೂ ಶಾಲೆಗೆ ಹೋಗಲಿಲ್ಲ. ಒಂದನೇ ತರಗತಿ ಮುಗಿಸಿ, ಎರಡನೇ ತರಗತಿ ಓದುವಾಗಲೇ, ಶಾಲೆಗೆ ಹೋಗುವದ್ದನ್ನು ಮನೆಯವರು ಬಿಡಿಸಿ ಜೀತಕ್ಕೆ ಇಟ್ಟರು. 30 ರೂಪಾಯಿಗೆ ವರ್ಷಕ್ಕೆ. ಮೂರು ವರ್ಷ ದುಡಿದೆ. ಒಬ್ಬರ ಮನೆಯಲ್ಲಿ ಜೀತಕ್ಕೆ ಇಟ್ಟಿದ್ದರು.

"ನಂತರ ನನ್ನನ್ನು ಇನ್ನೊಬ್ಬರಮನೆಯಲ್ಲಿ ವರ್ಷಕ್ಕೆ 30 ರೂಪಾಯಿಗೆ ಜೀತಕ್ಕೆ ನಮ್ಮ ತಂದೆಯವರು ಇಟ್ಟರು. ಎರಡು ಡ್ರೆಸ ಅರವೇ (ಬಟ್ಟೆ), ಒಂದು ಜೊಡಿ ಕಾಲಮರಿ (ಪಾದರಕ್ಷೆ) ಮತ್ತು ಎರಡು ಹೊತ್ತು ಊಟ ಮತ್ತು ಮುಂಜಾನೆ ನಾಷ್ಟಾ ಕೊಡುತ್ತಿದ್ದರು. ಅವರ ಮನೆಯಲ್ಲಿ ನಾನು ಜೀತ ಮಾಡುವಾಗ ನನಗೆ ಎಂಟು ವರ್ಷ ವಯಸ್ಸುರಿ. ನಾನು ಮನೆಗೆ ಬರುತ್ತಿರಲಿಲ್ಲ. ಮಾಲಿಕರ ಮನೆಯಲ್ಲಿ

ಇರುತ್ತಿದ್ದೆ. ಅವರ ಮನೆಯಲ್ಲಿ ಮಲಗುತ್ತಿದ್ದೆ. ಜಳಕ ಸಹಿತ ಮಾಲಿಕರ ಹಿತ್ತಲಲ್ಲಿ ನಿಂತ ಮಾಡುತ್ತಿದ್ದೆ. ಜಳಕ ಮಾಡಿ ಚೊನ್ನ ಹಾಕ್ಕಿಕೊಳ್ಳಲು ಬರುತ್ತಿರಲಿಲ್ಲ. ಮಾಲಿಕರ ಮನೆಯಲ್ಲಿ ಅವರ ತಂದೆ (ಅಜ್ಜ) ಚೊನ್ನ ಹಾಕುತ್ತಿದ್ದರು. ನಾನು ಎಮ್ಮೆ ಕಾಯುತ್ತಿದ್ದೆ. ಶಗಣಿ ಬಳಿಯುತ್ತಿದ್ದೆ. ಶಗಣಿ ಬುಟ್ಟಿ ನಾನು ತುಂಬುತ್ತಿದ್ದೆ. ಅವರು ಬಂದು ಹೊರಸುತ್ತಿದ್ದರು (ಎತ್ತುವುದಕ್ಕೆ ಸಹಾಯ ಮಾಡುವುದು). ಅದನ್ನು ತಿಪ್ಪೇ ಗುಂಡಿಗೆ ಹಾಕಿ ಬರುತ್ತಿದ್ದೆ. ದನಗಳ ಮೇಯಿಸಿಕೊಂಡು ಬಂದ ನಂತರ ಅವುಗಳಿಗೆ ಮೇವು ಹಾಕುವ ಕೆಲಸ ಮಾಡುತ್ತಿದ್ದೆ. ಇದೇ ಮಾಲಿಕರ ಮನೆಯಲ್ಲಿ 18 ವರ್ಷ ಜೀತ ದುಡಿದಿದ್ದೇನೆ. ನಾನು ಮಾಲಿಕರ ಮನೆಯಲ್ಲಿಯೇ ಇರುವುದ್ದರಿಂದ ನಾನೇ ದಿನಕ್ಕೆ ಒಂದು ಬಾರಿ ಅಥವಾ ಎರಡು ದಿನಕ್ಕೆ ಒಂದು ಬಾರಿ ಮನೆಗೆ ಬಂದು ನನ್ನ ತಂದೆ ಅಥವಾ ತಾಯಿಗಳನ್ನು, ಅಣ್ಣ ತಮ್ಮಂದಿರನ್ನು ನೋಡಿಕೊಂಡು ಹೋಗುತ್ತಿದ್ದೆ. ನನ್ನ ದೊಡ್ಡ ಅಣ್ಣ ಗಂಗಪ್ಪ ಯಾವಾಗಲೂ ಮುಂಜಾನೆಯಿಂದ ಸಂಜೆ ವರಿಗೆ ರೈತರ ಬಿಟ್ಟಿ ಕೆಲಸದಲ್ಲಿಯೇ ತೊಡಗಿರುತ್ತಿದ್ದ. 20 ಮನೆ ಬಿಟ್ಟಿ ಚಾಕರಿಮಾಡುತ್ತಿದ್ದೆವು. ಹೊಟ್ಟೆಗಾಗಿ ಎಲ್ಲರೂ ಮನೆ ಕೆಲಸ ಮಾಡುತ್ತಿದ್ದೆವು.

"ಈಗ ನನ್ನ ಪಾಲಿಗೆ ನಾಲ್ಕು ಒಕ್ಕಲುಗಳು ಬಂದವು. ಈ ನಾಲ್ಕ ಮಾಲಿಕರ 'ಮನೆ ಚಾಕರಿ' ಕೆಲ್ಸ ಮಾಡುತ್ತಿದ್ದೇವೆ. ಅಂದರೆ ನನ್ನ ಮಕ್ಕಳು ಮಾಡುತ್ತಿದ್ದಾರೆ. ನನ್ನ ಕಿರಿ ಸೊಸೆ ಈಗ ದಿನಾಲು ಇಬ್ಬರ 'ಮನೆ ಚಾಕರಿ' ಮಾಡಿ ಬರುತ್ತಾಳೆ. ಒಬ್ಬರು ಒಂದು ವರ್ಷಕ್ಕ ಒಂದು ಚೀಲ ಜೋಳ, ಗೋದಿ 20 ಸೇರ, ಕಡಲೆ ಎಂಟು ಸೇರ, ಬೇಳೆಕಾಳು 2–3 ಸೇರು ಕೊಡುತ್ತಾರೆ. ಹಾಗೆ ಹೆಸರು, ಅಲಸಂದಿ ಕೊಡುತ್ತಿದ್ದರು. ಇನ್ನೊಬ್ಬರು ಒಂದು ಚೀಲ ಜೋಳ ಮತ್ತು ಗೋದಿ, ಕಡಲೆ, ಪಲ್ಯದ ಕಾಳು ಕೊಡುತ್ತಾರೆ.

"'ಚಾಕರಿ ಕೆಲಸ'ಕ್ಕೆ ಬೆಳಿಗ್ಗೆ ಎಂಟು ಘಂಟೆಗೆ ಹೋಗುತ್ತಾರೆ. 10 ಘಂಟೆಗೆ ಮನೆಗೆ ಬಂದು ಬೇರೆ ಕೂಲಿಗೆ ಹೋಗುತ್ತಾರ. ದಿನಕ್ಕೆ 100 ರೂ. ಕೂಲಿ ಕೊಡುತ್ತಾರೆ. ಬೇರೆ ಮಾಲಿಕರದು ಕೂಲಿ ಹೋಗುತ್ತಾರೆ. ನನ್ನ ಮಗ ಕೂಲಿ ಹೋಗುತ್ತಾನೆ. ದಿನಕ್ಕೆ 200 ರೂ.ದಂತೆ ಕೂಲಿ ಕೊಡುತ್ತಾರೆ. ಬೆಳಿಗ್ಗೆ ಎಂಟು ಗಂಟೆ ಹೋಗಿ ಸಂಜೆ ಆರು ಗಂಟೆಗೆ ಮನೆಗೆ ಬರುತ್ತಾರೆ. ಹೊಲದಲ್ಲಿ ಹೆಚ್ಚು ಕೆಲಸ ಇದ್ದರೆ ಇನ್ನೂ ಲೇಟ ಆಗುತ್ತದೆ.

"ಕಾಯಿಪಲ್ಲೆ ಮಾರ್ಕೆಟ್‌ಗೆ ಕಳಿಸುವಾಗ, ಉಳುಮೆ ಮಾಡುವಾಗ ಹಾಗೂ ಸುಗ್ಗಿ ಕಾಲದಲ್ಲಿ ಮನೆಗೆ ಬರುವುದು ತಡವಾಗುತ್ತದೆ. ರಾತ್ರಿ ಕೆಲಸಕ್ಕೆ ಹೋಗುವದಿಲ್ಲ. ಈಗ ಕಳೆದ ನಾಲ್ಕು ತಿಂಗಳಿಂದ ದೊಡ್ಡ ಮಗ ಒಬ್ಬರ ಮನೆ ಕಟ್ಟಾಳಾಗಿ ಹೋಗುತ್ತಿದ್ದಾನೆ. ಸಂಘದಲ್ಲಿ ಸಾಲ ಮಾಡಿದ್ದಾನೆ. ತಿಂಗಳಿಗೆ 1200 ರೂ. ತುಂಬುತ್ತಿದ್ದಾರೆ. ಈಗ ಒಂದೇ ಕಡೆ ಕೆಲಸಕ್ಕೆ ಹೋಗುವುದರಿಂದ ಸಾಲದ ಕಂತು ತುಂಬಲು ಸಹಾಯವಾಗಿದೆ. ಇದು ಈಗ ನಡೆದ ಸ್ಥಿತಿ.

"ನಾನು 18 ವರ್ಷ ಜೀತ ದುಡಿದಿದ್ದಾಗ ಪ್ರಥಮ ವರ್ಷಕ್ಕೆ 30 ರೂ., 2ನೇ ವರ್ಷಕ್ಕೆ 30 ರೂ.

ಕೊಟ್ಟರು. ನಂತರ 40 ರೂ. ಕೊಟ್ಟರು. ಹೀಗೆ ಹೆಚ್ಚು ಮಾಡುತ್ತಾ ಕೊನೆಗೆ ನಾನು ಜೀತ ಬಿಟ್ಟಾಗ ಅಂದರ ಕೊನೆ ವರ್ಷಕ್ಕೆ 600 ರೂ. ವರ್ಷಕ್ಕೆ ಕೊಟ್ಟರು. ಜೊತೆಗೆ ಊಟ ಬಟ್ಟೆ ಕಾಲಮರಿ (ಪಾದರಕ್ಷೆ) ಕೊಟ್ಟರು. ಆರು ವರ್ಷ ಎಮ್ಮೆ ಕಾದೆ. ನಂತರ ಉಳಮೆ ಮಾಡಲು ಹೇಳಿದರು. ಜೀತ ಬಿಡವ ತನಕ ನಾನೇ ಗಳೆ ಹೊಡೆದೆ (ಉಳುಮೆ ಮಾಡಿದೆ).

"ನಂತರ ಜೀತ ಬಿಟ್ಟೆ. ಆಗ ಮಾಲಿಕರು ನಾಲ್ಕರಲ್ಲಿ ಒಂದು ಹಿಸ್ಸಾ (1/4) ಪಾಲಿನಂತೆ ಮಾಡು ಎಂದರು. ಆಗ ನಾನು ಮಾಲಿಕರ ಒಬ್ಬ ಅಳಿಯ (ಮಾಲಿಕರ ತಂಗಿ ಗಂಡ) ಊರಿನಲ್ಲಿಯೇ ಇದ್ದ. ವೀರಭಂದ್ರ, ಮಾಲಿಕರ ಅಳಿಯ ನಾನು ಸೇರಿ ಉಳಿಮೆ ಮಾಡಿದೆವು. ಅಳಿಯಂದು 10 ಎಕರೆ, ಮಾಲಿಕರದ್ದು 16 ಎಕರೆ, ಒಟ್ಟು 26 ಎಕರೆ ಭೂಮಿಯನ್ನು ನಾನೇ ಉಳಿಮೆ ಮಾಡುತ್ತಿದ್ದೆ.

"ಆದರೆ ಮಾಲಿಕರು ಲೆಕ್ಕ ಮಾಡುವಾಗ 1/8ರಲ್ಲಿ ಒಂದು ಹಿಸ್ಸಾದಂತೆ ಮಾಡಿದರು. ನಾಲ್ಕರಲ್ಲಿ ಒಂದು ಭಾಗವನ್ನು ಲೆಕ್ಕ ಮಾಡಿಕೊಳ್ಳಿ ಎಂದು ಕೇಳಿದಾಗ ಇಲ್ಲ ನೀನು ನನ್ನ ಮಾವ ವೀರಭದ್ರಪ್ಪನ ಜೊತೆ ಸೇರಿ ಉಳಿಮೆ ಮಾಡಿದ್ದೆ. ಅದಕ್ಕೆ 1/8 ಒಂದು ಹಿಸ್ಸಾದಂತೆ ತೆಗೆದುಕೊ ಎಂದು ಮಾಲಿಕ ಮಾಡಿದ್ದ. ಆದರೆ ನಾನು ನಿಮ್ಮ ಅಳಿಯ ವೀರಭದ್ರ ಅವರು 10 ಎಕರೆ ಮತ್ತು ನಿಮ್ಮ 16 ಎಕರೆ ಭೂಮಿಯನ್ನು ನಾನು ಉಳಿಮೆ ಮಾಡಿದ್ದೇನೆ. ನಿಮ್ಮ ಮಾವ ಅವರು ಹೊಲದ ಕೆಲಸ ಇದ್ದಾಗ ನನ್ನ ಸಹಾಯಕ್ಕೆ ಬರುತ್ತಿದ್ದ. ಆದರೆ ನಿಮ್ಮ ಹೊಲ ಮಾತಿನಂತೆ 1/4ರಂತೆ ನಮಗೆ ಹಿಸ್ಸಾ ಮಾಡಿ ಪಾಲು ಕೊಡಿರಿ ಎಂದು ಕೇಳಿದೆ. ಆದರೆ ಅವರು ನಮಗೆ 1/4ರಂತೆ ಲೆಕ್ಕ ಮಾಡಿ ಕೊಡಲೇ ಇಲ್ಲ. ನಂತರ ಅವರು 1/8ರಂತೆ ಲೆಕ್ಕ ಮಾಡಿದರು. ಆಗಲೇ ಆರು ವರ್ಷ ಕಳೆದು ಹೋಗಿತ್ತು. ಇದರಿಂದ ನನಗೆ ಬಹಳ ನೋವಾಯಿತು. ಅವರ ಮನೆ ಕೆಲಸ ಮಾಡಿದ್ದರಿಂದ ನನಗೆ ಏನೂ ಲಾಭ ಆಗಲಿಲ್ಲ. ನಾನು ಅವರ ಹೊಲ ಪಾಲಿಗೆ ಮಾಡಿದಾಗ ನನ್ನ ಪಾಲಿಗೆ ಬಂದ ಹಣ ಕೊಡುತ್ತಿರಲಿಲ್ಲ. ಆದರೆ ಮುಂದೆ ಕೊಡುತ್ತೇನೆ ಎಂದು ಹೇಳಿ ಕೊಡುತ್ತಿರಲಿಲ್ಲ. ನಮಗೆ ಅಡಚಣೆ ಬಂದಾಗ ಹಣ ಕೊಟ್ಟರೆ ಅದಕ್ಕೆ ಬಡ್ಡಿ ಹಿಡಿದು ಹೆಚ್ಚು ಹಣ ಮಾಡುತ್ತಿದ್ದನು. ನಂತರ ಲೆಕ್ಕ ಮಾಡಿದಾಗ ನನ್ನ ಪಾಲಿನ ಹಣದಕ್ಕಿಂತ ಅವರ ಬಡ್ಡಿ ರೂಪದ ಸಾಲವೇ ಹೆಚ್ಚಾಗಿ ನಾನೇ ಅವನಿಗೆ ತಿರುಗಿ ಹಣ ಕೊಡುವಂತೆ ಲೆಕ್ಕ ಹೊಂದಿಸುತ್ತಿದ್ದರು. ಇದರಿಂದ ನಾವು ಉದ್ಧಾರ ಆಗಲಿಲ್ಲ.

"ಅವರ ಮನೆಯಲ್ಲಿ 18 ವರ್ಷ ಜೀತ ಮಾಡಿದೆ. 6 ವರ್ಷ 1/4ರಂತೆ ಹೊಲ ಪಾಲಿಗೆ ಮಾಡಿದೆ. ಆರು ವರ್ಷದ ನಂತರ 1/8ರಂತೆ ಲೆಕ್ಕ ಮಾಡಿ ಮೋಸ ಮಾಡಿದ. ನಂತರ ಐದು ವರ್ಷ ಹೊಲ ಪಾಲಿಗೆ ಮಾಡಿದಾಗ ಎತ್ತು ಕೊಂಡುಕೊಳ್ಳುಲು 30 ಸಾವಿರ ರೂ. ಮುಂಗಡ ಹಣ ಕೊಟ್ಟು ಆ ಹಣಕ್ಕೆ ಬಡ್ಡಿ ಲೆಕ್ಕ ಮಾಡಿ ನನ್ನ ಪಾಲಿಗೆ ಬಂದದ್ದನ್ನು ಬಡ್ಡಿಗಾಗಿ ಲೆಕ್ಕ ಮಾಡಿ ಇಡೀ ನನ್ನ ಜೀವನ ಹಾಳು ಮಾಡಿದ. ಈಗ ನನ್ನ ಮನಸ್ಸು ಅವನ ಕಂಡರೆ ಕುದಿಯುತ್ತದೆ. ಏನಾದರು ಮಾಡಿ ಜೈಲಿಗೆ ಹಾಕಿಸಬೇಕು ಏನಿಸುತ್ತದೆ. ನಾವು ಮಕ್ಕಳು ಎಲ್ಲಾ ಕೂಡಿ ದುಡಿದರೂ ನಮಗೆ ಸಿಗಬೇಕಾದ ಪಾಲು ಸಿಗಲಿಲ್ಲ. ಕೇವಲ ಬಡ್ಡಿಗಾಗಿ ದುಡಿದೆವು. ಅವನನ್ನು ಏನು ಮಾಡಿ ಸೇಡು ತೀರಿಸಿಕೊಳ್ಳಲಿ ಎಂದು ನನ್ನ ರಕ್ತ ಕುದಿಯುತ್ತಿದೆ.

"ಹೀಗೆ ಅವರ ಜೀತ ಉಳಿಮೆ ಕೆಲಸ ಮಾಡಿ ನನ್ನ ಜೀವ ಸವೆದು ಹೋಯಿತು. ಈಗ ನನ್ನ ಸೊಸೆ 'ಬಿಟ್ಟಿ ಚಾಕರಿ' ಮತ್ತು ನನ್ನ ಮಗ ಕಟ್ಟಾಳಾಗಿ ದುಡಿಯುತ್ತಿದ್ದಾರೆ. ಹೀಗೆ ನನ್ನ ಕುಟುಂಬ ಜೀವನ ಸಾಗಿಸುತ್ತಿದೆರಿ."

**2.11 'ಬಿಟ್ಟಿ ಚಾಕ್ರಿ' ಮಾಡಿರುವ ಕುಟುಂಬಗಳು ಈಗ 'ಬಿಟ ಚಾಕ್ರಿ' ನಿಲ್ಲಿಸಲು ಕಾರಣಗಳು**

ಚಿವಟಗುಂಡಿಯಲ್ಲಿ ಕೆಲವು ಮಂದಿ 'ಬಿಟ್ಟಿ ಚಾಕ್ರಿ' ಬಿಟ್ಟು ಕೂಲಿ ಅಥವಾ ಚಿಕ್ಕ ಪುಟ್ಟ ನೌಕರಿ ಮಾಡುತ್ತಾ ಸ್ವತಂತ್ರ ಜೀವನದ ಅನುಭವ ಸವಿಯುತ್ತಿದ್ದಾರೆ. ಮಕ್ಕಳನ್ನು ಓದಿಸುವ ಸಂಕಲ್ಪ ಇಟ್ಟು ಕೊಂಡಿದ್ದಾರೆ. ಅಣ್ಣಂದಿರು 'ಬಿಟ್ಟಿ ಚಾಕ್ರಿ' ಮುಂದುವರಿಸುತ್ತಿದ್ದರೂ ಒಬ್ಬರು ತಾಯಿಯನ್ನು 'ಬಿಟ್ಟಿ ಚಾಕ್ರಿ'ಯಿಂದ ಬಿಡಿಸಿ ಅವರನ್ನು ನೋಡಿಕೊಳ್ಳುತ್ತಿದ್ದಾರೆ. ಇನ್ನೊಬ್ಬರು 10ನೇ ತರಗತಿ ಮಾಡಿದ್ದರಿಂದ ಗ್ರಾಮ ಪಂಚಾಯಿತಿಯಲ್ಲಿ ಗುಮಾಸ್ತರಾಗಿ 15 ವರ್ಷಗಳಾಗಿವೆ. ಅವರ ಮೂರೂ ಮಂದಿ ಮಕ್ಕಳು ಓದಿದ್ದಾರೆ. ಒಬ್ಬಳು ಪಿಯುಸಿ, ಇಬ್ಬರು 10ನೇ ತರಗತಿ ಓದಿದ್ದಾರೆ. ಒಬ್ಬ ಮಗನು ಬೆಳಗಾವಿಯಲ್ಲಿ ನೌಕರಿ ಕೆಲಸ ಮಾಡುತ್ತಾನೆ.

ಇನ್ನೊಬ್ಬರು 'ಬಿಟ್ಟಿ ಚಾಕ್ರಿ' ಮಾಡುತ್ತಿದ್ದರೂ ಅದರಿಂದ ಬೇಸತ್ತು ಸ್ವಂತ ನಿರ್ಧಾರದಿಂದ ಅದನ್ನು ಬಿಟ್ಟು ಕೂಲಿಮಾಡುತ್ತಾ ಮೇಕೆ ಮೇಯಿಸುತ್ತಾ ಸ್ವತಂತ್ರ ಜೀವನದಲ್ಲಿ ತೃಪ್ತಿ ಪಡೆಯುತ್ತಿದ್ದಾನೆ. ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಓದಿಸುತ್ತಿದ್ದಾನೆ. ಒಬ್ಬಳು ಪಿಯುಸಿ, ಇನ್ನೊಬ್ಬಳು 9ನೇ ತರಗತಿ ಓದುತ್ತಿದ್ದಾರೆ. ಅವರ ಹಾಗೆ ಇನ್ನೊಬ್ಬರು ಕೂಡಾ 'ಬಿಟ್ಟಿ ಚಾಕ್ರಿ'ಯಿಂದ ಏನೂ ಪ್ರಯೋಜನವಿಲ್ಲವೆಂದು ತಿಳಿದು ಅದನ್ನು ನಿಲ್ಲಿಸಿ ಕೂಲಿಯಿಂದ ಜೀವನ ಮಾಡುತ್ತಿದ್ದಾರೆ. ಒಬ್ಬ ದೊಡ್ಡ ಮಗಳನ್ನು ಮದುವೆ ಮಾಡಿದ್ದರೆ ಇನ್ನಿಬ್ಬರು ಹೆಣ್ಣು ಮಕ್ಕಳ ಓದನ್ನು ಮುಂದುವರಿಸುತ್ತಿದ್ದಾನೆ.

**2.11.1 ಗಂಡಸು –ವಯಸ್ಸು 38**

"ನಾನು ಮೊದಲು ಹೊಲ ಮನೆಗಳಲ್ಲಿ ಕೆಲಸ ಮಾಡುತ್ತಿದ್ದೆನು. ನಾನು 10ನೇ ತರಗತಿಯವರೆಗೆ ಓದಿರುತ್ತೇನೆ. ಹೆಚ್ಚಿನ ವಿದ್ಯೆ ಕಲಿಯಲು ನಾನು ಬಡವನಿರುವುದರಿಂದ ಆಗಲಿಲ್ಲ. ಈಗ ನಾನು ಪಂಚಾಯಿತಿ ಕೆಲಸಕ್ಕೆ ಸಫಾಯಿಯಾಗಿ ಆಯ್ಕೆಯಾಗಿರುತ್ತೇನೆ. ನನ್ನ ಮದುವೆಯಾಗಿ 13 ವರ್ಷವಾಗಿದೆ. ನಾನು ನನ್ನ ಅಕ್ಕನ ಮಗಳನ್ನು ಮದುವೆಯಾಗಿರುತ್ತೇನೆ. ನನ್ನ ಹೆಂಡತಿಶಾಲೆ ಕಲಿತಿರುವುದಿಲ್ಲ. ನನಗೆ ಒಬ್ಬ ಮಗನಿದ್ದಾನೆ. ಒಂದನೇ ತರಗತಿಯಲ್ಲಿ ಕನ್ನಡ ಶಾಲೆಯಲ್ಲಿ ಓದುತ್ತಿದ್ದಾನೆ. ನನಗೆ ಪಂಚಾಯಿತಿಯಿಂದ 4,000 ರೂಪಾಯಿ ಸಂಬಳ ಕೊಡುತ್ತಾರೆ. ಈ ಸಂಬಳ ನನಗೆ ಸಾಲದಕ್ಕೆ ನನ್ನ ಹೆಂಡತಿ ಕೂಲಿ ಕೆಲಸಕ್ಕೆ ಹೋಗುತ್ತಾಳೆ. ನನಗೆ ತಾಯಿಯಿದ್ದಾರೆ. ಅವಳಿಗೆ 65 ವರ್ಷವಾಗಿದೆ. ನನಗೆ ನಾಲ್ಕು ಜನ ಅಣ್ಣ ತಮ್ಮಂದಿರು ಇರುತ್ತಾರೆ. ಅವರವರ ಕುಟುಂಬ ಬೇರೆ ಬೇರೆ ಇರುತ್ತದೆ. ಈ ನಾಲ್ಕು ಮಂದಿ ಅಣ್ಣ–ತಮ್ಮಂದಿರಲ್ಲಿ ನಾನೇ ಚಿಕ್ಕವನು. ಎಲ್ಲರಿಗೂ ಮದುವೆಯಾಗಿರುತ್ತದೆ. ಈಗ ನಾನು ಮತ್ತು ನನ್ನ ಹೆಂಡತಿ, ನನ್ನ ತಾಯಿ ಒಂದೇ ಮನೆಯಲ್ಲಿ ಇರುತ್ತೇವೆ. ತಾಯಿಗೆ ತುಂಬಾ ಕಷ್ಟ ಇದೆ. ನನ್ನ ತಂದೆ ತೀರಿಕೊಂಡು ಎರಡು ವರ್ಷವಾಗಿದೆ.

ನನ್ನ ತಂದೆ ಹುಟ್ಟಿನಿಂದಲೂ ನಾಲ್ಕು ಮನೆಗಳಲ್ಲಿ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದರು. ಈ 'ಬಿಟ್ಟಿ ಚಾಕರಿ' ಕೆಲಸವನ್ನು ಮಾಡಿ ನಂತರ 2.50 ಪೈಸೆ ದಿನಗೂಲಿಗೆ ಹೋಗುತ್ತಿದ್ದರು. ನನಗೆ ಅಕ್ಕ-ತಂಗಿಯರು ಮೂರು ಮಂದಿ ಇದ್ದಾರೆ. ಮೂವರಿಗೂ ಮದುವೆ ಮಾಡಿಕೊಟ್ಟಿದ್ದಾರೆ. ನನ್ನ ತಾಯಿ ಎರಡು ಮನೆ 'ಬಿಟ್ಟಿ ಚಾಕರಿ' ಮಾಡಿ ಬಂದು ಕೂಲಿ ಕೆಲಸಕ್ಕೆ ಹೋಗುತ್ತಿದ್ದರು. ಈಗ ನನ್ನ ತಾಯಿಗೆ ವಯಸ್ಸಾಗಿರುವುದರಿಂದ ಬಿಟ್ಟಿ ಚಾಕರಿ ಕೆಲಸ ಮಡುವುದನ್ನು ನಾನೇ ಬಿಡಿಸಿರುತ್ತೇನೆ. ಆವಾಗ ಅವಳಿಗೆ ಒಂದು ಚೀಲ ಜೋಳ, ಒಂದು ಬುಟ್ಟಿ ಗೋದಿ ಮತ್ತು ಅಲ್ಪ ಸ್ವಲ್ಪ ಪಲೆ ಮಾಡಿಕೊಳ್ಳುವುದ್ದಕ್ಕೆ ಬೆಳೆಗಳನ್ನು ಕೊಡುತ್ತಿದ್ದರು. ಆವಾಗ ಆವಳು ಬೆಳಿಗ್ಗೆ ಆರು ಗಂಟೆಯಿಂದ ಒಂಬತ್ತು ಗಂಟೆಯವರಿಗೆ ಒಂದು ಮನೆಯ 'ಬಿಟ್ಟಿ ಚಾಕರಿ' ಕೆಲಸ ಮುಗಿಸಿಕೊಂಡು, ನಂತರ ಇಬ್ಬರ ಮನೆ ಕೆಲಸ ಮುಗಿಸಿಕೊಂಡು ಬಂದು 10 ಗಂಟೆಗೆ ಕೂಲಿ ಕೆಲಸಕ್ಕೆ ಹೋಗುತ್ತಿದಳು. ಆವಾಗ ಅವಳಿಗೆ 20ರಿಂದ 25 ರೂಪಾಯಿ ಕೂಲಿ ಸಿಗುತ್ತಿತ್ತು. ನನ್ನ ತಂದೆ ಹಾಗೂ ತಾಯಿ ಸೇರಿ ಆರು ಮನೆಯ 'ಬಿಟ್ಟಿ ಚಾಕರಿ' ಕೆಲಸ ಮಾಡುತ್ತಿದ್ದರು. ಮಾಲೀಕರ ಕೆಲಸ ಮುಗಿಸಿಕೊಂಡು ಬರುವಾಗ ಅವರ ಮನೆಯಲ್ಲಿ ಇದ್ದಂತ ತಂಗಳ ರೊಟ್ಟಿ, ಸಾರು ಕೊಡುತ್ತಿದ್ದರು. ಅದನ್ನೇ ತಂದು ನಮಗೆ ಏಳು ಜನ ಮಕ್ಕಳಿಗೂ ಕೊಡುತ್ತಿದ್ದರು. ಈಗ ನನ್ನ ತಾಯಿಗೆ ಕಣ್ಣು ಕಾಣುವುದಿಲ್ಲ. ಕಿವಿ ಕೇಳಿಸುವುದಿಲ್ಲ. ಈಗ ಅವರು ಯಾವ ಕೆಲಸವನ್ನೂ ಮಾಡುವುದಿಲ್ಲ. ಅವರ ಜವಾಬ್ದಾರಿಯನ್ನು ನಾನೇ ನೋಡಿಕೊಳ್ಳುತ್ತಿದ್ದೇನೆ. ನನಗೆ ಪಂಚಾಯಿತಿ ಕೆಲಸ ಸಿಕ್ಕ ಮೇಲೆ ನಮಗೆ ಸ್ವಲ್ಪ ಹೊಟ್ಟೆ ತುಂಬ ಊಟ ಸಿಗುತ್ತಿದೆ. ನಮಗೆ ಮನೆ ಕಟ್ಟಿಕೊಳ್ಳಲು ಖಾಲಿ ಜಾಗವಿರುವುದಿಲ್ಲ ಮತ್ತು ಜಮೀನು ಇಲ್ಲ."

**2.11.2. ಗಂಡಸು** – 52 ವರ್ಷ ವಯಸ್ಸು.

"10ನೇ ತರಗತಿಯವರೆಗೆ ಓದಿದ್ದೇನೆ. ನನ್ನ ಹೆಂಡತಿಗೆ 45 ವರ್ಷ. ನನಗೆ ಮೂರು ಜನ ಮಕ್ಕಳು. ಇಬ್ಬರು ಗಂಡು ಮಕ್ಕಳು ಮತ್ತು ಒಬ್ಬ ಮಗಳಿದ್ದಾಳೆ. ಮೊದಲನೆಯವನಿಗೆ 29 ವರ್ಷವಾಗಿದ್ದು 10ನೇ ತರಗತಿಯವರೆಗೆ ಓದಿರುತ್ತಾನೆ. ಎರಡನೆಯವನಿಗೆ 27 ವರ್ಷವಾಗಿದ್ದು ಪಿಯುಸಿಯವರೆಗೆ ಓದಿದ್ದಾನೆ. ಮೂರನೆಯವಳಿಗೆ 25 ವರ್ಷವಾಗಿದ್ದು ಪಿಯುಸಿಯವೆರೆಗೆ ಓದಿದ್ದಾಳೆ. ಈಗ ನಾನು ಪಂಚಾಯಿತಿಯಲ್ಲಿ ಗುಮಾಸ್ತನಾಗಿ 15 ವರ್ಷ ಕೆಲಸ ಮಾಡುತ್ತಿದ್ದೇನೆ. ನಮ್ಮ ಕುಟುಂಬದಲ್ಲಿ ನನ್ನ ಎರಡು ಮಕ್ಕಳಲ್ಲಿ ದೊಡ್ಡವನು ಬೇರೆ ಇದ್ದಾನೆ. ನನ್ನ ಎರಡನೇ ಮಗ ನನ್ನ ಜೊತೆ ಇದ್ದಾನೆ. ದೊಡ್ಡವನಿಗೆ ಎರಡು ಮಕ್ಕಳು ಇದ್ದಾರೆ. ಅವರ ಮೊದಲನೇ ಮಗಳು ಏಳು ವರ್ಷ. ಇವಳು ಒಂದನೇ ತರಗತಿ ಓದುತ್ತಿದ್ದಾಳೆ. ಮಗನಿಗೆ ನಾಲ್ಕು ವರ್ಷ. ಇದು ನನ್ನ ಮೊದನೆಯ ಮಗನ ಪರಿಚಯ.

"ನನ್ನ ಎರಡನೇ ಮಗನ ಮದುವೆಯಾಗಿರುವುದಿಲ್ಲ. ಈತನು ಬೆಳಗಾವಿಯಲ್ಲಿ ಉದ್ಯಮ ಭಾಗದಲ್ಲಿ ಕೆಲಸ ಮಾಡುತ್ತಿದ್ದಾನೆ. ಅವನಿಗೆ ತಿಂಗಳಿಗೆ 9000 ರೂಪಾಯಿ ಸಂಬಳವಿದೆ. ನನ್ನ ಮಗಳ ಮದುವೆಯಾಗಿ ಮೂರು ವರ್ಷವಾಗಿದ್ದು ಅವಳಿಗೆ ಒಬ್ಬ ಮಗಳಿದ್ದಾಳೆ. ಅವಳ ಗಂಡ ಅವಳನ್ನು ಬಿಟ್ಟು ಬೇರೆ ಮದುವೆಯಾಗಿರುತ್ತಾನೆ. ಈಗ ನನ್ನ ಮಗಳು ನನ್ನ ಮನೆಯಲ್ಲಿಯೇ ಇದ್ದಾಳೆ. ನನಗೆ ನಾಲ್ಕು

ಮಂದಿ ಅಣ್ಣ-ತಮ್ಮಂದಿರು ಮತ್ತು ನಾಲ್ಕು ಜನ ಅಕ್ಕ-ತಂಗಿಯರಿದ್ದಾರೆ. ನನ್ನ ತಂದೆ ತಾಯಿ ಇಬ್ಬರೂ 14 ವರ್ಷಗಳ ಹಿಂದೆ ತೀರಿಕೊಂಡಿರುತ್ತಾರೆ. ನಮ್ಮ ತಾಯಿ-ತಂದೆ ಇಬ್ಬರೂ ಬಿಟ್ಟಿ ಚಾಕರಿ ಮಾಡುತ್ತಿದ್ದರು. ನಾನೂ ಸಹಾ ಅವರ ಜೊತೆ ಐದು ಮನೆಗಳ 'ಬಿಟ್ಟಿ ಚಾಕರಿ' ಕೆಲಸಕ್ಕೆ ಹೋಗುತ್ತಿದ್ದೆ. ನಮ್ಮ ಐದು ಮಾಲೀಕರೆಲ್ಲರ ಮನೆಗಳಲ್ಲಿ ಕೆಲಸ ಮಾಡುತ್ತಿದ್ದೆವು. ಇವರು ನಮಗೆ ಒಂದು ವರ್ಷಕ್ಕೆ ಒಂದು ಚೀಲ ಜೋಳ, 10 ಸೇರು ಕಡಲೆ, 20 ಸೇರು ಗೋದಿ ಮತ್ತು ಇತರೆ ಸಂಬಾರ ಪದಾರ್ಥಗಳನ್ನು ಕೊಡುತ್ತಿದ್ದರು. 'ಬಿಟ್ಟಿ ಚಾಕರಿ' ಕೆಲಸ ಮುಗಿಸಿಕೊಂಡು ಬಂದು ನಾವು ಕೂಲಿ ಕೆಲಸಕ್ಕೆ ಹೋಗಲು ಆಗುತ್ತಿರಲಿಲ್ಲ. ಏಕೆಂದರೆ ಈ ಐದು ಮನೆಗಳ ಕೆಲಸಗಳನ್ನು ಮುಗಿಸುವಷ್ಟರಲ್ಲಿ ತುಂಬಾ ತಡವಾಗುತ್ತಿದ್ದರಿಂದ ಕೂಲಿ ಹೋಗಲು ಆಗುತ್ತಿರಲಿಲ್ಲ. ನಾನು ಕಷ್ಟಪಟ್ಟು 10ನೇ ತರಗತಿಯವರೆಗೆ ಓದಿದ್ದರಿಂದ ನನಗೆ ಗೌಡರ ಮುಖಾಂತರ ಪಂಚಾಯಿತಿಯಲ್ಲಿ ಕೆಲಸ ಸಿಕ್ಕಿದೆ. ನನಗೆ ಇನ್ನು ಎಂಟು ವರ್ಷ ಸರ್ವಿಸ್ ಇದೆ."

**2.11.3. ಗಂಡಸು – ವಯಸ್ಸು 45 ವರ್ಷ**

"ಹೆಂಡತಿಗೆ 40 ವರ್ಷ. ನನಗೆ ಇಬ್ಬರು ಹೆಣ್ಣು ಮಕ್ಕಳು. ಮೊದಲನೆಯವಳಿಗೆ 17 ವರ್ಷವಾಗಿದ್ದು ಪಿಯುಸಿಯವರೆಗೆ ಓದಿದ್ದಾಳೆ. ಎರಡನೆಯವಳಿಗೆ 16 ವರ್ಷವಾಗಿದ್ದು 8ನೇ ತರಗತಿಯವರೆಗೆ ಓದಿರುತ್ತಾಳೆ. ಮೊದಲು ನಾನು 'ಬಿಟ್ಟಿ ಚಾಕರಿ' ಮಾಡುತ್ತಿದ್ದೆ. ಈಗ ಮೂರು ವರ್ಷಗಳಿಂದ ಬಿಟ್ಟಿದ್ದೇನೆ. ನನ್ನ ಹೆಂಡತಿಯು ಎಂಟು ವರ್ಷದವರೆಗೂ 'ಬಿಟ್ಟಿ ಚಾಕರಿ' ಕೆಲಸ ಒಬ್ಬರ ಮನೆಯಲ್ಲಿ ಒಂದು ಎಮ್ಮೆ, ಒಂದು ಕರು, ಎರಡು ಆಕಳು ಯಾವಾಗಲೂ ಇರುತ್ತಿದ್ದವು. ಬೆಳಗ್ಗೆ ಆರು ಗಂಟೆಗೆ ಹೋಗಿ ಅಂಗಳ ಬಾಗಿಲ ಕಸ ಗುಡಿಸಿ, ಸಗಣಿ ತುಂಬಿ ಅಡವಿಗೆ ಹಾಕಿ ಬರುವಷ್ಟರಲ್ಲಿ ಒಂಬತ್ತು ಗಂಟೆಯಾಗುತ್ತಿತ್ತು. ಮನೆಗೆ ಬಂದು ಅವರು ಕೊಟ್ಟಂತ ಉಪ್ಪಿಟ್ಟು ಅಥವಾ ತನಿಯ ರೊಟ್ಟಿ ತಿಂದು ಬೇರೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದೆವು. ಸಾಹುಕಾರರು ನಮಗೆ ಒಂದು ವರ್ಷಕ್ಕೆ ಎರಡು ಚೀಲ ಜೋಳ, ಸ್ವಲ್ಪ ಹೆಸರು ಕಾಳು, ಅಲಸಂದಿ ಕಾಳಗಳನ್ನು ಪಲ್ಯಕ್ಕೆ ಕೊಡುತ್ತಿದ್ದರು. ಆಗ ನಮಗೆ ಕೂಲಿಗೆ ಹೋದಾಗ ದಿನಕ್ಕೆ 15 ರೂಪಾಯಿ ಸಿಗುತ್ತಿತ್ತು. 10 ಗಂಟೆಯಿಂದ ಸಂಜೆ ಆರು ಗಂಟೆಯವರೆಗೆ ಇದೇ ಯಜಮಾನರ ಕೂಲಿ ಕೆಲಸಕ್ಕೆ ಹೋಗುತ್ತಿದ್ದೆವು. ನಮಗೆ ಉಷಾರಿಲ್ಲದಾಗಲೂ ಸಹಿತ ಸಗಣಿ ಉಗಿಯುವ ಕೆಲಸಕ್ಕೆ ಕರೆಯಲಿಕ್ಕೆ ಮನೆಗೆ ಬರುತ್ತಿದ್ದರು. ನಮಗೆ ಒಂದು ವೇಳೆ ಹುಷಾರಿಲ್ಲದೇ ಇದ್ದರೆ ಬೇರೆಯವರನ್ನ ಆ ಕೆಲಸಕ್ಕೆ ಕಳುಹಿಸುತ್ತಿದ್ದೆವು. ಈಗ ಕೆಲಸದಿಂದ ಬೇಸತ್ತು 'ಬಿಟ್ಟಿ ಚಾಕರಿ' ಕೆಲಸವನ್ನು ಆರು ವರ್ಷದಿಂದ ಬಿಟ್ಟಿದ್ದೇನೆ. ಏಕೆಂದರೆ ಎದ್ದ ಕೂಡಲೇ ಅವರ ಮನೆಗೆ ಹೋಗುವುದೆಂದರೆ ತುಂಬಾ ಬೇಸರವಾಗುತ್ತಿತ್ತು. ಅವರ ಮನೆಯಲ್ಲಿ ಸಗಣಿ ಕಲೆಸಬೇಕು, ಗೋದನಿ ಸಾರಿಸಬೇಕು. ಇವು ಪ್ರತಿದಿನದ ಕೆಲಸವಾದ್ದರಿಂದ ತುಂಬಾ ಬೇಸರವಾಗುತ್ತಿತ್ತು. ಹಬ್ಬ ಹರಿ ದಿನಗಳು ಬಂದಾಗ ಅವರ ಮನೆಯನ್ನು ಸಾರಿಸುವುದು, ಕಟ್ಟಿಗೆ ಹೊಡೆಯುವುದು, ಕುಳ್ಳು ಒಟ್ಟುವುದು, ಗಿರಣಿಗೆ ಹೋಗುವುದು, ಅವರ ತಿಪ್ಪೆಯನ್ನು ತಿರುವಿ ಹಾಕುವುದು. ಇಷ್ಟೆಲ್ಲಾ ಕೆಲಸವನ್ನು ನಮ್ಮಿಂದ ಮಾಡಿಸುತ್ತಿದ್ದರು. ದೀಪಾವಳಿ ಬಂದಾಗ ಮನೆಯಲ್ಲಿ ಸಗಣಿ ಪೂಜೆ ಮಾಡುತ್ತಾರೆ. ಅವರಿಗೆ ಸಗಣಿಯಿಂದ ಪಾಂಡವರನ್ನು ಬಡಿದು ಕೊಡುವುದು. ಅವರ ಮನೆಯಲ್ಲಿ ಯಾರಾದರೂ ತೀರಿಕೊಂಡ

ಹೊತ್ತಿನಲ್ಲಿ ಇಡೀ ಅವರ ಮನೆಯ ಎಲ್ಲ ಕೆಲಸವನ್ನು ನಾವೇ ಮಾಡಬೇಕಾಗುತ್ತದೆ. ಆ ಸಮಯದಲ್ಲಿ ಅವರು ನಮಗೆ ಗುರ್ತಾ (ಕಾಣಿಕೆಯಾಗಿ ಒಂದು ಸೀರೆ-ಕುಪ್ಪಸ, ಪಂಚೆ, ಶರಟು, ಟವಲ್) ಕೊಡುತ್ತಿದ್ದರು. ನಾವು ಏನಾದರೂ ಕೆಲಸ ಜಾಸ್ತಿ ಮಾಡಿದರೂ ಕೊಡುವುದು ಕಡಿಮೆ. ನಮಗೆ ಜಮೀನು ಇಲ್ಲ. ಈಗ ನಾವು ಧರ್ಮಸ್ಥಳದ ಗುಂಪು ಮಾಡಿಕೊಂಡು ಅದರಲ್ಲಿ 15 ಸಾವಿರ ಸಾಲ ಪಡೆದು ನಾಲ್ಕು ಆಡುಗಳನ್ನು ತೆಗೆದುಕೊಂಡಿರುತ್ತೇವೆ. ಆ ಆಡುಗಳನ್ನು ನನ್ನ ತಮ್ಮ ಮೇಯಿಸಿಕೊಂಡು ಬರುತ್ತಾನೆ. ನಾನು ಮರ ಕಡಿಯಲು ಹೋದರೆ ಒಂದು ದಿನಕ್ಕೆ 200 ರೂಪಾಯಿ ಕೂಲಿ ನನ್ನ ಹೆಂಡತಿಗೆ 150 ರೂಪಾಯಿ ಕೂಲಿ ಸಿಗುತ್ತದೆ. ನಾವು ಬೆಳಿಗ್ಗೆ 9.30ಕ್ಕೆ ಹೋಗಿ ಸಂಜೆ ಆರು ಗಂಟೆಗೆ ಮನೆಗೆ ಬರುತ್ತೇವೆ. ನಮಗೆ ಸರ್ಕಾರದ ಯಾವುದೇ ಸೌಲಭ್ಯ ಸಿಕ್ಕಿರುವುದಿಲ್ಲ. ಆದರೂ ಸಹಿತ ನಾವು ಈಗ ಸುಖ ಜೀವನ ನಡೆಸುತ್ತಿದ್ದೇವೆ."

**2.11.4 ಗಂಡಸು** – ವಯಸ್ಸು 40 ವರ್ಷ.

"ಶಾಲೆಗೆ ಹೋಗಿಲ್ಲ. ನನ್ನ ಹೆಂಡತಿಗೆ 35 ವರ್ಷ. ಇವಳೂ ಶಾಲೆ ಕಲಿತಿರುವುದಿಲ್ಲ. ನಾವಿಬ್ಬರೂ ಕೂಲಿ ಕೆಲಸ ಮಾಡುತ್ತಿದ್ದೇವೆ. ನಮಗೆ ಮೂರು ಜನ ಮಕ್ಕಳು. ಮೊದಲನೆಯವಳು ಮಗಳು 21 ವರ್ಷ. ಇವಳನ್ನು ಮಾಟೋಹಳ್ಳಿಗೆ ಮದುವೆಮಾಡಿ ಕೊಟ್ಟಿದ್ದೇವೆ. ಎರಡನೆಯ ಮಗಳು 10ನೇ ತರಗತಿಯಲ್ಲಿ ಓದುತ್ತಿದ್ದಾಳೆ. ಮೂರನೆಯ ಮಗಳು 1ನೇ ತರಗತಿಯಲ್ಲಿ ಓದುತ್ತಿದ್ದಾಳೆ. ನಮ್ಮ ಕುಟುಂಬದಲ್ಲಿ ನಮ್ಮ ಹಿರಿಯರು ಗೌಡರ ಮನೆಗಳಲ್ಲಿ ಬಿಟ್ಟಿ ಚಾಕರಿ ಮಾಡುತ್ತಿದ್ದು ನಾನು ಚಿಕ್ಕಂದಿನಿಂದಲೇ ಅವರ ಜೊತೆಯಲ್ಲಿ ಈ ಕೆಲಸ ಮಾಡುತ್ತಿದ್ದು ಈಗ ಎರಡು ವರ್ಷದಿಂದ ಬಿಟ್ಟುಕೂಲಿ ಮಾಡುತ್ತಿದ್ದೇನೆ. ನಾನು ಇಬ್ಬರ ಮನೆಗಳಲ್ಲಿ 'ಬಿಟ್ಟಿಚಾಕರಿ' ಮಾಡಿದ್ದೇನೆ. ನಾನು ಮುಂಜಾನೆ ಆರು ಗಂಟೆಯಿಂದ ಒಂಬತ್ತು ಗಂಟೆಯವರೆಗೆ ಕಸ ಗುಡಿಸುವುದು, ಸಗಣಿ ಎತ್ತುವುದು, ಬೆರಣಿ ತಟ್ಟುವುದು ಮತ್ತು ಸೌದೆ ಒಡೆಯುವ ಕೆಲಸ ಮಾಡುತ್ತಿದ್ದೆ. ಒಬ್ಬೊಬ್ಬ ಮಾಲೀಕರು ನನಗೆ ವರ್ಷಕ್ಕೆ ಒಂದು ಚೀಲ ಜೋಳ, ಸ್ವಲ್ಪ ಗೋದಿ ಮತ್ತು ಕಡಲೆಯನ್ನು ಕೊಡುತ್ತಿದ್ದರು. ನಾನು ಈ ಕೆಲಸವನ್ನು ಬಿಡಲು ಕಾರಣವೆಂದರೆ ಮಾಲೀಕರ ಮನೆಗಳಲ್ಲಿ ತುಂಬಾ ಎತ್ತು, ಎಮ್ಮೆಗಳಿದ್ದವು. ನನಗೆ ತುಂಬಾ ಕೆಲಸವಿದ್ದುದರಿಂದ ಮತ್ತು ಅವರು ನನಗೆ ನೀಡುತ್ತಿದ್ದ ಕಾಳು-ಕಡಿ ತುಂಬಾ ಕಡಿಮೆಯಿತ್ತು. ಇದರ ಜೊತೆಗೆ ಮಾಲೀಕರ ಮನೆಗಳಲ್ಲಿ ಹಬ್ಬ ಹರಿದಿನ, ಮದುವೆ, ಮನೆಗಳಲ್ಲಿ ಯಾರಾದರೂ ತೀರಿಕೊಂಡರೆ ಆಗ ಹೆಚ್ಚು ಹೆಚ್ಚು ಕೆಲಸಗಳನ್ನು ದಿನವಿಡಿ ಮಾಡಬೇಕಿತ್ತು. ಇದಕ್ಕೆ ಅವರು ಯಾವುದೇ ಪ್ರತಿಫಲವನ್ನು ನೀಡುತ್ತಿರಲಿಲ್ಲವಾದ್ದರಿಂದ ನಾನು 'ಬಿಟ್ಟಿ ಚಾಕರಿ'ಯನ್ನು ಬಿಟ್ಟೆನು. ಈಗ ನಾನು ನನ್ನ ಹೆಂಡತಿ ಕೂಲಿ ಕೆಲಸ ಮಾಡಿ ಮಕ್ಕಳನ್ನು ಓದಿಸುತ್ತಾ ಜೀವನ ಸಾಗಿಸುತ್ತಿದ್ದೇವೆ. ನಾವು ಕೂಲಿ ಕೆಲಸಕ್ಕೆ ಬೆಳಗ್ಗೆ 10 ಗಂಟೆಗೆ ಹೋಗಿ ಸಂಜೆ ಆರು ಗಂಟೆಗೆ ವಾಪಸ್ ಬರುತ್ತೇವೆ. ನನಗೆ ದಿನಕ್ಕೆ 150 ರೂಪಾಯಿ ಮತ್ತು ನನ್ನ ಹೆಂಡತಿಗೆ 100 ರೂಪಾಯಿ ವೇತನ ಸಿಗುತ್ತಿದೆ."

### 2.12 'ಬಿಟ್ಟಿ ಚಾಕ್ರಿ' ಬಗ್ಗೆ ಕ್ಷೇತ್ರಾಧ್ಯಯನದಿಂದ ಕಂಡುಕೊಂಡ ಸಂಗತಿಗಳು

ಹಲವಾರು ವಿಧಾನಗಳಿಂದ 'ಬಿಟ್ಟಿ ಚಾಕ್ರಿ'ಯ ಸ್ವರೂಪವನ್ನು ಈ ಅಧ್ಯಾಯದಲ್ಲಿ ಸೆರೆ ಹಿಡಿಯಲಾಗಿದೆ. ಅದು ದಿನನಿತ್ಯ ಕೊಟ್ಟಿಗೆಗೆ ಹಾಗೂ ಮನೆಯಂಗಳದ ಸ್ವಚ್ಛತೆಗೆ ಸಂಬಂಧಪಟ್ಟ ವಿವಿಧ ಸೇವೆಗಳನ್ನು ಒಳಗೊಂಡಿದ್ದು ಆ ಸೇವೆಗಳು ಕೇವಲ ಒಂದೆರಡು ಗಂಟೆಗೆ ಸೀಮಿತವಾಗಿದ್ದರೂ ಆದರಲ್ಲಿ ಅಸಹಾಯಕತೆ, ಅಭದ್ರತೆ, ಅಮಾನವೀಯತೆ, 'ಅವಮಾನೀಯತೆ', ಹಿಂಸೆ, ದೌರ್ಜನ್ಯ, ಕಟ್ಟಿ ಹಾಕಿಕೊಳ್ಳುವಿಕೆ ಮುಂತಾದ ಹಲವಾರು ಅಂಶಗಳು ಎದ್ದು ಕಾಣುತ್ತವೆ. ಅದು ನಮಗೆ ಇಷ್ಟರ ವರೆಗೆ ತಿಳಿದಿರುವ 'ಜೀತ ಕಲ್ಪನೆ'ಯಿಂದ ಹೊರತಾಗಿರಬಹುದು. ಆದರೆ ಅದರಲ್ಲಿ ಬರುವ ನಿರ್ಬಂಧ, ಶೋಷಣೆ ಮತ್ತು 'ಜೀತ ಕಲ್ಪನೆ'ಯಲ್ಲಿ ಒಳಗೊಂಡಿರುವ ಬಹುತೇಕ ಅಂಶಗಳನ್ನು ಅಲ್ಲಗಳೆಯುವಂತಿಲ್ಲ. ಅದನ್ನು ಆಚರಿಸುವವರ ಬದುಕು ಮಾತ್ರ ನೆಮ್ಮದಿಯಿಂದಿಲ್ಲ. ತೀರ ಬಡತನದಿಂದ ತುಂಬಿ ತುಳುಕುವಂತಿರುವುದು. ಅದು ಮೂಲ ಸೌಕರ್ಯಗಳಿಂದ ಕೂಡಿಲ್ಲ. ಅದಕ್ಕೆ ಕನಿಷ್ಠ ಘನತೆಯ ಗಂಧಗಾಳಿಯಿಲ್ಲ. ಅದು ಹಲವಾರು ಅನಿಷ್ಟಗಳ ಕೂಪವೆಂತಲೇ ಪರಿಗಣಿಸಬಹುದು.

ಜಾತಿ ವ್ಯವಸ್ಥೆಯಲ್ಲಿ ದಲಿತರ ಇರುವಿಕೆ ಕೇವಲ ಸ್ಥಾನಮಾನದ ಪ್ರಶ್ನೆಯಲ್ಲ. ಸ್ಥಾನಮಾನದಲ್ಲಿ ಅತ್ಯಂತ ಕೆಳಮಟ್ಟಕ್ಕೆ ತಳ್ಳಲಟ್ಟು ಸಮಾಜದ ಎಲ್ಲಾ ಸಂಪತ್ತು – ಸವಲತ್ತುಗಳಿಂದ ಅವರನ್ನು ವಂಚಿತರನ್ನಾಗಿಸಿ, ದುಡಿಮೆಯೇ ಅವರ ಜೀವನದ ಆಸ್ತಿಯನ್ನಾಗಿ ಮಾಡಿದರೂ ಆ ದುಡಿಮೆಯನ್ನೇ ತುಚ್ಛೀಕರಿಸಿ ಅದಕ್ಕೆ ಅತ್ಯಂತ ನಿಕೃಷ್ಟ ಬೆಲೆ ಕಟ್ಟಿದ್ದು ಅವರ ಜೀವನದ ಸಾರವೆಂದು ತಿಳಿದುಕೊಳ್ಳಬಹುದು. ಜೀತ ಪದ್ಧತಿಯಂತೆ 'ಬಿಟ್ಟಿ ಚಾಕ್ರಿ'ಯೂ ದಲಿತರ ಬದುಕಿನ ಅಥವಾ ಅಸ್ಪೃಶ್ಯತೆಯ ಈ ಮುಖವನ್ನು ಅನಾವರಣ ಮಾಡುತ್ತದೆ. ಸಾಮಾಜಿಕ – ಆರ್ಥಿಕ ಎಳೆಗಳ ಬೆಸುಗೆಯನ್ನು ಜೀತದಂತೆ 'ಬಿಟ್ಟಿ ಚಾಕ್ರಿ'ಯೂ ಸ್ಪಪಡಿಸುತ್ತದೆ. ದಲಿತರ ಹೀನಾಯ ಪರಿಸ್ಥಿತಿಗೆ ಶೋಷಣೆ ಮೂಲವಾಗಿದ್ದು ಸಮಾಜದಲ್ಲಿಯ ಕೀಳು ಸ್ಥಾನಮಾನಗಳನ್ನು ಅದನ್ನು ಭದ್ರಪಡಿಸುತ್ತದೆ. ಸಂವಾದೀಯ ಭೌತಿಕತೆ ಪ್ರಕಾರ ಆರ್ಥಿಕ ಪರಿಸ್ಥಿತಿಯಲ್ಲಿಯ ಆಮೂಲಾಗ್ರ ಬದಲಾವಣೆಗೆ ಚಾಲನೆ ಕೊಟ್ಟರೂ ಸಾಮಾಜಿಕ ಪರಿಸ್ಥಿತಿ ಅದನ್ನು ನಿಯಂತ್ರಿಸುತ್ತದೆ. ಆದರೆ ಸಾಮಾಜಿಕ ಸ್ಥಾನಮಾನದ ಉನ್ನತೀಕರಣಕ್ಕೆ, ಘನತೆಗೆ, ಮಾನಸಿಕ ವಿಕಸನಕ್ಕೆ ಮಹತ್ವ ಕೊಟ್ಟರೂ ಆರ್ಥಿಕ ಪರಿಸ್ಥಿತಿಗಳನ್ನು ಉನ್ನತೀಕರಿಸುವುದೂ ಅಷ್ಟೇ ಮುಖ್ಯ. ಮಾನಸಿಕ ವಿಕಸನ, ವ್ಯಕ್ತಿ ಘನತೆಗಳು ಅಮೂರ್ತ ಸ್ವರೂಪದ್ದಾಗಿ ಅವನ್ನು ಅಳೆಯಲು ಕಷ್ಟ. ಆರ್ಥಿಕ ಭದ್ರತೆ ಮೂರ್ತ ರೂಪದ್ದು. ಅದನ್ನು ಪಡೆಯುತ್ತಲೇ ಘನತೆಯನ್ನೂ ರಕ್ಷಿಸುವ ಕೆಲಸ ಮಾಡಬೇಕಾಗುತ್ತದೆ.

ಆದರೆ ಬದಲಾವಣೆಯನ್ನು 'ಬಿಟ್ಟಿ ಚಾಕ್ರಿ'ಗೊಳಗಾದ ಎಲ್ಲಾ ಜನರು ಅಷ್ಟು ಸಲೀಸಾಗಿ ಬಯಸುವುದಿಲ್ಲ. ಅವರು ಅನುಸರಿಸಿಕೊಂಡು ಬಂದ ಜೀವನ ವಿಧಾನಗಳು ಅವರಿಗೆ ಅಭತ್ರೆಯಲ್ಲಿ ಭದ್ರತೆಯನ್ನು ಒದಗಿಸುತ್ತವೆ. ಆ ಹುಸಿ ಭದ್ರತೆಯಳಗೆ ಬಡತನ, ಆತಂಕ, ಅವಮಾನ ಹುದುಗಿದ್ದರೂ ನಿಜವಾದ ಭದ್ರತೆ, ಘನತೆ, ನೆಮ್ಮದಿಯಿಂದ ಬಾಳುವ ಸಾಧ್ಯತೆಯನ್ನು ಅವರು ಸುಲಭವಾಗಿ ಗ್ರಹಿಸುವುದಿಲ್ಲ.

ಹಳೆಯ ವ್ಯವಸ್ಥೆಯನ್ನು ಬದಲಾಯಿಸಿ ಹೊಸ ಬದುಕಿನ ಸಾಧ್ಯತೆಯನ್ನು ನಮ್ಮ ಸಂವಿಧಾನ ತೋರಿಸುತ್ತದೆ ಎಂಬ ತಿಳುವಳಿಕೆಯೂ ಅವರಿಗಿಲ್ಲ. ಅದನ್ನು ಸಾಧ್ಯ ಮಾಡಿಸುವಂತಹ ಶಿಕ್ಷಣದ ಲಾಭ ಅವರಿಗೆ ಸಿಗುತ್ತಿಲ್ಲ.

'ಬಿಟ್ಟಿ ಚಾಕ್ರಿ' ಬಗ್ಗೆ ಅಸಮಾಧಾನ ಮಡುಗಟ್ಟಿದ್ದರೂ ಅದರ ವಿರುದ್ಧ ಪ್ರತಿಭಟನೆ ಸಣ್ಣ ಸಣ್ಣ ಪ್ರಮಾಣಗಳಲ್ಲಾದರೂ ಅಧ್ಯಯನದ ಮೂರು ಊರುಗಳಲ್ಲಿ ಬೆಳಕಿಗೆ ಬಂದಿಲ್ಲ. 'ಅಬಲರ ವಿರೋಧದ ಅಸ್ತ್ರ'ಗಳನ್ನು ಇನ್ನೂ ಪರಿಗಣಿಸಬೇಕಾಗಿದೆ. ಆದರೆ ಪ್ರತಿರೋಧ ಇದ್ದೇ ಇದೆ, ಅದು ಕೂಡಾ ವ್ಯಾಪಕವಾಗಿ ಇದೆ ಎಂಬುದು ಅಧ್ಯಯನದಲ್ಲಿ ವ್ಯಕ್ತವಾದ ಹಲವಾರು ಮಂದಿಯ ಅನುಭವಗಳಿಂದ ತಿಳಿಯುತ್ತದೆ. ಅಧ್ಯಯನದ ಅವಧಿಯ ಸ್ವಲ್ಪ ಕಾಲದ ಹಿಂದೆ 2010ರಲ್ಲಿ ಬೆಳಗಾವಿ ಜಿಲ್ಲೆಯ ಪಕ್ಕದಲ್ಲಿರುವ ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ನಾಯಕನೂರಿನ ಇಡೀ ದಲಿತ ಕೇರಿಯವರು 'ಬಿಟ್ಟಿ ಚಾಕ್ರಿ' ಮಾಡುವುದನ್ನು ಪ್ರತಿಭಟಿಸಿ ಸಂಘರ್ಷಕ್ಕೆ ಇಳಿದಾಗ ಹೊರ ಜಗತ್ತಿಗೆ ಮತ್ತು ಸರ್ಕಾರಕ್ಕೆ ಅದರ ಬಿಸಿ ಮುಟ್ಟಿ ಅವರೆಲ್ಲರಿಗೂ ಉತ್ತಮ ಪರ್ಯಾಯ ಜೀವನ ನಡೆಸಲು ಅವಕಾಶ ಮಾಡಿಕೊಟ್ಟಿದ್ದು ಪ್ರತಿರೋಧ ಮತ್ತು ಪ್ರತಿಭಟನೆಯ ಸಾಧ್ಯತೆಗಳ ಬಗ್ಗೆ ಉತ್ತೇಜನ ಕೊಡುತ್ತದೆ.

ಅದೇ ರೀತಿ ಬೆಳಗಾವಿ ಜಿಲ್ಲೆಯದೇ ಅಥಣಿ ತಾಲೂಕಿನ ಪಿ. ನಾಗೇನಹಳ್ಳಿಯಲ್ಲಿ ಮಾರ್ಚ್ 24, 2012ರಂದು 'ಬಿಟ್ಟಿ ಚಾಕ್ರಿ' ಮಾಡುವ 22 ಮಂದಿ ಬೀದಿಗಿಳಿದು ಪ್ರತಿಭಟಿಸಿಲು ತೊಡಗಿದ ದಿನದಿಂದಲೇ ಸ್ಥಳೀಯ ಅಧಿಕಾರಿಗಳು ಸ್ಪಂಧಿಸಿ ಕಾನೂನಿನನ್ವಯ ಕ್ರಮ ತೆಗೆದುಕೊಳ್ಳಲು ಮೇಲಧಿಕಾರಿಗಳಿಗೆ ಶಿಫಾರಸ್ಸು ಮಾಡಿದ್ದು ಅಲ್ಲದೇ ಖಾಲಿಯಿದ್ದ ಸರ್ಕಾರಿ ಕಟ್ಟಡವೊಂದರಲ್ಲಿ ಪ್ರತಿಭಟನಕಾರರಿಗೆ ಅವಕಾಶ ಮಾಡಿಕೊಟ್ಟಿದ್ದು ಅಧಿಕಾರಿಗಳ ಕರ್ತವ್ಯ ಪ್ರಜ್ಞೆ ಮಾತ್ರವಲ್ಲ ಸರ್ಕಾರವೂ ಮಾನವೀಯತೆಯನ್ನು ಪ್ರದರ್ಶಿಸಬಹುದೆಂದು ಎತ್ತಿತೋರಿಸುತ್ತದೆ. ಅದೇ ರೀತಿ ಸ್ಥಳೀಯ ಮಠಾಧೀಶರೊಬ್ಬರು ಸುದೀರ್ಘ ಹೋರಾಟದಲಿದ್ದ ಪ್ರತಿಭಟನಕಾರರಿಗೆ ದಿನನಿತ್ಯ ಊಟ ಒದಗಿಸಿ ನೆರವು ನೀಡುತ್ತಿದ್ದುದು ಧಾರ್ಮಿಕ ವ್ಯವಸ್ಥೆಯೂ ಅನ್ಯಾಯ, ಶೋಷಣೆ ವಿರುದ್ಧ ಧ್ವನಿ ಎತ್ತಲು ಸಾಧ್ಯವಿದೆ ಎಂದು ತೋರಿಸುತ್ತಿತ್ತು. ಆದರೆ ಅಷ್ಟೇ ಅವುಗಳೆಲ್ಲಕಿಂತಲೂ ಇನ್ನೂ ಹೆಚ್ಚಿನ ಬೇಸರದ ಸಂಗತಿ ಏನೆಂದರೆ ಜಿಲ್ಲೆಯ ಅತ್ಯಂತ ಮೇಲಧಿಕಾರಿಯು ಈ ಯಾವುದೇ ಪ್ರತಿಭಠನೆ, ನ್ಯಾಯದ ಕೂಗುಗಳಿಗೆ ಕಿವುಡಾಗಿ, ಬಲಿಷ್ಠರ ಒತ್ತಡಕ್ಕೆ ಮಣಿದು ಕೆಳಮಟ್ಟದ ಅಧಿಕಾರಿಗಳಿಗೆ ಯಾವುದೇ ಸ್ಪಂದನೆ ಕೊಡಲು ನಿರಾಕರಿಸಿದ್ದು ಸರ್ಕಾರಿ ವ್ಯವಸ್ಥೆಯ ಇತಿಮಿತಿಗಳನ್ನೂ ಬಯಲಿಗೆಳೆಯುತ್ತದೆ. 'ಬಿಟ್ಟಿ ಚಾಕ್ರಿ' ಮಾಡಿಸುತ್ತಿದ್ದ ಬಲಿಷ್ಠ ವರ್ಗದವರು ಜೀತದಾಳುಗಳಿಗೆ ಪರವಾಗಿರುವ ಕಾನೂನನ್ನೇ ಬಳಸಿ ಉಚ್ಚ ನ್ಯಾಯಾಲಯದ ಮೂಲಕ 'ಬಿಟ್ಟಿ ಚಾಕ್ರಿ' ಮಾಡುವವರಿಗೆ ಜೀತ ಕಾನೂನಿನ ಪ್ರಕಾರ ನ್ಯಾಯ ಕೊಡಿಸಲು ವಿಚಾರಣೆ ಮಾಡುವ ಮಧ್ಯ ಮಟ್ಟದ ಅಧಿಕಾರಿ ಮೇಲೆ 2014ರಲ್ಲಿ ತಡೆಯಾಜ್ಞೆ ತಂದರು. ಇದು ನ್ಯಾಯಾಲಯದ, ನ್ಯಾಯಾಂಗದ ಇತಿಮಿತಿಯನ್ನೂ ಸ್ಪಷ್ಟ ಪಡಿಸುತ್ತದೆ. ಆದರೆ ಪ್ರತಿಭಟನೆ ನಿರತವಾಗಿದ್ದ ದಿನದಿಂದಲೇ ಜೀತ ನಿರ್ಮೂಲನೆಗೆ ಪಣ ತೊಟ್ಟಿದ್ದ ಸಂಘಟನೆಯೊಂದು ಪ್ರತಿಭಟನಾಕಾರರ ಜೊತೆ ನಿಂತು ಅವರಿಗೆ ರಕ್ಷಣೆ ಮತ್ತು ಅವರ

ಪರವಾಗಿ ನ್ಯಾಯ ಒದಗಿಸುವುದರಲ್ಲಿ ದಾರಿ ತೋರಿಸುತ್ತಿದ್ದುದರಿಂದ 2015ರಲ್ಲಿ 22 ಮಂದಿಯಲ್ಲಿ 11 ಮಂದಿಗೆ ಜೀತದಿಂದ ಬಿಡುಗಡೆ ಪತ್ರ ಸಿಗುವಂತಾಯಿತು. ಉಳಿದವರ ಹಕ್ಕು ರಕ್ಷಣೆಯ ಬಗ್ಗೆ ಪ್ರಯತ್ನಗಳು ಮುಂದುವರಿಯುತ್ತಿವೆ.

'ಬಿಟ್ಟಿ ಚಾಕ್ರಿ'ಯಲ್ಲಿಯೂ ಒಂದು ರೀತಿಯ ಸ್ತ್ರೀಕರಣವನ್ನು ನಾವು ಕಾಣಬಹುದು. 'ಬಿಟ್ಟಿ ಚಾಕ್ರಿ'ಯನ್ನು ಹೊಂದಿಕೊಂಡು ಹೋಗಬೇಕೆಂದು ಅದರಲ್ಲಿ ಅಷ್ಟಾಗಿ ತೊಡಗಿಸಿಕೊಳ್ಳದ ಗಂಡಸರು ಸಾಮಾನ್ಯವಾಗಿ ಇಷ್ಟಪಡುತ್ತಿದ್ದರೂ ಅದನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು, ಅದು ಒಂದು ಅವಮಾನದ ಬದುಕು ಎಂದು ಹೆಚ್ಚಾಗಿ ಬಯಸುವವರು ಹೆಂಗಸರು.

ಮೂರೂ ಊರುಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ದಲಿತರು ಶಿಕ್ಷಣದಿಂದ ದೊಡ್ಡ ಮಟ್ಟದಲ್ಲಿ ವಂಚಿತರಾಗಿದ್ದರೂ ಅವರಲ್ಲಿ ಅಲ್ಪ ಸ್ವಲ್ಪ ಶಿಕ್ಷಣ ಪಡೆದ ಕೆಲವರಾದರೂ 'ಬಿಟ್ಟಿ ಚಾಕ್ರಿ' ಜೀವನಕ್ಕೆ ಹೇಸಿ ಪರ್ಯಾಯ ಬದುಕನ್ನು ಕಾಣುತ್ತಿದ್ದಾರೆ. ಇದು ಶಿಕ್ಷಣದ ಸಾಧ್ಯತೆಯನ್ನು ತೋರಿಸುತ್ತದೆ. ಆಸ್ತಿಯ ಮರುಹಂಚಿಕೆಯ ಮರೀಚಿಕೆಯ ಮುಂದೆ ಗುಣಮಟ್ಟದ ಶಿಕ್ಷಣದಿಂದ ಆಗಬಹುದಾದ ದೊಡ್ಡ ಪ್ರಮಾಣದ ಬದಲಾವಣೆಗೆ ಮೂರು ಊರುಗಳಲ್ಲಿ ಅಲ್ಪ ಸ್ವಲ್ಪ ಶಿಕ್ಷಣ ಪಡೆದು ಹೊಸ ಬದುಕನ್ನು ಕಟ್ಟಿಕೊಳ್ಳಲು ಕೆಲವು ಮಂದಿಯಾದರೂ ಹಂಬಲಿಸುತ್ತಿರುವುದು ಆಶಾದಾಯಕವಾಗಿದೆ.

ದಲಿತರ 'ಬಿಟ್ಟಿ ಚಾಕ್ರಿ'ಯ ಬದುಕನ್ನು ಬೆಳಗಾವಿ ಹಾಗೂ ಬೈಲಹೊಂಗಲದ ಉದಾತ್ತ ಇತಿಹಾಸಕ್ಕೆ ಹೋಲಿಸಿದರೆ ಭಾರತೀಯ ಸಮಾಜದ ಒಂದು ವಿಪರ್ಯಾಸ ಸ್ಪಷ್ಟವಾಗುತ್ತದೆ. ಒಂದು ಕಡೆ ಬ್ರಿಟಿಷರ ವಿರುದ್ಧ ಸ್ವತಂತ್ರ ಆಡಳಿತಕ್ಕೆ ಹೋರಾಡಿದ ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಬೆಳವಡಿ ಮಲ್ಲಮ್ಮ ಮುಂತಾದವರು ಬೈಲಹೊಂಗಲದಲ್ಲೇ ಮೂಡಿಬಂದ ವೀರಮಣಿಗಳಾದರೆ ಆ ಸ್ವತಂತ್ರ ಆಡಳಿತದ ಒಳಗೆ ಅಸ್ವತಂತ್ರ ದಲಿತರ ಬದುಕನ್ನು ಪ್ರಶ್ನೆಯಿಲ್ಲದೇ ಒಪ್ಪಿಕೊಂಡಿರುವ ಅನೌಚಿತ್ಯವನ್ನು ನಾವು ಗಮನಿಸಬಹುದು. ಆರ್ಥಿಕ ಪ್ರಗತಿಗೆ ಸಾಧನವಾಗಿರುವ ಅಣೆಕಟ್ಟೊಂದು ಬೈಲಹೊಂಗಲದ ಪಕ್ಕದಲ್ಲಿರುವ ಸೌದತ್ತಿಯಲ್ಲಿ ಕಟ್ಟಲ್ಪಟ್ಟಿದ್ದು ಅದರಿಂದ ತಾಲೂಕಿಗೆ ಹೆಚ್ಚಿನ ಪ್ರಯೋಜನವಾದರೂ ದಲಿತರ ಬದುಕನ್ನು ಅಷ್ಟಾಗಿ ಅದು ಮುಟ್ಟಿಲ್ಲ. ಜಾಲಿಕೊಪ್ಪದಿಂದ ಸ್ಥಳಾಂತರಗೊಂಡ ದಲಿತರ ಬದುಕಿನಲ್ಲಿ ದೊಡ್ಡದಾದ ಮನೆನಿವೇಶನಗಳು ಮತ್ತು ಕನಿಷ್ಠ ಸೌಕರ್ಯದ ಮನೆಗಳು ಬಿಟ್ಟರೆ ಬೇರೇನೂ ಅವರಿಗೆ ಹೇಳಿಕೊಳ್ಳುವ ಪ್ರಯೋಜನವಾಗಿಲ್ಲ. 'ಬಿಟ್ಟಿ ಚಾಕ್ರಿ' ಹಿಂದಿನಂತೆ ಮುಂದುವರಿಯುತ್ತಿದೆ. ಇದಕ್ಕೆ ವಿರುದ್ಧವಾಗಿ ದಲಿತರಲ್ಲದ ಭೂಮಿದಾರರ ಆರ್ಥಿಕ ಪ್ರಗತಿ ದೊಡ್ಡಮಟ್ಟದಲ್ಲಾಗಿದೆ.

# ಅಧ್ಯಾಯ 3

## 'ಬಿಟ್ಟಿ ಚಾಕ್ರಿ'ಯಂತಿರುವ ಪದ್ಧತಿಗಳೊಡನೆ ಹೋಲಿಕೆ

# ಅಧ್ಯಾಯ ಮೂರು

## 'ಬಿಟ್ಟಿ ಚಾಕ್ರಿ'ಯಂತಿರುವ ಬೇರೆ ಪದ್ಧತಿಗಳೊಡನೆ ಹೋಲಿಕೆ

### 3.1 'ಬಿಟ್ಟಿ ಚಾಕ್ರಿ'ಯಂತಿರುವ ಬೇರೆ ಪದ್ಧತಿಗಳೊಡನೆ ಹೋಲಿಕೆಯ ಮಹತ್ವ

ಕರ್ನಾಟಕದ ಉತ್ತರ ಜಿಲ್ಲೆಗಳಲ್ಲಿ ಈಗಲೂ ಕಂಡುಬರುವ 'ಬಿಟ್ಟಿ ಚಾಕ್ರಿ' ಪದ್ಧತಿಯನ್ನು ಖಚಿತವಾಗಿ ಗ್ರಹಿಸಲು ಇತರ ಪ್ರದೇಶ ಅಥವಾ ರಾಜ್ಯಗಳಲ್ಲಿ ಅದನ್ನು ಹೋಲುವಂತಹ ಕೆಲವು ಪದ್ಧತಿಗಳಾದ 'ವೆಟ್ಟಿ ಚಾಕಿರಿ', 'ಹಿಟ್ಟಿ ಬಿಟ್ಟಿ ಚಾಕರಿ', 'ಬಲೂತ', 'ಜಜ್‌ಮನಿ' ಮತ್ತು 'ಬರ್ತನ್' ಪದ್ಧತಿಗಳ ಮುಖ್ಯ ಅಂಶಗಳನ್ನು ಈ ಅಧ್ಯಾಯದಲ್ಲಿ ಕೊಡಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಹೆಸರಿನ ಸಾಮ್ಯತೆಯ ದೃಷ್ಟಿಯಿಂದ ಮಾತ್ರವಲ್ಲ ಪರಿಕಲ್ಪನೆ ಮತ್ತು ಸಾಮಾಜಿಕ ವ್ಯವಸ್ಥೆಯ ದೃಷ್ಟಿಯಿಂದಲೂ ಆಂಧ್ರ ಪ್ರದೇಶದಲ್ಲಿ ಚಾಲ್ತಿಯಲ್ಲಿದ್ದ ಮತ್ತು ಈಗಲೂ ಇರಬಹುದಾದ 'ವೆಟ್ಟಿ ಚಾಕಿರಿ' ಮತ್ತು ಕರ್ನಾಟಕದ ಕೊಡಗಿನಲ್ಲಿ ಚಾಲ್ತಿಯಲಿದ್ದ 'ಹಿಟ್ಟಿ ಬಿಟ್ಟಿ ಚಾಕರಿ' ಮುಖ್ಯವೆನಿಸುತ್ತವೆ. ಸಾಮಾಜಿಕ ಅಥವಾ ಜಾತಿ ವ್ಯವಸ್ಥೆಯ ಭಾಗವಾಗಿ 'ಬಿಟ್ಟಿ ಚಾಕ್ರಿ'ಯನ್ನು ಅರ್ಥೈಸಲು ಮಹಾರಾಷ್ಟ್ರದ 'ಬಲೂತ', ಮೊದಲು ಉತ್ತರ ಪ್ರದೇಶದಲ್ಲಿ ಗುರುತಿಸಿದ್ದು ತದನಂತೆ ಇಡೀ ಭಾರತದಲ್ಲಿ ಪ್ರಚಲಿತವಾಗಿದೆಯೆಂದು ಅಭ್ಯಸಿಸಲಾದ 'ಜಜ್‌ಮನಿ' ಪದ್ಧತಿಗಳು ಒಂದು ಆಯಾಮ ವನ್ನು ನೀಡುತ್ತವೆ. ಒಡಿಶಾದ 'ಬರ್ತನ್' ಪದ್ಧತಿಯು ಈ ಅಂಶಗಳ ಜೊತೆಗೆ ಕಾನೂನಿನ ದೃಷ್ಟಿಯಿಂದ 'ಬಿಟ್ಟಿ ಚಾಕ್ರಿ'ಯ ಬಗ್ಗೆ ಒಂದು ನಿಲುವಿಗೆ ಬರಲು ಸಹಕಾರಿಯಾಗುತ್ತದೆ.

### 3.2 ತೆಲಂಗಾಣದ 'ವೆಟ್ಟಿ ಚಾಕಿರಿ'

'ವೆತ್' ಅಥವಾ 'ವೆಥಿ' ಅಥವಾ 'ವೆಟ್ಟಿ ಚಾಕಿರಿ' ಶಬ್ದಗಳ ಮೂಲ ಸಂಸ್ಕೃತದ 'ವಿಷ್ಟಿ' ಎಂಬ ಪದ (ಆಪ್ಟೆ: 1982: 525). ವಿಷ್ಟಿಗೆ ಸಂಸ್ಕೃತದಲ್ಲಿ ಕೆಲಸ, ಕೂಲಿ, ಬಾಡಿಗೆ, ಕೂಲಿ ಕೊಡದೇ ಮಾಡಿದ [ಪುಕ್ಕಟೆ] ದುಡಿಮೆ ಎಂಬ ಅರ್ಥಗಳಿವೆ[17]. ಪುಕ್ಕಟೆ ದುಡಿಮೆ ಅರ್ಥದಲ್ಲೇ 'ವೆಟ್ಟಿ ಚಾಕಿರಿ' ಪದವನ್ನು ತೆಲುಗಿನಲ್ಲಿ ಬಳಸಲಾಗುತ್ತಿದೆ ಎಂದು ನಾವು ತಿಳಿದು ಕೊಳ್ಳಬಹುದು. ಇದನ್ನು 'ಬೇಗಾರ್' (ಪರ್ಶಿಯನ್‌ನಲ್ಲಿ) ಎಂತಲೂ ಕರೆಯುತ್ತಿದ್ದರು[18]. 'ವೆಟ್ಟಿ ಚಾಕಿರಿ' ಅಂದರೆ ಬಲಾತ್ಕಾರದ ಅಥವಾ ಕೂಲಿ ಕೊಡದೆ ಮಾಡಿದ ದುಡಿಮೆ ಎಂದರ್ಥ[19]. 'ವೆಟ್ಟಿ'ಯ ಇನ್ನೊಂದು ರೂಪವಾದ 'ವೇತ್' ಪದವನ್ನು ಬಲಾತ್ಕಾರದ ದುಡಿಮೆಗೆ 18ನೇ ಶತಮಾನದ ಮರಾಠ ಸಾಮ್ರಾಜ್ಯದಲ್ಲಿರುವುದನ್ನೂ ಹಿರೊಷಿ

---

17 ವಿಷ್ಟಿಗೆ ವಾಮನ್ ಆಪ್ಟೆಯವರ ಸಂಸ್ಕೃತ-ಇಂಗ್ಲಿಷ್ ಶಬ್ದಕೋಶದಲ್ಲಿ ಮುಂದೆ ಇಂಗ್ಲಿಷ್‌ನಲ್ಲಿ ಕೊಟ್ಟಿರುವ ಹಲವಾರು ಅರ್ಥಗಳನ್ನು ಸೂಚಿಸಲಾಗಿದೆ. ಮಹಾಪ್ರಬಂಧದಲ್ಲಿ ಮೇಲೆ 2, 3 ಮತ್ತು 4ನೇ ಅರ್ಥಗಳನ್ನು ಉದ್ಧರಿಸಿದ್ದರೂ 1, 5 ಮತ್ತು 6ನೇ ಅರ್ಥಗಳು ಪ್ರತ್ಯೇಕವಾಗಿ 6ನೇ ಅರ್ಥ ಕುತೂಹಲಕಾರಿ. **ವೆಟ್ಟಿ ಚಾಕಿರಿ ಮತ್ತು ಬಿಟ್ಟಿ ಚಾಕ್ರಿಗೂ ದಂಡನೆಗೊಳಗಾಗಿ ನರಕದಲ್ಲಿಯ ವಾಸಕ್ಕೂ ಸಾಮ್ಯತೆ ಇದ್ದಂತೆ ಇದೆ.** ವಿಷ್ಟಿ = 1. Pervading. 2. An act, occupation. 3. Hire, wages. 4. Unpaid labour. 5. Sending. 6. Residence in hell to which one is condemned (Apte 1982: 525).

18 ಅಂತರ್ಜಾಲ ಕೊಂಡಿ 1

19 ಅಂತರ್ಜಾಲ ಕೊಂಡಿ 2

ಘುಕಾಝೂವರವರು ದಾಖಲೆಗಳ ಮುಖಾಂತರ ವಿಶ್ಲೇಷಿಸಿದ್ದಾರೆ. ಅಲ್ಲಿ ಅದನ್ನು 'ವೇತ್' ಅಥವಾ ಬೇಗಾರ್' ಅಥವಾ ವೇತ್ ಬೇಗಾರ್' ಎಂತಲೂ ಕರೆಯುತ್ತಿದ್ದರು. (ಘುಕಾಝೂವಾ 1998: 132, 158).

ಇನ್ನೊಂದು ವಿವರಣೆಯ ಪ್ರಕಾರ 'ವೆಟ್ಟಿ' ಎನ್ನುವುದು ಒಂದು ತೆರಿಗೆಯ ರೂಪ. ಆಂಧ್ರ ಪ್ರದೇಶದಲ್ಲಿ ನಾನ್ನೂರಕ್ಕೂ ಹೆಚ್ಚಿನ ತೆರಿಗೆಗಳಿದ್ದವು. ಹೆಚ್ಚಾಗಿ ಉದ್ಧರಿಸಲ್ಪಡುತ್ತಿದ್ದ ತೆರಿಗೆಗಳಲ್ಲಿ ಒಂದು, 'ವೆಟ್ಟಿ' – ಇದನ್ನು ಹಣರೂಪದಲ್ಲಿ ಪಡೆಯುತ್ತಿರಲಿಲ್ಲ. ಬದಲಾಗಿ ಬಲಾತ್ಕಾರದ ದುಡಿಮೆ ರೂಪದಲ್ಲಿ ಪಡೆಯಲಾಗುತ್ತಿತ್ತು[20].

ಆಂಧ್ರ ಪ್ರದೇಶದ ಅತ್ಯಂತ ಕೆಳಮಟ್ಟದ ಭೂ ತೆರಿಗೆ ಅಧಿಕಾರಿಗಳ ಹೆಸರುಗಳು 'ವೆಟ್ಟಿ'ಯಿಂದ ಕೊನೆಗೊಳ್ಳುತ್ತಿದ್ದವು. ಭೂ ತೆರಿಗೆ ಇಲಾಖೆಯು 'ಪುರವುವಾರಿ', 'ಇತಿನೈಕ್ಕಲ' ಮತ್ತು 'ಕಂಕನಿ' ಎಂಬುವವರಿಂದ ಮೇಲ್ವಿಚಾರಣೆಗೆ ಒಳಲ್ಪಟ್ಟಿತ್ತು. ಮೇಲಿನ ಮೂವರು ಮಂದಿ ಅಧಿಕಾರಿಗಳು ತೆರಿಗೆ ಇಲಾಖೆಯ ಅತ್ಯಂಂತ ಮೇಲ್ಮಟ್ಟದ ಅಧಿಕಾರಿಗಳೆಂದು ಪರಿಗಣಿಸಲ್ಪಟ್ಟಿದ್ದರು. ಈ ಇಲಾಖೆಯ ಕೆಳಮಟ್ಟದ ಇತರ ಅಧಿಕಾರಿಗಳೆಂದರೆ: 'ವಾರಿಪೊಟ್ಟಗಮ್', 'ವಾರಿಪೊಟ್ಟಗಕ್–ಕನಕ್ಕು', 'ವಾರಿಯಿಲಿಡು', 'ಮೂಗವೆಟ್ಟಿ' ಮತ್ತು 'ಕಿಲ್–ಮೂಗವೆಟ್ಟಿ'[21].

'ವೆಟ್ಟಿ ಚಾಕಿರಿ' ಮಾಡುವವರನ್ನು 'ವೆಟ್ಟಿ ಮಾದಿಗಾಳ್ಳು' ಮತ್ತು 'ವೆಟ್ಟಿ ಮಾಲೊಳ್ಳು' ಎಂದೂ ಕರೆಯುತ್ತಿದ್ದರು. ದೊಡ್ಡ ದೊಡ್ಡ ಜಮೀನ್ದಾರರಾದ 'ಡೊರ'ರವರಿಗೆ (ಹಳ್ಳಿಗಳ ಯಜಮಾನರು ಅಥವಾ ಪ್ರಭುಗಳು) ಅವರು ಪುಕ್ಕಟೆಯಾಗಿ ದುಡಿಯಬೇಕಾಗಿತ್ತು. ಅವರ ಇಚ್ಛೆ ಪ್ರಕಾರ ದುಡಿಯಬೇಕಾಗಿತ್ತು. ಅವರು ಇಷ್ಟಪಟ್ಟ ದಿವಸ ದುಡಿಯಬೇಕಾಗಿತ್ತು. ಅವರ ಕರ್ತವ್ಯಗಳನ್ನು ನಿರ್ದಿಷ್ಟಗೊಳಿಸಿರಲಿಲ್ಲ. ಸಾಮಾನ್ಯವಾಗಿ ಅವು ವ್ಯವಸಾಯಕ್ಕೆ, ಮನೆಯ ಹೊರಗೆ ಮತ್ತು ವೈಯಕ್ತಿಕ ಅಗತ್ಯಗಳಿಗೆ ಸಂಬಂಧಪಟ್ಟಿದ್ದವು. ವ್ಯವಸಾಯಕ್ಕೆ ಕೂಲಿಯಾಳುಗಳ ಅತಿ ಹೆಚ್ಚಿನ ಬೇಡಿಕೆ ಇರುವ ಸಂದರ್ಭಗಳಲ್ಲಿ 'ವೆಟ್ಟಿ' ಸೇವೆಗಳನ್ನು ಭೂಮಾಲಿಕರಿಗೆ ಆದ್ಯತೆ ಮೇರೆಗೆ ಅವರು ಬಯಸಿದ ದಿನಗಳಂದು ಸಲ್ಲಿಸಬೇಕಾಗಿತ್ತು. ಒಂದು ವೇಳೆ ಏನಾದರೂ ಕೂಲಿ ಕೊಟ್ಟರೆ ಅದು ಇತರ ರೈತರು ಕೊಡುವ ಕೂಲಿಗಿಂತ ಕಡಿಮೆ ಇರುತ್ತಿತ್ತು[22].

ಒಂದು ಊರಲ್ಲಿರುವವರು ಬೇರೆ ಬೇರೆ ಕೆಲಸಗಾರರಾಗಿರುತ್ತಿದ್ದರು: ಬಡಗಿಗಳು (ವಾಡ್ಲಾ), ಕಮ್ಮಾರರು (ಕಮ್ಮಾರಿ), ಹೆಂಡ ಇಳಿಸುವವರು (ಗೌಡರು), ಕ್ಷೌರಿಕರು (ಮಂಗಳಿಗಳು), ಅಗಸರು (ಚಕಲಿಗಳು), ಕುಂಬಾರರು (ಕುಮ್ಮರಿಗಳು), ಇತ್ಯಾದಿ. ಭೂರಹಿತ ಕಾರ್ಮಿಕರಾಗಿದ್ದ ದಲಿತರಲ್ಲಿಯ

---

20 ಅಂತರ್ಜಾಲ ಕೊಂಡಿ 3

21 ಅಂತರ್ಜಾಲ ಕೊಂಡಿ 4

22 ಅಂತರ್ಜಾಲ ಕೊಂಡಿ 5

ಮಾದಿಗ ಮತ್ತು ಮಾಲ ಜಾತಿಯವರನ್ನು 'ವೆಟ್ಟಿ ಮಾದಿಗಾಳ್ಳು' ಮತ್ತು 'ವೆಟ್ಟಿ ಮಾಲೊಳ್ಳು' ಎಂದು ಕರೆಯುತ್ತಿದ್ದರು[23].

'ವೆಟ್ಟಿ ಚಾಕಿರಿ' ಅರ್ಥದಲ್ಲೇ ಆಂಧ್ರ ಪ್ರದೇಶದಲ್ಲಿ ಬಳಸುವ ಇನ್ನೊಂದು ಪದ 'ಪಲೇರು'. 'ಪಲೇರು' ಎಂದರೆ ಹೊಲದ ಕೆಲಸದಾಳು[24]. 'ವೆಟ್ಟಿ ಚಾಕಿರಿ' ಅಥವಾ 'ಪಲೇರು' ಸೇವೆಯನ್ನು ದಲಿತರ ಮೇಲೆ ಹೇರಲಾಗಿತ್ತು. 'ವೆಟ್ಟಿ' ಅಥವಾ 'ಪಲೇರು'ವಾಗಿ ಅವರಿಗೆ ಸುಗ್ಗಿಯ ಕೊನೆಗೆ ಅಥವಾ ಕೆಲವು ಬಹು ಮುಖ್ಯ ಹಿಂದು ಹಬ್ಬಗಳ ಸಮಯದಲ್ಲಿ 'ಜೀತಂ'ಅನ್ನು (ಸಂಬಳವನ್ನು) ಧಾನ್ಯರೂಪದಲ್ಲಿ ಕೊಡಲಾಗುತ್ತಿತ್ತು. ಆದ್ದರಿಂದ 'ವೆಟ್ಟಿ ಮಾದಿಗಾಳ್ಳು' ಮತ್ತು 'ವೆಟ್ಟಿ ಮಾಲೊಳ್ಳು'ಗಳನ್ನು 'ವೆಟ್ಟಿ ಜೀತಗಾಳ್ಳು' ಎಂತಲೂ ಕರೆಯುತ್ತಿದ್ದರು (ರತ್ನಂ 2008: 8)[25].

ಆಂಧ್ರ ಪ್ರದೇಶದ ತೆಲಂಗಾಣ ಪ್ರದೇಶದಲ್ಲಿ ಜೀತ ಮಾಡುವವರು ಮಾದಿಗರಾಗಿದ್ದು ಅವರನ್ನು 'ವೆಟ್ಟಿ ಚಾಕಿರಿ'ಯವರು ಎಂದು ಕರೆದರೆ ಕರಾವಳಿಯ ಆಂಧ್ರದಲ್ಲಿಯ ಹೊಲೆಯರು ಜೀತದಾಳುಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ಅವರನ್ನು 'ಜೀತಂ' ಎಂದು ಕರೆಯುತ್ತಿದ್ದರು (ರತ್ನಂ 2008:15). ಮಾಲ, ಮಾದಿಗರಲ್ಲಿ ಸುಮಾರು 70% ಮಂದಿ ಜೀತದಾಳುಗಳಾಗಿದ್ದರು (ರತ್ನಂ 2008:10). ಮಾದಿಗ ಜನಾಂಗದ ಹೆಚ್ಚಿನ ಮಹಿಳೆಯರು ಧರ್ಮದ ಹೆಸರಲ್ಲಿ ಜೋಗಿನಿ, ಬಸವಿ, ದೇವದಾಸಿಗಳಾಗಿ ಇನ್ನೊಂದು ರೀತಿಯ ಶೋಷಣೆಗೂ ಒಳಗಾಗಿದ್ದರು.

'ವೆಟ್ಟಿ ಚಾಕಿರಿ' ಪದ್ಧತಿ ಅಡಿ ವಿಪರೀತ ಶೋಷಣೆ ನಡೆಯುತ್ತಿದ್ದುದರಿಂದ 1941ರಿಂದ 1951 ತನಕ ದೊಡ್ಡ ಕ್ರಾಂತಿಕಾರಕ ಚಳವಳಿ ಜರುಗಿ ಸ್ವತಂತ್ರ ಭಾರತದ ಪೊಲೀಸ್ ಪಡೆಯು ಅದನ್ನು ಹತ್ತಿಕ್ಕುವ ಮೂಲಕ ಅದು ಕೊನೆಗೊಂಡಿತು. ಆದರೆ 'ವೆಟ್ಟಿ ಚಾಕಿರಿ' ಸಂಪೂರ್ಣವಾಗಿ ನಾಶವಾಗಿರಲಿಲ್ಲ. ಜೀತ ಪದ್ಧತಿ ರದ್ದತಿ ಕಾನೂನು ಬರುವ ವರೆಗೂ ಅಸ್ತಿತ್ವದಲ್ಲಿದ್ದು ತದನಂತರ ಅದು ಎಷ್ಟರ ಮಟ್ಟಿಗೆ ರೂಢಿಯಲ್ಲಿದೆ ಎಂಬುದಕ್ಕೆ ಖಚಿತ ಮಾಹಿತಿ ದೊರಕಿಲ್ಲ[26].

ಕೆಲವೊಂದು ವಿಷಯಗಳು ಬಹಳ ಸ್ಪಷ್ಟ. 'ವೆಟ್ಟಿ' ಅಂದರೆ ಬಿಟ್ಟಿ ಅಥವ ಪುಕ್ಕಟೆ ಎಂತಲೇ ಅರ್ಥ. ಅದು ಪೂರ್ತಿಯಾಗಿ ಜೀತವೇ ಆಗಿತ್ತು. 'ಜೀತಂ' ಅಂದರೆ ತೆಲುಗಲ್ಲಿ ಸಂಬಳ ಎಂದು ಅರ್ಥ. ಜೀತದಾಳುಗಳಿಗೆ ಸಂಬದಾಳು, ಜೀತಕ್ಕಿರುವುದಕ್ಕೆ ಸಂಬಳಕ್ಕಿರುವುದು ಎಂತಲೇ ಕರ್ನಾಟಕದ ಹಲವಾರು ಕಡೆ ಈಗಲೂ ಕರೆಯುತ್ತಾರೆ. 'ಪಲೇರು' ಎಂಬ ಶಬ್ದವನ್ನೂ ಆಂಧ್ರ-ತೆಲಂಗಾಣಗಳಲ್ಲಿ ಜೀತದಾಳುಗಳಿಗೆ

---

23 ಅಂತರ್ಜಾಲ ಕೊಂಡಿ 6

24 ಅಂತರ್ಜಾಲ ಕೊಂಡಿ 6

25 ಅಂತರ್ಜಾಲ ಕೊಂಡಿ 7

26 ಅನಂತಪುರ ಜಿಲ್ಲೆಯ ಮಡಕಸಿರ ತಾಲೂಕಿನಲ್ಲಿ 'ವೆಟ್ಟಿ ಚಾಕಿರಿ' ಈಗಲೂ ಇರುವುದನ್ನು ಅಲ್ಲಿಯ ದಲಿತ ಮುಖಂಡರು ತಿಳಿಸಿದ್ದಾರೆ.

ಬಳಸಲಾಗುತ್ತಿತ್ತು. ಗಮನಿಸಬೇಕಾದ ಇನ್ನೊಂದು ಅಂಶವೇನೆಂದರೆ 'ವೆಟ್ಟಿ ಚಾಕಿರಿ'ಯು ತೆಲಂಗಾಣ ಪ್ರದೇಶದಲ್ಲಿ ಕಂಡುಬಂದರೆ 'ಜೀತಂ' ಮತ್ತು 'ಪಲೇರು' ಆಂಧ್ರ ಪ್ರದೇಶದಲ್ಲಿ ಪ್ರತ್ಯೇಕವಾಗಿ ಅಲ್ಲಿಯ ಕರಾವಳಿ ಪ್ರದೇಶದಲ್ಲಿ ರೂಢಿಯಲ್ಲಿದ್ದವು.

ದಲಿತರಲ್ಲಿಯ ಒಳಪಂಗಡಗಳು ಜೀತ ಪದ್ಧತಿಯ ಬೇರೆಬೇರೆ ರೂಪಗಳಿಗೆ ಬಲಿಯಾಗಿದ್ದರು. ಒಳಪಂಗಡಗಳಾದ ಮಾಲ, ಮಾದಿಗ ಎರಡು ಸಮುದಾಯಗಳಲ್ಲೂ 70%ರಷ್ಟು ಜೀತದಾಳುಗಳಾಗಿದ್ದರೆ, ತೆಲಂಗಾಣದ ಮಾದಿಗರು 'ವೆಟ್ಟಿ ಮಾದಿಗಾಳ್ಳು' ಎಂದು ಕರೆಯಲ್ಪಟ್ಟರೆ ಆಂಧ್ರದ ಮಾಲ ಸಮುದಾಯದವರನ್ನು 'ವೆಟ್ಟಿ ಮಾಲೊಳ್ಳು' ಎಂದು ಕರೆಯುತ್ತಿದ್ದರೂ 'ವೆಟ್ಟಿ ಚಾಕಿರಿ'ಯನ್ನು ತೆಲಂಗಾಣದ ಮಾದಿಗರಿಗೆ ಬಳಸಿದರೆ ಕರಾವಳಿಯಲ್ಲಿ ಗದ್ದೆ ಕೆಲಸದಲ್ಲಿ ತೊಡಗಿದ ಮಾಲ ಜೀತದಾಳುಗಳಿಗೆ 'ಜೀತಂ' ಎಂದು ಕರೆಯಲಾಗುತ್ತಿತ್ತು. ಸಂಬಳ ಅಥವಾ 'ಜೀತಂ'ಅನ್ನು ಸುಗ್ಗಿಯ ನಂತರ ವರ್ಷಕ್ಕೊಮ್ಮೆ ದವಸಧಾನ್ಯದ ರೂಪದಲ್ಲಿ ಕೊಡಲಾಗುತ್ತಿತ್ತು. ಇವೆಲ್ಲಾ ಕರ್ನಾಟಕದಲ್ಲಿ ಈಗಲೂ ಇರುವ 'ಬಿಟ್ಟಿ ಚಾಕ್ರಿ'ಗೆ ಕೆಲವು ಸಾಮ್ಯತೆಗಳನ್ನು ಒದಗಿಸುತ್ತವೆ.

### 3.3 ಮಹಾರಾಷ್ಟ್ರದಲ್ಲಿಯ 'ಬಲೂತ':

ಮಹಾರಾಷ್ಟ್ರದ 'ಬಲೂತ' ಪದ್ಧತಿಯು ಯಾವ ರೀತಿಯಲ್ಲಿ ದಲಿತರ ಮೇಲೆ ಪರಿಣಾಮ ಬೀರಿತ್ತು ಎಂಬುದಕ್ಕೆ ದಯಾ ಪವಾರರು ಮರಾಠಿಯಲ್ಲಿ 1978ರಲ್ಲಿ ಬರೆದ 'ಬಲೂತ' ಎಂಬ ಆತ್ಮ ಕಥನದ ಕಾದಂಬರಿಯು ಸಾಕ್ಷಿ. "ಬಲೂತ, ದಲಿತ ಲೇಖಕನ ಆತ್ಮಕಥನ" ಎಂಬ ಶೀರ್ಷಿಕೆಯಡಿ ಪ್ರೊ. ಚಂದ್ರಕಾಂತ ಪೋಕಳೆಯವರು ಕನ್ನಡದಲ್ಲಿ ಮಾಡಿದ ಭಾಷಾಂತರವನ್ನು ನವಕರ್ನಾಟಕ ಪ್ರಕಾಶನದವರು 2013ರಲ್ಲಿ ಪ್ರಕಟಿಸಿದ್ದಾರೆ (ಪವಾರ 2013)[27]. ಆ ಆತ್ಮಚರಿತ್ರೆಯನ್ನು ಓದುವಾಗ ಮಹಾರಾಷ್ಟ್ರ 'ಬಲೂತ' ಪದ್ಧತಿಗೂ ಕರ್ನಾಟಕದ 'ಬಿಟ್ಟಿ ಚಾಕ್ರಿ' ಪದ್ಧತಿಗೂ ಕೆಲವು ಭಿನ್ನತೆಗಳೊಂದಿಗೆ ಹಲವಾರು ಸಾಮ್ಯತೆ ಇರುವುದೂ ಕಂಡುಬರುತ್ತದೆ.

ದಯಾ ಪವಾರರ ಆತ್ಮಕಥನದಲ್ಲಿ ಚಿತ್ರಿತವಾದ ಬೇರೆ ಬೇರೆ ಘಟನೆಗಳು, ವಿವರಗಳು, ಸ್ವಂತ ಅನುಭವಗಳಿಂದ ಹೆಪ್ಪುಗಟ್ಟಿ 'ಬಲೂತ'ದ ವಿವಿಧ ಮುಖಗಳನ್ನು ಪರಿಚಯಿಸುತ್ತವೆ. ಅದನ್ನು ವೈಜ್ಞಾನಿಕವಾಗಿ ಹಲವಾರು ಇತಿಹಾಸಕಾರರು, ಆರ್ಥಿಕ ಇತಿಹಾಸ ತಜ್ಞರು, ಸಾಮಾಜಿಕ ವಿಜ್ಞಾನಿಗಳು ಅಧ್ಯಯನ ಮಾಡಿದ್ದಾರೆ. ಅವರಲ್ಲಿ ಮುಖ್ಯವಾಗಿ ಹಿರೋಷಿ ಘುಕರುಘಾವಾ, ಹಿರೊಯುಕಿ ಕೊತಾನಿ, ಎ. ಆರ್. ಕುಲಕರ್ಣಿ ಮತ್ತು ಸುಮಿತ್ ಗುಹಾರವರ ಅಧ್ಯಯನಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ (ಘುಕಾರುಘಾವಾ 1998, ಕೋತಾನಿ 1999, ಕುಲಕರ್ಣಿ 2008, ಗುಹಾ 2016). ಈ ಅಧ್ಯಯನಗಳು 18ನೇ ಶತಮಾನ ಮತ್ತು 19ನೇ ಶತಮಾನದ ಆದಿಯಲ್ಲಿ 1818ರಲ್ಲಿ ಬ್ರಿಟಿಷರು ಮರಾಠ ಸಾಮ್ರಾಜ್ಯವನ್ನು

---

[27]ಮರಾಠಿಯ 'ಬಲೂತ'ವನ್ನು ಜೆರ್ರಿ ಪಿಂಟೊರವರು 2015ರಲ್ಲಿ ಅದೇ ಹೆಸರಡಿ ಇಂಗ್ಲಿಷ್‌ನಲ್ಲಿ ಭಾಷಾಂತರಿಸಿ ಪ್ರಕಟಿಸಿದ್ದಾರೆ (ಪಿಂಟೊ 2015)

ಗೆಲ್ಲುವ ಮುಂಚಿನ ಸಮಾಜದ ಚಿತ್ರಣವನ್ನು ಕೊಡುತ್ತಿದ್ದರೆ ಪವಾರರ ಆತ್ಮಕಥನವು 20ನೇ ಶತಮಾನದ ಮಧ್ಯಭಾಗದ ಚಿತ್ರವನ್ನು ಕೆತ್ತಿದೆ.

'ಬಲೂತ' ಪದ್ಧತಿಯು ಮಹಾರಾಷ್ಟ್ರದಲ್ಲಿ ಹೊಲೆಯ (ಮಹಾರ್)ರಿಗೆ ಮಾತ್ರ ಅನ್ವಯಿಸುತ್ತಿರಲಿಲ್ಲ. ಕ್ಷೌರಿಕ, ಅಗಸ, ಬಡಗಿ, ಕುಂಬಾರ, ಕಮ್ಮಾರ, ಚಮ್ಮಾರರನ್ನೊಳಗೊಂಡತೆ 12 ಜಾತಿಗಳಿಗೂ ಅದು ಅನ್ವಯಿಸುತ್ತಿತ್ತು. ಅದನ್ನು 'ಬಾರಾ ಬಲೂತೆ' ಅಂತಲೇ ಕರೆಯಲಾಗುತ್ತಿತ್ತು[28] 'ಬಾರಾ ಬಲೂತೆ'ಯು 'ವಾತಾನ್‌ದಾರ್' ಪದ್ಧತಿಯ ಒಂದು ಭಾಗವೂ ಆಗಿತ್ತು. ಹೊಲೆಯರಿಗೆ ಸಂಬಂಧಪಟ್ಟಂತೆ ಅದನ್ನು 'ವಾತಾನ್ ಮಹಾರ್' ಎಂತಲೂ ಕರೆಯುತ್ತಿದ್ದರು. 'ಬಾರಾ ಬಲೂತೆ'ಯಲ್ಲಿ ಕೇವಲ ಕೆಳಮಟ್ಟದ ಸೇವೆಗಳು ಒಳಗೊಂಡಿದ್ದರೆ, 'ವಾತಾನ್‌ದಾರ್' ಪದ್ಧತಿಯಲ್ಲಿ 'ಬಲೂತೆದಾರ'ರನ್ನು ಒಳಗೊಂಡಂತೆ ಅತ್ಯಂತ ಮೇಲ್ಜಾತಿಯ ಊರ ಪಟೇಲ, ಕುಲಕರ್ಣಿಗಳೂ ಸೇರಿಕೊಂಡಿದ್ದರು. 'ಬಲೂತೆ', 'ವಾತಾನ್', 'ಆಯ' ಸಮನಾರ್ಥಕ ಪದಗಳು. ಅವು 'ಒಬ್ಬರ ಹಕ್ಕು' ಮತ್ತು 'ಒಬ್ಬರಿಗೆ ತಮ್ಮ ಸೇವೆಗೆ ಸಿಗಬಹುದಾದ ಹಕ್ಕಿನ ಲಾಭ' ಎಂಬ ಅರ್ಥವನ್ನು ಸೂಚಿಸುತ್ತವೆ. (ಕೊತಾನಿ 1999: 108, ಪವಾರ 2013: 57, 71). ಆದರೆ 'ಬಲೂತ' ಪದಕ್ಕೂ 'ವಾತಾನ್' ಪದಕ್ಕೂ ಒಂದು ನಿರ್ದಿಷ್ಟ ವ್ಯತ್ಯಾಸವಿದೆ. 'ಬಲುತ' ಪದವು ಸೇವೆಗೆ ಸಿಗುವ ಲಾಭ ಮತ್ತು ಅದರ ಬಗೆಗಿರುವ ಹಕ್ಕನ್ನು ಸೂಚಿಸಿದರೆ 'ವಾತನ್' ಪದವು ವಾರಸುದಾರಿಕೆಯಿಂದ ಬಂದಿರುವ ಹಕ್ಕು ಎಂಬುದನ್ನು ಸೂಚಿಸುತ್ತದೆ[29].

'ಬಲೂತ' ಕಾದಂಬರಿಯಲ್ಲಿ ಪ್ರಸ್ತಾಪಿಸದಂತೆ ಅದು ಕಂಡುಬರುತ್ತಿದ್ದುದು ಹೆಚ್ಚಾಗಿ ಪಶ್ಚಿಮ ಮಹಾರಾಷ್ಟ್ರದಲ್ಲಿ (ಪವಾರ 2013: 53). ಪವಾರರ ಆತ್ಮಕಥನದ ಸಮಯದಲ್ಲಿ ಅಂದರೆ 20ನೇ ಶತಮನದ ಮಧ್ಯ ಭಾಗದಲ್ಲಿ ಅದನ್ನು ಹೊಲೆಯರು ಮಾತ್ರ ಆಚರಿಸುತ್ತಿದ್ದರು (ಪವಾರ 2013: 52). ದಯಾ ಪವಾರರ ಪ್ರಕಾರ "ಹೊಲೆಯರ ಚಾಕರಿಯಲ್ಲಿ ಭಿಕ್ಷುಕ ವೃತ್ತಿ ಮಾತ್ರ ಇರಲಿಲ್ಲ." (ಪವಾರ 2013: 52). ಅವರು ಅದನ್ನು ತಮ್ಮ ಹಕ್ಕಿನದ್ದು ಎಂದು ಪರಿಗಣಿಸಿ ಅದನ್ನು ತುಂಬಾ ಅಭಿಮಾನದಿಂದ

---

28 'ಬಾರಾ ಬಲುತೆ'ಯಂತೆ 'ಬಾರಾ ಅಲುತೆ' ಎಂಬ ಇನ್ನೊಂದು ರೀತಿಯ ಹಳ್ಳಿಯಲ್ಲಿಯ ಕಸುಬುದಾರರು ಮತ್ತು ಸೇವಕರ ಬಗ್ಗೆ ಉಲ್ಲೇಖವಿದೆ (ಘುಕಾರ್ಝಾವಾ 1998: 209–10, ಕುಲಕರ್ಣಿ 2008: 23–26).

29 ಈ ವ್ಯತ್ಯಾಸವು 'ಬಲೂತ' ಪದ್ಧತಿಯಲ್ಲಿಯ ಇನ್ನೊಂದು ಸಂಪ್ರದಾಯದಿಂದ ಸ್ಪಷ್ಟವಾಗುತ್ತದೆ. 'ಬಲುತೆದಾರ'ರಲ್ಲಿ 'ವಾತಾನ್‌ದಾರ್ ಬಲುತೆ' ಮತ್ತು 'ಉಪಾರಿ ಬಲುತೆ'ಗಳೆಂಬ ಎರಡು ವರ್ಗಗಳಿದ್ದುವು. ಅವುಗಳಿಗೆ ಪ್ರತ್ಯೇಕವಾದ ಹಕ್ಕುಗಳು, ಸ್ಥಾನಮಾನಗಳು, ಪ್ರತಿಫಲಗಳು ಇದ್ದವು. 'ವಾತಾನ್ ದಾರ್'ಗೆ 'ಮಿರಾಸಿದಾರ್' ಎಂಬ ಪದವನ್ನೂ ಪರ್ಯಾಯವಾಗಿ ಬಳಸಲಾಗುತ್ತಿತ್ತು. ಎರಡೂ ಪದಗಳು ಅರೇಬಿಕ್ ಮೂಲದವಾಗಿದ್ದು, ಮೊದಲ ಪದದ ಮೂಲಾರ್ಥ 'ಸ್ವಂತ ದೇಶ' ಅಥವಾ 'ಸ್ವಂತ ಮನೆ' ಎಂದು. ಎರಡನೇ ಪದದ ಅರ್ಥ 'ವಾರಸುದಾರಿಕೆ', 'ಬಳುವಳಿಯಾಗಿ ಪಡೆದದ್ದು' ಎಂದು. 'ವಾತಾನ್ ದಾರ್' ಮತ್ತು 'ಮಿರಾಸಿದಾರ್' ಎರಡೂ ಪದಗಳನ್ನು 'ವಾರಸುದಾರಿಕೆ' ಎಂಬ ಅರ್ಥದಲ್ಲೇ ಮಹಾರಾಷ್ಟ್ರದಲ್ಲಿ ಬಳಸಲಾಗಿದೆ. 'ಉಪಾರಿ' ಎಂಬುದು ಹಿಂದಿ, ಮರಾಠಿ, ಗುಜರಾತಿ ಮತ್ತು ಬಂಗಾಲಿ ಶಬ್ದವಾಗಿದ್ದು ಅದರ ಅರ್ಥ 'ಹೊಸಬ', 'ಆಗಂತುಕ' ಅಥವಾ 'ಹೆಚ್ಚುವರಿ' ಎಂಬ ಅರ್ಥಗಳಿವೆ. ವಾತನ್‌ದಾರ್ ಬಲೂತೆ'ಯವರು ತಮ್ಮ ಕಸುಬು ಅಥವಾ ಸೇವೆಯನ್ನು ತಮ್ಮ ಪಿತ್ರಾರ್ಜಿತ ಹಕ್ಕು ಎಂದೇ ಪ್ರತಿಪಾದಿಸಿ ಅದನ್ನು ಬೇರೆಯವರು ಕಬಳಿಸದಂತೆ ನೋಡಿಕೊಳ್ಳಬಹುದಿತ್ತು ಮತ್ತು ಆ ಹಕ್ಕನ್ನು ವಿಭಾಗ ಮಾಡಿ ಹಂಚಬಹುದಿತ್ತು ಅಥವಾ ವರ್ಗಾಯಿಬಹುದಿತ್ತು ಅಥವಾ ಮಾರಬಹುದಿತ್ತು. ಆದರೆ 'ಉಪಾರಿ ಬಲೂತೆ'ಯವರು ತಮ್ಮ ಕಸುಬು ಮತ್ತು ಸೇವೆಗಳನ್ನು ಹಕ್ಕಿನಿಂದ ಸಲ್ಲಿಸಲಿಕ್ಕಾಗುತ್ತಿರಲಿಲ್ಲ.

ಕಾಣುತ್ತಿದ್ದರು (ಪವಾರ 2013: 52, 62). ಅದನ್ನು ಸಮರ್ಥಿಸಲು ಅವರು ತಮ್ಮ ಪೂರ್ವಜರಿಗೆ ಸಿಕ್ಕ ಐವತ್ತೆರಡು ಹಕ್ಕಿನ ತಾಮ್ರಪಟದ ದಂತಕಥೆಯನ್ನು ಉಲ್ಲೇಖಿಸುತ್ತಿದ್ದರು[30] (ಪವಾರ 2013: 53).

'ಬಲೂತ' ಸೇವೆ ಮಾಡುವ ದಲಿತರಿಗೆ ಇನಾಮಿ ಜಮೀನು ಕೂಡಾ ಇರುತ್ತಿತ್ತು[31]. ಆದರೆ ಅದು ನೆಪ ಮಾತ್ರ. ದಲಿತರ ಕೇರಿಯ ಹತ್ತಿರವಿರುವ ಅಂತಹ ಜಮೀನನ್ನು 'ಎಲುಬಿನ ಭೂಮಿ' ಎನ್ನುತ್ತಿದ್ದರು. ಸತ್ತ ದನಕರುಗಳನ್ನು ಅಲ್ಲಿ ತಂದು ಸುಲಿದು ಚರ್ಮ, ಮಾಂಸ ಬೇರ್ಪಡಿಸಿ ಉಳಿದ ಎಲುಬುಗಳನ್ನು ಅಲ್ಲೇ ಬಿಡುತ್ತಿದ್ದುದಕ್ಕೆ ಅದಕ್ಕೆ ಆ ಹೆಸರು ಬಂದಿರಬಹುದು ಎನ್ನುತ್ತಾರೆ ಆತ್ಮಕಥನಕಾರರು (ಪವಾರ 2013: 53). ಬೇರೆ ಜಮೀನು ಇದ್ದರೂ ಅದರಲ್ಲಿ ದಲಿತರು ವ್ಯವಸಾಯ ಮಾಡುತ್ತಿರಲಿಲ್ಲ. ಒಂದು ಹಳ್ಳಿಯಲ್ಲಿ ದಲಿತರ ಅಂತಹ ಜಮೀನನ್ನು ಊರವರು ಗೋಮಾಳವನ್ನಾಗಿ ಪರಿವರ್ತಿಸಿದ್ದನ್ನು ಪವಾರರು ದಾಖಲಿಸಿದ್ದಾರೆ (ಪವಾರ 2013: 53]).

ದಲಿತರು ಮಾಡುವ ಚಾಕರಿಗಳಿಗೆ ಒಂದು ನಿರ್ದಿಷ್ಟ ಸಮಯವೆನ್ನುವುದಿರಲಿಲ್ಲ[32]. ಹಗಲು ರಾತ್ರಿಯೆನ್ನದೇ ಸಾಂಪ್ರದಾಯಿಕವಾಗಿ ಅವರು ಮಾಡಬೇಕಾದ ಕೆಲಸಗಳನ್ನು ಮಾಡಬೇಕಾಗಿತ್ತು. ಅದಕ್ಕೆ ಕೂಲಿ ಎಂಬುದಿರಲಿಲ್ಲ. ಅದಕ್ಕೆ ವಿಶೇಷ ತರಬೇತಿಯೂ ಇರಲಿಲ್ಲ. ಅದು ತಲೆತಲಾಂತರಗಳಿಂದ ಬಂದಿದ್ದಾಗಿತ್ತು (ಪವಾರ 2013: 54).

ಅವರ ಕೆಲಸಗಳ ಪಟ್ಟಿಯನ್ನು ದಯಾ ಪವಾರರ ಮಾತುಗಳಲ್ಲೇ ಗಮನಿಸೋಣ: "ಕೆಲವು ನೊಗ ಹೊರುವಂತಹ ಭಾರವಾದ ಕೆಲಸ. ಊರ ದಫ್ತರನ್ನು ತಾಲೂಕಿಗೆ ಒಯ್ಯುವುದು, ಊರೊಳಗೆ ಬಂದ ಅಮಲ್ದಾರರ ಕುದುರೆಯ ಮುಂದೆ ಓಡುವದು, ಕುದುರೆಗೆ ನೀರು – ಮೇವಿನ ವ್ಯವಸ್ಥೆ ಮಾಡುವದು.

---

30 ಹಿರೊಷಿ ಫುಕಾಝಾವಾರವರೂ 1738ರಲ್ಲಿಯ ಮರಾಠರ ಕಾಲದ ದಾಖಲೆಯೊಂದರಿಂದ ಮಹಾರಾಷ್ಟ್ರದಲ್ಲಿ ದಲಿತರಿಗೆ (ಮಹಾರರಿಗೆ) ಸಿಗಬೇಕಾದ 52 ಬಗೆಯ ಸವಲತ್ತು ('ಬಲುತ')ಗಳು ಮತ್ತಿತರ ಆರು ಸವಲತ್ತುಗಳ ಬಗ್ಗೆ ಪ್ರಸ್ತಾಪ ಮಾಡುತ್ತಾರೆ. ಅವನ್ನು 'ಹಕ್' ಎಂತಲೂ 'ಮಾನ್‌ಪಾನ್' ಎಂತಲೂ ಕರೆಯುತ್ತಿದ್ದರು (ಫುಕಾಝಾವಾ 1998: 22–2).

31 'ಬಾರಾ ಬಲೂತೆದಾರರಿಗೆ ಮೂರು ತರಹದ ಸವಲತ್ತುಗಳು ಅಥವಾ ಮಜೂರಿಗಳು ಸಿಗುತ್ತಿದ್ದುವು. ಮೊದಲನೆಯದು ಮುಖ್ಯವಾದ ಮಜೂರಿ. ಅದನ್ನು ವಸ್ತುರೂಪದಲ್ಲಿ ಅಥವಾ ಕಾಸಿನಲ್ಲಿ ಕೊಡಲಾಗುತ್ತಿತ್ತು. ಎರಡನೆಯದು ಮೊದಲನೆಯ ಮಜೂರಿಗೆ ಪೂರಕವಾಗಿ ವಸ್ತುರೂಪದಲ್ಲೋ ಕಾಸಿನಿಂದಲೋ ಕೊಡವುದಾಗಿತ್ತು. ಅದನ್ನು ಹಕ್ಕು ಎಂತಲೋ, ಭಕ್ಷಿಸು (ಲವಜಿಮ) ಎಂತಲೋ ವಿಶೇಷ ಗೌರವ (ಮಾನ್‌ಪಾನ್) ಎಂತಲೋ ಕರೆಯಲಾಗುತ್ತಿತ್ತು. ಮೂರನೇಯದು ಕೆಲವು 'ಬಾರಾ ಬಲೂಕೆದಾರ'ರಿಗೆ ಕೊಡುತ್ತಿದ್ದ ಕಂದಾಯ ರಹಿತ ಇನಾಮ್ತಿ ಜಮೀನು (ಫುಕಾಝಾವಾ 1998: 219).

32 ಮೇಲಿನ ಅಡಿ ಟಿಪ್ಪಣಿಯಲ್ಲಿ ಉದ್ಧರಿಸಿದ ಅದೇ ದಾಖಲೆಯಲ್ಲಿ ನಮೂದಿಸಲಾದ ಮಹಾರರ 17 ಕರ್ತವ್ಯಗಳು ಮತ್ತು ಅವರಿಗೆ ಸಿಗಬೇಕಾದ ಮಜೂರಿ / ಪ್ರತಿಫಲಗಳಲ್ಲಿ ಮೊದಲನೆಯದಾಗಿ ಈ ರೀತಿಯ ಕರ್ತವ್ಯವನ್ನು ವಿಧಿಸಲಾಗಿದೆ: "ಮಹಾರರು 12 ತಿಂಗಳುಗಳ 24 ಗಂಟೆ ಕಾಲ (ಗ್ರಾಮದ) ಕೆರೆಯನ್ನು ಆಳ ಮಾಡುವ [ಹೂಳೆತ್ತುವ] ಕೆಲಸವನ್ನು ಮಾಡಬೇಕು." (ಫುಕಾಝಾವಾ 1998: 217, 222, 242). ಇಲ್ಲಿ 24 ಗಂಟೆ "ಪ್ರತಿ ತಿಂಗಳಿಗೋ?" ಎಂದು ಫುಕಾಝಾವಾರವರು ಪ್ರಶ್ನಿಸುತ್ತಾರೆ. ಆದರೆ ಅದು ಪ್ರತಿ ತಿಂಗಳಿಗೆ ಅಲ್ಲ. ಪ್ರತಿ ದಿನಕ್ಕೆ ಅಂತ ಇರಬೇಕು. ಈ ವಿವರಣೆಗೆ ಹಲವಾರು ಕಾರಣಗಳನನು ಕೊಡಬಹುದು – 1. ಹಳ್ಳಿಗಳಲ್ಲಿ 'ಗಂಟೆಯ ಕೆಲಸ' ಎಂಬ ಪರಿಕಲ್ಪನೆ ಇಲ್ಲ. 2. 24 ಗಂಟೆ ಎಂದರೆ 'ದಿನ ಪೂರ್ತಿ' ಎಂಬುದೇ ಅರ್ಥ ಅಥವಾ ಅದೇ ಮಹಾರರ ಸಂಪೂರ್ಣ ಜವಾಬ್ದಾರಿ ಎಂದು ಅರ್ಥ; ನಿರ್ದಿಷ್ಟ ಅವಧಿಯಲ್ಲಿ ಅಥವಾ ಸಮಯದ ಸೂಚನೆಯಿಲ್ಲ. 3. ಕೆರೆಯನ್ನು ರಕ್ಷಿಸುವುದೇ, ಅಂದರೆ ಕಾಲಕಾಲಕ್ಕೆ ಅದರ ಹೂಳೆತ್ತಿ ಅದರಲ್ಲಿ ನೀರು ತುಂಬಿ ಕೊಂಡಿರುವಂತೆ ನೋಡಿಕೊಳ್ಳುವುದೇ, ಮಹಾರರ ಮುಖ್ಯ ಕೆಲಸ. ಅಂತೆಲೇ ಆ ಜವಾಬ್ದಾರಿಯನ್ನು ಮೊತ್ತಮೊದಲಿಗೆ ನಮೂದಿಸಲಾಗಿದೆ. ಮೈಸೂರು ಕರ್ನಾಟಕದಲ್ಲಿಯೂ ಹೊಲೆಯರ ಮುಖ್ಯ ಕೆಲಸ ಈಗಲೂ 'ನೀರು ಗಂಟಿ' ಎಂದಿರುವುದು. ಅವರ ಕೆಲಸ ಕೆರೆಯ ನೀರನ್ನು ಜೋಪಾನ ಮಾಡುವುದು; ಕೆರೆಯ ತೂಬನ್ನು ಭದ್ರಪಡಿಸುವುದು.; ಕೆರೆಯ ಕೆಳಗಿನ ಗದ್ದೆಗಳಿಗೆ ವಾಡಿಕೆ ಪ್ರಕಾರ ನಿರ್ಧರಿಸಲಾದ ನೀರನ್ನು ಬಿಟ್ಟು ಕೊಡುವುದು; ಇತ್ಯಾದಿ.

ಡಂಗುರ ಹೊಡೆಯುವುದು, ಊರಲ್ಲಿ ಯಾರಾದರೂ ಸತ್ತರೆ ಊರೂರು ಸುತ್ತಾಡಿ ಸುದ್ದಿ ತಲುಪಿಸುವದು, ಸತ್ತ ದನಗಳನ್ನು ಹೊತ್ತು ಸಾಗಿಸುವದು, ಕಟ್ಟಿಗೆ ಒಡೆಯುವದು, ಊರ ಜಾತ್ರೆಯ ಡಂಗುರ ಹೊಡೆಯುವದು, ವಾದ್ಯ ಬಾರಿಸುವದು, ಅಗಸೆಯಲ್ಲಿ ಮದುಮಗನನ್ನು ನಿವಾಳಿಸುವದು.... ಇಡೀ ಊರಿನ ಕಂದಾಯ ಸಂಗ್ರಹಗೊಂಡ ಬಳಿಕ ಅದನ್ನು ತಾಲ್ಲೂಕಿಗೊಯ್ದು ತಲುಪಿಸುವದು...." (ಪವಾರ 2013: 54). ಇವೆಲ್ಲಾ ಹೊಲೆಯರ ಜವಾಬ್ದಾರಿಯಾಗಿತ್ತು.

ಅದಕ್ಕೆ ಪ್ರತಿಫಲವಾಗಿ ದಲಿತರು ಮರಾಠರ ಮನೆಗಳಿಗೆ ಹೋಗಿ ಊಟ ಪಡೆಯುತ್ತಿದ್ದರು ಮತ್ತು ಅವರ ಕಣಕ್ಕೋ ಹೊಲಕ್ಕೋ ಹೋಗಿ ಆಯಗಾರಿಕೆಯ ಧಾನ್ಯ ಬೇಡಲು ಹೋಗುತ್ತಿದ್ದರು. ಆದರೆ ಹಾಗೇ ಮಾಡುವಾಗ ಮರಾಠರು ತಂಗಳು ಊಟ ಕೊಡುತ್ತಿದ್ದರು ಮತ್ತು ವಿಪರೀತ ಹಿಂಸೆ ನೀಡುತ್ತಿದ್ದರು.

"ಪಾತ್ರೆಯಲ್ಲಿ ಎಂದೂ ಬಿಸಿ ರೊಟ್ಟಿ ಬೀಳುತ್ತಿರಲಿಲ್ಲ. ತಂಗಳ ರೊಟ್ಟಿಯೇ ಬೀಳುತ್ತಿತ್ತು. ಕೆಲವೊಮ್ಮೆ ಬುರುಸೂ ಹಿಡಿದಿರುತ್ತಿತ್ತು. ಹೊಲತಿಗೆ ಹಾಕಲೆಂದೇ ಬಹುಶಃ ಗೋಡೆಯಲ್ಲಿರುವ ಮಾಡಿನಲ್ಲಿ ರಾತ್ರಿಯ ರೊಟ್ಟಿಯನ್ನು ಕಾಯ್ದಿಡುತ್ತಿರಬೇಕು. ಕನಿಕರ ಬಂದರೆ ಯಾರಾದರೂ ಉಪ್ಪಿನಕಾಯಿ ಹೋಳು ಹಾಕುತ್ತಿದ್ದರು. ಅದನ್ನು ಕಂಡು ಬಾಯಿ ನೀರೂರುತ್ತಿತ್ತು" (ಪವಾರ 2013: 63).

"ಫಸಲು, ಕಾಳು-ಕಡಿ ನೀಡುವಾಗ ರೈತರು ಬಹಳ ತಕರಾರು ಮಾಡುತ್ತಿದ್ದರು. 'ಏss ಉಂಡ್ಗಿ ಮಕ್ಕಳರೇ, ಕೆಲಸ ಮಾಡಾಕ ಮಾತ್ರ ಬರಬ್ಯಾಡರಿ, ಕಾಳ ಬೇಡಾಕ ಮಾತ್ರ ಎಲ್ಲರಿಗಿಂತ ಮೊದಲೇ ಹಾಜರ್! ಇದೇನ ನಿಮ್ಮಪ್ಪನ ಹೊಲಾ ಅಂತ ತಿಳಿದಿರೇನು?'.... ಊರವರು ಕಾಳಿಲ್ಲದ ದಂಟು ಕೊಡಲು ಪ್ರಯತ್ನಿಸುತ್ತಿದ್ದರು. ಆದರೆ ಹೊಲೆಯರಿಗೆ ಬೇಕಾಗಿದ್ದು ಗಟ್ಟಿಕಾಳು. ಎಲ್ಲಾ ಫಸಲು ಕೊಯ್ದು ಮುಗಿದ ಬಳಿಕ ಹೊಲೆಯರು ಅರಿವೆಯನ್ನೂ ಹಾಸುತ್ತಿದ್ದರು. ಆಗ ರೈತರು ನಿರ್ವಾಹವಿಲ್ಲದೆ ಕಾಳನ್ನು ಹೊಲೆಯರಿಗೆ ನೀಡಬೇಕಾಗುತ್ತಿತ್ತು. ಆದರೆ ಕೊಡುವಾಗ ಸತತ ಬಯ್ಗಳ ಸುರಿಮಳೆ ಆಗುತ್ತಿತ್ತು. ಹೊಲೆಯರು ಮಾತ್ರ ಏನೂ ನಡೆದೇ ಇಲ್ಲ ಎನ್ನುವಂತೆ ಫಸಲು ಕಟ್ಟಿಕೊಂಡು ಹಾದಿ ಹಿಡಿಯುತ್ತಿದ್ದರು..." (ಪವಾರ 2013: 54).

ಕಂದಾಯ ತುಂಬಿದ ಬಳಿಕ ಅದನ್ನು ಹೊಲೆಯರು ತಾಲೂಕು ಕಛೇರಿಗೆ ತುಂಬಿಸಲು ಹೋದಾಗ ಅತ್ಯಂತ 'ಮೇಲ್ಜಾತಿ'ಯವರಿಂದ ನಡೆಸಲಾದ ಒಂದು ವಂಚನೆ ಮತ್ತು ದೌರ್ಜನ್ಯವನ್ನು ದಯಾ ಪವಾರರು ಮನೋಜ್ಞವಾಗಿ ಹೀಗೆ ದಾಖಲಿಸುತ್ತಾರೆ: "ಒಮ್ಮೆ ನೆರೆಯೂರಿನ ಮುದುಕಿಯೊಬ್ಬಳು ಕಂದಾಯ ತುಂಬಲು ಬರುತ್ತಾಳೆ. ಅವಳೋ ಬಡಪಾಯಿ ವಿಧವೆ. ಗುಮಾಸ್ತನಿಗೆ ಕಂದಾಯದ ಹಣ ನೀಡುತ್ತಾಳೆ. ಆದರೆ ರಸೀದಿ ಪಡೆಯಲು ಮರೆಯುತ್ತಾಳೆ. ಗುಮಾಸ್ತನಲ್ಲಿ ಮಾನವೀಯತೆಯಿರಲಿಲ್ಲ. ಮರುದಿನ ರಸೀದಿ ಪಡೆಯಲು ಮುದುಕಿ ಓಡಿ ಬರುತ್ತಾಳೆ. ಗುಮಾಸ್ತ ಒಬ್ಬ ಬ್ರಾಹ್ಮಣನಾಗಿದ್ದ. ಅವನು ಸುಳಿವು ಕೊಡುವದಿಲ್ಲ. ಮುದುಕಿ ಬೊಬ್ಬೆ ಹೊಡೆಯುತ್ತಾಳೆ. ಊರಿಗೆ ಮರಳುತ್ತಾಳೆ. ಕಂದಾಯ ತುಂಬದೇ ಇದ್ದುದರಿಂದ ಆಕೆಯ ಮೇಲೆ

ಖಟ್ಲೆ ಹಾಕುತ್ತಾರೆ. ಮುದುಕಿ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತಾಳೆ. ಯಾರೂ ಆಕೆಗೆ ಕರುಣೆ ತೋರಿಸುವದಿಲ್ಲ. ಎಲ್ಲರೂ ಆಕೆಯನ್ನು ಹಳಿಯುತ್ತಾರೆ. ಆಕೆಗೆ ಬೇಡಿ ತೊಡಿಸಿ ತಾಲ್ಲೂಕಿಗೆ ಕರೆದೊಯ್ಯುತ್ತಾರೆ. ಕಂದಾಯದ ಹಣ ಮುಳುಗಿಸಿದ್ದು ಸಿದ್ಧವಾಗುತ್ತದೆ. ಗುಮಾಸ್ತ ಕೈಮೇಲೆ ಎತ್ತುತ್ತಾನೆ. ಅವಳಿಗೆ ಮೂರು ತಿಂಗಳ ಸಜೆಯಾಗುತ್ತದೆ.... ಮಹಾರ ಚಾಕರಿಯ ಕಾಲಕ್ಕೆ ಇಂತಹ ಪ್ರಾಣ ಹಿಂಡುವ ಪ್ರಸಂಗವನ್ನೂ ನೋಡಬೇಕಾಗುತ್ತದೆ." (ಪವಾರ 2013: 55).

ದಲಿತರಿಗೆ ಆಯಗಾರಿಕೆಯ ಪಾಲು ಕೊಡುವಾಗ ಅದನ್ನು ಮರಾಠರು ನ್ಯಾಯವಾಗಿ ಕೊಡುತ್ತಿರಲಿಲ್ಲ. ದಲಿತರು ಮನುಷ್ಯರು. ಗೌರವಯುತವಾಗಿ ಬದುಕಲು ನ್ಯಾಯ ಸಮ್ಮತ ಪಾಲು ಅವರಿಗೆ ನೀಡಬೇಕೆಂಬ ಅರಿವು ಅವರಲ್ಲಿರುವುದಿಲ್ಲ. ಆದರೆ ದಲಿತರು ಊರು ಬಿಡಲು ನಿಶ್ಚಯಿಸಿದರೆ ತಮ್ಮ ಕೆಲಸಗಳನ್ನು ನಿಭಾಯಿಸುವವರಿಲ್ಲದಿರುವ ಗಂಭೀರ ಪರಿಸ್ಥಿತಿಯನ್ನು ಮನಗಂಡು ಅವರು ಊರು ಬಿಡದ ಹಾಗೆ ರಾಜಿ ಮಾಡಿಕೊಳ್ಳುತ್ತದ್ದರು. "ಒಮ್ಮೆ ಆಯಗಾರಿಕೆಯ ಕಾರಣಕ್ಕಾಗಿ ಊರು ಮತ್ತು ಹೊಲಗೇರಿಯ ಜನರ ನಡುವೆ ವಿವಾದ ಬೆಳೆಯಿತು. ಏನಾಯಿತೆಂದರೆ, ಪರಂಪರೆಯ ಪ್ರಕಾರ ಊರಿನ ಫಸಲು ಬಂತೆಂದರೆ, ತಕ್ಷಣ ಪೆಂಡಿಯ ಪಾಲು ಮಾಡಲಾಗುತ್ತಿತ್ತು. ತಮ್ಮ ಆದಾಯದ ಎಷ್ಟು ಭಾಗ ಹೊಲೆಯರಿಗೆ ಹೋಗುತ್ತದೆ ಎಂಬರಿವು ಊರಮಂದಿಗೆ ಆಗುತ್ತಿರಲಿಲ್ಲ. ನಾಯಿ ಬೆಕ್ಕಿನಂತೆ ಹೊಲೆಯರೂ ಬದುಕುತ್ತಾರೆ ಎಂಬ ಲೆಕ್ಕಾಚಾರ ಊರವರದ್ದು. ಜತೆಗೆ ಹೊಲೆಯ ಮಕ್ಕಳು ತಿಂದರೆ ಪುಣ್ಯ ಲಭಿಸುತ್ತದೆ ಎನ್ನುವದೂ ರೂಢಿಯಲ್ಲಿತ್ತು. ಹೊಲೆಯರು ಊರ ಕಿರುಕುಳಕ್ಕೆ ಬೇಸತ್ತು ಊರು ತೊರೆದು ಹೋಗುವ ವಿಚಾರದಲ್ಲಿದ್ದರು. ಊರಮಂದಿ ಅವರನ್ನು ಅಗಸೆ ಬಾಗಿಲಿನಲ್ಲಿ ಅಡ್ಡಗಟ್ಟಿದರು. ಅವರಿಗೆ ಬುದ್ಧಿಮಾತು ಹೇಳಿ, ಗೌರವದಿಂದ ಮರಳಿ ಕರೆತಂದರು. ಊರಲ್ಲಿ ಹೊಲೆಯರಿಲ್ಲ ಎಂದರೆ ಪ್ರಾಯಶಃ ಸಂಕಟ ಎರಗುವ ಭೀತಿ ಜನರನ್ನು ಕಂಡಿರಬೇಕು. ಹೀಗಾಗಿ ಜಗಳ ವಿಕೋಪಕ್ಕೆ ಹೋಗದಂತೆ ಎಚ್ಚರಿಕೆ ವಹಿಸುತ್ತಿದ್ದರು." (ಪವಾರ 2013: 63).

ಹಬ್ಬಗಳಲ್ಲಿ ದಲಿತರು ವಾದ್ಯಗಳನ್ನೂ ಪುಕ್ಕಟೆಯಾಗಿಯೇ ನುಡಿಸಬೇಕಾಗಿತ್ತು. ಆದರೆ ಹಬ್ಬದ ಪ್ರಯುಕ್ತ ನಡೆಯುವ ಇತರೆ ಮನೋರಂಜನೆ ಅಥವಾ ಆಟೋಟ ಚಟುವಟಿಕೆಗಳಲ್ಲಿ ದಲಿತರು ಭಾಗವಹಿಸುವಂತಿರಲಿಲ್ಲ. "ಯುಗಾದಿಯ ಹಬ್ಬದ ನೆನಪಾಗುತ್ತದೆ. ಊರ ಪ್ರತಿ ಮನೆಯಲ್ಲೂ ತಳಿರುತೋರಣ ಕಟ್ಟಲಾಗಿತ್ತು. ಸಂಜೆಗೆ ಮರಾಠರ ಮೆರವಣಿಗೆ ನಡೆಯುತ್ತಿತ್ತು. 10–12 ವರುಷದ ಹುಡುಗನನ್ನು ಅಲಂಕರಿಸಿ ಹೆಗಲ ಮೇಲೆ ಹೊತ್ತುಕೊಳ್ಳಲಾಗುತ್ತಿತ್ತು. ಎಲ್ಲರೂ ಮಾರುತಿ ಗುಡಿಯ ಎದುರಿಗೆ ಬಂದು ಸೇರುತ್ತಿದ್ದರು. ಎಲ್ಲರಿಗಿಂತ ಮುಂದೆ ಹೊಲೆಯರ ಬಾಜಾಬಜಂತ್ರಿಯಿರುತ್ತಿತ್ತು. ಹೊಲೆಯರು ಈ ಹಬ್ಬದಲ್ಲಿ ಹಣ ತೆಗೆದುಕೊಳ್ಳದೆ ವಾದ್ಯ ಬಾರಿಸಬೇಕೆಂಬ ರಿವಾಜುಯಿದೆ. ವಾದ್ಯದವರ ಎದುರಿಗೆ ಲೇಝಿಮ ತಂಡ. ವೇಷಧಾರಿ 'ವೀರ' ವಿಚಿತ್ರವಾಗಿ ಕಿರುಚುತ್ತಿದ್ದ. ಈ ಆಟದಲ್ಲಿ ಹೊಲೆಯರ ಹುಡುಗರಿಗೆ ಮಾತ್ರ ಅನುಮತಿಯಿರಲಿಲ್ಲ. ದೂರನಿಂತು ಮೋಜು ನೋಡಬೇಕಾಗುತ್ತಿತ್ತು. ಲೇಝಿಮನ್ನು

ಹೊಲೆಯರ ಹುಡುಗರ ಕೈಗೆ ನೀಡುವದೆಂದರೆ ಪಾಪವೆಂದು ಭಾವಿಸಲಾಗುತ್ತಿತ್ತು. ಹೊಲಗೇರಿಯ ನಾವು ಮುದುಡಿಕೊಳ್ಳುತ್ತಿದ್ದೆವು." (ಪವಾರ 2013: 63)[33].

ಕರ್ನಾಟಕದಲ್ಲಿ ಈಗ 'ಪ್ರಚಲಿತವಿರುವ 'ಬಿಟ್ಟಿ ಚಾಕ್ರಿ'ಗೂ ಮಹಾರಾಷ್ಟ್ರದಲ್ಲಿ ಐವತ್ತು – ಆರವತ್ತರ ದಶಕದ ವರೆಗೆ ಇದ್ದ, ಈಗಲೂ ಇರಬಹುದಾದ, ಆದರೆ 'ಬಿಟ್ಟಿ ಚಾಕ್ರಿ'ಯಂತೆ ಈಗ ಹೊಸ ರೂಪ ತಾಳಿರಬಹುದಾದ, 'ಬಲೂತ'ಕ್ಕೂ ಹಲವಾರು ಸಾಮ್ಯಗಳಿವೆ; ವ್ಯತ್ಯಾಸಗಳೂ ಇವೆ. ಮುಖ್ಯ ಹೋಲಿಕೆ ಎಂದರೆ ಎರಡೂ ಸೇವೆಯನ್ನು ದಲಿತರೇ ಮಾಡುವುದು. ಆದರೆ ವ್ಯತ್ಯಾಸವೇನೆಂದರೆ 'ಬಲೂತ'ವನ್ನು ಕೇವಲ ಹೊಲೆಯರೇ ಮಾಡಿರುತ್ತಿದ್ದರೆ, 'ಬಿಟ್ಟಿ ಚಾಕ್ರಿ'ಯನ್ನು ಮಾದಿಗ ಜನಾಂಗದವರು ಮಾತ್ರ ಹೆಚ್ಚಾಗಿ ಮಾಡುತ್ತಾರೆ. ಹೊಲೆಯರ ಇಡೀ ಬದುಕೇ 'ಬಲೂತ'ವಾಗಿತ್ತು. ಅವರು ಹಗಲೂ ರಾತ್ರಿಯೂ 'ಬಲೂತ' ಸೇವೆಗಳನ್ನು ಮಾಡಲು ತಯಾರಿರಬೇಕಿತ್ತು. ಕರ್ನಾಟಕದಲ್ಲಿ ಈಗ ಪ್ರಚಲಿತವಿರುವ 'ಬಿಟ್ಟಿ ಚಾಕ್ರಿ'ಯು ಕೇವಲ ಕೆಲವು ಗಂಟೆಗಳಿಗೆ ಸೀಮಿತವಾಗಿದ್ದು ವಿಶೇಷ ಸಂದರ್ಭಗಳಲ್ಲಿ ಮಾತ್ರ ಇಡೀ ದಿನ ಚಾಕ್ರಿ ಮಾಡುವ ಅವಶ್ಯಕತೆ ಅದರಲ್ಲಿದೆ. ಕೇವಲ ನಾಮಕಾವಸ್ಥೆಗಾದರೂ 'ಬಲೂತ'ದಲಿದ್ದಂತೆ ಇನಾಮ್ತಿ ಜಮೀನು ನೀಡುವ ಪದ್ಧತಿ 'ಬಿಟ್ಟಿ ಚಾಕ್ರಿ'ಯಲ್ಲಿಲ್ಲ. 'ಎಲುಬಿನ ಭೂಮಿ'ಯಂತೆ ಎಲ್ಲಾ ಊರುಗಳಲ್ಲಿ ಸತ್ತ

---

[33] ಮೇಲಿನ ಎರಡು ಅಡಿ ಟಿಪ್ಪಣಿಗಳಲ್ಲಿ ಉದ್ಧರಿಸಲಾದ 1738ರ ಮರಾಠ ಸಾಮ್ರಾಜ್ಯದ ಕಾಲದ ದಾಖಲೆಯಲ್ಲಿ ಬರುವ ಮಹಾರರ 17 ಕರ್ತವ್ಯಗಳು ಮತ್ತು ಅವರಿಗೆ ಸಿಗುವ ಸೌಲಭ್ಯಗಳನ್ನು ಚುಟುಕಾಗಿ ಇಲ್ಲಿ ಕೊಡಲಾಗಿದೆ. ಅದರಲ್ಲಿ ಊರ ಪಟೇಲ (ಪಾಟೀಲ್)ರ ಕರ್ತವ್ಯಗಳು ಮತ್ತು ಅವರಿಗೆ ಸಿಗುವ ಸೌಲಭ್ಯಗಳೂ ಬರುತ್ತವೆ (ಘುಕಾರ್ಘಾವಾ 1998: 222–224):

1. ಮಹಾರರು 12 ತಿಂಗಳಲ್ಲಿ 24 ಗಂಟೆ [ತಿಂಗಳಿಗೆ? ವರ್ಷಕ್ಕೆ? ದಿನಕ್ಕೆ?] ಕೆರೆಯನ್ನು ಆಳ ಮಾಡಬೇಕು.
2. ಊರಲ್ಲಿ ಬೇರೆ ಮಹಾರರು ಇದ್ದರೆ ಊರ ಪಟೇಲರ ಆಜ್ಞೆಯಂತೆ ಹಳ್ಳಿಗೋಸ್ಕರ ದುಡಿಯಬೇಕು.
3. ಅವರು 'ಹರತಿ ಭೂಮಿ' [ಒಂದು ರೀತಿಯ ಇನಾಮ್ತಿ ಭೂಮಿ]ಯನ್ನು 'ತಿನ್ನ ಬೇಕು' ಮತ್ತು ಊರ ಪಟೇಲರಿಗೆ ಬೇರೆ ಬೇರೆ ಕೆಲಸ ಮಾಡಬೇಕು.
4. ಅವರು 'ಮಹರಿಕ್ ಭೂಮಿ' [ಒಂದು ರಿತಿಯ ಇನಾಮ್ತಿ ಭೂಮಿ]ಯನ್ನು 'ತಿನ್ನ ಬೇಕು' ಮತ್ತು ಸರ್ಕಾರಕ್ಕೆ ಬೇರೆ ಬೇರೆ ಕೆಲಸ ಮಾಡಬೇಕು.
5. ಮಹಾರರ 'ಮ್ಹೆತರೆ'ಯ (ಮುಖಂಡ / ಯಜಮಾನ)ರ ಪ್ರಯೋಜನಕ್ಕೆ ಬಾರದವರ 'ಬಲೂತೆ ಮಜೂರಿ' (ಬೈತೆ)ಯನ್ನು ಪಡೆಯಬೆಕು. ಎಂಟು ಮಹಾರರಿಗೆ ಸಿಗಬೇಕಾದ್ದು ಬಿಟ್ಟು ಉಳಿದದ್ದು ಅವರಿಗೆ ಸೇರುತ್ತದೆ. (ಮೂಲದಲ್ಲಿ ಇದರ ಅರ್ಥ ಸ್ಪಷ್ಟವಿಲ್ಲವೆಂದು ಘುಕಾರ್ಘಾವಾರವರು ಹೇಳುತ್ತಾರೆ (1998: 223.)
6. ಕಣದಲ್ಲಿ ಉಳಿದ ದವಸಧಾನ್ಯ ಮಹಾರರಿಗೆ ಸೇರಬೆಕು.
7. ಮಹಾರರ 'ಬಲೂತ ಮಜೂರಿ' ಮಹಾರರಿಗೆ ಸೇರಬೇಕು.
8. ಮೇಲೆ ವಿವರಿಸಿದ ಹಕ್ಕುಗಳಲ್ಲದೇ ಮಹಾರರಿಗೆ ಇನ್ನೂ 52 ಹಕ್ಕುಗಳಿವೆಯೆಂದು ಜನರು ಆಡಿಕೊಳ್ಳುತ್ತಾರೆ.
9. ಗ್ರಾಮಠಾಣದಲ್ಲಿ ಬಿದ್ದ ಮರಗಳು ಮಹಾರರಿಗೆ ಸೇರಿದವು.
10. ಸುದ್ದಿ ಹೊತ್ತು ಬಂದಿರುವ ಮಹಾರರಿಗೆ ಬಟ್ಟೆಯ ಚೂರೊಂದನ್ನು ಮಹಾರರು ಬಯಸಿದರೆ ಊರ ಪಟೇಲರು ಕೊಡಬೇಕು
11. ಪ್ರತಿ ಹಬ್ಬದ ದಿನದಂದು ಮಹಾರನು ಒಂದು ಸೌದೆ ಮೂಟೆಯನ್ನು ಊರ ಪಟೇಲನಿಗೆ ಕೊಟ್ಟು ಅವನಿಂದ ಊಟವನ್ನು ಕೇಳಬೇಕು.
12. ಊರ ಪಟೇಲ, ಊರ ಕುಲಕರ್ಣಿ ಮತ್ತು ಸಹಾಯಕ ಊರ ಪಟೇಲರ ಕುಟುಂಬದವರ ಸತ್ತ ದನಕರುಗಳ ಚರ್ಮ ಸುಲಿದು ಅದನ್ನು ಮಾಲಿಕರಿಗೆ ಕೊಡಬೇಕು. ಊರ ಪ್ರಮುಖರ ಊಳುವ ಎತ್ತುಗಳ ಚರ್ಮವನ್ನೂ ಆ ಆ ಮಾಲಿಕರಿಗೆ ಕೊಡಬೇಕು.
13. ಲಕ್ಷ್ಮಿಯ ಹಬ್ಬದಂದು ಅರ್ಪಿಸಲಾದ ಎಮ್ಮೆಯ ಮಾಂಸದ ಅರ್ಧ ಭಾಗವನ್ನು ನನ್‌ಗೆರೆ ಪಟೇಲ (ಪಾಟೀಲ್) (ವ್ಯವಸಾಯದ ಜವಾಬ್ದಾರಿ ಇರುವ ಊರ ಪಟೇಲ) ತೆಗೆದುಕೊಳ್ಳಬೇಕು.
14. ಊರ ಹೋಳಿ ಹಬ್ಬದಂದು ಪಟೇಲರು ಮಹಾರರಿಗೆ ಅರ್ಧ ತೆಂಗಿನಕಾಯಿ, ವಿಳ್ಯದೆಲೆ (ಪಾನ್ ಸುಪಾರಿ) ಮತ್ತು ಬೀಡಿಗಳನ್ನು ಕೊಟ್ಟು ಅವರು ಹೋಳಿಗೆ ಬೆಂಕಿ ತರುವಂತೆ ನೋಡಿಕೊಳ್ಳಬೇಕು.
15. ಊರ ಹೋಳಿಹಬ್ಬದ ನೈವೇದ್ಯವನ್ನು ಕೋಲಿ (ನೀರು ತರುವವರು) ಮತ್ತು ಘಡ್ಶಿಗಳು (ಹಾಡುಗಾರರು) ತೆಗೆದುಕೊಂಡು ಅದರಿಂದ ಕೋಲಿಯವರು ಕೊಡುವಷ್ಟನ್ನು ಮಹಾರರು ತೆರೆದ ಕೈಗಳಲ್ಲಿ ಸ್ವೀಕರಿಸಬೇಕು.
16. ವ್ಯಾಪಾರಿ ಕುಟುಂಬವು ತಾಮ್ರದ ನಾಣ್ಯಗಳನ್ನು ನೆಲದಲ್ಲಿ ಬಿಸಾಡಿದಾಗ ಅವನ್ನು ಮಹಾರರಿಗೆ ಕೊಡಬೇಕು.
17. ಪಟೇಲರು ನಾಲ್ಕು ರುಕಾ (ಕಡಿಮೆ ಮೊತ್ತದ ಹಣ)ವನ್ನು ಮತ್ತು ಕಾವಲು ಕಾಯುವ ಮಹಾರರು ಎರಡು ರುಕಾವನ್ನು ಪ್ರತಿ ಮನೆಯಿಂದ ಪಡೆಯಬೇಕು.

ದನಕರುಗಳನ್ನು ದಲಿತರು ಎಳೆದುಕೊಂಡು ಹೋಗಿ ಚರ್ಮ ಸುಲಿಯಲು ಪ್ರತ್ಯೇಕ ಜಾಗಗಳನ್ನು ಮೀಸಲಿಟ್ಟಿದ್ದಾರೆ.

ಸೇವೆಗಳಿಗೆ ಕೊಡುವ ದಿನನಿತ್ಯದ ಊಟ ಎರಡೂ ಕಡೆ ತಂಗಳು ಮಾತ್ರ; ಮತ್ತು ಆಯಗಾರಿಕೆಯಾಗಿ ವರ್ಷಕ್ಕೆ ಒಮ್ಮೆ ಕೊಡುವ ದವಸಧಾನ್ಯಗಳ ಬಗ್ಗೆ ರೈತರು ಬೇರೆಬೇರೆ ತಕರಾರುಗಳನ್ನು ತೆಗೆಯುತ್ತಲೇ ಇರುತ್ತಾರೆ. ವಂಚನೆ, ಮೋಸ ಕರ್ನಾಟಕದಲ್ಲೂ ಮಹಾರಾಷ್ಟ್ರದಲ್ಲೂ ಕಂಡುಬರುವ ವಾಸ್ತವ. 'ಬಿಟ್ಟಿ ಚಾಕ್ರಿ'ಯಲ್ಲಿದ್ದಂತೆ 'ಬಲೂತ'ದಲ್ಲಿ ಹಬ್ಬಗಳಲ್ಲಿ ಪುಕ್ಕಟೆಯಾಗಿಯೇ ವಾದ್ಯ ನುಡಿಸಬೇಕೆಂಬುದು ಇನ್ನೊಂದು ಸಾಮಾನ್ಯ ಸಂಗತಿ. ಇಡೀ ವರ್ಷದ ವೇತನಕ್ಕಾಗಿ ಮತ್ತು ಸುಗ್ಗಿಯ ಕಾಲದ ಫಸಲಿನ ಭಾಗಕ್ಕಾಗಿ ಕಾದು ನಂತರ ಅದನ್ನೂ ವಂಚನೆಯಿಂದ ಪಡೆಯುವುದು ಮೂಲಭೂತವಾಗಿ ಶೋಷಣೆಯಾದರೂ ಅದೂ ಒಂದು 'ಹಕ್ಕು' ಎಂದು ಮಹಾರರು ಪರಿಗಣಿಸುತ್ತಿದ್ದಂತೆ 'ಬಿಟ್ಟಿ ಚಾಕ್ರಿ ತಮ್ಮ ಹಕ್ಕು' ಎಂದು ಕರ್ನಾಟಕದ ದಲಿತರು ಲೆಕ್ಕಿಸುತ್ತಾರೆ ಮತ್ತು ಅದನ್ನು ಹೆಚ್ಚಿನ ಕಡೆ ರಕ್ಷಿಸಲು ಪ್ರಯತ್ನಿಸುತ್ತಾರೆ.

### 3.4 ಉತ್ತರ ಪ್ರದೇಶದ 'ಜಜ್‌ಮನಿ'

ವೈಸರ್‌ರವರು 1925ರಿಂದ 1932ರ ಅವಧಿಯಲ್ಲಿ ಉತ್ತರ ಪ್ರದೇಶದ ಒಂದು ಹಳ್ಳಿಯಾದ ಕರಿಂಪುರದಲ್ಲಿ ಮಾಡಿದ ಕ್ಷೇತ್ರಾಧ್ಯಯನದಿಂದ ಜಾತ್ಯಾಧಾರಿತ ಆರ್ಥಿಕ ವ್ಯವಸ್ಥೆಯನ್ನು 'ಜಜ್‌ಮನಿ' ಪದ್ಧತಿ ಎಂಬ ಹೆಸರಲ್ಲಿ ಗುರುತಿಸಿದ್ದಾರೆ (ವೈಸರ್: 1988, ಬ್ರೆಮನ್ 1974: 16–23). ಆ ಊರಲ್ಲಿ 'ಜಜ್‌ಮನ್' ಮತ್ತು 'ಜಜ್‌ಮನಿ ಹಕ್' ಪದಗಳನ್ನು ಜನರು ಬಳಸುವುದನ್ನು ಮೊದಲ ಬಾರಿಗೆ ಅವರು ಕಂಡುಕೊಂಡರು (ವೈಸರ್ 1988: vii). 'ಕೊಡುಕೊಳ್ಳುವಿಕೆ'ಯ ಸಂಬಂಧಗಳಿಂದ ಕೂಡಿದ್ದು ಅದು ಒಂದು ರೀತಿಯಲ್ಲಿ ಊಳಿಗಮಾನ್ಯ ವ್ಯವಸ್ಥೆಯಂತಿದ್ದರೂ ಅದಕ್ಕಿಂತ ಭಿನ್ನವಾಗಿತ್ತು (ವೈಸರ್ 1988: viii). ಸೇವೆ ಪಡೆಯುವವರೆಲ್ಲರೂ (ಎಂಪ್ಲೊಯರ್) 'ಜಜ್‌ಮನ್' ಆಗಿದ್ದರು. ಸೇವೆ ಪಡೆಯುವ – ಸೇವೆ ಕೊಡುವ ಸಂಬಂಧದ ಹಕ್ಕುಗಳನ್ನು 'ಜಜ್‌ಮನಿ ಹಕ್' ಎಂದು ಕರೆಯಲಾಗುತ್ತಿತ್ತು (ವೈಸರ್ 1988: ix).

ಒಂದು ಊರಲ್ಲಿಯ ಪ್ರತಿಯೊಂದು ಜಾತಿಯೂ ಇತರ ಎಲ್ಲಾ ಅಥವಾ ಹೆಚ್ಚಿನ ಜಾತಿಗಳೊಂದಿಗೆ ವಸ್ತು – ಸೇವೆಗಳನ್ನು ಕೊಡುವ – ಕೊಳ್ಳುವಿಕೆಯ ಸಂಬಂಧಗಳ ಜಾಲಕ್ಕೆ 'ಜಜ್‌ಮನಿ' ಪದ್ಧತಿಯೆಂದು ಹೆಸರಿಸಲಾಗಿದೆ. ಸೇವೆ ಪಡೆಯುವವರು 'ಜಜ್‌ಮನ್' (ಯಜಮಾನ); ಸೇವೆ ಕೊಡುವವರು ಕಾಮಿನ್, 'ಊರ ಕೀಳು ಕೆಲಸದಾಳು', 'ಊರ ಸೇವಕ', ಕುಶಲಕರ್ಮಿ, ಇತ್ಯಾದಿ. ಒಬ್ಬ ಕಸುಬುದಾರರು ಅಥವಾ ಸೇವಕನು ಸೇವೆ ಸಲ್ಲಿಸುವ ಇತರರೆಲ್ಲರೂ ಆತನ 'ಜಜ್‌ಮನಿ' ಅಥವಾ 'ಬಿರ್ಟ್'. ಸೇವೆ ಸಲ್ಲಿಸುವವನಿಗೆ ಸೇವೆ ಪಡೆಯುವವನು ಆತನ 'ಜಜ್‌ಮನ್' (ಯಜಮಾನ). ಸೇವೆ ಪಡೆಯುವವನು ತನಗೆ ಸೇವೆ ಸಲ್ಲಿಸುವವರು ಶೂದ್ರರು ಅಥವಾ ಅವರಿಗಿಂತ ಕೆಳಗಿನ ಜಾತಿಯವರಾದರೆ ಅವರೆಲ್ಲರನ್ನೂ ತನ್ನ 'ಕಾಮ್

ವಾಲೆ' ಅಥವಾ ಕಾಮ್ ಕರ್ನೆವಾಲೆ' (ಕೆಲಸ ಮಾಡುವವರು) ಎಂದು ಕರೆಯುತ್ತಾನೆ; ಮೇಲಿನ ಜಾತಿಯವರನ್ನು ಅವರವರ ಜಾತಿ ಹೆಸರಿನಿಂದಲೇ ಕರೆಯುತ್ತಾನೆ (ವೈಸರ್ 1988: xix-xx).

ಕರಿಂಪುರದಲ್ಲಿ ಒಟ್ಟಾಗಿ 24 ಜಾತಿಗಳಿದ್ದುವು: 1. ಬ್ರಾಹ್ಮಣ್ – ಪೂಜಾರಿ, ಉಪಾಧ್ಯಾಯ), 2. ಭಟ್ – ವಂಶವೃಕ್ಷದ ಗುಣಗಾನ ಮಾಡುವವ, 3. ಕಿಯಸ್ಥ್ – ಲೆಕ್ಕಿಗ, 4. ಸೋನಾರ್ – ಅಕ್ಕಸಾಲಿಗ, 5. ಮಾಲೀ – ಹೂಗಾರ, 6. ಕಾಚ್ಚೀ – ತರಕಾರಿ ಬೆಳೆಸುವವ, 7. ಲೋಧಾ – ಭತ್ತ ಬೆಳೆಯುವವ, 8. ಬರ್ಹ್ಯಾ – ಬಡಗಿ (ಇವನು ಲೋಹಾರ್ – ಕಮ್ಮಾರನ ಕೆಲಸವನ್ನೂ ಮಾಡುತ್ತಿದ್ದನು), 9. ನಿಘೀ (ನಾಯಿ?) – ಕ್ಷೌರಿಕ, 10. ಕಹಾರ್ – ನೀರು ತರುವವ, 11. ಗದರೀಯಾ – ಕುರುಬ, 12. ಭರ್‌ಭುಂಜಾ – ಕಾಳು ಹುರಿಯುವವ, 13. ದರ್ಜಿ – ಹೊಲಿಯುವವ, 14. ಕುಮ್ಹಾರ್ – ಕುಂಬಾರ, 15. ಮಹಾಜನ್ – ವ್ಯಾಪಾರಿ, 16. ತ್ಹೆಲಿ – ಗಾಣಿಗ, 17. ಧೋಬೀ – ಅಗಸ, 18. ಧಾನುಕ್ – ಚಾಪೆ ಹೆಣೆಯುವವ, 19. ಚಮಾರ್ – ಚರ್ಮಕಾರ (ಮಾದಿಗ ?), 20. ಭಂಗೀ – ಗುಡಿಸುವವ, ಕಕ್ಕಸು ಗುಂಡಿ ಸ್ವಚ್ಛ ಮಾಡುವವ, 21. ಫಕೀರ್ – ಸಾಂಪ್ರದಾಯಿಕ ಮುಸ್ಲಿಂ ಭಿಕ್ಷುಕ, 22. ಮಣೀಹಾರ್ – ಮುಸ್ಲಿಂ ಬಳೆಗಾರ, 23. ಧೂನಾ – ಮುಸ್ಲಿಂ ಹತ್ತಿ ಹದ (ಜಿನ್ನಿಂಗ್) ಮಾಡುವವ, 24. ತವ್ವೈಇಫ್– ಮುಸ್ಲಿಂ ನೃತ್ಯಗಾರ್ತಿ.

ಮೊದಲೆರಡು ಜಾತಿಗಳು ಬ್ರಾಹ್ಮಣ ವರ್ಣಕ್ಕೆ ಸೇರಿದುವು. ಮೂರನೇ ಸ್ಥಾನದ ಜಾತಿಯ ಒಂದು ಕುಟುಂಬ ಮಾತ್ರ ಕ್ಷತ್ರಿಯ ವರ್ಣಕ್ಕೆ ಸೇರಿದ್ದರೂ ನಾಲ್ಕನೇ ಸ್ಥಾನದಲ್ಲಿರುವ ಜಾತಿಯ ಎರಡು ಕುಟುಂಬಗಳೂ ಕ್ಷತ್ರಿಯ ವರ್ಣಕ್ಕೆ ಸೇರಿರುವ ರೀತಿಯಲ್ಲೇ ಪರಿಗಣಿಸಲಾಗಿತ್ತು. ಮೂರನೇ ವೈಶ್ಯ ವರ್ಣಕ್ಕೆ ಸೇರಿದ್ದ ಮೂರು ಮಹಾಜನ್ ಜಾತಿಯ ಕುಟುಂಬಗಳು ತದನಂತರದ ಸ್ಥಾನದಲ್ಲಿರಬೇಕಾಗಿದ್ದರೂ ಹಳ್ಳಿಯವರು ಅವರನ್ನು 15ನೇ ಸ್ಥಾನದಲ್ಲಿ ಪರಿಗಣಿಸುತ್ತಿದ್ದರು. ಕಾರಣ ಅವರ ಕುಟುಂಬದ ಹೆಂಗಸರು ಕೆಳಮಟ್ಟದ ಜಾತಿಯಿಂದ ಬಂದಿದ್ದವರಾಗಿದ್ದರು (ವೈಸರ್ 1988: 2, 10, 30–31). ಹೀಗೆ 1ರಿಂದ 16ನೇ ಜಾತಿಗಳು ಸವರ್ಣೀಯರು ಆಗಿದ್ದಾರೆ. ನಂತರದ 17ರಿಂದ 20ನೇ ಸ್ಥಾನದಲ್ಲಿ ಅಸ್ಪೃಶ್ಯ ಜಾತಿಗಳು ಮತ್ತು 21ರಿಂದ 24ನೇ ಸ್ಥಾನದಲ್ಲಿ ಜಾತಿಯಂತೆ ಪರಿಗಣಿಸಲಾದ ಮುಸ್ಲಿಂ ಗುಂಪುಗಳು ಇವೆ.

1ರಿಂದ 19ನೇ ತನಕದ ಎಲ್ಲಾ ಜಾತಿಯವರು 24 ಜಾತಿಗಳಿಂದಲೂ ಸೇವೆ ಪಡೆಯುತ್ತಿದ್ದರು; 20ನೇ ಜಾತಿ (ಭಂಗಿ)ಯವರು 18ರಿಂದ 24ನೇ ಜಾತಿಯಿಂದ ಮಾತ್ರ ಸೇವೆ ಪಡೆಯುತ್ತಿದ್ದರು; 21ರಿಂದ 24ನೇ ಮುಸ್ಲಿಂ ಜಾತಿಗಳು 1ರಿಂದ 3ನೇ ಜಾತಿಗಳನ್ನು ಬಿಟ್ಟು ಉಳಿದ ಜಾತಿಗಳಿಂದ ಸೇವೆ ಪಡೆಯುತ್ತಿದ್ದರು. 1ನೇ, 2ನೇ ಮತ್ತು 10ನೇ ಜಾತಿಗಳು 1ರಿಂದ 19ನೇ ಜಾತಿಗಳಿಗೆ ಮಾತ್ರ ಸೇವೆ ಸಲ್ಲಿಸುತ್ತಿದ್ದರೆ, 1ನೇ, 2ನೇ, 9ನೇ, 10ನೇ, 17ನೇ, 21ನೇ ಮತ್ತು 24ನೇ ಜಾತಿಗಳನ್ನು ಬಿಟ್ಟು ಉಳಿದವರು ಎಲ್ಲಾ ಜಾತಿಗಳಿಗೆ ಸೇವೆ ಸಲ್ಲಿಸುತ್ತಿದ್ದರು (ವೈಸರ್ 1988: xx-xxii).

ಬೇರೆ ಬೇರೆ ತರಹದ ಸೇವೆಗಳಿಗೆ ವಸ್ತು ಮತ್ತು ಹಣದ ರೂಪದಲ್ಲಿ ದಿನವಾರು, ಮಾಸಿಕವಾಗಿ, ಆರು ತಿಂಗಳುಗಳಿಗೊಮ್ಮೆ, ಮಾಡಿದ ಕೆಲಸಕ್ಕೆ ಮಾತ್ರ ಮತ್ತು ವಿಶೇಷ ಸಂದರ್ಭಗಳ ದಿನದಗಳಂದು ಮಾಡಿದ ಸೇವೆಗನುಗುಣವಾಗಿ ಮತ್ತು 'ಜಜ್‌ಮನ್'ರ ಖುಷಿ ಪ್ರಕಾರ 'ಪ್ರತಿಫಲ' (ಪೇಮೆಂಟ್)ಗಳನ್ನು ಕೊಡಲಾಗುತ್ತಿತ್ತು. ಈ ಪ್ರತಿಫಲಗಳ ಜೊತೆಗೆ ಬೇರೆ ಹಲವಾರು ಸೌಲಭ್ಯಗಳು ಸೇವೆ ಸಲ್ಲಿಸುವ ಪ್ರತಿಯೊಬ್ಬರಿಗೂ ಬೇರೆ ಬೇರೆ ಪ್ರಮಾಣದಲ್ಲಿ ಸಿಗುತ್ತಿದ್ದುವು. ಉದಾಹರಣೆಗಾಗಿ ಉಚಿತ ಮನೆ ನಿವೇಶನ, ಉಚಿತ ಉರವಲು, ಉಚಿತ ಊಟ, ಉಚಿತ ಬಟ್ಟೆ, ಜಾನುವಾರುಗಳಿಗೆ ಉಚಿತ ಮೇವು, ಉಚಿತ ಕಚ್ಚಾವಸ್ತುಗಳು, ಉಚಿತ ಸೆಗಣಿ, ಮನೆ ಕಟ್ಟಲು ಉಚಿತ ಮರ, ತೆರಿಗೆ ಇಲ್ಲದ ವ್ಯವಸಾಯ ಭೂಮಿ, ಸಾಲ ಸೌಲಭ್ಯ, ಹೆಚ್ಚಿಗೆ ಕೆಲಸ ಮಾಡಲು ಅವಕಾಶ, ಕೆಲಸಕ್ಕೆ ಅಗತ್ಯವಾದ ಉಪಕರಣಗಳು, ಊಳಲು ಎತ್ತುಗಳು, ಉಚಿತ ಕಚ್ಚಾವಸ್ತುಗಳು, ಉಚಿತವಾಗಿ ಜಾನುವಾರುಗಳ ಚರ್ಮ, ಸಮಾಧಿ ಮಾಡಲು ಉಚಿತ ಜಾಗ, ದಾವೆ ಹೂಡಲು ಸಹಾಯ, ರಜಾದಿನಗಳು ಇತ್ಯಾದಿ (ವೈಸರ್ 1988: xxvi).

'ಜಜ್‌ಮನಿ' ಪದ್ಧತಿಯ ತಾತ್ವಿಕ ಹಾಗೂ ಧಾರ್ಮಿಕ ಮೂಲ ಕಳೆದ 2000 ವರ್ಷಗಳಿಂದಲೂ ಸಾಮಾಜಿಕ ಮತ್ತು ಆರ್ಥಿಕ ಸಂರಚನೆಯನ್ನು ನಿರ್ದೇಶಿಸುತ್ತಿದ್ದ ಮನುಸ್ಮೃತಿ ಎಂದು ವೈಸರ್‌ರವರು ಗುರುತಿಸುತ್ತಾರೆ (ವೈಸರ್ 1988: xxvii). ಅಷ್ಟೇ ಅಲ್ಲ ಬ್ರಿಟಿಷರ ಅಧಿನದಲ್ಲಿದ್ದ 150 ವರ್ಷಗಳಲ್ಲಿಯೂ ಅವರು ಅಸ್ತಿತ್ವಕ್ಕೆ ತಂದಿದ್ದ ನ್ಯಾಯಾಲಯಗಳಲ್ಲಿಯೂ 'ಜಜ್‌ಮನಿ' ಕರ್ತವ್ಯಗಳನ್ನು ಎತ್ತಿ ಹಿಡಿಯಲಾಗಿತ್ತು (ವೈಸರ್ 1988: xxviii).

ಆದರೆ ಕರಿಂಪುರದಲ್ಲಿರುವ 24 ಕುಟುಂಬಗಳ ಕಸುಬುಗಳನ್ನು ನೋಡಿದಾಗ ಮನುಸ್ಮೃತಿಯಲ್ಲಿ ಉಲ್ಲೇಖಿಸಿದ್ದಕ್ಕಿಂತಲೂ ಬೇರೆ ರೀತಿಯಲ್ಲಿ ವ್ಯತ್ಯಾಸಗಳಾಗಿರುವುದನ್ನು ನಾವು ಗಮನಿಸಬಹುದು. ಒಂದು ಪ್ರಮುಖ ವ್ಯತ್ಯಾಸವೆಂದರೆ ಸಾಧಾರಣ ಎಲ್ಲಾ ಸವರ್ಣೀಯ ಜಾತಿಗಳಲ್ಲೂ ವ್ಯವಸಾಯ ಮಾಡುವ ಕುಟುಂಬಗಳಿದ್ದುವು. ಧೋಬೀ (ಅಗಸ) ಮತ್ತು ನಿಘೀ (ಕ್ಷೌರಿಕ) ಜಾತಿಯವರು ಬಿಟ್ಟು ಉಳಿದೆಲ್ಲಾ ಜಾತಿಗಳು ಒಂದಲ್ಲ ಒಂದು ರೀತಿಯಲ್ಲಿ ವ್ಯವಸಾಯದಲ್ಲಿ ತೊಡಗಿವೆ (ವೈಸರ್ 1988: 17, 125). ಅವರಲ್ಲೂ ಕಹಾರ್ (ನೀರು ತರುವವರು), ಗದರೀಯಾ (ಕುರುಬ) ಮತ್ತು ಧಾನುಕ್ (ಚಾಪೆ ಹೆಣೆಯುವವರು) ಜಾತಿಗಳಲ್ಲಿ ಹೆಚ್ಚಿನವರು ಕೃಷಿ ಕಾರ್ಮಿಕರಾಗಿದ್ದಾರೆ (ವೈಸರ್ 1988: 25, 26, 33–34). ಎಲ್ಲಾ ಚಮಾರರಿಗೆ ಅಲ್ಪಸ್ವಲ್ಪ ಪ್ರಮಾಣದ ಇನಾಮ್ತಿ ಜಮೀನಿದ್ದರೂ ಅದರಲ್ಲಿ ಕೃಷಿ ಮಾಡಲು ಅವರಿಗೆ ಸಮಯ ಸಿಕ್ಕಿರುತ್ತಿರಲಿಲ್ಲ (ವೈಸರ್ 1988: 35–36).

ಅಸ್ಪೃಶ್ಯರಾದ ಚಮಾರರ ಸೇವಾ ಪಟ್ಟಿಯನ್ನು ಗಮನಿಸಿದರೆ ಕರ್ನಾಟಕದ ಮಾದಿಗ ಜನಾಂಗದವರು 'ಬಿಟ್ಟಿ ಚಾಕ್ರಿ'ಯಲ್ಲಿ ಮಾಡುವ ಕೆಲಸಗಳಿಗೆ ಇರುವ ಸಾಮ್ಯತೆ ಎದ್ದು ಕಾಣುತ್ತದೆ. ಚಮಾರರ ಕೆಲಸಕಾರ್ಯಗಳು ಹೀಗಿವೆ: ಅವರ ಮುಖ್ಯ ಕೆಲಸ ಚರ್ಮಕ್ಕೆ ಸಂಬಂಧಪಟ್ಟಿದ್ದರೂ ಅದು ಅವರ ಜೀವನದ

ಅತ್ಯಲ್ಪ ಭಾಗವಾಗಿದೆ. ಹಳ್ಳಿಯಲ್ಲಿ ಅವರ ಸ್ಥಾನ ಗುಲಾಮರಿಗೆ ಸಮಾನವಾದುದು. ಸತ್ತ ಪ್ರಾಣಿಗಳ ಚರ್ಮ ಸುಲಿದು, ಬಿಸಿಲಿನಲ್ಲಿ ಒಣಗಿಸಿ ಅದನ್ನು ಮಾರುತ್ತಾರೆ. ಹಳ್ಳಿಯಲ್ಲಿ ಜನರು ಬಳಸುವ ಶೂಗಳಂತಿದ್ದ ಚಪ್ಪಲಿಗೆ ಒರಟಾಗಿ ತೇಪೆ ಹಾಕುತ್ತಾರೆ. ನೀರಾವರಿ ಬಳಸುವ ಬುಟ್ಟಿಗೆ ಚರ್ಮದ ಹೊದಿಕೆ ಹಾಕುತ್ತಾರೆ ಮತ್ತು ಹೊಲಗದ್ದೆಗಳಿಗೆ ನೀರು ಹಾಯಿಸಲು ನೀರು ಎತ್ತಲು ಬೇಕಾದ ದೊಡ್ಡ ಚರ್ಮದ ಚೀಲಗಳನ್ನು ಹೊಲಿಯುತ್ತಾರೆ.

ಆದರೆ ಚಮಾರನ ಹೆಚ್ಚಿನ ಸಮಯ ಅವನ ಯಜಮಾನನ ಅಜ್ಞೆಗಳನ್ನು ನೆರವೇರಿಸುವುದರಲ್ಲಿ ಕಳೆಯುತ್ತದೆ. ಹಳ್ಳಿಯಲ್ಲಿ ಅವನನ್ನು ಒಬ್ಬ ವ್ಯಕ್ತಿಯಾಗಿ ಪರಿಗಣಿಸದೇ ಇಂತಿಂತವರ ಚಮಾರರೆಂತಲೇ ಕರೆಯಲ್ಪಡುತ್ತಾನೆ. ತನ್ನ ಕುಟುಂಬದ ಅತ್ಯಂತ ಖಾಸಗಿ ಅಥವಾ ಆಪ್ತ ಸಂಗತಿಗಳನ್ನು ಬಿಟ್ಟರೆ ಅವನ ಸಮಯ ಮತ್ತು ಸೇವೆ, ಅವನ ಗಂಡು ಮಕ್ಕಳ ಸಮಯ ಮತ್ತು ಸೇವೆ ಅವನ ಯಜಮಾನರಿಗೆ ಮೀಸಲಾಗಿರುವುದು. ಅವನ ಹೆಂಡತಿಯೂ ಬಯಸಿದಾಗ ಹೊಲಗದ್ದೆಗಳಲ್ಲೂ ಹೆಚ್ಚಿನ ಕೆಲಸವಿದ್ದಾಗ ಮನೆಯಲ್ಲೂ ಸಹಾಯ ಮಾಡಲು ಸಿದ್ಧಳಿರಬೇಕು. ಅವನ ಯಜಮಾನನ ಹಿತಾಸಕ್ತಿಗಳೇ ಪ್ರಮುಖ. ಸ್ವಲ್ಪ ಸಮಯ ಸಿಕ್ಕರೆ ಅದನ್ನು ಅವನು ಮತ್ತು ಅವನ ಗಂಡು ಮಕ್ಕಳು ಅವರಿಗೆ ಬಿಟ್ಟುಕೊಟ್ಟ ಇನಾಮ್ತಿ ಜಮೀನಿನಲ್ಲಿ ಕಳೆಯುತ್ತಾರೆ. ತನ್ನ ಯಜಮಾನನ ಅನುಮತಿಯಿಲ್ಲದೇ ಅವನು ಸ್ವಂತದ ಯಾವುದೇ ಯೋಜನೆ ಹಾಕಲಾರ ಹಾಗೂ ಯಾವುದೇ ಕೆಲಸ ಮಾಡಲಾರ.

ಹೊಲಗದ್ದೆಗಳಲ್ಲಿ ಅವನು ಎಲ್ಲಾ ತರಹದ ಕೆಸಗಳನ್ನು ಮಾಡಬೇಕು: ಗೊಬ್ಬರ ಹೊತ್ತು ತಂದು ಅದನ್ನು ಚೆಲ್ಲುವುದರಿಂದ ಹಿಡಿದು ಕಣದಲ್ಲಿ ಗಾಳಿ ಬೀಸಿದ ದವಸಧಾನ್ಯಗಳನ್ನು ಮನೆಯೊಳಗೆ ಸಾಗಿಸುವ ತನಕ. ಮಳೆಗಾಲದಲ್ಲಿ ಜೋರಾದ ಮಳೆ ಬರುವ ಮುಂಚೆಯೇ ಬಿಸಿಲನಲ್ಲಿ ಒಣಗಿಸಿ ಇಟ್ಟಿಗೆಗಳನ್ನು ಮಾಡಬೇಕು; ಕುಸಿದ ಮಣ್ಣು ಗೋಡೆಗಳನ್ನು ಕಟ್ಟಬೇಕು; ಅವುಗಳನ್ನು ಮೆತ್ತಬೇಕು. ಅವರು ಬುಟ್ಟಿಗಳನ್ನೂ ಹಗ್ಗಗಳನ್ನೂ ಹೆಣೆಯಬೇಕು; ದನಕರುಗಳಿಗೆ ಮೇವು ಕೊಡಬೇಕು; ಕೊಟ್ಟಿಗೆಗಳನ್ನು ಸ್ವಚ್ಛ ಮಾಡಬೇಕು. ಅವನು ಛಾವಣಿಗಳನ್ನು ಹೊದಿಯಬೇಕು ಅಥವಾ ಅವುಗಳನ್ನು ರಿಪೇರಿ ಮಾಡಬೇಕು; ಇಟ್ಟಿಗೆಗಳನ್ನು ಮಾಡಬೇಕು; ಕಲ್ಲು ಬಂಡೆಗಳನ್ನು ಪುಡಿಮಾಡಬೇಕು ಮತ್ತು ಬಾವಿಗಳನ್ನು ತೊಡಬೇಕು.

ಚಮಾರನ ಮನೆಯ ಹೆಂಗಸರು ಕೂಡಾ ಅವನ ಯಜಮಾನನ ಮನೆಯಲ್ಲಿ ಬೇರೆ ಬೇರೆ ಕೆಲಸಗಳನ್ನು ಮಾಡಬೇಕು. ಚಮಾರನು ಮನೆಯ ಹೊರಭಾಗವನ್ನು ಮೆತ್ತುವಾಗ ಅವನ ಹೆಂಡತಿಯು ಮನೆಯ ಒಳಗಡೆಯ ಮೇಲುಭಾಗವನ್ನು ಮೆತ್ತುತ್ತಿದ್ದರೆ ಯಜಮಾನನ ಮನೆಯ ಹೆಂಗಸರು ಒಳಗಡೆಯ ಕೆಳಭಾಗವನ್ನು ಮಾತ್ರ ಮೆತ್ತುತ್ತಾರೆ. ಚಮಾರನ ಮನೆ ಹೆಂಗಸರು ಅಸ್ಪೃಶ್ಯರು ಮಾತ್ರ ಮಾಡಬಹುದಾದಂತಹ ಕೆಲಸಗಳಾದ ದವಸಧಾನ್ಯಗಳನ್ನು ಸ್ವಚ್ಛಮಾಡುವುದು, ಅವನ್ನು ಹಿಟ್ಟು ಮಾಡುವುದು, ಭತ್ತವನ್ನು ಕುಟ್ಟುವುದು, ಹತ್ತಿಯನ್ನು ಹದಮಾಡುವುದು ಮುಂತಾದ ಕೆಲಸಗಳಲ್ಲಿ ಮಾತ್ರ ಸಹಾಯ ಮಾಡುತ್ತಾರೆ. ಹೊಲದಲ್ಲಿ ಅವರು ಕಬ್ಬನ್ನು ಕಡಿಯುತ್ತಾರೆ; ಗೋದಿ ಮತ್ತಿತರ ದವಸಧಾನ್ಯಗಳ

ಕಟಾವು ಮಾಡುತ್ತಾರೆ ಮತ್ತು ಹತ್ತಿಯನ್ನು ಬಿಡಿಸುತ್ತಾರೆ. ಚಮಾರರಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಬ್ರಾಹ್ಮಣರು ಅವರ ಸೇವೆಗೆ ಜೋತುಬಿದ್ದಿರುತ್ತಾರೆ (ವೈಸರ್ 1988: 34–37).

**3.5 ಒಡಿಶಾದ 'ಬರ್ತನ್'**

'ಬರ್ತನ್' ಎಂಬ ಪದ್ಧತಿಯು ಒಡಿಶಾದ ಕರಾವಳಿ ಪ್ರದೇಶದ ಕೆಲವು ಜಿಲ್ಲೆಗಳಲ್ಲಿ ಈಗಲೂ ಚಾಲ್ತಿಯಲ್ಲಿದೆ. ಒಡಿಶಾದಲ್ಲಿ ಅನುಸೂಚಿತ ಜಾತಿಗಳೆಂದು ಪರಿಗಣಿಸಲಾದ ಕ್ಷೌರಿಕರು ಮತ್ತು ಅಗಸರು ಸಾಂಪ್ರದಾಯಿಕವಾಗಿ ಊರವರಿಗೆ 'ಬರ್ತನ್' ಎಂಬ ಪದ್ಧತಿಯಡಿ ಹಲವಾರು ಸೇವೆಗಳನ್ನು ನೀಡುವ ನಿರ್ಬಂಧವಿದೆ. ಕ್ಷೌರಿಕರು ಕ್ಷೌರ ಮಾಡುವುದರ ಜೊತೆಗೆ ವಿಶೇಷ ಸಂಬರ್ಭಗಳಲ್ಲಿ ಕೆಲವು ಅವಮಾನಕರ ಸೇವೆಗಳನ್ನೂ ಸಲ್ಲಿಸಬೇಕಾಗುತ್ತದೆ. ಮದುವೆ ಸಂದರ್ಭಗಳಲ್ಲಿ ಅತಿಥಿಗಳ ಪಾದ ತೊಳೆಯಬೇಕು. ಮದುವೆ ಮತ್ತು ಇನ್ನಿತರ ಶುಭಕಾರ್ಯಗಳ ಸಂದರ್ಭಗಳಲ್ಲಿ ಔತಣದ ನಂತರ ಊಟ ಮಾಡಿ ಬಿಟ್ಟ ಎಲೆಗಳನ್ನು ಎತ್ತಿ ಹಾಕಬೇಕು (ಪಾಟ್‌ನಾಯ್ಕ್ ಕೆ. 2011).

ಮೇಲ್ಜಾತಿಯ ಮದುವೆಯಾದ ಪ್ರತಿ ಗಂಡಸಿಗೆ 15 ಕಿಲೊ ಗ್ರಾಂ ಲೆಕ್ಕದಲ್ಲಿ ಕ್ಷೌರಿಕರಿಗೆ ವರ್ಷಕ್ಕೆ ಒಂದು ಸಾರಿ ಭತ್ತವನ್ನು ಮುಂಗಡವಾಗಿ ಕೊಡಲಾಗುತ್ತದೆ. ಅದಕ್ಕೆ ಪ್ರತಿಯಾಗಿ ಕ್ಷೌರಿಕರು ವರ್ಷವಿಡೀ ಆ ಕುಟುಂಬದವರೆಲ್ಲರಿಗೂ ಅವಿವಾಹಿತ ಗಂಡು ಮಕ್ಕಳನ್ನೂ ಸೇರಿಸಿಕೊಂಡು ಕ್ಷೌರ ಮಾಡಬೇಕಾಗುತ್ತದೆ. ಜೊತೆಗೆ ಕ್ಷೌರಿಕರು ಮನೆಗೆ ಬಂದ ಅತಿಥಿಗಳ ಪಾದ ತೊಳೆಯಬೇಕು. ಸಾವು ಮತ್ತು ಮದುವೆಯ ಸಂದರ್ಭಗಳಲ್ಲಿಯೂ ಕ್ಷೌರಿಕರು ಇನ್ನಿತರ ಅವಮಾನಕರ ಸೇವೆಗಳನ್ನು ಮಾಡಬೇಕಾಗುತ್ತದೆ. (ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ: 2008) ಅವರ ಎಲ್ಲಾ ಸೇವೆಗಳಿಗೆ ಸಿಗುವ 15 ಕಿಲೊ ಗ್ರಾಂ ಭತ್ತ ಯಾವುದೇ ಕಾರಣಕ್ಕೂ ಸರಿಯಾದ ಕೂಲಿಯಲ್ಲ.

'ಬರ್ತನ್' ಪದ್ಧತಿಯಲ್ಲಿ ಪಾದಸೇವೆ, ಮುಟ್ಟಾದ ಬಟ್ಟೆಗಳನ್ನು ತೊಳೆಯುವುದು ಮುಂತಾದ ಅವಮಾನಕರ ಸೇವೆ ಸಲ್ಲಿಸುವುದು ಸುಸ್ಪಷ್ಟ. 'ಬಿಟ್ಟಿ ಚಾಕ್ರಿ'ಯಲ್ಲೂ ಸೆಗಣಿ ಬಳಿಯುವುದನ್ನು ಅವಮಾನಕರವೆಂತಲೇ ದಲಿತರೂ ಸೇರಿದಂತೆ ಎಲ್ಲರೂ ಪರಿಗಣಿಸುತ್ತಾರೆ. ಬಟ್ಟೆ ಒಗೆಯುವವರು, ಕ್ಷೌರ ಮಾಡುವವರು ಒಡಿಶಾದಲ್ಲಿ ಅನುಸೂಚಿತ ಜಾತಿಗೆ ಸೇರಿದಂತೆ ಕರ್ನಾಟಕದಲ್ಲಿ ಅ ಕೆಲಸ ಮಾಡುವವರು ಆ ಪರಿಗಣನೆಗೆ ಒಳಪಟ್ಟಿಲ್ಲವಾದರೂ ಇಲ್ಲಿಯೂ ಅದೇ ರೀತಿಯ ಅವಮಾನಕ್ಕೆ ಒಳಗಾಗಿದ್ದಾರೆ. ಈಗಲೂ ಕೂಡಾ ಆ ಸಮುದಾಯದಲ್ಲಿ ಹಲವರು ಹಳ್ಳಿಗಳಲ್ಲಿ ಆಯಾಗಾರಿಕೆ ಲೆಕ್ಕದಲ್ಲೇ ತಮ್ಮ ಸೇವೆಗೆ ವೇತನವನ್ನು ಪಡೆಯುತ್ತಿದ್ದಾರೆ. ಆದರೆ 'ಬರ್ತನ್'ನಲ್ಲಿ ಮದುವೆಯಾದ ಪ್ರತಿ ಗಂಡಸಿಗೆ 15 ಕಿಲೊ ಗ್ರಾಂನಂತೆ ಮುಂಗಡವಾಗಿ ಆ ವೇತನವನ್ನು ಕೊಡಲಾಗುತ್ತದೆ. 'ಬಿಟ್ಟಿ ಚಾಕ್ರಿ'ಯಲ್ಲಿ ಸುಗ್ಗಿ ಸಮಯದಲ್ಲಿ ಮಾತ್ರ ಅಂದರೆ ವರ್ಷದ ಕೊನೆಯಲ್ಲಿ ದವಸಧಾನ್ಯಗಳನ್ನು ಕೊಡಲಾಗುತ್ತದೆ.

**3.6 ಕೊಡಗಿನ 'ಹಿಟ್ಟಿ ಬಿಟ್ಟಿ ಚಾಕ್ರಿ'**

ಕೊಡಗಿನ ಜಮ್ಮ ಭೂ ಹಿಡುವಳಿದಾರರಿಗೆ[34] ಕೆಲವು ಸೌಕರ್ಯಗಳನ್ನು ಒದಗಿಸುವ ಸಲುವಾಗಿ ಅವರು ಸಲ್ಲಿಸಲು ನಿರ್ದಿಷ್ಟಗೊಳಿಸಿರುವ ಸೇವೆಗಳಿಗೆ 'ಹಿಟ್ಟಿ ಬಿಟ್ಟಿ ಚಾಕ್ರಿ' ಎಂದು ಕರೆಯುತ್ತಾರೆ. ರಾಜರು ಪ್ರತಿ ರೈತರಿಗೆ ಕೆಲವು ಹಕ್ಕುಗಳನ್ನು ಒಳಗೊಂಡಿರುವ ಜಮ್ಮ ಭೂಮಿಯ ಒಡೆತನವನ್ನು ಘೋಷಿಸುವ ಒಂದು ಸನದನ್ನು ನೀಡುತ್ತಿದ್ದರು. ಅದರಲ್ಲಿ ಆ ಭೂಮಿಯ ಮೇಲಿನ ತೆರಿಗೆಯನ್ನು ಪ್ರತಿ ನೂರು ಬತ್ತಿ[35]ಗಳಿಗೆ ಐದು ರೂ.ಗಳಂತೆ ಶಾಶ್ವತವಾಗಿ ವಿಧಿಸಲಾಗುತ್ತಿತ್ತು. ಜಮ್ಮ ಭೂಮಿಯನ್ನು ಭಾಗಶಃ ವ್ಯವಸಾಯ ಮಾಡಿದರೂ ಪೂರ್ತಿ ಜಮ್ಮಾ ಭೂಮಿ (ವರ್ಗ) ಮೇಲೆ ಭೂಕಂದಾಯವನ್ನು ಕಟ್ಟಬೇಕಾಗಿತ್ತು. ಜಮ್ಮಾ ಹಿಡುವಳಿಗೆ ವಿಧಿಸಲಾದ ತೆರಿಗೆಯು ಅವರು ಸಲ್ಲಿಸುವ ಸೇವೆಗೆ ಪ್ರತಿಯಾಗಿ ಬೇರೆ ಹಿಡುವಳಿಗಳ ಮೇಲೆ ವಿಧಿಸಿದ ತೆರಿಗೆಗಳಿಗಿಂತ ಕಡಿಮೆಯಾಗಿತ್ತು. ಜಮ್ಮ ಭೂಮಿ ಮೇಲಿನ ಒಡೆತನ 'ಒಕ್ಕ'[36]ದೊಳಗೆ ಇರಬೇಕಾಗಿದ್ದು ಅದನ್ನು ಭಾಗ ಮಾಡುವಂತಿರಲಿಲ್ಲ, ಮಾರುವಂತಿರಲಿಲ್ಲ. 1834ರಲ್ಲಿ ಬ್ರಿಟಿಷರು ಕೊಡಗನ್ನು ವಶಪಡಿಸಿಕೊಂಡಿದ್ದು 1985ರಿಂದ ಹೊಸದಾಗಿ ಜಮ್ಮ ಹಿಡುವಳಿಗಳನ್ನು ರಚಿಸಿ ಹಂಚುವುದನ್ನು ನಿಲ್ಲಿಸಿದ್ದರು (ವಿಜಯ 1993: 20).

ಜಮ್ಮ ಭೂಮಿಗೆ ಒದಗಿಸಲಾದ ಮೇಲಿನ ಸೌಕರ್ಯಗಳಿಗೆ ಪ್ರತಿಯಾಗಿ ವಿಧಿಸಲಾದ ಸೇವೆಗಳೇ 'ಹಿಟ್ಟಿ ಬಿಟ್ಟಿ ಚಾಕ್ರಿ'. ಅದು ಒಂದು ರೀತಿಯ ಗುಲಾಮಿತನದಂತೆ ಇತ್ತು. ಆದ್ದರಿಂದ ಅದು ಒಂದು 'ಹಕ್ಕು' ಅನಿಸಿದ್ದರೂ ಅದು ಮೂಲತಃ ಒಂದು ಸೇವೆ ಅಥವಾ ಪುಕ್ಕಟೆ ದುಡಿಮೆ ಅಥವಾ ಬಲಾತ್ಕಾರದ ದುಡಿಮೆ (ವಿಜಯ 1993: 152, 154, 158).ಹಿಟ್ಟಿ ಬಿಟ್ಟಿ ಚಾಕ್ರಿಗೆ ಅರಮನೆ ಚಾಕ್ರಿ ಎಂತಲೂ (ವಿಜಯ 1993: 43) ಸ್ವಾಮಿ ಕಾರ್ಯ (ವಿಜಯ 1993: 53)ವೆಂತಲೂ ಕರೆಯಲಾಗಿತ್ತು. ಅರಮನೆಯಲ್ಲಿದ್ದಷ್ಟೂ ದಿನ ಅರಮನೆಯಲ್ಲೇ ಅವರಿಗೆ ಉಟೋಪಚಾರಗಳ ಸೌಲಭ್ಯಗಳನ್ನು ಅರಮನೆಯಿಂದಲೇ ಒದಗಿಸಲಾಗುತ್ತಿತ್ತು[37] (ವಿಜಯ 1993: 158). ಜಮ್ಮ ಹಿಡುವಳಿದಾರರು ತಿಂಗಳಿಗೆ 15 ದಿನ ರಾಜರ ಅರಮನೆಯಲ್ಲಿ ಚಾಕ್ರಿಯನ್ನು ಮಾಡಬೇಕಾಗಿತ್ತು. ಹಬ್ಬದ ದಿನಗಳಲ್ಲಿ ಅರಮನೆಯಲ್ಲಿರಬೇಕಾಗಿತ್ತು. ರಾಜರು ಶಿಕಾರಿಗೆ ಹೋದಾಗ ಸ್ವಂತ ಚೂರಿ ಬಂದೂಕುಗಳನ್ನು ಹಿಡಿದುಕೊಂಡು ಅವರ ಜೊತೆ ಹೋಗಬೇಕಾಗಿತ್ತು. ಶಿಕಾರಿಗೆ ಹೋದಾಗ ಠಿಕಾಣಿ ಹೂಡುವ ಜಾಗಗಳನ್ನು ಸಿದ್ಧಪಡಿಸುವುದೂ ಶಿಕಾರಿ ತಂಡಕ್ಕೆ ಊಟ ಒದಗಿಸುವುದೂ 'ಹಿಟ್ಟಿ ಬಿಟ್ಟಿ ಚಾಕ್ರಿ'ಯ ಭಾಗವೇ. ಜೊತೆಗೆ ಇತರ ಮಿಲಿಟರಿ ಮತ್ತು ಪೋಲೀಸ್ ಸೇವೆಗಳನ್ನೂ ಸಲ್ಲಿಸಬೇಕಾಗಿತ್ತು. ಜಮ್ಮ ರೈತರು ಅರೆಮನೆಗಳಿಗೆ ಹಳ್ಳಿಗಳಿಂದ ಅಂಚೆ, ಹಾಲು, ಹಣ್ಣು ತರಕಾರಿಗಳನ್ನು ಕೊಂಡೊಯ್ಯಬೇಕಾಗಿತ್ತು. ಹೊರುವುದು, ಅಗೆಯುವುದು, ಕಟ್ಟುವುದು ಮುಂತಾದ ಯಾವುದೇ ಬೆವರು

---

34 ಕೊಡಗಿನ ಭೂ ಹಿಡುವಳಿದಾರರು ಎನ್ನುವಾಗ ಹೆಚ್ಚಾಗಿ ಕೊಡವರು ಅಥವಾ ಕೊಡಗು ಜನಾಂಗವರೆಂದೇ ಪರಿಗಣಿಸಲಾಗುತ್ತದೆ. ಆದರೆ ಜಮ್ಮ ಭೂಹಿಡುವಳಿಗಳನ್ನು ಕೊಡವ ಜನಾಂಗದವರಲ್ಲದವರೂ ಪಡೆದಿದ್ದರು (ವಿಜಯ 1993: 6, 16, 19).

35 ಒಂದು ಬತ್ತಿ ಅಂದರೆ ಸುಮಾರು ಮೂರು ಎಕ್ರೆ ಆಗುತ್ತದೆ.

36 ಕೊಡಗಿನ ಅವಿಭಾಜ್ಯ ಕುಟುಂಬಕಿರುವ ಹೆಸರು.

37 ಅಂತಲೇ ಆ ಸೇವೆಗಳಿಗೆ 'ಹಿಟ್ಟ ಬಿಟ್ಟ ಚಾಕ್ರಿ' ಅಥವಾ ಹಿಟ್ಟಿಗಾಗಿ ಪುಕ್ಕಟೆ ಸೇವೆ ಎಂಬ ಹೆಸರು ಬಂದಿರಬಹುದು.

ಸುರಿಸುವ ಕೆಲಸವನ್ನೂ ಮಾಡಬೇಕಾಗಿತ್ತು (ವಿಜಯ 1993: 155, 158). ಪ್ರತಿದಿನ ಸಾವಿರಾರು ಜನ ಅರಮನೆಯಲ್ಲಿ 'ಹಿಟ್ಟಿ ಬಿಟ್ಟಿ ಚಾಕ್ರಿ'ಗೆ ಅರಮನೆಯಲ್ಲಿ ಕೂಡುತ್ತಿದ್ದರು (ವಿಜಯ 1993: 156).

ಜಮ್ಮ ಭೂಹಿಡುವಳಿದಾರರು ತಾವು ನೀಡುವ ಸೇವೆಗಳಿಗೆ ಅನುಕೂಲವಾಗಲೆಂದು ಅವರಿಗೆ ಬಂದೂಕುಗಳನ್ನು ಇಡುವ ಮತ್ತು ಬಳಸಿಕೊಳ್ಳುವ 'ಹಕ್ಕ'ನ್ನೂ ನೀಡಲಾಗಿತ್ತು (ವಿಜಯ 1993: 156, 227–232). ಈ ಹಕ್ಕೇ ಈಗ ಕೊಡವ ಜನಾಂಗದವರು ತಮಗೆ ವಂಶವಾಹಿಯಾಗಿ ಬಂದಿದೆ ಎಂದು ಪ್ರತಿಪಾದಿಸುವ ಯುದ್ಧೋತ್ಸಾಹಿ ಗುಣದ ಮೂಲ.

ಬ್ರಿಟಿಷರು ಇಂತಹ ಕೇಂದ್ರೀಕೃತ ಸೇವೆಗಳನ್ನು ಬದಲಾಯಿಸಿ ತಮ್ಮ ಆಡಳಿತದ ನೆರವಿಗಾಗಿ ಜಮ್ಮ ಹಿಡುವಳಿದಾರರು 'ಹಿಟ್ಟಿ ಬಿಟ್ಟಿ ಚಾಕ್ರಿ'ಯಡಿ ಬ್ರಿಟಿಷ್ ಅಧಿಕಾರಿಗಳಿಗೆ ವಿವಿಧ ಸೇವೆಗಳನ್ನು ಹಳ್ಳಿಗಳಲ್ಲಿ ಕೊಡುವಂತೆ ನೋಡಿಕೊಂಡರು. ಅವು ಈ ತೆರನಿದ್ದವು: ರಾಜ್ಯದ ಹೊರಗಿನಿಂದ ಬರುವ ದಾಳಿಗಳನ್ನು ಎದುರಿಸಲು ನೆರವು, ಆಂತರಿಕ ದಂಗೆಗಳನ್ನು ಹತ್ತಿಕ್ಕಲು ನೆರವು, ಒಟ್ಟುಗೂಡಿಸಿದ ಕಂದಾಯದ ರಕ್ಷಣೆ, ಜೈಲುಗಳ ರಕ್ಷಣೆ, ಅಧಿಕಾರಿಗಳ ಪ್ರಯಾಣ ಸಮಯದಲ್ಲಿ ಸಹಾಯ ಒದಗಿಸುವುದು, ಅವರಿಗೆ ಟೆಂಟುಗಳನ್ನು ಹಾಕಿ ಕೊಡುವುದು, ಅವರ ದಸ್ತಾವೇಜುಗಳನ್ನು ಸಾಗಿಸುವುದು ಇತ್ಯಾದಿ. ಆದರೆ ಮೊದಲು ರಾಜರಿಗೆ ಕೊಡುವ ಸೇವೆಯ ದೀರ್ಘ ಅವಧಿಗೆ,ಅಂದರೆ ಪ್ರತಿ ತಿಂಗಳಲ್ಲಿ 15 ದಿನಗಳಿಗೆ, ಹೋಲಿಸಿದರೆ ಜಮ್ಮ ಹಿಡುವಳಿದಾರರು ವರ್ಷಕ್ಕೆ ಕೇವಲ 15 ದಿನ ಮಾತ್ರ ತಮ್ಮ ಕರ್ತವ್ಯಗಳನ್ನು ಬ್ರಿಟಿಷರಿಗೆ ಪೂರೈಸಬೇಕಾಗಿತ್ತು (ವಿಜಯ 1993: 163).

ಪುಕ್ಕಟೆ ಸೇವೆಗಳ ಜೊತೆ 'ಹಿಟ್ಟಿ ಬಿಟ್ಟಿ ಚಾಕ್ರಿ'ಗೆ ಇನ್ನೊಂದು ಮುಖವೂ ಇದೆ. ಅದು ಒಂದು ಅವಮಾನಕರ ಸೇವೆಯೂ ಆಗಿತ್ತು (ವಿಜಯ 1993: 161, 166). ಅವಮಾನಕರ ಮಾತ್ರವಲ್ಲ 'ಹಿಟ್ಟಿ ಬಿಟ್ಟಿ ಚಾಕ್ರಿ'ಯನ್ನು ಸಲ್ಲಿಸಲು ತಪ್ಪಿಸುತ್ತಿದ್ದವರಿಗೆ ಶಿಕ್ಷೆಯನ್ನೂ ಕೊಡಲಾಗುತ್ತಿತ್ತು. ಅದು ಕೆಲವೊಮ್ಮೆ ಚಾಟಿಯೇಟುಗಳ ರೂಪವನ್ನೂ ಪಡೆಯುತ್ತಿತ್ತು (ವಿಜಯ 1993: 159).

ಆದರೆ ಕ್ರಮೇಣ ಜಮ್ಮ ಹಿಡುವಳಿದಾರರು ಪುಕ್ಕಟೆ ದುಡಿಯಬೇಕಾದ, ಅವಮಾನಕರ, ತಪ್ಪಿದರೆ ಶಿಕ್ಷಿಸಬಹುದಾದ ಸೇವೆಗಳನ್ನು ವಿರೋಧಿಸಿ ಅವನ್ನು ನಿಲ್ಲಿಸಲು ಹಲವಾರು ಪ್ರಯತ್ನಗಳನ್ನು ಮಾಡಿದರು. ಪರಿಣಾಮವಾಗಿ ಐದು ಪ್ರತಿಷ್ಠಿತ ಕೊಡವ ಕುಟುಂಬಗಳು ವಿನಾಯತಿಯನ್ನು ಪಡೆಯುವಲ್ಲಿ ಯಶಸ್ವಿಯಾದರು (ವಿಜಯ 1993: 172). 1924ರಲ್ಲಿ ಕೂರ್ಗ್ ವಿಧಾನ ಪರಿಷತ್ತನ್ನು ರಚಿಸಿದಾಗಿನಿಂದಲೂ ಅದರ ಸಭೆಗಳಲ್ಲಿ 'ಹಿಟ್ಟಿ ಬಿಟ್ಟಿ ಚಾಕ್ರಿ'ಯನ್ನು ಸಂಪೂರ್ಣವಾಗಿ ನಿಲ್ಲಿಸಲು ವಿರೋಧಗಳು ಆಗಿಂದಾಗ್ಗೆ ಬರುತ್ತಿದ್ದವು (ವಿಜಯ 1993: 183). ಆದರೆ ಬ್ರಿಟಿಷರು ಅದನ್ನು ಸಂಪೂರ್ಣವಾಗಿ ನಿಲ್ಲಿಸದೇ ಗುಲಾಮಿತನದ ಸಂಕೇತವಾಗಿದ್ದ 'ಹಿಟ್ಟಿ ಬಿಟ್ಟಿ ಚಾಕ್ರಿ'ಯನ್ನು ಕೊಡವರ ವಿಶಿಷ್ಟ ಜನಾಂಗೀಯ, ಸಾಂಸ್ಕೃತಿಕ, ಸ್ವಾಮಿನಿಷ್ಠೆಯ ಸಂಕೇತವಾಗುವ ರೀತಿಯಲ್ಲಿ ಪರಿವರ್ತಿಸುವಲ್ಲಿ

ಯಶಸ್ವಿಯಾದರು (ವಿಜಯ 1993: 184, 233–244). ಅದನ್ನೇ ಈಗಿನ ಕೊಡವ ಜನಾಂಗದ ಕೆಲ ಮುಖಂಡರು ಬ್ರಿಟಿಷರು ವಿಶಿಷ್ಟ ಜನಾಂಗೀಯ-ಸಾಂಸ್ಕೃತಿಕ ಸಂಕೇತಗಳಾಗಿ ತಿರುವು ಕೊಟ್ಟಿದ್ದ, ಹಿಂದೆ ಗುಲಾಮಿ ಸಂಕೇತವಾಗಿದ್ದ 'ಹಿಟ್ಟಿ ಬಿಟ್ಟಿ ಚಾಕ್ರಿ'ಯಲ್ಲಿನ ಸೇವೆ ಮತ್ತು ಹಕ್ಕುಗಳನ್ನು ತಮ್ಮ ವಿಶಿಷ್ಟ ಜನಾಂಗೀಯ ಮತ್ತು ಸಾಂಸ್ಕೃತಿಕ ಲಕ್ಷಣಗಳೆಂದು ಪ್ರತಿಪಾದಿಸುತ್ತಾ ಕೊಡಗು ತಮ್ಮ 'ಜನ್ಮ ಸಿದ್ಧ ಹಕ್ಕು' 'ಕೊಡವರಿಗಾಗಿಯೇ ಕೊಡಗು' 'ಕೊಡವರೇ ಕೊಡಗು ಮಣ್ಣಿನ ಮಕ್ಕಳು' ಎಂಬ ಆಧಾರ ರಹಿತ ಪ್ರಚೋದನೆ, ಬೇಡಿಕೆ ಮತ್ತು ಒತ್ತಾಯಗಳಿಗೆ ಕೊಡವ ಜನಾಂಗದವರನ್ನು ಸಜ್ಜುಗೊಳಿಸುತ್ತಿದ್ದಾರೆ (ವಿಜಯ 1993: 1–4, 11–16, 18).

ಆದರೆ 'ಹಿಟ್ಟಿ ಬಿಟ್ಟಿ ಚಾಕ್ರಿ'ಯ ಸುದೀರ್ಘ ಇತಿಹಾಸದಲ್ಲಿ ಗಮನಿಸಬೇಕಾದ ಒಂದು (ವಿಜಯ 1993: 156) ಮುಖ್ಯ ಅಂಶವೇನೆಂದರೆ ಮೊದಲು ರಾಜರು ನಂತರ ಬ್ರಿಟಿಷರ ಸಮಕ್ಷಮ ಹೇಗೆ ಜಮ್ಮ ಹಿಡುವಳಿದಾರರು, ಪ್ರತ್ಯೇಕವಾಗಿ ಕೊಡವರು, ಗುಲಾಮರಂತೆ ಬಲಾತ್ಕಾರದ ಸೇವೆ ಕೊಡುವ ನಿರ್ಬಂಧಕ್ಕೆ ಒಳಗಾಗಿದ್ದರೋ ಅದಕ್ಕಿಂತ ಹೀನಾಯವಾಗಿ ದಲಿತರು ಮತ್ತು ಮೂಲನಿವಾಸಿ ಜನಾಂಗಗಳು 'ಹಿಟ್ಟಿ ಬಿಟ್ಟಿ ಚಾಕ್ರಿ'ಯಡಿ ಇನ್ನೊಂದು ರೀತಿಯ ಗುಲಾಮಿತನಕ್ಕೆ ಒಳಗಾಗಿದ್ದರು (ವಿಜಯ 1993: 106–149). ಜಮ್ಮ ಹಿಡುವಳಿದಾರರಿಗೆ ತಾವು ಸಲ್ಲಿಸುವ 'ಹಿಟ್ಟಿ ಬಿಟ್ಟಿ ಚಾಕ್ರಿ'ಗೆ ಪ್ರತಿಯಾಗಿ ತೆರಿಗೆ ಮೊತ್ತದಲ್ಲಿ ಸ್ವಲ್ಪ ಮಟ್ಟಿಗಿನ ಕಡಿತದ ಜೊತೆಗೆ ಅವರಿಗೆ ಸಿಕ್ಕಿದ್ದ ದೊಡ್ಡ ವಿನಾಯತಿ ಏನೆಂದರೆ ಅವರ ಹೊಲ, ಗದ್ದೆ, ತೋಟಗಳನ್ನು ದಲಿತರು ಮತ್ತು ಮೂಲನಿವಾಸಿಗಳಿಂದ ಪುಕ್ಕಟೆಯಾಗಿ ಉಳುಮೆ ಮಾಡಿಸುವ ಹಕ್ಕು(ವಿಜಯ 1993: 114). ಜಮ್ಮ ಹಿಡುವಳಿಗಳನ್ನು ಉಳುಮೆ ಮಾಡಲು ದಲಿತರು ಮತ್ತು ಮೂಲನಿವಾಸಿಗಳನ್ನು ಹೊರಗಿನಿಂದ ತರಲಾಗುತ್ತಿರಲಿಲ್ಲ. ಅವರು ಆ ಭೂಮಿಗಳಿಗೇ ಅಂಟಿಕೊಂಡಿದ್ದರು (ವಿಜಯ 1993: 40, 106–130). ದಲಿತರು ಮತ್ತು ಮೂಲನಿವಾಸಿಗಳು ಎಲ್ಲೆಲ್ಲೂ ಬ್ರಿಟಿಷರು ಭಾರತಕ್ಕೆ ಬರುವ ಮುಂಚೆ ಭೂಮಿಗೆ ಅಂಟಿಕೊಂಡಿದ್ದರು ಮತ್ತು ಅವರೇ ಭೂಮಿಗಳನ್ನು ಉಳುಮೆ ಮಾಡುತ್ತಿದ್ದ ನಿಜವಾದ ರೈತರಾಗಿದ್ದರು ಎಂಬ ವಾದಕ್ಕೆ ಇದು ಒಂದು ನಿದರ್ಶನ.

ಅಂತಾರಾಷ್ಟ್ರೀಯವಾಗಿ ಗುಲಾಮೀ ಪದ್ಧತಿಯನ್ನು 1843ರಲ್ಲಿ ರದ್ದು ಮಾಡಿದ ಪರಿಣಾಮವಾಗಿ ಹೊಲದಲ್ಲಿಯ ಗುಲಾಮರನ್ನು ಬಿಡುಗಡೆಗೊಳಿಸಿ ಅವರು ಸ್ವತಂತ್ರ ಕಾರ್ಮಿಕರಾಗಿ ದುಡಿಯುವಂತೆ ಮಾಡುವ ಪ್ರಯತ್ನಗಳು ನಡೆದುವು (ವಿಜಯ 1993: 130–137). 1850ರ ನಂತರ ಕೊಡಗಿನಾದ್ಯಂತ ಸ್ಥಾಪಿಸಲ್ಪಟ್ಟ ಕಾಫಿ ತೋಟಗಳಲ್ಲಿಯ ಕಾರ್ಮಿಕರ ಬೇಡಿಕೆಯಿಂದ ಜಮ್ಮ ಹಿಡುವಳಿಗಳಲ್ಲಿ ಕೆಲಸ ಮಾಡುವ 'ಜಾತಿ ಗುಲಾಮ'ರು ಸುಮಾರು ಮಟ್ಟಿಗೆ ಸ್ವತಂತ್ರ ಜೀವನ ಕಂಡುಕೊಳ್ಳುವ ಅವಕಾಶ ಪಡೆದರು (ವಿಜಯ 1993: 139–141). ಕ್ರೈಸ್ತ ಮಿಷನರಿಗಳ ಪಾತ್ರ ಒಂದು ವೇಳೆ ಅನುಸೂಚಿತ ಜಾತಿ ಜನಾಂಗದವರೆಲ್ಲರೂ ಹಳೇ ಮಾದರಿಯ ಪುಕ್ಕಟೆ ದುಡಿಮೆಯಿಂದ ಬಿಡುಗಡೆಯಾಗಿದ್ದರೂ 'ಸಂಪೂರ್ಣವಾಗಿ ಬಲಾತ್ಕಾರದ ದುಡಿಮೆಯಿಂದ ಅವರು ಪಾರಾಗಿದ್ದಾರೆಯೇ?' ಎಂಬುದು ಈಗಲೂ ಕೇಳಬೇಕಾದ ಪ್ರಶ್ನೆ. ಅನುಸೂಚಿತ

ಜಾತಿ ಸಮುದಾಯದವರಲ್ಲದಿದ್ದರೂ ಮೂಲನಿವಾಸಿ ಜನಾಂಗದವರು ಈಗಲೂ ಇನ್ನೊಂದು ರೀತಿಯ ಗುಲಾಮಿ ಪದ್ಧತಿಗೆ ಕಾಫಿ ತೋಟಗಳಲ್ಲಿ ಸಿಲುಕಿರುವುದನ್ನು ಗಮನಿಸುತ್ತಿದ್ದೇವೆ. ಅದನ್ನು 'ದಿ ಬೊಟ್ ಸಿಸ್ಟಮ್' ಎಂದೂ ಕರೆಯುತ್ತಾರೆ. ಅದಕ್ಕೆ ಒಳಗಾಗುವವರು ಅನುಸೂಚಿತ ಜನಾಂಗಗಳಿಗೆ ಸೇರಿದ ಸೋಲಿಗ, ಜೇನು ಕುರುಬ, ಬೆಟ್ಟ ಕುರುಬ, ಎರವ, ಪಣಿಯ ಮುಂತಾದ ಸಮುದಾಯದವರು. ಅಂತಹವರು ಈಗಲೂ ಸುಮಾರು 50 ಸಾವಿರದಷ್ಟು ಮಂದಿ ಇದ್ದಾರೆ. (ದಿ ಸಂಡೆ ಇಂಡಿಯನ್, ಜನವರಿ 2011:26–30).

'ಹಿಟ್ಟಿ ಬಿಟ್ಟಿ ಚಾಕ್ರಿ'ಯ ವಿಶ್ಲೇಷಣೆಯಲ್ಲಿ ಬಿಟ್ಟಿ ಚಾಕ್ರಿಗೆ ಸಂಬಂಧ ಪಟ್ಟಂತೆ ನಾವು ಗಮನಿಸಬೇಕಾದ ಅಂಶಗಳೇನೆಂದರೆ:

1. 'ಬಿಟ್ಟಿ ಚಾಕ್ರಿ' ಪದ ಕೇವಲ ಉತ್ತರ ಕರ್ನಾಟಕಕ್ಕೆ ಮಾತ್ರ ಸೀಮಿತವಲ್ಲ. ದಕ್ಷಿಣ ಕರ್ನಾಟಕಕ್ಕೂ ಅದು ಸಂಬಂಧಪಟ್ಟಿದ್ದು. ಬಹಳ ವಿಶಿಷ್ಟ, ಸ್ವತಂತ್ರ, ಸ್ವಾಭಿಮಾನ ಮತ್ತು ಕೆಚ್ಚೆದೆಯ ಸಮುದಯವೆಂದು ಗುರುತಿಸಲಾದ ಕೊಡವರೇ 'ಹಿಟ್ಟಿ ಬಿಟ್ಟಿ ಚಾಕ್ರಿ'ಯಂತಹ ಅವಮಾನಕರ ಗುಲಾಮಿ ಬದುಕಿಗೆ ಒಂದು ಕಾಲದಲ್ಲಿ ಒಳಗಾಗಿದ್ದರು ಎಂಬುದನ್ನು ತಿಳಿಯುವುದೇ ವಿಸ್ಮಯದ ಸಂಗತಿ. ಬಿಟ್ಟಿ ಚಾಕ್ರಿ ಪದ ಅಲ್ಲಲ್ಲಿ ಮಾತ್ರವಲ್ಲ ದಕ್ಷಿಣ ಕರ್ನಾಟಕದ ಎಲ್ಲೆಡೆ ಪ್ರಚಾರದಲ್ಲಿತ್ತು ಎಂಬುದನ್ನು ಹಲವಾರು ದಲಿತ ಮುಖಂಡರಿಂದ ತಿಳಿದು ಕೊಂಡಿದ್ದೇನೆ. 'ತಮಟೆ ಚಾಕ್ರಿ' ಎಂಬ ಪದ ದಕ್ಷಿಣ ಕರ್ನಾಟಕದ ಹೆಚ್ಚಿನ ಹಳ್ಳಿಗಳಲ್ಲಿಯ ಕೆಲವು ದಲಿತರ ಮೇಲೆ ಊರಲ್ಲಿ ಡಂಗುರ ಸಾರಿಸಲು ಹಾಕಿರುವ ಸಾಂಪ್ರದಾಯಿಕ ನಿರ್ಬಂಧವನ್ನು ತೋರಿಸುತ್ತದೆ.

2. 'ಹಿಟ್ಟಿ ಬಿಟ್ಟಿ ಚಾಕ್ರಿ' ಎಂಬ ಪುಕ್ಕಟೆ ದುಡಿಮೆಯ ನಿರ್ಬಂಧ ಮೊದಲು ಕೊಡಗಿನ ರಾಜರು ನಂತರ ಬ್ರಿಟಿಷರು ಈಗಿನ ಕೊಡಗಿನ ಪ್ರತಿಷ್ಠಿತ ಸಮುದಾಯದವರ ಮೇಲೆ ಹೇರಿದ್ದರೆ, ಆ ಪುಕ್ಕಟೆ ಸೇವೆಗೆ ಪ್ರತಿಯಾಗಿ ಅವರಿಗೆ ಕೆಲವು ಹಕ್ಕುಗಳನ್ನೂ ನೀಡಲಾಗಿತ್ತು. ಅವುಗಳಲ್ಲಿ ಮುಖ್ಯವೆನಿಸುವುವು: ತೆರಿಗೆಯಲ್ಲಿ ವಿನಾಯತಿ; ರಾಜರಿಗೆ, ಬ್ರಿಟಿಷರಿಗೆ ಬಂಟರಂತೆ ಸೇವೆ ಸಲ್ಲಿಸಲು ಅನುಕೂಲವಾಗುವಂತೆ ಪ್ರತ್ಯೇಕ ಪರವಾನಿಗೆ ಇಲ್ಲದೇ ಬಂದೂಕನ್ನು ಇಡುವ ಮತ್ತು ಬಳಸುವ ಹಕ್ಕು; ಮತ್ತು ತಮ್ಮ ಹೊಲ ಗದ್ದೆಗಳನ್ನು ದಲಿತರಿಂದ ಮತ್ತು ಮೂಲನಿವಾಸಿಗಳಿಂದ ಪುಕ್ಕಟೆಯಾಗಿ ಉಳುಮೆ ಮಾಡಿಸುವ ಹಕ್ಕು.

3. ಶೋಷಣೆಯುಕ್ತ ಹಾಗೂ ಅವಮಾನಕರ ಪುಕ್ಕಟೆ ಸೇವೆಯನ್ನು ಒಂದು 'ಹಕ್ಕು' ಎಂದು ಪುಕ್ಕಟೆ ಸೇವೆ ಸಲ್ಲಿಸುವವರೇ ಪರಿಗಣಿಸುವ ಪರಿ ಕುತೂಹಲಕಾರಿಯಾಗಿರುವುದಾಗಿದೆ. ಇದನ್ನು 'ಹಿಟ್ಟಿ ಬಿಟ್ಟಿ ಚಾಕ್ರಿ'ಯಲ್ಲಿ ಮಾತ್ರವಲ್ಲ, ಬಲೂತದಲ್ಲೂ ವಾತಾನ್ ಪದ್ಧತಿಯಲ್ಲೂ ಬಿಟ್ಟಿ ಚಾಕ್ರಿಯಲ್ಲೂ ನಾವು ಕಾಣುತ್ತೇವೆ. ಕೊಡಗಿನಲ್ಲಿ ಕೆಲವು ಐತಿಹಾಸಿಕ ಬೆಳವಣಿಗೆಗಳ ಕಾರಣದಿಂದಾಗಿ ಕೊಡವ ಜನಾಂಗದವರಿಗೆ ಅದನ್ನು ತಮ್ಮ ಪ್ರತಿಷ್ಠೆಯನ್ನೂ ಜನಾಂಗೀಯ ವೈಶಿಷ್ಟ್ಯವನ್ನೂ ವಂಶದಲ್ಲಿರುವ ಯುದ್ಧೋತ್ಸಾಹಿ ಲಕ್ಷಣವನ್ನೂ (ವಿಜಯ 1993: 156, 227–2332) ಸಾಂಸ್ಕೃತಿಕ ಹಿರಿಮೆಯನ್ನೂ

ಈಗ ಪ್ರತಿಪಾದಿಸುವ ಸಾಧನವಾದರೆ ಬಲೂತದಲ್ಲಿ ಮತ್ತು ಬಿಟ್ಟಿ ಚಾಕ್ರಿಯಲ್ಲಿ ತೊಡಗಿರುವ ದಲಿತರು ಅವನ್ನು ತಮ್ಮ ಹಕ್ಕು ಎಂದು ಪ್ರತಿಪಾದಿಸುವುದು ಅಸಮಾನ ಸಮಾಜದ ವಿಪರ್ಯಾಸವನ್ನು ಬಯಲಿಗೆಳೆಯುತ್ತದೆ. ಬಹುತೇಕ ಎಲ್ಲರೂ ಅವಕಾಶ ವಂಚಿತರಾಗಿರುವ ಸಂದರ್ಭದಲ್ಲಿ ಕೆಲವು ಸೌಕರ್ಯಗಳನ್ನು ನೀಡುವ ಆದರೆ ಅದಕ್ಕೆ ಪ್ರತಿಯಾಗಿ ಕಡ್ಡಾಯವಾಗಿ ನೀಡಬೇಕಾದ ಶೋಷಣೆಯುಕ್ತ ಮಾತ್ರವಲ್ಲದೇ ಅವಮಾನಕರವೂ ಆಗಿರುವ ಪುಕ್ಕಟೆ ದುಡಿಮೆಯನ್ನುಒಳಗೊಂಡಿದ್ದರೂ ಆ ಸೀಮಿತ ಸೌಕರ್ಯಗಳನ್ನೇ ಹಕ್ಕುಗಳೆಂದು ವಂಶಪರಂಪರಾಗತವಾಗಿ ಕಾಪಾಡಿಕೊಂಡು ಹೋಗುವ ಮತ್ತು ರಕ್ಷಿಸುವ ಮನೋಭಾವವನ್ನು ಪ್ರತ್ಯೇಕವಾಗಿ ಬಲೂತದಲ್ಲೂ ಬಿಟ್ಟಿಚಾಕ್ರಿಯಲ್ಲೂ ಕಾಣುತ್ತೇವೆ.

4. ಇನ್ನೊಂದು ಅಂಶವನ್ನೂ ನಾವು ಪರಿಗಣಿಸಬಹುದು. ಬಿಟ್ಟಿ ಚಾಕ್ರಿಯಂತೆ 'ಹಿಟ್ಟಿಬಿಟ್ಟಿ ಚಾಕ್ರಿ'ಯು ಕೇವಲ ಪುಕ್ಕಟೆ ದುಡಿಮೆಯ ಬಲಾತ್ಕಾರದ ಮತ್ತು ಶೋಷಣೆಯುಕ್ತ ಸೇವೆ ಮಾತ್ರವಲ್ಲ. ಅದು ಅವಮಾನಯುಕ್ತವಾಗಿರುವುದು; ಜೊತೆಗೆ ಅದು ಶಿಕ್ಷೆಯನ್ನೂ ಒಳಗೊಂಡಿರುತ್ತದೆ.

### 3.7 'ಬಿಟ್ಟಿ ಚಾಕ್ರಿ'ಯನ್ನು ಹೋಲುವ ಪದ್ಧತಿಗಳ ಅಧ್ಯಯನದಿಂದ ಪಡೆದ ಒಟ್ಟಾರೆ ಗ್ರಹಿಕೆಗಳು

'ಬಲೂತ', 'ಜಜ್‌ಮನಿ' ಮತ್ತು 'ಬರ್ತನ್' ವ್ಯವಸ್ಥೆಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳಿವೆ. 'ಬರ್ತನ್' ಪದ್ಧತಿಯು ನಿರಂತರವಲ್ಲದ ಕಡ್ಡಾಯದ ದುಡಿಮೆಯ ಒಂದು ಅಂಶದಲ್ಲಿ 'ಬಿಟ್ಟಿ ಚಾಕ್ರಿ' ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಹೆಸರಿನಲ್ಲಿ ಸಾಮ್ಯತೆ ಇಲ್ಲದಿದ್ದರೂ 'ಬಲೂತ' ಪದ್ಧತಿಯು ಹಲವಾರು ರೀತಿಯಲ್ಲಿ 'ಬಿಟ್ಟಿ ಚಾಕ್ರಿ'ಯ ಆಂತರ್ಯವನ್ನು ಬಿಚ್ಚಿ ಇಡುತ್ತದೆ. 'ಬಲೂತ' ಪದ್ಧತಿಯು ಮಹಾರಾಷ್ಟ್ರದ ಪಶ್ಚಿಮ ಭಾಗದಲ್ಲಿ ಆಚರಿಸಲಾಗಿತ್ತು ಎಂದು ದಯಾ ಪವಾರರು (2013: 53) ಉದ್ಧರಿಸಿದ್ದನ್ನು ಆಧಾರವಾಗಿ ಇಟ್ಟುಕೊಂಡು ಮತ್ತು ಎರಡನೇ ಅಧ್ಯಾಯದ ಅಡಿ ಟಿಪ್ಪಣಿ 3ರಲ್ಲಿ ಚುಟುಕಾಗಿದ್ದರೂ ಸಮಗ್ರವಾಗಿ ದಾಖಲಿಸಿದ ಬೆಳಗಾವಿಯ ಚರಿತ್ರೆಯ ಪ್ರಕಾರ ಬೆಳಗಾವಿಯು ಮಹಾರಾಷ್ಟ್ರದ ಪಶ್ಚಿಮ ಭಾಗದ ಪ್ರತ್ಯೇಕವಾಗಿ ನೈಋತ್ಯ ಭಾಗದ ಚರಿತ್ರೆಯೊಂದಿಗೆ ಬೆಸೆದು ಕೊಂಡಿರುವುದರಿಂದ ಅಲ್ಲಿಯ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳು ಬೆಳಗಾವಿ ಜಿಲ್ಲೆ ಒಳಗೊಂಡಂತೆ 'ಬೊಂಬೆ ಕರ್ನಾಟಕ'ದ ಮತ್ತು ಸ್ವಲ್ಪ ಮಟ್ಟಿಗೆ 'ಹೈದರಾಬಾದ್ ಕರ್ನಾಟಕ'ದಲ್ಲಿರುವ ಅದೇ ರೀತಿಯ ಪರಿಸ್ಥಿತಿಗಳ ಮೇಲೆ ಬೆಳಕು ಚೆಲ್ಲಬಹುದು. ಆದ್ದರಿಂದ 'ಬಲೂತ' ಪದ್ಧತಿಯ ವಿವರ ಮತ್ತು ವಿಶ್ಲೇಷಣೆ 'ಬಿಟ್ಟಿ ಚಾಕ್ರಿ' ಆಚರಣೆಯನ್ನು ಅರ್ಥೈಸಲು ತುಂಬಾ ಸಹಕಾರಿಯಾಗುತ್ತದೆ. 'ಜಜ್‌ಮನಿ' ಪದ್ಧತಿಯೂ 'ಬಲೂತ' ಪದ್ಧತಿಯಂತೆ ಜಾತಿ ವ್ಯವಸ್ಥೆಯ ಭಾಗವಾಗಿ ದಲಿತರು ಸಲ್ಲಿಸುವ ಸೇವೆ ಮತ್ತು ಅವುಗಳಿಗೆ ಅವರು ಪಡೆಯುವ 'ಪ್ರತಿಫಲ' ಅಥವಾ 'ಸಂಬಳ, ಅಥವಾ 'ವೇತನ' (ಜೀತಂ?)ಗಳ ಸಮಕ್ಷಮ 'ಬಿಟ್ಟಿ ಚಾಕ್ರಿ'ಯಲ್ಲಿ ಅಂತಹ ಅಂಶಗಳನ್ನು ಗುರುತಿಸಲಿಕ್ಕೆ ಸಹಾಯ ಮಾಡುತ್ತದೆ.

ಮೇಲಿನ ವಿವಿಧ ಪದ್ಧತಿಗಳನ್ನು ಆಭ್ಯಸಿಸಿದ ಕಾಲಗಳು ಹೀಗಿವೆ: ಒಡಿಶಾದ 'ಬರ್ತನ್' ಪದ್ಧತಿಯನ್ನು ಜೀತ ಪದ್ಧತಿ ಕಾನೂನಿನಡಿ ತರಲು ಆಂದೋಲನ ನಡೆದದ್ದು 21ನೇ ಶತಮಾನದ

ಮೊದಲೆರಡು ದಶಕಗಳಲ್ಲಿ. ಆಂಧ್ರ ಪ್ರದೇಶ / ತೆಲಂಗಾಣದ 'ವೆಟ್ಟಿ ಚಾಕಿರಿ' ವಿರುದ್ಧ ಚಳವಳಿ ನಡೆದದ್ದು 20ನೇ ಶತಮಾನದ ಮಧ್ಯ ಭಾಗದ 1941ರಿಂದ 1951ರಲ್ಲಿ. 'ಜಜ್‌ಮನಿ' ಪದ್ಧತಿಯು ಅದೇ 19ನೇ ಶತಮಾನದ ಮೂರನೇ ದಶಕದಲ್ಲಿ 1925ರಿಂದ 1932ರ ಅವಧಿಯಲ್ಲಿ ಗುರುತಿಸಿ 1936ರಲ್ಲಿ ಮೊದಲಿಗೆ ಪ್ರಕಟಿಸಿದ್ದರೂ ಅದು ಎರಡನೇ ಬಾರಿ 1956ರಲ್ಲಿ ಮರು ಪ್ರಕಟವಾದಾಗಿನಿಂದ ಭಾರತದ ಬಹುತೇಕ ಎಲ್ಲಾ ರಾಜ್ಯಗಳಲ್ಲೂ ಅಂತಹುದೇ ಪದ್ಧತಿಗಳು ಅಸ್ತಿತ್ವದಲ್ಲಿರುವುದನ್ನು ಸಮಾಜ ಶಾಸ್ತ್ರಜ್ಞರು ಹಾಗೂ ಮಾನವ ಶಾಸ್ತ್ರಜ್ಞರು ಅಭ್ಯಸಿಸಿದ್ದನ್ನು ಕಾಣುತ್ತೇವೆ. 1800ರಿಂದ 1980ರ ತನಕ ಪ್ರಚಲಿತವಿದ್ದ ಕೊಡಗಿನ 'ಹಿಟಿ ಬಿಟ್ಟಿ ಚಾಕರಿ'ಯ ಕುರಿತು ಮಹಾಪ್ರಬಂಧವೊಂದನ್ನು ಮಂಗಳೂರು ವಿಶ್ವವಿದ್ಯಾಲಯದಲ್ಲಿ 1993ರಲ್ಲಿ ಮಂಡಿಸಲಾಗಿದೆ. 17 ಮತ್ತು 18ನೇ ಶತಮಾನದಲ್ಲಿದ್ದ 'ಬಲೂತ ಪದ್ಧತಿ'ಯನ್ನು ಐತಿಹಾಸಿಕ ದಾಖಲೆಗಳ ಆಧಾರದಲ್ಲಿ 20ನೇ ಶತಮಾನದ ಕೊನೆಯಲ್ಲಿ ಅಂದರೆ 80 ಮತ್ತು 90ರ ದಶಕಗಳಲ್ಲಿ ಇಬ್ಬರು ಜಪಾನಿ ಐತಿಹಾಸಿಕ ಶಾಸ್ತ್ರಜ್ಞರು ಅಭ್ಯಸಿಸಿ ಪ್ರಕಟಿಸಿದ್ದಾರೆ. ವಿವಿಧ ಕಾಲಘಟ್ಟದಲ್ಲಿ ಆಚರಣೆಯಲ್ಲಿಂತಹ ಜಾತಿ ವ್ಯವಸ್ಥೆಯ ಆರ್ಥಿಕ ಮುಖಗಳನ್ನು ಈ ಎಲ್ಲಾ ಅಧ್ಯಯನಗಳು ಪ್ರಸ್ತುತ ಪಡಿಸುತ್ತಿದ್ದರೂ ಆ ಆಚರಣೆಗಳ ಮೂಲ ಜಾತಿ ಪದ್ಧತಿಯಂತೆ ಭಾರತ ಇತಿಹಾಸದಲ್ಲಿಯ ಜಾತಿ ವ್ಯವಸ್ಥೆಯ ಉಗಮ ವಿಕಾಸದ ಹಂತಗಳ ಕಾಲಗತಿಗಳ ಜೊತೆ ಜೊತೆಗೆ ತಾಳ ಹಾಕುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು. 21ನೇ ಶತಮಾನದ ಇತ್ತೀಚೆಗಿನ ವರ್ಷಗಳಲ್ಲಿ ಅಧ್ಯಯನ ಮಾಡಲು ತೊಡಗಿದ 'ಬಿಟ್ಟಿ ಚಾಕ್ರಿ'ಯ ರೂಪ ವಿನ್ಯಾಸಗಳ ಮೂಲ ಬೇರುಗಳನ್ನು ಅರ್ಥಮಾಡಲು ಈ ಎಲ್ಲಾ ಪದ್ಧತಿಗಳು ಸಹಾಯ ಮಾಡುತ್ತವೆ.

## ಅಧ್ಯಾಯ 4

# ಜಾತಿ ವ್ಯವಸ್ಥೆ ಮತ್ತು ಜೀತ ಪದ್ಧತಿಗಳ ಹಿನ್ನೆಲೆಯಲ್ಲಿ 'ಬಿಟ್ಟಿ ಚಾಕ್ರಿ' ಆಚರಣೆ

# ಅಧ್ಯಾಯ ನಾಲ್ಕು

## ಜಾತಿ ವ್ಯವಸ್ಥೆ ಮತ್ತು ಜೀತ ಪದ್ಧತಿಯ ಹಿನ್ನೆಲೆಯಲ್ಲಿ 'ಬಿಟ್ಟಿ ಚಾಕ್ರಿ' ಆಚರಣೆ

### 4.1 ಜಾತಿ ವ್ಯವಸ್ಥೆ ಮತ್ತು ಜೀತ ಪದ್ಧತಿ ಹಿನ್ನೆಲೆಯಲ್ಲಿ 'ಬಿಟ್ಟಿ ಚಾಕ್ರಿ'ಯನ್ನು ಅರ್ಥೈಸಲಿಕ್ಕೆ ಕಾರಣಗಳು

ಅಧ್ಯಯನ ಮಾಡುತ್ತಿರುವ ಬೈಲಹೊಂಗಲ ತಾಲೂಕಿನ ಮೂರು ಹಳ್ಳಿಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುತ್ತಿರುವವರು ಎಲ್ಲರೂ ದಲಿತರೇ ಮತ್ತು ಅವರಲ್ಲೂ ಎಲ್ಲರೂ ದಲಿತರಲ್ಲಿ ಒಂದು ಸಮುದಾಯಕ್ಕೆ ಸೇರಿದವರು. ಮೂರೂ ಊರುಗಳಲ್ಲಿ ಹಲವಾರು ಬೇರೆ ಬೇರೆ ಜಾತಿಗಳಿದ್ದರೂ ಆ ಯಾವುದೇ ಜಾತಿಯವರು 'ಬಿಟ್ಟಿ ಚಾಕ್ರಿ'ಯನ್ನು ಮಾಡುತ್ತಿಲ್ಲ; ಮಾಡಿಯೂ ಇರಲಿಲ್ಲ. ಬೇರೆ ಜಾತಿಗಳಲ್ಲಿ ಬಡವರೂ ಇದ್ದಾರೆ; ಕೂಲಿ ಮಾಡಿ ಜೀವನ ಮಾಡುವವರೂ ಕೆಲವರು ಇದ್ದಾರೆ. ಆದರೆ ಅವರಲ್ಲಿ ಕೂಡಾ ಯಾರೂ 'ಬಿಟ್ಟಿ ಚಾಕ್ರಿ' ಮಾಡುತ್ತಿಲ್ಲ.

ಹಾಗೆಯೇ 'ಬಿಟ್ಟಿ ಚಾಕ್ರಿ'ಯು ಇತರೆ ಜೀತಪದ್ಧತಿಗಳಲ್ಲಿ ಇದ್ದಂತೆ ಎಲ್ಲಾ ದಿನಗಳಲ್ಲೂ ಇಡೀ ದಿವಸಕ್ಕೆ ಅಂತ ಇಲ್ಲ. ಆದರೂ ಕೂಡಾ ಸಾಂಪ್ರದಾಯಿಕವಾಗಿ 'ಬಿಟ್ಟಿ ಚಾಕ್ರಿ'ಯಡಿ ಮಾಡಬೇಕಾದ ಸೇವೆಗಳನ್ನು ಪ್ರತಿ ದಿನ ಮಾಡಿಯೇ ತೀರಬೇಕು ಮತ್ತು ಅದಕ್ಕೆ ನ್ಯಾಯಯುತವಾದ ಕೂಲಿ ಸಿಗದಿರುವುದಿಂದ ಅದು ಜೀತ ಪದ್ಧತಿಯ ಒಂದು ರೂಪವಾಗಿರುವ ಸಾಧ್ಯತೆಯನ್ನು ತೋರಿಸುತ್ತದೆ.

ಹೀಗೆ 'ಬಿಟ್ಟಿ ಚಾಕ್ರಿ'ಗೆ ಜಾತಿ ವ್ಯವಸ್ಥೆಯ ನಂಟು ಇರುವಂತೆ ಕಾಣುವುದರಿಂದ ಮತ್ತು ಜೀತ ಪದ್ಧತಿಯ ಕೆಲವು ಅಂಶಗಳು ಅದರಲ್ಲಿ ತೋರಿಬರುವುದರಿಂದ ಈ ಅಧ್ಯಾಯದಲ್ಲಿ ಜಾತಿ ಮತ್ತು ಜೀತದ ಬಗ್ಗೆ ಮತ್ತು ಅವುಗಳಿಗೂ 'ಬಿಟ್ಟಿ ಚಾಕ್ರಿ'ಗೂ ಇರಬಹುದಾದ ಸಂಬಂಧದ ಬಗ್ಗೆ ಅನ್ವೇಷಣೆ ಮಾಡಲು ಪ್ರಯತ್ನಿಸಲಾಗಿದೆ.

'ಬಿಟ್ಟಿ ಚಾಕ್ರಿ' ಎಂದರೆ ಉಚಿತ ಅಥವಾ ಪುಕ್ಕಟೆ ಸೇವೆ ಎಂದು ಅರ್ಥ ಕೊಡುತ್ತದೆ. ಸಂವಿಧಾನದ ವಿಧಿ 23ರಡಿ ನಿಷೇಧಿಸಲಾಗಿರುವ ದುಡಿಮೆಗಳಲ್ಲಿ 'ಬೇಗಾರ್' ಕೂಡಾ ಒಂದು. ಅಲ್ಲಿ ಉಲ್ಲೇಖಿಸಲಾಗಿರುವ 'ಬೇಗಾರ್' ಕೂಡಾ ಉಚಿತ ಅಥವಾ ಪುಕ್ಕಟೆ ಸೇವೆ ಎಂಬ ಅರ್ಥವನ್ನೇ ಕೊಡುತ್ತದೆ. 'ಬೇಗಾರ್' ಅಥವಾ ಉಚಿತ ಸೇವೆ ಎಂದರೆ ಬ್ರಿಟಿಷರ ಕಾಲದಲ್ಲಿ ಅಥವಾ ಅದರ ಹಿಂದಿನ ಕಾಲದಿಂದಲೂ ಸರ್ಕಾರದ ಅಧಿಕಾರಿಗಳು ಅಥವಾ ರಾಜರ ಪ್ರತಿನಿಧಿಗಳು ಊರಿಗೆ ಬಂದಾಗ ಉಚಿತವಾಗಿ ಅವರ ಸೇವೆ ಮಾಡುವುದು. ಟಿಂಕರ್ ವಿವರಿಸುವ ಹಾಗೆ ಸರ್ಕಾರಕ್ಕೆ ಅಥವಾ ಜಮೀನ್ದಾರರಿಗೆ[38] ಕೆಲವು ನಿರ್ದಿಷ್ಟ ಸೇವೆ

---

[38] "ಉತ್ತರ ಪ್ರದೇಶದಲ್ಲಿ ಚಮಾರರು ಜಮೀನ್ದಾರರಿಗೆ ಮೊದಲು 'ಬೇಗಾರ್' ಅಥವಾ 'ಇಮ್ಪ್ರೆಸ್ಡ್ ಲೇಬರರ್' ಆಗಿದ್ದು ಅವರು ಉಳುಮೆ ಮಾಡಬೇಕಾಗಿದ್ದು ಅವರಿಗೆ ಜಮೀನ್ದಾರರು ಕೆಲಸದ ದಿನ ದವಸಧಾನ್ಯ, ತಮ್ಮ ಗುಡಿಸಲು ಕಟ್ಟಲು ಊರ ಹತ್ತಿರ ಜಾಗ, ಊರ (ಸಾಮೂಹಿಕ?) ಜಾಗಗಳಿಂದ ಉರವಲು, ಮೇವು ಪಡೆಯಲು ಅವಕಾಶ, ಸತ್ತ ಪ್ರಾಣಿಗಳ ಮಾಂಸ ಮತ್ತು ತೊಗಲು ಪಡೆಯಲು

ಸಲ್ಲಿಸಬೇಕೆಂದಿರುವ ನಿರ್ಬಂಧವೇ 'ಬೇಗಾರ್' ಆಗಿದ್ದು ಅದು ಆಧುನಿಕ ಕಾಲದ ವರೆಗೂ ಭಾರತದಾದ್ಯಂತ ಆಚರಣೆಯಲ್ಲಿತ್ತು (ಟಿಂಕರ್: 1974: 39). ಇಂತಹ ಸೇವೆಗೆ ಊರಿನ ಯಾರನ್ನಾದರೂ ನೇಮಿಸುತ್ತಿರಲಿಲ್ಲ. ಸಾಮಾನ್ಯವಾಗಿ ಒಂದು ನಿರ್ದಿಷ್ಟ ಜಾತಿಯಿಂದಲೇ ಅವರನ್ನು ಆರಿಸಲಾಗುತ್ತಿತ್ತು. ಆ ಜಾತಿಯೇ ಅಸ್ಪೃಶ್ಯ ಜಾತಿ. ಕರ್ನಾಟಕದಲ್ಲಿಯೂ 'ಬೇಗಾರ್' ಇತ್ತು[39]. 'ಬಿಟ್ಟಿ ಚಾಕ್ರಿ' ಇತ್ತು[40] ಮತ್ತು ಈ ಅಧ್ಯಯನ ಸ್ಪಷ್ಟ ಪಡಿಸುವಂತೆ ಈಗಲೂ ಇದೆ. ಆದರೆ ಬೇಗಾರ್ ಈಗ ಇಲ್ಲ ಅಥವಾ ಆ ಶಬ್ದ ಬಳಸುವುದನ್ನು ಕೇಳಿ ಬರುವುದಿಲ್ಲ ಅಥವಾ 'ಬೇಗಾರ್', 'ಬಿಟ್ಟಿ ಚಾಕರಿ', ಜೀತ ಎಂಬ ಪದಗಳು ಅಸ್ಪೃಶ್ಯರು ಊರಿಗೆ ಮತ್ತು ಬೇರೆ ಜಾತಿಗಳಿಗೆ ಪ್ರತ್ಯೇಕವಾಗಿ ಜಮೀನ್ದಾರರಿಗೆ ಸಲ್ಲಿಸುತ್ತಿರುವ ಸೇವೆಗಳ ಬದಲಾಗುತ್ತಿರುವ ಮತ್ತು ಮೂಲಭೂತವಾಗಿ ಒಂದೇ ಆಗಿರುವ ರೂಪಗಳನ್ನು ತೋರಿಸುತ್ತಿರಬಹುದು[41].

### 4.2 ಜಾತಿ ವ್ಯವಸ್ಥೆಯ ಭಾಗವಾಗಿ ಗುಲಾಮಿ ಪದ್ಧತಿ – ಜೀತಪದ್ಧತಿ

ಸರ್ಕಾರದ ವಿವಿಧ ಅಧಿಕಾರಿಗಳಿಗೆ – ಆಡಳಿತಾಧಿಕಾರಿಗಳು, ಪೊಲೀಸರು, ನ್ಯಾಯಾಧೀಶರು, ಜನಪ್ರತಿನಿಧಿಗಳು ಅಥವಾ ಶಾಸಕರು ಇವರೆಲ್ಲರಿಗೆ – ಜೀತ ಒಂದು ಅಲ್ಲಗಳೆಯುವ ಸಂಗತಿಯಾದರೂ ಅದು ಈಗಲೂ ಹಬ್ಬಿರುವ ಕಟು ವಾಸ್ತವದ ಸಂಗತಿಯಾಗಿದೆ. ಈಗ ಸಾಮಾನ್ಯವಾಗಿ ತಿಳಿದಿರುವ ಪ್ರಕಾರ ಜೀತ ಎಂದರೆ ಒಬ್ಬ ವ್ಯಕ್ತಿಯು ತನ್ನ ಸಾಲ ತೀರಿಸಲು ಸಾಲಿಗನಿಗೆ ಬಹಳ ಕಡಿಮೆ ಕೂಲಿಗೆ ಅಥವಾ ಕೂಲಿ ಇಲ್ಲದೇ ಸಾಲ ತೀರುವ ತನಕ ದುಡಿಯುವುದು[42]. ಜೀತಕ್ಕಿರುವವರಲ್ಲಿ ನೂರರಲ್ಲಿ 80–90 ಮಂದಿ ದಲಿತರು ಮತ್ತು ಮೂಲನಿವಾಸಿಗಳು (ಪ್ರಸಾದ: 1991). ಈಗೀಗ ಹಿಂದುಳಿದ ಜಾತಿಗಳಿಂದ ಜೀತಕ್ಕಿರುವ ಹೆಚ್ಚೆಚ್ಚು ಪ್ರಕರಣಗಳು ಜರಗುತ್ತಿವೆ.ಆದರೆ ಅವರ ಸಂಖ್ಯೆ ದಲಿತ–ಮೂಲನಿವಾಸಿಗರ ಸಂಖ್ಯೆಯ ಕಾಲು ಭಾಗದಷ್ಟೂ ಬರುವುದಿಲ್ಲವೆನ್ನಬಹುದು. ಅಂದರೆ ಸಂಖ್ಯೆಯ ದೃಷ್ಟಿಯಲ್ಲಾದರೂ ಜೀತಕ್ಕೂ ಜಾತಿಗೂ ನಿಕಟ ಸಂಬಂಧವಿದೆ ಎಂತಾಯಿತು.ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲ; ರಾಜಕೀಯವಾಗಿಯೂ ಚಾರಿತ್ರಿಕವಾಗಿಯೂ ಜೀತಕ್ಕೂ ಜಾತಿಗೂ ನಿಕಟ ಸಂಬಂಧವಿದೆ. ಅಸ್ಪೃಶ್ಯತೆಯ ಆರ್ಥಿಕ ಮುಖವೇ ಜೀತ. ದಲಿತರು ಮತ್ತು ಹಳ್ಳಿಗಳ ಸಂಪರ್ಕದಲ್ಲಿರುತ್ತಿದ್ದ ಮೂಲನಿವಾಸಿಗಳು ಸಮಾಜದಲ್ಲಿ ಕಟ್ಟಕಡೆಯ

---

ಅವಕಾಶ ಕೊಡುತ್ತಿದ್ದರು ಮತ್ತು ಈಗಲೂ ಅವರು ಹೊಲದ ಗುಲಾಮ (ಫೀಲ್ಡ್ ಸ್ಲೇವ್) ಆಗಿದ್ದಾರೆ" ಎಂದು ನೆಸ್‌ಫೀಲ್ಡ್‌ರವರು ದಾಖಲಿಸಿದ ಚಿತ್ರವನ್ನು ವೈಸರ್ ರವರು ತಮ್ಮ ಪುಸ್ತಕದಲ್ಲಿ ಉದ್ಧರಿಸುತ್ತಾರೆ (ವೈಸರ್ 1988 (1936): 26).

39 ಕೆಲವು ವರ್ಷಗಳ ಹಿಂದೆ ನಾನು ಗುಲ್ಬರ್ಗ ಜಿಲ್ಲೆಯಲ್ಲಿ ಜೀತಪದ್ಧತಿ ರದ್ದತಿ ಕಾನೂನು ಕುರಿತು ಅಧಿಕಾರಿಗಳಿಗೆ ಅರಿವು ನೀಡುತ್ತಿರುವ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಇದ್ದ ಒಬ್ಬ ಉನ್ನತ ಮಟ್ಟದ ಅಧಿಕಾರಿಯ ಕೊನೆ ಹೆಸರು 'ಬೇಗಾರ್' ಎಂದು ಇತ್ತು.

40 'ಹಿಟ್ಟಿ ಬಿಟ್ಟಿ ಚಾಕ್ರಿ'ಯ ಸಂದರ್ಭದಲ್ಲಿ ಜಮ್ಮ ಹಿಡುವಳಿದಾರರು ರಾಜರಿಗೆ ಮತ್ತು ನಂತರ ಬ್ರಿಟಿಷ್ ಅಧಿಕಾರಿಗಳಿಗೆ ಹಳ್ಳಿಗಳಲ್ಲಿ ಸಲ್ಲಿಸಬೇಕಾಗಿದ್ದ 'ಹಿಟ್ಟಿ ಬಿಟ್ಟಿ ಸೇವೆ' ಅಥವಾ ಪುಕ್ಕಟೆ ಸೇವೆಗಳನ್ನು ಮೂರನೇ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವುದನ್ನು ಗಮನಿಸಿ. 'ಹಿಟ್ಟಿ ಬಿಟ್ಟಿ ಚಾಕ್ರಿ' ಮಾಡವವರು ಅಸ್ಪೃಶ್ಯ ಜಾತಿಗೆ ಸೇರದ ಕೊಡವ ಅಥವಾ ಇತರ ಜಮ್ಮ ಹಿಡುವಳಿದಾರರಾಗಿದ್ದು, ಜಮ್ಮ ಹಿಡುವಳಿಗಳಲ್ಲಿ ವಾಸಿಸಿ ಅದರ ಒಕ್ಕಲುತನ ಮಾಡುವವರು 'ಜಮ್ಮದಾಳು' ಎಂದು ಕರೆಯಲಾದ ಅಸ್ಪೃಶ್ಯರಾದ ಹೊಲೆಯರು. ಅವರಲ್ಲಿ ಎರಡು ಬಗೆ – 1. ಭೂಮಿ ಜಮ್ಮದಾಳು (ಭೂಮಿಗೆ ಅಂಟಿಕೊಂಡಿದ್ದು ವ್ಯವಸಾಯ ಮಾಡುವ ಗುಲಾಮರು) ಮತ್ತು 2. ಒಕ್ಕಲು ಜಮ್ಮದಾಳು (ವೈಯಕ್ತಿಕ ಸೇವೆ ಮಾಡುವ ಗುಲಾಮರು) (ವಿಜಯ: 1993: 116–17).

41 ನೋಡಿ ಅಡಿಟಿಪ್ಪಣಿ 15.

42 ಮುಂದಿನ ಅಧ್ಯಾಯದಲ್ಲಿ ಇದರ ಬಗ್ಗೆ ವಿವರವಾದ ಚರ್ಚೆ ನಡೆಯಲಿದೆ.

ವ್ಯಕ್ತಿಗಳಾಗಿದ್ದು ಸಾಮಾಜಿಕವಾಗಿ ಯಾವುದೇ ಸ್ಥಾನಮಾನಗಳನ್ನು ಹೊಂದಿರಲಿಲ್ಲ; ರಾಜಕೀಯವಾಗಿ ಸಮಾಜದಲ್ಲಿಯ ಯಾವುದೇ ನಿರ್ಣಾಯಕ ಪಾತ್ರ ವಹಿಸುವಿಕೆಯಲ್ಲಿ ವಂಚಿತರಾಗಿದ್ದರು; ಸಾಂಸ್ಕೃತಿಕವಾಗಿ ಅವಮಾನಿತರು, ಮೈಲಿಗೆಯನ್ನು ತರುವವರು, ತೀವ್ರ ಕೀಳರಿಮೆಯಿಂದ ನರಳುವಂತಹವರು; ಆರ್ಥಿಕವಾಗಿ ತಮ್ಮ ಇಡೀ ಬದುಕನ್ನು ಇತರರ ಸೇವೆಗೆ ಮೀಸಲಾಗಿಡಲ್ಪಟ್ಟವರು. ಇತರರ ಸೇವೆ ಎಂದರೆ ಕೇವಲ ವ್ಯಕಿಗತ ಸೇವೆ ಅಲ್ಲ; ಅದು ಇಡೀ ಕುಟುಂಬಕ್ಕೆ ನೀಡುವ ಸೇವೆ; ಅದು ಇಡೀ ಹಳ್ಳಿ ಸಮುದಾಯಕ್ಕೆ ನೀಡುವ ಸೇವೆ. ಇದೇ ತಮ್ಮ ಕಾಯಕ; ತಮ್ಮ ಧರ್ಮ ಎಂದು ನಂಬಿಸಲ್ಪಟ್ಟವರು. ಇದರಿಂದಲೇ ತಮ್ಮ ಉದ್ಧಾರ; ಮುಂದಿನ ಜನ್ಮದಲ್ಲಿ ತಮಗೆ ಸ್ವರ್ಗ; ತಮಗೆ ಮುಕ್ತಿ ಎಂದು ಆಳವಾಗಿ ನಂಬಿ ತಮ್ಮ ಬಾಳ ಚಕ್ರವನ್ನು ಉರುಳಿಸಲ್ಪಡುವಂತಾಗಿದ್ದವರು.

ಜಾತಿ ವ್ಯವಸ್ಥೆಯ ಉಗಮ–ವಿಕಾಸ–ಬದಲಾವಣೆ–ಸ್ಥಿತ್ಯಂತರಗಳಲ್ಲಿ ಹಲವಾರು ವಾದ, ಸಿದ್ಧಾಂತಗಳು ಇರಬಹುದು. ಆದರೆ ಯಾವುದೇ ವಾದವಿರಲಿ, ಸಿದ್ಧಾಂತವಿರಲಿ 'ಜಾತಿವ್ಯವಸ್ಥೆಯಲ್ಲಿ ದಲಿತರ ಪಾತ್ರವೇನು?' ಎನ್ನುವಾಗ ಯಾರಿಂದಲೂ ಅವರ ಬದುಕು ಇರುವುದೇ ಅವರ ಸೇವೆಯಲ್ಲಿ ಎಂದು ಅಲ್ಲಗಳೆಯಲಿಕ್ಕೆ ಆಗುವುದಿಲ್ಲ. 'ಆ ಸೇವೆ ಎಂತಹುದು? ಆ ಸೇವೆಯನ್ನು ಪರಿಗಣಿಸುವ ರೀತಿ ಏನು? ಆ ಸೇವೆಗೆ ಸಿಗುವ ಪ್ರತಿಫಲವೇನು?' ಎಂಬುದಕ್ಕೆ ವಸ್ತುನಿಷ್ಠವಾಗಿ ಯಾವುದೇ ಕಾಲಘಟ್ಟದಲ್ಲಿ ಯಾವುದೇ ಪ್ರದೇಶದಲ್ಲಿ ಯಾವುದೇ ಆಧಾರಗಳನ್ನಿಟ್ಟು ತೀರ್ಮಾನಿಸಿದರೂ ಯಾರೂ ಹೆಚ್ಚಿನ ತಾರತಮ್ಯವಿಲ್ಲದ ಉತ್ತರಗಳನ್ನು ಪಡೆಯಬಹುದು. ವ್ಯತ್ಯಾಸಗಳೇನಿದ್ದರೂ ಕಾರ್ಯ–ಕಾರಣಗಳ ಸಂಬಂಧಗಳನ್ನು ಹುಡುಕುವಲ್ಲಿ ಅಥವಾ ಕಂಡುಕೊಳ್ಳುವಲ್ಲಿ ಇರಬಹುದು. ಆ ಉತ್ತರಗಳು ಸೇವೆಗಳ ನಿಕೃಷ್ಟತೆಯನ್ನು ಪ್ರತಿಪಾದಿಸುವ, ಸೇವಾನಿಕೃಷ್ಟತೆಯಿಂದ ಸೇವೆಮಾಡುವವರ ಮಾನವ ವ್ಯಕ್ತಿತ್ವದ ನಿಕೃಷ್ಟತೆಯನ್ನೂ ದೃಢಪಡಿಸುವ, ಆದ್ದರಿಂದಲೇ ಅವರನ್ನು ಸಮಾಜದ ಯಾವುದೇ ಪ್ರಭಾವೀ ಸ್ಥಾನಮಾನ, ಪಾತ್ರ ಹಾಗೂ ಲಾಭ, ಪ್ರಯೋಜನಗಳಿಂದ ಹೊರಗಿಡುವ (ಹೊರಗಿಟ್ಟಿರುವ ಮತ್ತು ಹೊರಗಿಡುತ್ತಿರುವ) ವಿಚಾರ – ವಿಧಾನಗಳನ್ನು ಸ್ಪಷ್ಟಪಡಿಸುತ್ತವೆ.

ಜೀತ ಪದ್ಧತಿಯನ್ನು ಅಲ್ಲಗಳೆಯುತ್ತಿದ್ದಂತೆ ಜಾತಿ ವ್ಯವಸ್ಥೆಯನ್ನೂ ಅಲ್ಲಗಳೆಯುವ ಅಥವಾ ಅದು ಸಂಪೂರ್ಣವಾಗಿ ಬದಲಾಗುತ್ತಿದೆ ಎಂಬ ವಾದಗಳು ಅಥವಾ ದೃಷ್ಟಿಕೋನಗಳು ವ್ಯಾಪಕವಾಗಿವೆ. ಒಂದು ರೀತಿಯಲ್ಲಿ ಜಾತಿ ವ್ಯವಸ್ಥೆಯು ಬದಲಾಗುತ್ತಿದೆ. ಅದರ ಹಲವಾರು ಅಂಶಗಳಲ್ಲಿ ಬದಲಾಣೆಗಳನ್ನು ಕಾಣುತ್ತಿರುತ್ತೇವೆ. ಆದರೆ ಅದು ತನ್ನ ಮೂಲ ಆಶಯದಲ್ಲಿ ಈಗಲೂ ಸಡಿಲಗೊಳ್ಳದೇ ಇನ್ನೂ ಗಟ್ಟಿಯಾಗುತ್ತಿದೆ ಎಂಬುದು ಒಂದು ಬಲವಾದ ಅಭಿಪ್ರಾಯ ಮತ್ತು ಹಲವು ಅಧ್ಯಯನಗಳ ಫಲಿತಾಂಶ. ಇದನ್ನು ದೃಢಪಡಿಸಲು ಭಾರತದ ಹಲವಾರು ಪ್ರದೇಶಗಳಲ್ಲಿ ನಡೆಸಲಾದ ಅಧ್ಯಯನಗಳ ಫಲಿತಾಂಶಗಳನ್ನು ಆಧರಿಸಿ ಜೆನ್ಸ್ ಲೆರ್ಚೆರವರು 2017ರ ಎಪ್ರಿಲ್ 14ರಂದು ನವದೆಹಲಿಯ ವಿಶ್ವ

ವಿದ್ಯಾಲಯದಲ್ಲಿ ಮಂಡಿಸಿದ ಪ್ರಬಂಧದಿಂದ ಆಯ್ದ ಕೆಲವು ಭಾಗಗಳನ್ನು ಉದ್ಧರಿಸುತ್ತಿದ್ದೇನೆ (ಲೆರ್ಚೆ 2017).

"ಸ್ವಾತಂತ್ರ್ಯದ ನಂತರದ ಸಮಯದಲ್ಲಿ ದಲಿತರ ಮೇಲಿನ ತಾರತಮ್ಯವು ಕೆಲವು ರೀತಿಯಲ್ಲಿ ಕಡಿಮೆಯಾಗಿದೆ.... ಆದರೆ ಡಾ. ಅಂಬೇಡ್ಕರ್‌ರವರು 'ಜಾತಿ ವಿನಾಶದಲ್ಲಿ' ಸ್ಪಷ್ಟ ಪಡಿಸಿರುವಂತೆ ಜಾತಿಯು 'ಮನಸ್ಸಿನ ಒಂದು ಸ್ಥಿತಿ'ಯಾಗಿ ಇರುವ ತನಕ ಜಾತಿ ತಾರತಮ್ಯವು ಕಣ್ಮರೆಯಾಗದು.... ಜಾತಿಯು ಬ್ರಾಹ್ಮಣ್ಯದ ಅವತಾರವೇ ಆಗಿದೆ; ಬ್ರಾಹ್ಮಣ್ಯವನ್ನು ಕೊಂದಾಗಲೇ ಹಿಂದುಯಿಸಮ್‌ಅನ್ನು ರಕ್ಷಿಸುವಲ್ಲಿ ನೀವು ಯಶಸ್ವಿಯಾಗಬಹುದು.... ಜಾತ್ಯಾಧಾರಿತ ತಾರತಮ್ಯವು ಇನ್ನೂ ಜೀವಂತವಾಗಿರುವುದು ಸರ್ವವಿದಿತ.... ಕಳೆದ ಕೆಲವು ವರ್ಷಗಳಲ್ಲಿ, ಹಲವಾರು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ವರದಿಗಳು ದಲಿತರು ಮತ್ತು ಆದಿವಾಸಿಗಳ ದೌರ್ಜನ್ಯಗಳನ್ನು ವರದಿ ಮಾಡಿವೆ. ಕಳೆದ ವರ್ಷ ಭಾರತದಾದ್ಯಂತ ಕಂಡುಬಂದ 'ಪ್ರತಿಷ್ಠಿತ ಜಾತ್ಯಾಧಾರಿತ ಕಲಹಗಳು' ... ಸುಸ್ಪಷ್ಟವಾಗಿ ತೇಲುವ ಹಿಮಗಡ್ಡೆಯ ತುದಿ ಮಾತ್ರ, ದಲಿತರು ಮತ್ತು ಆದಿವಾಸಿಗಳ ವಿರುದ್ಧದ ತಾರತಮ್ಯಗಳನ್ನು ಅರ್ಥೈಸುವಲ್ಲಿ ವಿದ್ವಾಂಸರ ಬರವಣಿಗೆಗಳು ಗಂಭೀರವಾಗಿರುವ ಕೊಡುಗೆಯನ್ನು ನೀಡಿವೆ. ಅವುಗಳಲ್ಲಿ ಪ್ರಮುಖವೆನಿಸುವುವು ಪ್ರೊ. ವಿವೇಕ್ ಕುಮಾರ್, ಸುಖದೇವ್ ಥೊರಾಟ್, ಗೋಪಾಲ್ ಗುರು, ಸುರೇಂದ್ರ ಜೊಡ್ಕ ಮತ್ತು ಆದಿವಾಸಿ ವಿದ್ವಾಂಸರಲ್ಲಿ ವಿರ್ಜೀನಿಯುಸ್ ಖಾಖಾ ಮುಂತಾದ ಜೆಎನ್‌ಯುದ ಅರ್ಥಶಾಸ್ತ್ರಜ್ಞರು ಮತ್ತು ಸಮಾಜ ಶಾಸ್ತ್ರಜ್ಞರ ಬರಹಗಳು.

"ಜಾತ್ಯಾಧಾರಿತ ತಾರತಮ್ಯ ಜೀವಂತವಾಗಿದೆ; ಆದರೆ ಅಷ್ಟೇ ಪ್ರಮುಖವಾಗಿ ಅದು ಬದಲಾಗುತ್ತಿದೆ. ಅದು ಯಾಕೆಂದರೆ ಜಾತಿ ತಾರತಮ್ಯವನ್ನು ಹೊಸ ನಿರ್ದಿಷ್ಟ ಉದ್ದೇಶಗಳನ್ನು ಈಡೇರಿಸಲು ಬಳಸಲಾಗುತ್ತಿದೆ. ಬಂಡವಾಳಶಾಹಿತ್ವದ ಹರಡುವಿಕೆಯೊಂದಿಗೆ ಉದ್ಭವವಾಗುತ್ತಿರುವ ವರ್ಗ, ಜನಾಂಗ, ಮತ್ತು ಜನಾಂಗೀಯತೆಗಳ ಅನುಸಂಧಾನದ ಜಾಗತೀಯ ವಿಶ್ಲೇಷಣೆಗಳಿಂದ ಪ್ರೇರಿತವಾಗಿ ವಾದಿಸುವುದೇನೆಂದರೆ ಜಾಗತಿಕ ಮತ್ತು ದೇಶೀಯ ಬಂಡವಾಳ, ಮತ್ತು ಆಳವಾಗಿ ರೂಢೀಗತವಾಗಿರುವ ಜಾತ್ಯಾಧಾರಿತ ಆಸಕ್ತಿಗಳ ಮೈತ್ರಿಗಳು ದಲಿತರು ಮತ್ತು ಆದಿವಾಸಿಗಳನ್ನು ಸಮಾಜದ ಕಟ್ಟಕಡೆಗೆ ಇಡುತ್ತವೆ....

"ನವ-ಉದಾರೀಕರಣದ ಆರಂಭಕಾಲದಿಂದ ಅಸಮಾನತೆಯು ಭಾರತವನ್ನೊಳಗೊಂಡಂತೆ ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ಹೆಚ್ಚಾಗಿರುವುದು ಎಲ್ಲರಿಗೂ ಗೊತ್ತಿರುವ ವಿಷಯ. ಕಾರ್ಮಿಕರಿಗೆ ರಾಷ್ಟ್ರೀಯ ಆದಾಯದಿಂದ ಸಿಗುವ ಭಾಗವು ಜಾಗತಿಕವಾಗಿ ಇಳಿಮುಖವಾಗುತ್ತಿದೆ. ಅಂದರೆ ಕಾರ್ಮಿಕರು ಅಭಿವೃದ್ಧಿಯ ಗಳಿಕೆಯಿಂದ ವರ್ಷವರ್ಷವೂ ಕಡಿಮೆ ಪ್ರಮಾಣವನ್ನು ಪಡೆಯುತ್ತಿದ್ದಾರೆ. ಬಾರ್ಬರ-ಹ್ಯಾರಿಸ್-ವೈಟ್‌ರವರು ವಾದಿಸಿದಂತೆ ಬಂಡವಾಳಶಾಹಿಯು ಹೆಚ್ಚೆಚ್ಚು ಸಂಪತ್ತನ್ನು ಉತ್ಪಾದಿಸುತ್ತಿದೆ; ಆದರೆ ಅದರ ಜೊತೆಜೊತೆಗೆ ಜನರನ್ನು ಸ್ಥಾನಪಲ್ಲಟಗೊಳಿಸುವ, ಜನರ ಒಡೆತನಗಳನ್ನು ಕಳಚಿಕೊಳ್ಳುವ,

ಮತ್ತು ಅವರನ್ನು ನಿರ್ಗತಿಕರನ್ನಾಗಿ ಮಾಡುವ ಪ್ರಕ್ರಿಯೆಗಳನ್ನೂ ಅದು ಹುಟ್ಟುಹಾಕುತ್ತದೆ (ಹ್ಯಾರಿಸ್-ವೈಟ್ 2005)....

"ದಲಿತರು ಮತ್ತು ಆದಿವಾಸಿಗಳಿಗೆ ಕೆಡುಕಾಗುವ ರೀತಿಯಲ್ಲಿ ಭಾರತದ ಕಳೆದ 25 ವರ್ಷಗಳ ಆರ್ಥಿಕ ಅಭಿವೃದ್ಧಿಯು ಬೆಳೆಯುತ್ತಿರುವ ಅಸಮಾನತೆಗಳೊಂದಿಗೆ ಹೆಜ್ಜೆ ಹಾಕುತ್ತಿದೆ. ಮೇಲ್ಜಾತಿಯ ಭೂ ಒಡೆಯರಾಗಿದ್ದ ಮಾಲಿಕರಿಗೆ ಸಾಮಾನ್ಯವಾಗಿ ಬಂಧಿಗಳಾಗಿದ್ದ ದಲಿತ ಕಾರ್ಮಿಕರ ಮೇಲಿನ ಹಳೆಯ ಹಳ್ಳಿಯಾಧಾರಿತ ದೌರ್ಜನ್ಯವು ಕಡಿಮೆಯಾಗುತ್ತಿದ್ದಂತೆ ಸಾಮಾಜಿಕ ಪ್ರತ್ಯೇಕತೆಯನ್ನು ರೂಢಿಗೊಳಿಸುವ ಹೊಸ ಪ್ರಯತ್ನಗಳು ನಡೆದಿವೆ ಮತ್ತು ಮಡಿಮೈಲಿಗೆ ಹಾಗೂ ಅಸ್ಪೃಶ್ಯತೆಯ ಉಸಿರುಗಟ್ಟುವ ಕಥನವು ತನ್ನ ತೀವ್ರತೆಯನ್ನು ಸುಮಾರು ಮಟ್ಟಿಗೆ ಕಳೆದುಕೊಂಡಿದೆ.

"... ದಲಿತರು ಮತ್ತು ಆದಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳು ಹಳ್ಳಿಯಿಂದ ಹೊರಗೆ ಮತ್ತು ಜಾಗತಿಕ ನವ ಉದಾರೀಕರಣದ ಭಾಗವಾಗಿರುವ ವ್ಯಾಪಕ ಆರ್ಥಿಕ ವ್ಯವಸ್ಥೆಯಲ್ಲಿ ಕಟ್ಟಲ್ಪಡುತ್ತಿವೆ. ದಲಿತರು ಮತ್ತು ಆದಿವಾಸಿಗಳ ಸಾಮಾಜಿಕ ಪ್ರತ್ಯೇಕತೆ, ಅಸಮಾನತೆ ಮತ್ತು ಬಡತನವು, ನಾವು ಕರೆಯ ಬಯಸುವ 'ವರ್ಗ ಸಾಮಾಜಿಕ ತಾರತಮ್ಯ'ದ ಮೂಲಕ ರೂಢೀಗತಗೊಳ್ಳುತ್ತವೆ. ಇದು ಪರಸ್ಪರ ಸಂಬಂಧವಿರುವ ಮೂರು ಪ್ರಕ್ರಿಯೆಗಳಿಂದ ಕೂಡಿದೆ: 1. ಆದಿವಾಸಿ ಮತ್ತು ದಲಿತರನ್ನು ತುಚ್ಛೀಕರಣಗೊಳಿಸುವುದು ಮತ್ತು ಅಗೋಚರ ಹಿಂಸೆಯ ಬೆದರಿಕೆಯನ್ನು ಒಡ್ಡುವುದು; 2. ವಂಶವಾಹಿಯಾಗಿ ಬಂದ ಜಾತ್ಯಾಧಾರಿತ ಅಧಿಕಾರದ ಅಸಮಾನತೆಗಳು; ಮತ್ತು 3. ಆದಿವಾಸಿ ಮತ್ತು ದಲಿತ ವಲಸೆ ದಿನಗೂಲಿಗಳ ಮಿತಿ ಮೀರಿದ ಶೋಷಣೆ.

"... ಜಾತ್ಯಾಧಾರಿತ ತಾರತಮ್ಯವು ಭಾರತೀಯ ಸಮಾಜ ಮತ್ತು ಆರ್ಥಿಕತೆಯ ಎಷ್ಟೊಂದು ಪ್ರಮುಖ ಲಕ್ಷಣವೆಂದರೆ ಈ ತಾರತಮ್ಯವನ್ನು ಬಗೆಹರಿಸದೇ ಸಾಮಾನ್ಯ ಜನರ ಪರಿಸ್ಥಿತಿಯನ್ನು ಪರಿಣಾಮಕಾರಿಯಾಗಿ ಹೇಗೆ ಉತ್ತಮಗೊಳಿಸಬಹುದು ಎಂಬುದನ್ನು ಊಹಿಸಲಾಗದು."

ಹೀಗೆ ಒಟ್ಟಾರೆಯಾಗಿ ಜಾತಿ ತಾರತಮ್ಯದ ರೀತಿಗಳು ಬದಲಾಗುತ್ತಿವೆ. ಆದರೆ ಜಾತ್ಯಾಧಾರಿತ ತಾರತಮ್ಯಗಳು ಬೇರೆ ಬೇರೆ ರೂಪಗಳಲ್ಲಿ ಭಾರತೀಯ ಸಮಾಜದಲ್ಲಿ ಮತ್ತು ಆರ್ಥಿಕತೆಯಲ್ಲಿ ಮೊದಲಿಗಿಂತ ಪ್ರಬಲವಾಗಿಯೋ ಅಥವಾ ಅಷ್ಟೇ ಪ್ರಮಾಣದಲ್ಲಿಯೋ ಇನ್ನೂ ಮುಂದುವರಿಯುತ್ತಿವೆ ಎಂದು ಮೇಲಿನ ಅಧ್ಯಯನದಿಂದ ತಿಳಿಯುತ್ತದೆ. ಆದರೆ ಇನ್ನೊಂದು ರೀತಿ ವಿಶ್ಲೇಷಿಸುವುದಾದರೆ ಕೆಲವು ಹಳೇ ರೀತಿಯ ಪದ್ಧತಿ, ಆಚರಣೆಗಳೂ ಮುಂದುವರಿಯುತ್ತಿವೆ. ಅದರಲ್ಲಿ ಜೀತ ಪದ್ಧತಿಯೂ ಒಂದು. ಅದು ಹೊಸ ರೂಪಗಳನ್ನು ಪಡೆಯುತ್ತಿದ್ದಂತೆ ಹಳೆ ರೂಪಗಳೂ ಮುಂದುವರಿಯುತ್ತಿವೆ. 'ಬಿಟ್ಟಿ ಚಾಕ್ರಿ'ಯೂ ಕೂಡಾ ಜಾತ್ಯಾಧಾರಿತದ ಹಳೇ ರೀತಿಯ ತಾರತಮ್ಯದ ಮತ್ತು ಜಾತ್ಯಾಧಾರಿತ ಗುಲಾಮ ಪದ್ಧತಿಯ ಪಳೆಯುಳಿಕೆಯಂತೆ ಕಾಣುತ್ತವೆ.

ಇನ್ನೊಂದು ರೀತಿಯಲ್ಲಿ ಜಾತಿ ವ್ಯವಸ್ಥೆ ಬದಲಾಗುತ್ತಿದೆ ಎಂಬ ವಾದವೂ ಇದೆ. ಅದು 'ಸಂಸ್ಕೃತೀಕರಣ'ದ ಮೂಲಕ. 'ಸಂಸ್ಕೃತೀಕರಣ'ದ ಪ್ರಕ್ರಿಯೆಯಿಂದ ಕೆಳಗಿನ ಜಾತಿಗಳು ಜಾತಿ ಶ್ರೇಣಿಯಲ್ಲಿ ಮೇಲ್ಮುಖವಾಗಿ ಚಲಿಸಿ ತಮ್ಮ ಸ್ಥಾನಮಾನಗಳಲ್ಲಿ ಬದಲಾವಣೆಯನ್ನು ತರುತ್ತಿವೆ ಎಂದು ಎಮ್. ಎನ್. ಶ್ರೀನಿವಾಸರವರು ಪ್ರತಿಪಾದಿಸಿದ್ದರು (ಶ್ರಿನಿವಾಸ್ 1991, 1994, 2013). ಆದರೆ ಈ ವಾದವನ್ನು ಮನೋಹರ ಯಾದವರವರು ಬಲವಾಗಿ ವಿರೋಧಿಸಿ ಶ್ರೀನಿವಾಸರದೇ ವಾದ ಹಾಗೂ ಉಲ್ಲೇಖಗಳನ್ನು ಬಳಸಿ ಮತ್ತು ತಾವು ಒದಗಿಸುವ ಆಧಾರಗಳಿಂದ ಭಾರತದಲ್ಲಿಯ ಯಾವುದೇ ಜಾತಿಯು ಇನ್ನೂ ಅಸ್ತಿತ್ವದಲ್ಲಿರುವ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಅಂತಿಮವಾಗಿ ಮೇಲ್ಮುಖವಾಗಿ ಸ್ಥಾನಪಲ್ಲಟಗೊಳ್ಳಲು ಸಾಧ್ಯವೇ ಇಲ್ಲವೆಂದು ಸ್ಪಷ್ಟಪಡಿಸಿದ್ದಾರೆ (ಯಾದವ್ 2016: 12–14). ಸಗೋತ್ರ ಮದುವೆ ಮತ್ತು ಶ್ರೇಣೀಕೃತ ವ್ಯವಸ್ಥೆಯಲ್ಲಿ ಪ್ರತಿ ಜಾತಿಗೂ ಒಂದು ನಿರ್ದಿಷ್ಟ ಸ್ಥಾನಮಾನವನ್ನು ಖಚಿತಗೊಳಿಸುವುದು ಜಾತಿ ವ್ಯವಸ್ಥೆಯ ಮೂಲ ಲಕ್ಷಣಗಳಾಗಿದ್ದು ಅವುಗಳು ಇನ್ನೂ ಮುಂದುವರಿಯುತ್ತಿದ್ದು ಹುಟ್ಟಿನಿಂದಲೇ ಪಡೆದ ಸ್ಥಾನಮಾನಗಳನ್ನು ಬದಲಾಯಿಸುವಲ್ಲಿ ಸ್ಪಷ್ಟ ಮಿತಿಯನ್ನು ಒಡ್ಡುತ್ತವೆ (ಯಾದವ್ 2016: 14).

ಜಾತಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ಜೀತ ಪದ್ಧತಿ ಮತ್ತು ಅದಕ್ಕೆ ಸಂಬಂಧಪಟ್ಟ ವ್ಯವಸ್ಥೆಗಳನ್ನು ನಾಲ್ಕು ಕಾಲಘಟ್ಟಗಳಲ್ಲಿ ಅರ್ಥ ಮಾಡಲಿಕ್ಕೆ ಪ್ರಯತ್ನಿಸಬಹುದು: 1. ಋಗ್ವೇದದ ಕಾಲದಿಂದ ಮನುಸ್ಮೃತಿಯ ಕಾಲದ ತನಕ (ಕ್ರಿ.ಪೂ. 1500 – ಕ್ರಿ.ಶ. 150), 2. ಮನುಸ್ಮೃತಿಯಿಂದ ಬ್ರಿಟಿಷರ ಆಳ್ವಿಕೆಯ ಕಾಲದ ಆರಂಭದ 18ನೇ ಶತಮಾನದ 7ನೇ ದಶಕದ ತನಕ (1500–1772) 3. ಬ್ರಿಟಿಷರ ಕಾಲದ 18ನೇ ಶತಮಾನದ ಕೊನೆಯಿಂದ ಸ್ವಾತಂತ್ರ್ಯದ ಕಾಲದ ತನಕ (1772–1947: ಇಲ್ಲಿ ಗುಲಾಮಿ ಪದ್ಧತಿ ಕುರಿತಂತೆ ಎರಡು ಪ್ರಮುಖ ಇಸವಿಗಳನ್ನು ಗುರುತಿಸಬೇಕು – 1. ಗುಲಾಮಿ ಪದ್ಧತಿ ವಿರೋಧಿ ಕಾನೂನು ಜ್ಯಾರಿಯಾದ 1843 ಮತ್ತು 2. ಗುಲಾಮಿ ಪದ್ಧತಿ ನಿಷೇಧದ ವಿಧಿ ಹೊಂದಿದ ಭಾರತೀಯ ಅಪರಾಧಿಕ ಸಂಜ್ಞೆ ಜ್ಯಾರಿಯಾದ 1860) ಮತ್ತು 4. ಸ್ವಾತಂತ್ರ್ಯದ ನಂತರ (1947–2018: ಇಲ್ಲಿಯೂ ಎರಡು ಪ್ರಮುಖ ವರ್ಷಗಳನ್ನು ಗುರುತಿಸಬೇಕು – 1. ಬಲಾತ್ಕಾರದ ದುಡಿಮೆ ನಿಷೇಧದ ಮೂಲಭೂತ ಹಕ್ಕಿನ ವಿಧಿ 23 ಒಳಗೊಂಡಿರುವ ಭಾರತೀಯ ಸಂವಿಧಾನ ಆತ್ಮಾರ್ಪಣೆ ಮಾಡಲ್ಪಟ್ಟ 1950 ಮತ್ತು 1. ಜೀತ ಪದ್ಧತಿ ರದ್ದತಿ ಕಾನೂನು ಜ್ಯಾರಿಯಾಗಿದೆ ಎಂದು ಅಂಗೀಕರಿಸಲ್ಪಟ್ಟ 1975).

ಸ್ವಾತಂತ್ರ್ಯ ನಂತರದ ಕಾಲದಲ್ಲಿ ಜೀತಪದ್ಧತಿಯ ಉಲ್ಲೇಖ ಸಾರ್ವಜನಿಕರಲ್ಲಿ ಮತ್ತು ಸರ್ಕಾರಿ ದಾಖಲೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಸ್ವಾತಂತ್ರ್ಯಕ್ಕಿಂತ ಮುಂಚೆ 20ನೇ ಶತಮಾನದ ಆರಂಭದಲ್ಲಿಯೂ ಅದನ್ನು ಗಮನಿಸುತ್ತೇವೆ[43]. ಬ್ರಿಟಿಷರ ಕಾಲದ ಆರಂಭದಿಂದ 19ನೇ ಶತಮಾನದ ಮಧ್ಯಭಾಗದ ವರೆಗೆ, ಅಂದರೆ 1843ರಲ್ಲಿ ಭಾರತದಲ್ಲಿ ಗುಲಾಮ ಪದ್ಧತಿ ವಿರೋಧಿ ಕಾನೂನನ್ನು ಜ್ಯಾರಿಗಳಿಸುವ ತನಕ, ಜೀತ

---

43 ಜಾನ್ ಬ್ರೆಮನ್‌ರವರ ಅಧ್ಯಯನ ದಕ್ಷಿಣ ಗುಜರಾತ್‌ನಲ್ಲಿ 20ನೇ ಶತಮಾನದ ಆರಂಭದಿಂದ ಜ್ಯಾರಿಯಲ್ಲಿದ್ದ 'ಹಾಲಿಪ್ರಥ' ಎಂಬ ಜೀತಪದ್ಧತಿ ಕುರಿತದ್ದಾಗಿದೆ (ನೋಡಿ: ಬ್ರೆಮನ್ 1974, 1993, 2007).

ಪದ್ಧತಿಯ ಉಲ್ಲೇಖವಿಲ್ಲ[44]. ಅದರ ಮುಂಚಿನ ಕಾಲಗಳಲ್ಲಿಯೂ ಜೀತ ಪದ್ಧತಿಯ ಉಲ್ಲೇಖವಿಲ್ಲ[45]. ಕೃಷಿಕಾರ್ಮಿಕರೂ ಕೂಡಾ 19ನೇ ಶತಮಾನದ ಮುಂಚೆ ಅಷ್ಟೊಂದು ರೀತಿಯಲ್ಲಿ ಕಾಣಸಿಗುವುದಿಲ್ಲ. 19ನೇ ಶತಮಾನದ ಕೊನೆ ಭಾಗದಿಂದ 20ನೇ ಶತಮಾನದ ಆರಂಭದ ಕಾಲದಲ್ಲಿ ಕೃಷಿ ಕಾರ್ಮಿಕರು ದೊಡ್ಡ ಮಟ್ಟದಲ್ಲಿ ಕಾಣಸಿಗುತ್ತಾರೆ (ಬ್ರೆಮನ್ 1974: 1; ಕುಮಾರ್ 1965). ಅಂದರೆ ಕೃಷಿಕಾರ್ಮಿಕರು ಮತ್ತು ಜೀತದಾಳುಗಳು ಒಂದೇ ಕಾಲಘಟ್ಟದಲ್ಲಿ ಕಾಣ ಸಿಗುತ್ತಾರೆ ಎಂಬಾಯಿತು. ಸ್ವಾತಂತ್ರ್ಯ ನಂತರವೂ ಕೃಷಿಕಾರ್ಮಿಕರ ಸಂಖ್ಯೆ ಜಾಸ್ತಿ ಆಗುತ್ತಿರುವುದಕ್ಕೆ ಪ್ರತಿ ದಶಕಗಳಲ್ಲಿ ರಾಷ್ಟ್ರಾದ್ಯಂತ ನಡೆಯುತ್ತಿದ್ದ ಜನಗಣತಿಯಲ್ಲಿಯ ಮಾಹಿತಿಗಳೇ ಸಾಕ್ಷಿ. ಆದರೆ ಅವುಗಳಲ್ಲಿ ಜೀತದಾಳುಗಳ ಮಾಹಿತಿಯನ್ನು ಒಟ್ಟು ಹಾಕುವುದನ್ನು ಉದ್ದೇಶಪೂರ್ವಕವಾಗಿಯೇ ಬಿಟ್ಟುಬಿಡಲಾಗಿದೆ ಎಂದರೆ ತಪ್ಪಾಗಲಾರದು. 19ನೇ ಶತಮಾನದ ಆದಿಯಿಂದ 20ನೇ ಶತಮಾನದ ಉತ್ತರಾರ್ಧದ ಕೆಲವು ದಶಕಗಳ ವರೆಗೂ ಗುಲಾಮ ಪದ್ಧತಿಯ ವಿವಿಧ ರೂಪಗಳನ್ನು ದಾಖಲಿಸುವ ಪ್ರಯತ್ನ ನಡೆದಿದೆ. ಆದರೆ ತದನಂತರ ಅಂತಹ ಯಾವುದೇ ಪ್ರಯತ್ನ ಸರ್ಕಾರದಿಂದ ನಡೆಯುತ್ತಿಲ್ಲ[46].

19ನೇ ಶತಮಾನದ ಮುಂಚಿನ ಭಾರತದಲ್ಲಿ ಮನೆಗೆಲಸದ ಮತ್ತು ಕೀಳು ಕೆಲಸದ ಸೇವಕರು ಅಥವಾ ಗುಲಾಮರು ಪ್ರಸ್ತಾಪಿಸಲ್ಪಟ್ಟಿದ್ದಾರೆ. ಆದರೆ ಅವರ ಸಂಖ್ಯೆ ಬಹಳ ಕಡಿಮೆ ಇದ್ದು ಅವರು ನಿರ್ದಿಷ್ಟ ಸಾಮಾಜಿಕ ಗುಂಪಾಗಿ ಕಾಣಿಸಿಕೊಂಡಿರಲಿಲ್ಲ. ಅದೇ ರೀತಿ ಕೃಷಿ ಕಾರ್ಮಿಕರೂ ಅಸ್ತಿತ್ವದಲ್ಲಿರಲಿಲ್ಲ. 19ನೇ ಶತಮಾನದ ಕೊನೆ ಮತ್ತು 20ನೇ ಶತಮಾನದ ಆದಿಯಿಂದ ಮಾತ್ರ ಅವರು ಕಾಣಸಿಗುತ್ತಾರೆ (ಬ್ರೆಮನ್ 1974: 1). ಇದನ್ನು ಅರ್ಥ ಮಾಡಲು 19ನೇ ಶತಮಾನದ ಮುಂಚಿನ ಎರಡು ಕಾಲಘಟ್ಟಗಳಲ್ಲಿಯ ಸಾಮಾಜಿಕ ರಚನೆ ಮತ್ತು ಸಾಂಸ್ಕೃತಿಕ ವ್ಯವಸ್ಥೆಯನ್ನು ಮೊದಲು ಅರ್ಥಮಾಡಿಕೊಳ್ಳಬೇಕು.

---

44 ಡಿ.ಆರ್. ಬಣಜಿಯವರ 'ಸ್ಲೇವರಿ ಇನ್ ಬ್ರಿಟಿಷ್ ಇಂಡಿಯಾ'ದಲ್ಲಿ ಜೀತಪದ್ಧತಿಯ ಪ್ರಸ್ತಾಪವಿಲ್ಲ. ಆ ಪುಸ್ತಕವು 1772ರಿಂದ, ಅಂದರೆ ಬಂಗಾಲದಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಪ್ರಥಮ ಗವರ್ನರ್ ಜನರಲ್ ಆಳ್ವಿಕೆ ಶುರುಮಾಡಿದಾಗಿನಿಂದ, 1843 ತನಕ ಕಾಲದಲ್ಲಿದ್ದ ಭಾರತದಲ್ಲಿಯ ಗುಲಾಮಿ ಪದ್ಧತಿಯ ಕುರಿತು ಅಧ್ಯಯನವಾಗಿದೆ.

45 ಋಗ್ವೇದ, ಮನುಸ್ಮೃತಿ ಮುಂತಾದ ಧರ್ಮಶಾಸ್ತ್ರಗಳು, ಕೌಟಿಲ್ಯನ 'ಅರ್ಥಶಾಸ್ತ್ರ', ಬ್ರಿಟಿಷರ ಕಾಲದಲ್ಲಿ ಕ್ರೋಢೀಕರಿಸಲ್ಪಟ್ಟ ಹಿಂದು ಮತ್ತು ಮುಸ್ಲಿಂ ಕಾನೂನುಗಳಲ್ಲಿ ಜೀತ ಪದ್ಧತಿಯ ಉಲ್ಲೇಖವಿಲ್ಲ. ಆದರೆ 1992ರಲ್ಲಿ ಪ್ರಕಟವಾದ ಎಲ್.ಎನ್. ರಂಗರಾಜನ್‌ರವರ ಕೌಟಿಲ್ಯನ 'ಅರ್ಥಶಾಸ್ತ್ರ'ದ ಇಂಗ್ಲಿಷ್ ಭಾಷಾಂತರದಲ್ಲಿ 'ದಾಸ' ಮತ್ತದರಿಂದ ವ್ಯುತ್ಪತ್ತಿಯಾದ ಇನ್ನಿತರ ಮೂರು ಪದ (ದಾಸತ್ವ, ದಾಸಭಾವ, ದಾಸಕಲ್ಪ)ಗಳನ್ನು ಅರ್ಥೈಸುವಾಗ 'ಸ್ಲೇವ್', 'ಸ್ಲೇವ್ ಲೇಬರ್' ಜೊತೆ 'ಬೊಂಡೆಡ್ ಲೇಬರ್', 'ಬೊಂಡೆಡ್' ಎಂಬ ಪದಗಳನ್ನೂ ಬಳಸುತ್ತಾರೆ. ಆದರೆ ಅವರ ವಿವರಣೆಯಲ್ಲಿ 'ಬೊಂಡೆಡ್ ಲೇಬರ್' ಎಂದರೆ 'ಗುಲಾಮ' ಎಂದೇ ಅರ್ಥ ಕೊಡುತ್ತದೆ; ಜೀತ ಅಲ್ಲ.

46 1991ರ ರಾಷ್ಟ್ರೀಯ ಗ್ರಾಮೀಣ ಕಾರ್ಮಿಕತೆ ಆಯೋಗವು ತನ್ನ ವರದಿಯ ಸಂಪುಟ ಒಂದು, ಅಧ್ಯಾಯ 8ನ್ನು ಜೀತ ಸಮಸ್ಯೆ ಕುರಿತು ಚರ್ಚೆ ಮತ್ತು ಸಂಪುಟ ಎರಡರಲ್ಲಿ ಜೀತ ಸಮಸ್ಯೆ ಬಗ್ಗೆ ಅಧ್ಯಯನ ಕೂಟವು ಸಂಗ್ರಹಿಸಿದ ಮಾಹಿತಿಗಳನ್ನು ಬಿಟ್ಟರೆ ನಂತರ ಯಾವುದೇ ರಾಷ್ಟ್ರೀಯ ಆಯೋಗವು ಜೀತ ಸಮಸ್ಯೆಯನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ. 2002ರ ರಾಷ್ಟ್ರೀಯ ಕಾರ್ಮಿಕತೆ ಆಯೋಗದ ವರದಿಯ ಸಂಪುಟ ಎರಡರ ಅಧ್ಯಾಯ 7ರಲ್ಲಿ ಅಸಂಘಟಿತ ಕಾರ್ಮಿಕರ ವಿವರವಾದ ಮಾಹಿತಿ ಇದ್ದು ಜೀತ ಸಮಸ್ಯೆ ಕುರಿತು ನಿಕೃಷ್ಟವಾದ ಮಾಹಿತಿಯೂ ಇಲ್ಲ. ಅದರ ಪರಿಚ್ಛೇದ 7.114ರಲ್ಲಿ ಬಾಲಕಾರ್ಮಿಕರಲ್ಲಿ ಜೀತದ ದುಡಿಮೆ ಇದೆ ಎಂದು ಒಪ್ಪಿಕೊಳ್ಳುವ ಒಂದು ವಾಕ್ಯ ಮಾತ್ರ ಬರುತ್ತದೆ (ಪ್ರಸಾದ 2008ಬ: 1–42, 43–155, 221–251).

ಋಗ್ವೇದದ ಕೊನೆಘಟ್ಟದಲ್ಲಿ[47] ಬ್ರಾಹಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬು ನಾಲ್ಕು ವಿಧದ ಜನರ ಗುಂಪುಗಳಿರುವ ವರ್ಣವ್ಯವಸ್ಥೆಯು[48] (ಒ'ಫ್ಲಾಹೆರಟಿ 1994: 29–31) ರೂಪುಗೊಂಡು ಮನುಸ್ಮೃತಿ ಕಾಲಕ್ಕೆ ವರ್ಣವ್ಯಸ್ಥೆಯ ಚೌಕಟ್ಟನ್ನೇ ಆಧಾರವಾಗಿಟ್ಟುಕೊಂಡು[49] (ಡೊನಿಗೆರ್ 1991: 12–13, ಗುರುಮಲ್ಲದೇವರು 2016: 60–61) ಜಾತಿವ್ಯವಸ್ಥೆ ಬಲವಾಗಿ ರೂಪುಗೊಳ್ಳುತ್ತಿರುವುದನ್ನು ನಾವು ಕಾಣಬಹುದು[50]. ನಾಲ್ಕು ವರ್ಣಗಳಿಗೆ ವ್ಯಕ್ತಿಯ ತಲೆ, ತೋಳು, ತೊಡೆ, ಕಾಲುಗಳ ಹೋಲಿಕೆ ಕೊಟ್ಟಿರುವುದು ವಿವಿಧ ಸೇವೆಗಳ ವರ್ಗೀಕರಣ ಮಾತ್ರವಲ್ಲ ಆ ಸೇವೆಗಳಿಗೆ ಶ್ರೇಣೀಕೃತ ಸ್ಥಾನಮಾನ ಕೊಟ್ಟು ಜನರನ್ನೇ ಶಾಶ್ವತವಾಗಿ ವಿಂಗಡಿಸಿರುವುದಕ್ಕೆ ದಾರಿ ಮಾಡಿ ಕೊಟ್ಟಿದೆ[51].

ಪುರುಷ ಸೂಕ್ತದ ಅಥವಾ ಋಗ್ವೇದ ಕ್ರೋಢೀಕರಣಗೊಂಡ ಕೊನೆಯ ಕಾಲ ಮತ್ತು ಮನುಸ್ಮೃತಿ ರೂಪುಗೊಂಡ ಕಾಲಕ್ಕೆ ಹೆಚ್ಚು ಅಂತರವಿರಲಾರದು. ವರ್ಣ ವ್ಯವಸ್ಥೆಯಲ್ಲಿಯ ಗುಂಪಿನ ಹೆಸರುಗಳು ಸಾಮಾಜಿಕ ಗುಂಪನ್ನು ಮಾತ್ರ ಉಲ್ಲೇಖಿಸುತ್ತವೆಯೋ ಅಥವಾ ಆ ಗುಂಪಿನ ಜನರು ಮಾಡುವ ಕೆಲಸಗಳನ್ನೂ ಅವು ತೋರಿಸುತ್ತವೆಯೋ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಮನುಸ್ಮೃತಿಯ 1.87–91ರಲ್ಲಿ ಪ್ರತಿ ಗುಂಪು ಮಾಡುವ ಕೆಲಸಗಳನ್ನೇ ಸುಸ್ಪಷ್ಟಪಡಿಸಲಾಗಿದೆ. ಒ'ಫ್ಲಾಹೆರ್ಟಿಯವರ ಪುರುಷ ಸೂಕ್ತದ ಇಂಗ್ಲಿಷ್ ಭಾಷಾಂತರದಲ್ಲಿ ಬ್ರಾಹಣ, ಕ್ಷತ್ರಿಯ, ಶೂದ್ರ ಹೆಸರುಗಳ ಬದಲಾಗಿ 'ಪ್ರೀಸ್ಟ್' ಅಂದರೆ ಪೂಜಾರಿ, 'ವಾರಿಯರ್' ಅಂದರೆ ಯೋಧ', 'ಸರ್ವೆಂಟ್' ಅಂದರೆ ಸೇವಕ ಎಂಬ ಕೆಲಸ ಸೂಚಕ ಪದಗಳನ್ನೇ ಬಳಸಲಾಗಿದೆ[52]. ವರ್ಣಸೂಚಕ ಹಾಗೂ ಜಾತಿ ಸೂಚಕ ಪದಗಳು ಮೂಲಭೂತವಾಗಿ ಕೆಲಸ ಸೂಚಕ ಪದಗಳೇ ಆಗಿದ್ದುವು ಎಂಬುದನ್ನು ಅದರಿಂದ ತಿಳಿದುಕೊಳ್ಳಬಹುದು. ಶ್ರೇಣೀಕೃತ ಸಾಮಾಜಿಕ ಗುಂಪುಗಳಾಗಿಯೂ ಅವು ನಿರ್ದಿಷ್ಟ ಶ್ರೇಣೀಕೃತ ಕೆಲಸಗಳನ್ನೂ ಸೂಚಿಸುತ್ತಿದ್ದವು.

---

47 ಋಗ್ವೇದವನ್ನು ಕ್ರಿ ಪೂರ್ವದ 1500ರಿಂದ 1200ರ ರಚಿತವಾಗಿದ್ದು ಅದರ ಮೊದಲ ಹಂತದ ಕ್ರೋಢೀಕರಣವು ಕುರು ಸಾಮ್ರಾಜ್ಯದ ಕಾಲಕ್ಕೆ (ಕ್ರಿ ಪೂ. 1200ರಿಂದ 900) ನಡೆದಿತ್ತೆಂದು ಒಪ್ಪಿಕೊಳ್ಳಲಾಗಿದೆ (ನೋಡಿ: ವಿಕಿಪೀಡಿಯಾ – ರಿಗ್ ವೇದ). ಆದರೆ ಅದರ ಮೊದಲ ಮತ್ತು ಕೊನೆ (ಒಂದು ಮತ್ತು ಹತ್ತು) ಮಂಡಲಗಳನ್ನು ವೇದಕಾಲದ ನಂತರದ ಕಾಲದಲ್ಲಿ ಸೇರಿಸಲಾಗಿದೆ ಎಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ. ಪುರುಷ ಸೂಕ್ತ 10ನೇ ಮಂಡಲದಲ್ಲಿ ಬರುತ್ತದೆ.

48 ಋಗ್ವೇದದ ಪುರುಷ ಸೂಕ್ತ (10.90.12)ದಲ್ಲಿ ಪುರುಷನ ಬಾಯಿಯು ಬ್ರಾಹ್ಮಣನಾಯಿತು; ಭುಜಗಳು ಕ್ಷತ್ರಿಯರಾದರು; ತೊಡೆಗಳು ವೈಶ್ಯರಾದರು; ಮತ್ತು ಪಾದಗಳು ಶೂದ್ರರಾದರು ಎಂಬ ಪ್ರಸ್ತಾಪವಿದೆ.

49 ಮನುಸ್ಮೃತಿ 1. 36, 87–91

50 ಸರಿಸುಮಾರು ಇದೇ ಕಾಲಘಟ್ಟದಲ್ಲಿ, ಅಂದರೆ ಕಿ.ಪೂ. 300ರಿಂದ ಕ್ರಿ.ಶ. 150ರ ಒಳಗೆ, ರಚಿತವಾದ ಕೌಟಿಲ್ಯರವರ 'ಅರ್ಥಶಾಸ್ತ್ರ'ವು ಸುಮಾರಾಗಿ ಇದೇ ವ್ಯವಸ್ಥೆಯನ್ನು ಪ್ರತಿಧ್ವನಿಸುತ್ತಿರುವುದರಿಂದ ಅಲ್ಲಿ ಬರುವ ವರ್ಣ ವ್ಯವಸ್ಥೆ, ಅದರೊಳಗಿನ ಉಪಗುಂಪುಗಳು, ವರ್ಣ ವ್ಯವಸ್ಥೆಯ ಹೊರಗಿನ ಗುಂಪುಗಳು, ಉಪಗುಂಪುಗಳು, ಪ್ರತ್ಯೇಕವಾಗಿ 'ದಾಸ'ರು ಮತ್ತು ಅವರಲ್ಲಿಯ ವಿಧಗಳು ಇತ್ಯಾದಿ ವಿಷಯಗಳನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸಿಲ್ಲ. ಕೌಟಿಲ್ಯ 'ಅರ್ಥಶಸ್ತ್ರ', ಭಾಷಾಂತರ: ರಂಗರಾಜನ್ ಎಲ್.ಎನ್. 1992: 6–8 (ಕಾಲ); 29–37 (ಆರ್ಯ–ಅನಾರ್ಯ ಗುಂಪುಗಳು); 411–419 (ಕರ್ಮಕಾರರು ಮತ್ತು ದಾಸರು – ಕೌಟಿಲ್ಯ ಅರ್ಥಶಾಸ್ತ್ರ: 3.13, 14)

51 ಅಂಬೇಡ್ಕರ್‌ರವರು ಅದನ್ನೇ "ಜಾತಿ ಪದ್ಧತಿ ಕೇವಲ ಶ್ರಮ ವಿಭಜನೆಯಾಗಿರದೆ ಶ್ರಮ ಜೀವಿಗಳ ವಿಭಾಗೂ ಆಗಿದೆ" ಎಂದು ವಿವರಿಸುತ್ತಾರೆ (ಅಂಬೇಡ್ಕರ್ 2010: 58).

52 'ವೈಶ್ಯ' ಹೆಸರಿಗೆ ಮಾತ್ರ ಕೆಲಸ ಸೂಚಕವಲ್ಲದ 'ಕಾಮನರ್' ಎಂಬ ಜನರಲ್ಲಿರುವ ಒಂದು ಗುಂಪನ್ನು ಸೂಚಿಸುವ ಪದವನ್ನು ಬಳಸಲಾಗಿದೆ.

ಋಗ್ವೇದದಲ್ಲಿ ಬೇರೆ ಬೇರೆ ಇತರ ಶ್ಲೋಕಗಳಲ್ಲಿ ನಾಲ್ಕು ಗುಂಪುಗಳಿಂದ ಕೂಡಿದ ವರ್ಣ ವ್ಯವಸ್ಥೆಯ ಹೊರಗಿರಬಹುದಾದಂತಹ ಹಲವಾರು ಇತರ ಗುಂಪುಗಳ ಪ್ರಸ್ತಾಪವಿದೆ. ಅವೇ ಮುಂದಿನ ಜಾತಿ ವ್ಯವಸ್ಥೆಯಲ್ಲಿ ಗುಲಾಮ ಎಂದು ಅರ್ಥ ಕೊಡುವ 'ದಸ್ಯು' ಮತ್ತು 'ದಾಸ' ಗುಂಪುಗಳು (ಓ ಫ್ಲಾಹೆರ್ಟಿ 1994: 329)[53]. ಮನುಸ್ಮೃತಿಯಲ್ಲೂ ನಾಲ್ಕು ಗುಂಪು ಅಥವಾ 'ವಿಶಾಲ ಜಾತಿ'ಗಳ ಹೊರತಾದ ಮತ್ತು 'ದಸ್ಯು' ಮತ್ತು 'ದಾಸ' ಎಂಬ ಗುಂಪುಗಳನ್ನು ಕೂಡಿಕೊಂಡು ಹಲವಾರು ಮಿಶ್ರ ಜಾತಿಗಳ ಪ್ರಸ್ತಾಪ ಬರುತ್ತದೆ. ಕೆಲವು ದ್ವಿಜ ಜಾತಿಗಳಲ್ಲೇ ಪರಿಗಣಿಸಲ್ಪಟ್ಟರೆ ಹೆಚ್ಚಿನವು ಶೂದ್ರ ಅಥವಾ ಸೇವಕ ಜಾತಿಗಳಲ್ಲಿ ಪರಿಗಣಿಸಲ್ಪಡುತ್ತವೆ[54]. ನಾಲ್ಕು ವರ್ಣ ಅಥವಾ 'ವಿಶಾಲ ಜಾತಿ'ಗಳಿಂದ ಹೊರತಾಗಿರುವ ಮೂಲನಿವಾಸಿಗಳನ್ನು 'ದಸ್ಯು' ಎಂದು ಪರಿಗಣಿಸಲಾಗಿದೆ[55]. ಇನ್ನೊಂದು ವರ್ಗವಾದ ಗುಲಾಮರೆನಿಸುವ 'ದಾಸ'ರ ಪ್ರಸ್ತಾಪವೂ ಮನುಸ್ಮೃತಿಯಲ್ಲಿದೆ. ಅವರು 'ದಸ್ಯು' ಮತ್ತವರಿಗೆ ಯೋಗ್ಯರಲ್ಲದ ಮಹಿಳೆಯರಿಂದ ಹುಟ್ಟಿದವರೂ ಆಗಿರಬಹುದು[56]. ಶೂದ್ರರನ್ನೂ ಬ್ರಾಹ್ಮಣರು ದಾಸರನ್ನಾಗಿ ಮಾಡಬಹುದಿತ್ತು[57]. ಇನ್ನು ಏಳು ವಿಧಗಳಲ್ಲಿಯೂ[58] ದಾಸ (ಗುಲಾಮ)ರನ್ನಾಗಿ ಮಾಡಬಹುದು: 1. ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟವನು, 2. ಊಟಕ್ಕಾಗಿ ದಾಸನಾದವನು, 3. ಮನೆಯಲ್ಲಿ ದಾಸಿಗೆ ಹುಟ್ಟಿದವನು, 4. ಮಾರಲ್ಪಟ್ಟವನು, 5. ಕೊಡಲ್ಪಟ್ಟವನು, 6. ಹಿರಿಯರಿಂದ ಬಳುವಳಿಯಾಗಿ ಬಂದವನು, ಮತ್ತು 7. ಶಿಕ್ಷೆ ನಿಮಿತ್ತ ದಾಸನಾಗಿಸಲ್ಪಟ್ಟವನು. ಇವರಲ್ಲದೇ ನಾಲ್ಕು 'ವಿಶಾಲ' ಜಾತಿಗಳಿಂದ ಹೊರತಾದ 'ಅಪಸದ'ರೆನಿಸುವ ಮನುಷ್ಯರಲ್ಲೇ ಅತ್ಯಂತ ಕೀಳಾದ ಹಲವಾರು ಬಗೆಯ ಅಸ್ಪೃಶ್ಯ ಜಾತಿಗಳ ಬಗ್ಗೆಯೂ ಮನುಸ್ಮೃತಿಯು ವಿವರಿಸುತ್ತದೆ[59]. ಅವರು ಶೂದ್ರರು ಮತ್ತು ದ್ವಿಜರ ಸೇವೆಗಳಿಂದ ಜೀವಿಸಲಿಕ್ಕಾಗದಿದ್ದರೆ ಕೈಕೆಲಸದವ [ಮಾನ್ಯುವಲ್ ಲೆಬರರ್] (ಡೊನಿಗರ್ 1991: 247)ನ ಕೆಲಸಗಳನ್ನು ಮಾಡಬೇಕು ಎಂದು ಮನುಸ್ಮೃತಿಯು ವಿಧಿಸುತ್ತದೆ[60]. ಹೀಗೆ ನಾಲ್ಕು 'ವಿಶಾಲ ಜಾತಿ'ಯೊಳಗಿನ ಹಲವಾರು ಉಪಜಾತಿಗಳು, 'ವಿಶಾಲ ಜಾತಿ'ಗಳ ಹೊರಗಿನ ಉಪಜಾತಿಗಳು, ಅಪಸದರು (ಅಸ್ಪೃಶ್ಯರು), ದಾಸರು (ಗುಲಾಮರು), ಕೈಕೆಲಸದವರು, ದಸ್ಯುಗಳು (ವಿಶಿಷ್ಟ ಜನಾಂಗದವರು) ಮತ್ತು ಅವರೆಲ್ಲರೂ ಮಾಡಲೇ ಬೇಕಾದ ಕೆಲಸಗಳು, ಕಸುಬು-ವೃತ್ತಿಗಳು ಹಾಗೂ ಸೇವೆಗಳನ್ನು ಮನುಸ್ಮೃತಿಯು ದಾಖಲಿಸುತ್ತದೆ. ಮನುಸ್ಮೃತಿಯು

---

53 ಋಗ್ವೇದ 1.32.11, 4.18.9, 10.102.3 (ದಾಸ); 10.12.10 (ದಸ್ಯು)

54 ಮನುಸ್ಮೃತಿ 10.41, 120–123, 126–129 (ನೋಡಿ: ಡೊನಿಗರ್ 1991: 240, 249, 250; ಗುರುಮಲ್ಲದೇವ 2016: 633, 654–656)

55 ಮನುಸ್ಮೃತಿ 10. 45 (ನೋಡಿ: ಡೊನಿಗರ್ 1991: 241; ಗುರುಮಲ್ಲದೇವ 2016: 634)

56 ಮನುಸ್ಮೃತಿ 10. 32–34 (ನೋಡಿ: ಡೊನಿಗರ್ 1991: 239; ಗುರುಮಲ್ಲದೇವ 2016: 631)

57 ಮನುಸ್ಮೃತಿ 8.413–414 (ನೋಡಿ: ಡೊನಿಗರ್ 1991: 196; ಗುರುಮಲ್ಲದೇವ 2016: 533)

58 ಮನುಸ್ಮೃತಿ 8. 415 (ನೋಡಿ: ಡೊನಿಗರ್ 1991: 196; ಗುರುಮಲ್ಲದೇವ 2016: 533)

59 ಮನುಸ್ಮೃತಿ 10. 12, 16, 26, 37–40, 50–108 (ನೋಡಿ: ಡೊನಿಗರ್ 1991: 235–6, 238–240, 242–8; ಗುರುಮಲ್ಲದೇವ 2016: 626–7, 629, 632–3, 636–650)

60 ಮನುಸ್ಮೃತಿ 10.99–100 (ನೋಡಿ: ಡೊನಿಗರ್ 1991: 246–7; ಗುರುಮಲ್ಲದೇವ 2016: 648)

ಕ್ರಿ. ಶ. ಸುಮಾರು 2ನೇ ಶತಮಾನದಲ್ಲಿ ಕ್ರೋಢೀಕರಣಗೊಂಡ[61] ನಂತರ ಜಾತಿ ಉಪಜಾತಿಗಳ ರಚನೆಯಲ್ಲಿ ಮತ್ತು ಅವರು ಮಾಡುವ ಕಾರ್ಯಗಳಲ್ಲಿ ಹಲವಾರು, ಬದಲಾವಣೆಗಳು ಹಾಗೂ ಬೆಳವಣಿಗೆಗಳಾಗುತ್ತಾ 8–10 ಶತಮಾನಗಳ ಕಾಲದಿಂದ ಹೆಚ್ಚು ಬದಲಾಣೆಗಳಾಗದೇ ಹಾಗೆಯೇ ಉಳಿದುಕೊಂಡು ಬಂದಿರಬಹುದು.

ಮನುಸ್ಮೃತಿ ನಂತರ ಬಂದ, ಅಂದರೆ ಕ್ರಿ.ಪೂ. 1ನೇ ಶತಮಾನದಿಂದ ಕ್ರಿ.ಶ. 4ನೇ ಶತಮಾನದ ಒಳಗಡೆ ರಚಿಸಲಾಗಿದೆ[62] ಎನ್ನಲಾದ ಇನ್ನೊಂದು ಧರ್ಮಶಾಸ್ತ್ರವಾದ 'ನಾರದ ಧರ್ಮಶಾಸ್ತ್ರ'ದ ಪ್ರಕಾರ 15 ರೀತಿಯ ದಾಸ (ಗುಲಾಮ)ರಿದ್ದಾರೆ: 1. ಗೃಹಜಾತ (ಮಾಲಿಕನ ದಾಸಿಗೆ ಹುಟ್ಟಿದ, 2. ಕ್ರೀತ (ಕ್ರಯಕ್ಕೆ ಕೊಂಡುಕೊಂಡವನು), 3. ಲಬ್ಧ ('ದಾನವಾಗಿ' ಪಡೆದವನು), 4. ದಾಯದುಪಜಾತ (ಹಿರಿಯರಿಂದ ಬಳುವಳಿಯಾಗಿ ಬಂದವನು, 5. ಸ್ವ ಮಾರಾಟ ಮಾಡಲ್ಪಟ್ಟವನು, 6. ಯುದ್ಧದಲ್ಲಿ ಸೆರೆಹಿಡಿಲ್ಪಟ್ಟವನು, 7. ಧರ್ಮಬಾಹಿರನಾದವನು, 8. ಅನಾಕಾಲ ಭೃತ್ತ (ಬರಗಾಲದಲ್ಲಿ ಸಾಕಲ್ಪಟ್ಟವನು), 9. ಮಾಲಿಕನಿಂದ ಅಡವಿಡಲ್ಪಟ್ಟವನು, 10. ಸಾಲ ಮರುಪಾವತಿಗೆ ದಾಸನಾದವನು, 11. ಪಣೆಜಿತ (ಪಂದ್ಯದಲ್ಲಿ ಸೋತರೆ ದಾಸನಾಗುವ ಷರತ್ತಿಗೆ ಒಳಗಾದವನು), 12. ಸ್ವ ಇಚ್ಛೆಯಿಂದ 'ನಾನು ನಿನ್ನವನು' ಎಂದು ದಾಸ್ಯಕ್ಕೊಳಗಾದವನು, 13. ಒಂದು ನಿರ್ದಿಷ್ಟ ಅವಧಿಗೆ ದಾಸ್ಯಕೊಳಗಾದವನು, 14 ಭಕ್ತದಾಸ (ಊಟಕೋಸ್ಕರ ದಾಸನಾದವನು), ಮತ್ತು 15. ಬದಾವ–ಹೃತ (ವಧುವಿಗಾಗಿ ದಾಸನಾದವನು).

ಸೇವೆ ಮಾಡುವ ಇನ್ನಿತರ ನಾಲ್ಕು ಮಂದಿಯನ್ನು ನಾರದಸ್ಮೃತಿಯು ಗುರುತಿಸುತ್ತದೆ. ಅವರು ಕರ್ಮಕಾರರು: 1. ಶಿಷ್ಯ, 2. ಅಂತೆವಾಸಿ (ಕಸುಬಿಗೆ ತರಬೇತಿಯಲ್ಲಿರುವವನು), 3. ಭೃತ್ತಕ (ಬಾಡಿಗೆಗೆ ಪಡೆದವನು), 4. ಅಧಿಕರ್ಮಕೃತ (ಮೇಲ್ವಿಚಾರಕ). ಈ ನಾಲ್ಕು ವಿಧದ ಸೇವಕರು ಮಡಿ ಕೆಲಸಮಾಡುವಂತಹರು. ದಾಸರಾದರೋ ಮೈಲಿಗೆ ತರುವ ಕೆಲಸಗಳನ್ನು ಮಾತ್ರ ಮಾಡಲು ಅರ್ಹರು. ದಾಸರು ಮತ್ತು ಕರ್ಮಕಾರರು ಸೇರಿ ಶುಶ್ರೂಷ್ಕ (ಸೇವೆ) ಮಾಡುವ ಕರ್ತವ್ಯ ಹೊಂದಿದವರು ಎಂಬ ವಿಶಾಲ ವರ್ಗದಲ್ಲಿ ಸೇರುತ್ತಾರೆ (ಬಣಜಿ 1933: 207–209). ಹೀಗೆ ಮನುಸ್ಮೃತಿಯ ಸ್ವಲ್ಪ ನಂತರದ ಕಾಲದಲ್ಲಿ ಕೆಲಸಗಳನ್ನು ಮಡಿವಂತ ಕೆಲಸಗಳು ಮತ್ತು ಮೈಲಿಗೆಯಾಗುವ ಕೆಲಸಗಳು ಎಂದು ವಿಂಗಡಿಸಿರುವುದು ಸೇವೆಗಳ ವಿಂಗಡಣೆಯಲ್ಲಾದ ಇನ್ನೊಂದು ಬೆಳವಣಿಗೆ. ಈ ಕರ್ಮಕಾರರು ಮತ್ತು ದಾಸರು ಎಂಬ ಮಡಿ ಮತ್ತು ಮೈಲಿಗೆ ಎಂದು ಹೇಳಿಕೊಳ್ಳಲಾದ ಸ್ಪಷ್ಟವಾಗಿ ವಿಂಗಡಿಸಲಾದ ಕೆಲಸಗಳನ್ನು ಮಾಡುವ ವರ್ಗಗಳನ್ನು ಗಮನಿಸಿದಾಗ ಮುಂದಿನ ಕಾಲಘಟ್ಟದಲ್ಲಿ ಕಾಣಸಿಗುವ ಜೀತದಾಳುಗಳು ಮತ್ತು

---

61 ಮನುಸ್ಮೃತಿಯ ಕಾಲವನ್ನು ಕ್ರಿ.ಪೂ. 2ನೇ ಶತಮಾನದಿಂದ ಕ್ರಿ.ಶ. 2ನೇ ಶತಮಾನದ ತನಕ ಗುರುತಿಸಲಾಗಿದೆ ಎಂದು ವಿಕಿಪಿಡಿಯದ 'ಮನುಸ್ಮೃತಿ' ಪ್ರಬಂಧ ತಿಳಿಸುತ್ತದೆ.

62 ವಿಕಿಪಿಡಿಯದ 'ನಾರದ ಸ್ಮೃತಿ' ಪ್ರಬಂಧ

'ಬಿಟ್ಟಿ ಚಾಕ್ರಿ' ಮಾಡುವವರ ನಿರ್ದಿಷ್ಟ ಕೆಲಸಗಳಿಗೆ ಒಂದು ಕೀಳು ಮಟ್ಟದ ಅಥವಾ ನೀಚ ಕೆಲಸಗಳು, ಇನ್ನೊಂದು ಮೈಲಿಗೆ ತರುವಂತಹ ಕೆಲಸಗಳು ಎಂಬಂತಹ ಅರ್ಥವಿರುವುದನ್ನೂ ಗಮನಿಸಬಹುದು.

ನಾರದ ಧರ್ಮಶಾಸ್ತ್ರದಲ್ಲಿಯ ಮೊದಲ ನಾಲ್ಕು ರೀತಿಯ ದಾಸರು – ಗುಲಾಮರು 1. ಗೃಹಜಾತ (ಮಾಲಿಕನ ದಾಸಿಗೆ ಹುಟ್ಟಿದ), 2. ಕ್ರೀತ (ಕ್ರಯಕ್ಕೆ ಕೊಂಡುಕೊಂಡವನು), 3. ಲಬ್ಧ ('ದಾನವಾಗಿ' ಪಡೆದವನು), 4. ದಾಯದುಪಜಾತರು (ಹಿರಿಯರಿಂದ ಬಳುವಳಿಯಾಗಿ ಬಂದವನು) ಸಾಯುವ ತನಕ ದಾಸರಾಗಿರಬೇಕಾಗಿತ್ತು. ಅವರಿಗೆ ಬಿಡುಗಡೆ ಎಂಬುದಿರಲಿಲ್ಲ. ಆದರೆ ಉಳಿದವರ ಹೆಸರುಗಳೇ ಸೂಚಿಸುವಂತೆ ಅವರು ತಮ್ಮ ಷರತ್ತುಗಳನ್ನು ಪೂರೈಸಿದ ನಂತರ ಬಿಡುಗಡೆಯಾಗಬಹುದಿತ್ತು (ಬಣಜಿ 1933: 215–219). ಭಾರತೀಯ ಶಾಸ್ತ್ರಗಳಲ್ಲಿ ಉಲ್ಲೇಖವಾಗಿರುವ ದಾಸ (ಗುಲಾಮ) ಕಲ್ಪನೆಯು ಗ್ರೀಸ್ ಸಮಾಜ, ರೋಮ್ ಸಾಮ್ರಾಜ್ಯ ಮತ್ತು ಅಮೇರಿಕದಲ್ಲಿದ್ದ ಕಪ್ಪು ಜನರ ಗುಲಾಮ ವ್ಯವಸ್ಥೆಗಳಲ್ಲಿ ತೋರಿ ಬರುತ್ತಿದ್ದ ಪಾಶ್ಚಾತ್ಯ 'ಗುಲಾಮ' ಕಲ್ಪನೆಗೂ ಸ್ಪಷ್ಟ ವ್ಯತ್ಯಾಸವಿದೆ. ಪಾಶ್ಚಾತ್ಯ ಕಲ್ಪನೆಯಲ್ಲಿ ಗುಲಾಮನು ಶಾಸ್ವತವಾಗಿ ಮಾಲಿಕನ ಸೊತ್ತು; ಮತ್ತು ಗುಲಾಮನಿಗೆ ಯಾವುದೇ ಹಕ್ಕುಗಳಿರಲಿಲ್ಲ. ಯಾವುದೇ ರೀತಿಯ ಗುಲಾಮರಿಗೆ ಬಿಡುಗಡೆ ಎಂಬುದೇ ಇರಲಿಲ್ಲ.

ಭಾರತ ಧರ್ಮ ಶಾಸ್ತ್ರ ಮತ್ತು ಸಮಾಜದಲ್ಲಿಯ ಸೇವೆ ಸಲ್ಲಿಸುವವರ ಮತ್ತು ದಾಸ (ಗುಲಾಮ)ರಾಗಿದ್ದವರ ಮುಖ್ಯ ಲಕ್ಷಣವೆಂದರೆ ಅವರು ಒಂದು ನಿರ್ದಿಷ್ಟ ಜಾತಿಯ ಭಾಗವಾಗಿದ್ದರು. ಅವರ ಕರ್ತವ್ಯಗಳು ಅವರು ಭಾಗವಾಗಿರುವ ಸಮಾಜಕ್ಕೇ ಅನ್ವಯಿಸುತ್ತಿದ್ದವು. ಅಷ್ಟೇ ಅಲ್ಲ ಅವರ ಸೇವೆಗಳಿಗೆ ಬಿಡುಗಡೆ ಎಂಬುದೇ ಇರಲಿಲ್ಲ. ಆದರೂ ಮೇಲೆ ವಿವರಿಸಿದಂತೆ ವೈಯಕ್ತಿಕ ಸೇವಕರೂ ಗುಲಾಮರೂ ಇರುತ್ತಿದ್ದರು. ಅವರು ಯಾವ ಜಾತಿಯವರೂ ವರ್ಣದವರೂ ಇರಬಹುದಿತ್ತು; ಮತ್ತು ಅವರ ಷರತ್ತು ಅನ್ವಯವಾಗುವ ವರೆಗೆ ಮಾತ್ರ ಗುಲಾಮರಾಗಿರುತ್ತಿದ್ದರು.

8ನೇ ಶತಮಾನದ ಕಾಲಘಟ್ಟದಿಂದ ಗುಲಾಮಿ ಪದ್ಧತಿ ಕುರಿತಂತೆ ಭರತಖಂಡದಲ್ಲಿ ರಾಜಕೀಯವಾಗಿ ಸಾಮಾಜಿಕವಾಗಿ ಆಗುತ್ತಿದ್ದ ಇನ್ನೊಂದು ಬೆಳವಣಿಗೆಯನ್ನು ನಾವು ನೋಡಬಹುದು. ಅದು 712ರಲ್ಲಿ ಮುಸ್ಲಿಮರು ಸಿಂಧ್ ಪ್ರಾಂತ್ಯವನ್ನು ವಶಪಡಿಸಿ, ನಂತರ ಸುಲ್ತಾನ್ ಮುಹಮ್ಮದ್ ಪಂಜಾಬನ್ನು ಗೆದ್ದು ದೊಡ್ಡ ಮಟ್ಟದಲ್ಲಿ ಸಧರ್ಮೀಯರನ್ನು ಆ ಪ್ರಾಂತ್ಯದಲ್ಲಿ ನೆಲೆಗೊಳಿಸಿ ಆನಂತರ 12ನೇ ಶತಮಾನದ ಅಂತ್ಯದಲ್ಲಿ ಮುಹಮದ್ ಘೋರ್‌ನಿಂದ ಆರಂಭವಾದ ಭಾರತವನ್ನು ವ್ಯವಸ್ಥಿತವಾಗಿ ವಶಪಡಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಮುಸ್ಲಿಮರು ದೊಡ್ಡ ಪ್ರಮಾಣದಲ್ಲಿ ಭರತಖಂಡದ ಒಳಹೊಕ್ಕರು; ರಾಜ್ಯಾಧಿಕಾರವನ್ನೂ ಪಡೆದರು; ಹಾಗೂ ಸ್ಥಳೀಯರನ್ನೂ ಮುಸ್ಲಿಮರನ್ನಾಗಿಸಿದರು. ಇದರ ಭಾಗವಾಗಿ ಆಫ್ರಿಕಾದಿಂದ ಕಪ್ಪು ಜನರನ್ನು ದೊಡ್ಡ ಪ್ರಮಾಣದಲ್ಲಿ ಭಾರತಕ್ಕೆ ಗುಲಾಮರನ್ನಾಗಿ ಕರೆತರಲಾಯಿತು. ಅದರ ಮೂಲಕ ಇಸ್ಲಾಂ ಪದ್ಧತಿ ಮತ್ತು ಕಾನೂನಿನನ್ವಯದ ಗುಲಾಮಿ ಪದ್ಧತಿಯೂ ಭಾರತದಲ್ಲಿ ನೆಲೆಗೊಂಡಿತು (ಚಟ್ಟೋಪಾಧ್ಯಾಯ್ 1959; ಬಣಜಿ 1933: 226–240). ಮುಸ್ಲಿಂ ಕಾನೂನಿನ ಪ್ರಕಾರ ಗುಲಾಮರನ್ನು

ಮನೆಗೆಲಸಗಳಿಗೆ, ರಾಜರ ಸೇವೆಗಳಿಗೆ ಮತ್ತು ಸೈನಿಕರನ್ನಾಗಿ ಬಳಸಲಾಗುತ್ತಿತ್ತು. ಗುಲಾಮರು ಸಂಪೂರ್ಣವಾಗಿ ಮಾಲಿಕರ ಸೊತ್ತಾಗಿದ್ದು ಅವರನ್ನು ಕೊಂದರೂ ಮಾಲಿಕರು ಶಿಕ್ಷಾರ್ಹರಾಗಿರಲಿಲ್ಲ. ಆದರೂ ಕೆಲವು ವಿಧದ ಗುಲಾಮರು ಪ್ರತ್ಯೇಕವಾಗಿ ಮಹಿಳಾ ಗುಲಾಮರನ್ನು ಸ್ವತಂತ್ರ ವ್ಯಕ್ತಿಗಳನ್ನಾಗಿ ಮಾಡಬಹುದಾಗಿತ್ತು (ಬಣಜಿ 1993: 238–39). ಪಾಶ್ಚಾತ್ಯ ಗುಲಾಮಿ ವ್ಯವಸ್ಥೆಗೆ ಹೋಲಿಸಿದರೆ ಮುಸ್ಲಿಂ ಗುಲಾಮಿ ವ್ಯವಸ್ಥೆಯಲ್ಲಿ ಒಂದು ರೀತಿಯ 'ಮಾನವೀಯತೆ' ಮೆರೆಯುವಂತಿತ್ತು (ಪ್ರಸಾದ 2008: 1–2). ಭಾರತೀಯ ಕಾನೂನುಗಳ ವೈಯಕ್ತಿಕ ಗುಲಾಮರಂತೆ ಗುಲಾಮತನದಿಂದ ಬಿಡುಗಡೆಯಾಗುವ ಸಾಧ್ಯತೆ ಅದರಲ್ಲಿ ಇತ್ತು.

ಈ ಕಾಲಘಟ್ಟದಿಂದ 'ದಾಸ' ಪದದ ಬದಲಾಗಿ ಅರಾಬಿಕ್ ನಂತರ ಉರ್ದು ಭಾಷೆಯ 'ಗುಲಾಮ' ಪದವನ್ನೇ ಬಳಸುವ ಪದ್ಧತಿ ರೂಢಿಗತವಾಗಿರಬೇಕು. ವೈಯಕ್ತಿಕ ಗುಲಾಮ ಪದ್ಧತಿಗೆ ಈ ಪದ ಮೀಸಲಾಗಿದ್ದು ಜಾತಿ ಆಧಾರಿತ ನೀಚ ಅಥವಾ ಕೀಳು ಕೆಲಸ, ಬೆವರು ಸುರಿಸುವ ಕೆಲಸ ಮಾಡುವವರನ್ನು ಅವರ ಜಾತಿ ಹೆಸರಿನಿಂದಲೇ ಪ್ರಸ್ತಾಪಿಸಲಾಗುತ್ತಿತ್ತು.

ಹೀಗೆ ಕ್ರಿಸ್ತ ಶಕದ ಆರಂಭ ಕಾಲದಿಂದ ಬ್ರಿಟಿಷರು ಭಾರತವನ್ನು 18ನೇ ಶತಮಾನದಲ್ಲಿ ಆಳಲಿಕ್ಕೆ ಶುರು ಮಾಡಿದ ಕಾಲದ ವರೆಗೆ ಭಾರತೀಯರು ಮತ್ತು 8ನೇ ಶತಮಾನದಿಂದ ಆಫ್ರಿಕಾದ ಕಪ್ಪು ಜನರು ವೈಯಕ್ತಿಕ ಗುಲಾಮರಾಗಿ ವಿವಿಧ ಕೆಲಸಗಳನ್ನು ಮಾಡುತ್ತಿದ್ದರು. ಬ್ರಿಟಿಷರು ಮತ್ತಿತರ ಪಾಶ್ಚಾತ್ಯರು ಭಾರತದ ವಿವಿಧ ಭಾಗಗಳನ್ನು ಆಳುತ್ತಿದ್ದ ಸಮಯದಲ್ಲೂ ಭಾರತೀಯರನ್ನು ಬೇರೆ ದೇಶಗಳಿಗೆ ಗುಲಾಮರಾಗಿ ಕೊಂಡೊಯ್ಯುವ ಮಾನವ ವ್ಯಾಪಾರ ನಡೆಯುತ್ತಿತ್ತು. ಬ್ರಿಟಿಷರ ಆಳ್ವಿಕೆಯಲ್ಲಿ ಹಿಂದು ಮತ್ತು ಮುಸ್ಲಿಂ ಗುಲಾಮರ ಬಗೆಗಿನ ವ್ಯಾಜ್ಯಗಳನ್ನು ಹಿಂದು ಮತ್ತು ಮುಸ್ಲಿಂ ಕಾನೂನುಗಳನ್ನು ಬಳಸಿಕೊಂಡೇ ನ್ಯಾಯಾಲಯಗಳಲ್ಲಿ ವಿಚಾರಣೆ ನಡೆಸಲಾಗುತ್ತಿತ್ತು. ಭಾರತದ ವಿಶಿಷ್ಟ ಸಾಮಾಜಿಕ ರಚನೆಯಲ್ಲಿ ವೈಯಕ್ತಿಕ ಗುಲಾಮರ ಜೊತೆ ಸಮುದಾಯ ಆಧಾರಿತ ಗುಲಾಮರೂ ಅಸ್ತಿತ್ವದಲ್ಲಿದ್ದರು. ಅವರೇ ಜಾತಿ ಆಧಾರಿತ ಗುಲಾಮರು. ಆದರೆ ಬ್ರಿಟಿಷ್ ಆಳ್ವಿಕೆಯಲ್ಲಿ ಕಾನೂನಿನ ಪ್ರಕಾರ ಅವರನ್ನು ಗುಲಾಮರನ್ನಾಗಿ ಪರಿಗಣಿಸುತ್ತಿರಲಿಲ್ಲ. ಏಕೆಂದರೆ ಮನುಸ್ಮೃತಿ, ನಾರದ ಧರ್ಮಶಾಸ್ತ್ರ ಹಾಗೂ ಮುಸ್ಲಿಂ ಕಾನೂನುಗಳಲ್ಲಿ ಮೇಲೆ ವಿವರಿಸಿದಂತೆ ನಿರ್ದಿಷ್ಟ ನಮೂನೆಯ ವೈಯಕ್ತಿಕ, ಮನೆಗೆಲಸದ (ಡೊಮೆಸ್ಟಿಕ್) ಮತ್ತು 'ರಾಜಸೇವೆ'ಯಲ್ಲಿದ್ದ ಗುಲಾಮರಿದ್ದು ಅವುಗಳಲ್ಲಿ ಅವರ ಹಕ್ಕುಭಾದ್ಯತೆಗಳನ್ನೂ ನಿಶ್ಚಿತಗೊಳಿಸಲಾಗಿತ್ತು. ಆದರೆ ಗುಲಾಮರಂತೆ ಸೇವೆ ಸಲ್ಲಿಸುತ್ತಿದ್ದ ಜಾತಿಗಳನ್ನು ಹಿಂದು ಅಥವಾ ಮುಸ್ಲಿಂ ಕಾನೂನುಗಳ ಅಡಿ ಗುಲಾಮರನ್ನಾಗಿ ಅರ್ಥೈಸುತ್ತಿರಲಿಲ್ಲ.

**4.3 ಜೀತಪದ್ಧತಿ ಮತ್ತು ಗುಲಾಮಿ ಪದ್ಧತಿ**

ವಿಶ್ವ ಸಂಸ್ಥೆಯ ಪ್ರಕಾರ ಜೀತಪದ್ಧತಿಯು ಗುಲಾಮ ಪದ್ಧತಿಯ ಸಮಕಾಲೀನ ರೂಪ[63]. ಆದರೆ ಜೀತ ಪದ್ಧತಿ ಬೇರೆ; ಗುಲಾಮ ಪದ್ಧತಿ ಬೇರೆ. ಜೀತಪದ್ಧತಿ 19ನೇ ಶತಮಾನದ ಮುಂಚೆ ಇರಲಿಲ್ಲ ಎಂಬುದನ್ನು ಮೇಲೆ ತಿಳಿದುಕೊಂಡಿದ್ದೇವೆ. ಆದರೆ ಅದಕ್ಕಿಂತ ಮೊದಲಿದ್ದ ಗುಲಾಮ ವ್ಯವಸ್ಥೆಗೂ ಜೀತ ಪದ್ಧತಿಗೂ ಏನಾದರೂ ಸಂಬಂಧವಿದೆಯೇ?

ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಮೂರು ಶತಮಾನಗಳಲ್ಲಿಯ (1757–1947) ಎರಡನೇ ಶತಮಾನದ ಉತ್ತರಾರ್ಧದಲ್ಲಿ ಮಾತ್ರ ಭಾರತದಲ್ಲಿಯ ಗುಲಾಮ ಪದ್ಧತಿ (ಸ್ಲೇವರಿ)ಯ ಬಗ್ಗೆ ವಿಶೇಷ ಗಮನ ಹರಿಸಿದ್ದರು (ಬಣಜಿ 1993: 242–403). ಏಕೆಂದರೆ ಅದೇ ಕಾಲದಲ್ಲಿ ಉತ್ತರ ಅಮೇರಿಕದಲ್ಲಿ ಕೇಂದ್ರಿತವಾಗಿದ್ದ ಆದರೂ ಎಲ್ಲಾ ಐರೋಪ್ಯ ವಸಾಹತು ಕೇಂದ್ರಗಳಲ್ಲೂ ಮತ್ತು ಪ್ರಪಂಚದ ಎಲ್ಲಾ ವಸಾಹತುಗಳಲ್ಲೂ ಕೊಂಡೊಯ್ದಿದ್ದ ಆಫ್ರಿಕಾದ ಕಪ್ಪು ಜನರನ್ನು ಗುಲಾಮರನ್ನಾಗಿಸಿ ಕ್ರೂರವಾಗಿ ದುಡಿಸಿಕೊಳ್ಳುತ್ತಿದ್ದುದರ ವಿರುದ್ಧ ಆಂದೋಲನ ಮತ್ತು ಚಳವಳಿಗಳು ಪ್ರವರ್ಧಮಾನಕ್ಕೆ ಬಂದಿದ್ದವು[64]. ಆ ಕಾಲಘಟ್ಟದಲ್ಲಿ ಭಾರತದಲ್ಲಿ ಯಾರನ್ನು ಗುಲಾಮರೆಂದು ಪರಿಗಣಿಸಲಾಗಿತ್ತು ಎಂಬ ಪ್ರಶ್ನೆ ಎದ್ದೇಳುತ್ತದೆ. ಬ್ರಿಟಿಷ್ ಸರ್ಕಾರದ ವರದಿಗಳು ಮತ್ತು ಭಾರತೀಯ ಕಾನೂನುಗಳು (ಹಿಂದು ಕಾನೂನು ಮತ್ತು ಮುಸ್ಲಿಂ ಕಾನೂನುಗಳು) ಒಂದು ವಿಧದ ಗುಲಾಮರನ್ನು ಸ್ಪಷ್ಟವಾಗಿ ಒಪ್ಪುತ್ತವೆ (ಬಣಜಿ 1933; ಚಟ್ಟೋಪಾಧ್ಯಾಯ್ 1959). ಬೇರೆಬೇರೆ ಮೂಲಗಳಿಂದ ಪಡೆದು ಸ್ವಾತಂತ್ರ್ಯಹೀನರನ್ನಾಗಿಸಿ ತಮ್ಮ ಅಧೀನದಲ್ಲಿಟ್ಟು ಅಥವಾ ಬೇರೆಯವರಿಗೆ ಮಾರಿ ನಿರಂತರವಾಗಿ ವಿವಿಧ ಸೇವೆಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಲಾಗುತ್ತಿದ್ದ ವ್ಯಕ್ತಿಗಳನ್ನು ಗುಲಾಮರೆನ್ನಬಹುದು. ಅವರನ್ನು ಸ್ವಂತಕ್ಕೆ ಅಥವಾ ಮನೆಗೆಲಸಕ್ಕೆ ಇಟ್ಟುಕೊಂಡಿರುವ ಗುಲಾಮರೆಂತಲೂ (ಡೊಮೆಸ್ಟಿಕ್ ಸ್ಲೇವ್ಸ್) ಕರೆಯಬಹುದು. ಇನ್ನೊಂದು ಬಗೆಯ ಗುಲಾಮರನ್ನೂ ಬ್ರಿಟಿಷ್ ವರದಿಗಳು 19ನೇ ಶತಮಾನದ ಮೊದಲ ಭಾಗದಲ್ಲಿ ದಾಖಲಿಸುತ್ತವೆ – ಅವು ಪ್ರೇಡಿಯಲ್ ಸ್ಲೇವ್ಸ್ ಅಥವಾ ಭೂಮಿಗೆ ಅಂಟಿಕೊಂಡಿರುವ ಗುಲಾಮರು (ಬಣಜಿ 1933: 11).

ಈ ಗುಲಾಮರ ಮೂಲವೆಲ್ಲಿ? ಋಗ್ವೇದ ಮತ್ತು ಮನುಸ್ಮೃತಿಗಳಲ್ಲಿ ಆರ್ಯ ವರ್ಣ ಆಧಾರಿತ ಮತ್ತು ಆರ್ಯ ವರ್ಣ ಹೊರಗಿನ ಜನಾಂಗ ಆಧಾರಿತ 'ದಸ್ಯು'ಗಳು, ಗುಲಾಮರು (ದಾಸ), ಅಸ್ಪೃಶ್ಯರು

---

63 ಯುನೈಟೆಡ್ ನೇಷನ್ಸ್ ಕನ್ವೆನ್ಷನ್ ಆನ್ ಕಂಟೆಂಪರರಿ ಫಾರ್ಮ್ ಆಫ್ ಸ್ಲೇವರಿ, 1956

64 16ನೇ ಶತಮಾನದಿಂದ 19ನೇ ಶತಮಾನದ ವರೆಗೆ ಆಫ್ರಿಕಾದ ಪಶ್ಚಿಮ ಕರಾವಳಿಯಿಂದ ಕಪ್ಪು ಜನರನ್ನು ಖರೀದಿಸಿ ಅಟ್ಲಾಂಟಿಕ್ ಮಹಾಸಾಗರದ ಮೂಲಕ ಹಡಗುಗಳಲ್ಲಿ ಮುಖ್ಯವಾಗಿ ಅಮೇರಿಕ ಖಂಡಗಳಿಗೆ ಕೊಂಡೊಯ್ದು ಮಾರುವ ಗುಲಾಮಿ ವ್ಯಾಪಾರ ಅವ್ಯಾಹತವಾಗಿ ನಡೆದಿತ್ತು. ಇದನ್ನು ಶುರು ಮಾಡಿದವರು ಪೋರ್ಚುಗೀಸರು. 1526ರಲ್ಲಿ ಅವರ ಹಡಗು ಆಫ್ರಿಕಾದಿಂದ ಬ್ರೇಝಿಲ್‌ಗೆ ಕಪ್ಪು ಜನರನ್ನು ಪ್ರಥಮ ಬಾರಿಗೆ ಕೊಂಡೊಯ್ದಿತ್ತು. ಉಳಿದ ಐರೋಪ್ಯ ದೇಶಗಳು ಅವರನ್ನು ಶೀಘ್ರದಲ್ಲೇ ಅನುಸರಿಸಿದರು. ಅಮೇರಿಕಾದ ಬ್ರಿಟಿಷ್ ವಸಾಹತುಗಳಿಗೆ ಆಮದು ಮಾಡಿದ ಮೊದಲ ಆಫ್ರಿಕಾದ ಕಪ್ಪು ಜನರನ್ನು ಇಂಗ್ಲೆಂಡಿನಿಂದ ವಲಸೆ ಹೋಗುತ್ತಿದ್ದ ಕಾರ್ಮಿಕರಂತೆ 'ಇಂಡೆಂಚರ್ಡ್ ಸೇವಕರು' ಎಂತಲೇ ಪರಿಗಣಿಸಲಾಗಿತ್ತು. 17ನೇ ಶತಮಾನದ ಮಧ್ಯಭಾಗದಿಂದ ಗುಲಾಮಿ ವ್ಯವಸ್ಥೆಯು ಜನಾಂಗೀಯ 'ಜಾತಿ'ಯಾಗಿ ಮಾರ್ಪಟ್ಟು ಸೇವಕರಾಗಿದ್ದವರು ಯಜಮಾನರ 'ಸೊತ್ತು' ಎನಿಸಿದ ಯಾವುದೇ ಹಕ್ಕುಗಳಿಲ್ಲದ ಗುಲಾಮರಾಗಿ ಮಾರ್ಪಟ್ಟರು (ವಿಕಿಪಿಡಿಯಾ, ದಿ ಎಟ್ಲಾಂಟಿಕ್ ಸ್ಲೇವ್ ಟ್ರೇಡ್)

(ಅಪಸದರು) ಮತ್ತು ಸೇವಕರು (ಶೂದ್ರರು) ಮುಂತಾದವರನ್ನು ಕುರಿತು ಮೇಲೆ ಚರ್ಚಿಸಿದ್ದೇವೆ. ಇವೆಲ್ಲಾ ಬೇರೆ ಬೇರೆ ಜನಸಮುದಾಯಗಳು ಕ್ರಿ.ಶ. 2–3ನೇ ಶತಮಾನದ ಒಂದು ಹಂತದಲ್ಲಿ ಈಗ ನಮಗೆ ಗೊತ್ತಿರುವ ಜಾತಿವ್ಯವಸ್ಥೆಯಾಗಿ ರೂಪತಾಳಿರಬೇಕು. ನಂತರ ಮುಸ್ಲಿಮರು ಭಾರತವನ್ನು ಆಕ್ರಮಿಸಲು ಆರಂಭಿಸಿದ 8ನೇ ಶತಮಾನದ ಕಾಲದಲ್ಲಿಯೂ ಮತ್ತು ಪ್ರತ್ಯೇಕವಾಗಿ ವ್ಯವಸ್ಥಿತವಾಗಿ ರಾಜ್ಯಭಾರ ಮಾಡಲು ಶುರುಮಾಡಿದ 12ನೇ ಶತಮಾನದ ಹೊತ್ತಿಗೂ ಅದರಲ್ಲಿ ಅಷ್ಟೊಂದು ಬದಲಾಣೆಗಳು ಕಾಣದೇ ಬ್ರಿಟಿಷರು ಭಾರತವನ್ನು ಆಳಲಿಕ್ಕೆ ಆರಂಭ ಮಾಡಿದ ಕಾಲಕ್ಕೆ ಅಂದರೆ 18ನೇ ಶತಮಾನದ ಹೊತ್ತಿಗೆ ಅದೇ ವ್ಯವಸ್ಥೆ ಮುಂದುವರಿಯುತ್ತಿದ್ದಿರಬೇಕು (ವೈಸರ್ 1988: 84–85; ಮೇಯ್ನ್ 1871: 103–128). ಅದರ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ 'ವಿಶಾಲ ಜಾತಿ' ಚೌಕಟ್ಟಿಕೊಳಗೆ ಮತ್ತು ಅವುಗಳ ಅಡಿ ಹಲವಾರು ಉಪಜಾತಿಗಳು ಮತ್ತು ದಾಸ, ಅಪಸದ (ಅಸ್ಪೃಶ್ಯ) ಹಾಗೂ ಕೆಲ ದಸ್ಯು ಜನಾಂಗಗಳು ಸೇರಿ 'ವಿಶಾಲ ಪಂಚಮ ಜಾತಿ' ಎನಿಸಿ ನಾಲ್ಕು 'ವಿಶಾಲ ಜಾತಿ'ಗಳ ಅಡಿ ಬಾರದಿದ್ದರೂ ಆ ಚೌಕಟ್ಟಿನ ಭಾಗವಾಗಿಯೇ ಕಾರ್ಯ ನಿರ್ವಹಿಸುತ್ತಿದ್ದು, ಬೇರೆಬೇರೆ ದಸ್ಯು ಜನಾಂಗಗಳೆನಿಸಿದ ಮೂಲನಿವಾಸಿಗಳು ಒಟ್ಟಾರೆ ಜಾತಿ ವ್ಯವಸ್ಥೆಯೊಳಗೆ ಬೇರೆ ಬೇರೆ ಪ್ರಮಾಣದ ಅಂತರದಲ್ಲಿ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿರಬೇಕು. ವೈಶ್ಯ 'ವಿಶಾಲ ಜಾತಿ'ಯಡಿ ಕೇವಲ ವರ್ತಕರು, ವ್ಯಾಪಾರಿಗಳು ಮಾತ್ರ ಉಳಿದು, ಶೂದ್ರ 'ವಿಶಾಲ ಜಾತಿ'ಯಡಿ ವ್ಯವಸಾಯ ಒಳಗೊಂಡಂತೆ ಎಲ್ಲಾ ಕಸುಬುದಾರರು, ಕುಸಲಕರ್ಮಿಗಳು ಗುರುತಿಸಿಕೊಂಡಿರಬೇಕು. ಎಲ್ಲಾ ತರಹದ ನಿಕೃಷ್ಟ ಸೇವೆ ಮಾಡುವವರು ನಾಲ್ಕು 'ವಿಶಾಲ ಜಾತಿ'ಗಳಿಂದ ಹೊರತಾದ 'ಅತಿಶೂದ್ರ', 'ಪಂಚಮ', 'ಅಸ್ಪೃಶ್ಯ' ಮುಂತಾದ ಹೆಸರುಗಳಡಿ ನಾಲ್ಕು 'ವಿಶಾಲ ಜಾತಿ'ಗಳೊಳಗೆ ಗುರುತಿಸದಿದ್ದರೂ ಜಾತಿ ವ್ಯವಸ್ಥೆಯ ಭಾಗವಾಗಿಯೇ ಕಾರ್ಯನಿರ್ವಹಿಸುತ್ತಿದ್ದಿರಬೇಕು. ಭೌಗೋಳಿಕವಾಗಿ ಜಾತಿ ವ್ಯವಸ್ಥೆಯ ಪ್ರಭಾವದಿಂದ ಹೊರಗುಳಿದ ಜನಾಂಗೀಯ ಗುಂಪುಗಳು ಮೂಲನಿವಾಸಿಗಳೆಂಬ ಪ್ರತ್ಯೇಕ ಗುಂಪುಗಳಾಗಿಯೇ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದರೂ ಜಾತಿವ್ಯವಸ್ಥೆಯ ಪ್ರಬಲ ಆಕ್ರಮಣಕಾರಿ ಗುಂಪುಗಳಿಂದ ಆಗಿಂದಾಗ್ಗೆ ವಶೀಕರಣಕ್ಕೆ ಒಳಗಾಗುತ್ತಿದ್ದಿರಬೇಕು[65].

ವ್ಯವಸಾಯ ಮಾಡುವ ಪ್ರತ್ಯೇಕ ಜಾತಿಗಳಿದ್ದರೂ ಅವರು ಮುಖ್ಯವಾಗಿ ವ್ಯವಸಾಯ ಚಟುವಟಿಕೆಗಳ ನಿರ್ವಹಣೆ ಮಾಡುತ್ತಿದ್ದರೇ ವಿನಃ ಎಲ್ಲಾ ಬೆವರು ಸುರಿಸುವ ಕೆಲಸಗಳನ್ನು 'ಪಂಚಮ' ಅಥವಾ 'ಅಸ್ಪೃಶ್ಯ' ಜಾತಿಗಳೇ ಮಾಡುತ್ತಿದ್ದಿರಬೇಕು. ಆ ಪಂಚಮ ಜಾತಿಗಳಿಗೆ ಸೇರಿದವರು ಜಾತಿ

---

65 ದಕ್ಷಿಣ ಗುಜರಾತಿನ ದುಬ್ಲ ಮೂಲನಿವಾಸಿಗಳು ಹೊರಗಿನಿಂದ ಬಂದು ನೆಲಸಿದ ಅನಾವಿಲ್ ಬ್ರಾಹ್ಮಣ ಜಾತಿಯ ಮಾಲಿಕರಿಗೆ 19ನೇ ಶತಮಾನದಿಂದ 'ಹಾಲಿಪ್ರಥ'ದಲ್ಲಿ ಜೀತದಾಳುಗಳಾಗಿಯೂ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದರು. ಆಗಲೇ ಬ್ರಿಟಿಷರು ಆ ಭಾಗದಲ್ಲಿ 'ರೈತವಾರಿ' ಭೂಹಿಡುವಳಿ ಪದ್ಧತಿಯನ್ನು ಆರಂಭಿಸಿ ಮೂಲನಿವಾಸಿ ಜನರಿಗೆ ಅನುಕೂಲವಾಗಲೆಂದು ಕಡಿಮೆ ತೆರಿಗೆ ವಿಧಿಸಿದ್ದರು. ಇದರ ಪ್ರಯೋಜನ ಪಡೆದು ಅನಾವಿಲ್ ಬ್ರಾಹ್ಮಣರಂತಹ ಜಾತಿಗಳು ಹೊರಗಿನಿಂದ ಬಂದು ಆ ಭೂಮಿಗಳನ್ನು ವಶಪಡಿಸಿ ಅವುಗಳ ಉಳುಮೆ ಮಾಡಲು ಮೊದಲಿನ ಭೂ ಒಡೆಯರನ್ನೇ ಜೀತದಾಳುಗಳನ್ನಾಗಿಸಿದರು. 'ರೈತವಾರಿ' ಪದ್ಧತಿಯನ್ನು ಬ್ರಿಟಿಷರು ಆಗಲೇ ಆರಂಭಿಸಿದ್ದರಿಂದ ಕೃಷಿಸಂಬಂಧಗಳ ಮೇಲೆ ಮಾರುಕಟ್ಟೆಯ ಪ್ರಭಾವ ಬೀರಿದ್ದು 19ನೇ ಶತಮಾನದ ಮೊದಲಿನ ಜಾತಿ ಸಂಬಂಧಗಳನ್ನು ಅಲ್ಲಿ ಗುರುತಿಸುವುದು ಕಷ್ಟ (1974: 29–35)

ವ್ಯವಸ್ಥೆಯ ನಿಯಮಗಳಿಗನುಗುಣವಾಗಿ ತಮ್ಮ ಸೇವೆಗಳನ್ನು ಸಲ್ಲಿಸುತ್ತಿದ್ದು ಹಿಂದು ಕಾನೂನು (ಧರ್ಮಶಾಸ್ತ್ರದಲ್ಲಿ ಉಲ್ಲೇಖಿಸಿದಂತೆ) ಮತ್ತು ಮುಸ್ಲಿಂ ಕಾನೂನುಗಳಲ್ಲಿ ('ಶರಿಯತ್', 'ಹೇದಿಯಾ' ಮತ್ತು 'ಫತ್ವಾ ಅಲಮ್ ಗಿರಿ'ಗಳಲ್ಲಿ ಉಲ್ಲೇಖಿಸಿದಂತೆ) ಪ್ರಸ್ತಾಪಿಸಲಾದ ಗುಲಾಮ ಪದ್ಧತಿಯ ನಿಯಮಗಳಿಗೆ ಹೊರತಾಗಿದ್ದರು. ಆ ಕಾನೂನುಗಳಿಗೆ ಅನ್ವಯಿಸುವ ಗುಲಾಮರ ಸಂಖ್ಯೆ ಮೊದಮೊದಲು ಬಹಳ ಕಡಿಮೆ ಇದ್ದಿರಬಹದು. ಆದ್ದರಿಂದಲೇ ಕ್ರಿ.ಪೂ. 4–3ನೇ ಶತಮಾನದಲ್ಲಿ ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿ ಗ್ರೀಕರ ರಾಯಭಾರಿಯಾಗಿದ್ದ ಮೆಗಸ್ತೆನಿಸ್‌ರವರು ಭಾರತದಲ್ಲಿ ಗುಲಾಮರಿಲ್ಲ ಎಂದು ಪ್ರಸ್ತಾಪಿಸಿದ್ದಿರಬಹುದು[66]. ಜೊತೆಗೆ ಗ್ರೀಕ್ ದೇಶಗಳಲ್ಲಿ ಮತ್ತು ರೋಮ್ ಸಾಮ್ರಾಜ್ಯದಲ್ಲಿ ಹರಡಿದ್ದಂತಹ ಗುಲಾಮಿ ವ್ಯವಸ್ಥೆ ಭಾರತದಲ್ಲಿಲ್ಲದೇ ಅದಕ್ಕೆ ಸಮಾನಾಂತರವಾಗಿ ಜಾತಿವ್ಯವಸ್ಥೆಯಲ್ಲಿ 'ಪಂಚಮ' ಜಾತಿಗಳು ಆ ಕಾರ್ಯ ನಿರ್ವಹಿಸುತ್ತಿದ್ದುವು. ಮನೆಗೆಲಸದ ಸೇವೆಗಳಿಗೆ ಮಾತ್ರ ಕಾನೂನು ಪ್ರಸ್ತಾಪಿಸುವ ಗುಲಾಮರನ್ನು ಬಳಸುತ್ತಿದ್ದು ಮೊದಮೊದಲು ಅವರು ಬಹಳ ಕಡಿಮೆ ಪ್ರಮಾಣದಲ್ಲಿದ್ದು ಮುಸ್ಲಿಮರು ಭಾರತವನ್ನು ಆಕ್ರಮಿಸಿ ಆಳುತ್ತಿದ್ದ ಕಾಲದಲ್ಲಿ ಅವರ ಸಂಖ್ಯೆ ಗಣನೀಯವಾಗಿ ಜಾಸ್ತಿಯಾಗಿದ್ದಿರಬೇಕು. ಅವರು ಹೆಚ್ಚಾಗಿ ಆಫ್ರಿಕಾದ ಕಪ್ಪು ಜನರಾಗಿದ್ದು ಅವರನ್ನು ರಾಜಮನೆತನದವರು ಮತ್ತು ಇತರ ಪ್ರತಿಷ್ಠಿತ ವರ್ಗದವರು ಮಾತ್ರ ಬಳಸುತ್ತಿದ್ದಿರಬೇಕು (ಬಣಜಿ 1933; 3–11). ಆದ್ದರಿಂದ 19ನೇ ಶತಮಾನದ ಪೂರ್ವಾರ್ಧದಲ್ಲಿ ಗುಲಾಮ ಪದ್ಧತಿಯನ್ನು ರದ್ದು ಪಡಿಸಬೇಕು ಎಂದು ಬ್ರಿಟಿಷರಲ್ಲಿ ಕೆಲವರು ಆಗ್ರಹಿಸುತ್ತಿರುವಾಗ ಹಲವಾರು ಮಂದಿಯಿಂದ ಭಾರತದಲ್ಲಿ ಗುಲಾಮರಿಲ್ಲ ಎಂಬ ವಾದಗಳೂ ಹೇಳಿಕೆಗಳೂ ಕಂಡುಬಂದಿದ್ದವು[67]. ಆದರೂ 1807ರಲ್ಲಿ ಬ್ರಿಟಿಷ್ ಸರ್ಕಾರವು ಬ್ರಿಟಿಷ್ ಸಾಮ್ರಾಜ್ಯದಲ್ಲಿ ಗುಲಾಮಿ ವ್ಯಾಪಾರನ್ನು ರದ್ದುಗೊಳಿಸಿ, 1833ರಲ್ಲಿ ಭಾರತ, ಶ್ರೀಲಂಕಾಗಳನ್ನು ಹೊರತುಪಡಿಸಿ ಪ್ರಪಂಚದ ಉಳಿದೆಡೆ ಗುಲಾಮ ಪದ್ಧತಿಯನ್ನು ರದ್ದುಗೊಳಿಸಿ, 1843ರಲ್ಲಿ ಭಾರತದಲ್ಲಿಯೂ ಅದನ್ನು ರದ್ದುಗೊಳಿಸಿತು (ಬಣಜಿ 1933: 403). ಆ ಸಮಯದಲ್ಲಿ ಭಾರತದಲ್ಲಿ, ಅಂದರೆ 1840ರಲ್ಲಿ ಬ್ರಿಟಿಷ್ ಆಡಳಿತದಲ್ಲಿದ್ದ ಕಲ್ಕತ್ತಾ, ಬೊಂಬೆ, ಮದ್ರಾಸ್ ಪ್ರಾಂತ್ಯಗಳು, ಬ್ರಿಟಿಷ್ ಆಧಿಪತ್ಯಕ್ಕೊಳಗಾದ ಭಾರತೀಯ ದೊರೆಗಳ ಅಧೀನದಲ್ಲಿದ್ದ ಮತ್ತು ಅಧೀನದಲ್ಲಿಲ್ಲದ ಪ್ರಾಂತ್ಯಗಳಲ್ಲಿಯ ಎಲ್ಲಾ ರೀತಿಯ ಗುಲಾಮರ ಸಂಖ್ಯೆಯನ್ನು ಬಣಜಿಯವರು 16 ದಶಲಕ್ಷವೆಂದು ಪರಿಗಣಿಸಿದ್ದಾರೆ. ಆದರೆ ದಕ್ಷಿಣ ಮತ್ತು ಉತ್ತರ ಅಮೇರಿಕಾ ಖಂಡಗಳಲ್ಲಿ 1860ರಲ್ಲಿ ಕಪ್ಪು ಗುಲಾಮರ ಸಂಖ್ಯೆ ಕೇವಲ ನಾಲ್ಕು ದಶಲಕ್ಷ ಆಗಿತ್ತು (ಬಣಜಿ 1933: 202–03).

---

66 ಚಟ್ಟೋಪಧ್ಯಾಯ್ 1959: i; ವಿಕಿಪಿಡಿಯಾ: 'ಮೆಗಸ್ತೇನಿಸ್'.

67 ಕೆಲ ಬ್ರಿಟಿಷ್ ಅಧಿಕಾರಿಗಳು ಭಾರತದಲ್ಲಿ ಗುಲಾಮಿ ಪದ್ಧತಿ ಕೇವಲ ನಾಮ ಮಾತ್ರವಾಗಿದೆ (ಬಣಜಿ 1933: 12); ಅಥವಾ ಇನ್ನು ಕೆಲವರು ಅದು ಬಹಳ ಸೌಮ್ಯ ರೂಪದಲ್ಲಿತ್ತು (ಅದೇ: 15); ಮತ್ತೆ ಕೆಲವರು ಭಾರತೀಯ ಗುಲಾಮರೇ ಗುಲಾಮರಾಗಿರಲು ತೃಪ್ತಿ ಪಡುತ್ತಿದ್ದರು (ಅದೇ: 20); ಕೆಲಮಂದಿ ಮಾಲಿಕರು ಗುಲಮರನ್ನು ಚೆನ್ನಾಗಿ ನೋಡುತ್ತಿದ್ದಾರೆ (ಅದೇ: 30); ಕೆಲವರಂತೂ ಮಾಲಿಕರ ಒಡೆತನದ ಹಕ್ಕುಗಳನ್ನು ಮೀರುವಂತಿಲ್ಲ (ಅದೇ: 27) ಎಂದು ವಾದಿಸುತ್ತಿದ್ದರು.

1843ರ ಗುಲಾಮ ವ್ಯಾಪಾರ ನಿಷೇಧ ಕಾನೂನಿನ ಪರಿಣಾಮವಾಗಿ ಇಷ್ಟರವರೆಗಿನ ಕಾನೂನುಗಳು ಮಾನ್ಯಮಾಡಿದ್ದ ಗುಲಾಮರು ಮಾತ್ರ ಪೂರ್ಣ ಪ್ರಮಾಣದಲ್ಲಿ ಸ್ವತಂತ್ರರಾಗಿದ್ದಿರಬೇಕು. ಜಾತಿ ವ್ಯವಸ್ಥೆಯಲ್ಲಿ ಭೂಮಿಗೆ ಅಂಟಿಕೊಂಡು ನಿಕೃಷ್ಟ ಸೇವೆ ಸಲ್ಲಿಸುತ್ತಿದ್ದ 'ಪಂಚಮ ಜಾತಿ'ಗಳಿಗೆ ಸೇರಿದ ಗುಲಾಮರಂತಿದ್ದ ಕಾರ್ಮಿಕರು (ಪ್ರೇಡಿಯಲ್ ಸ್ಲೇವ್ಸ್) ಹಾಗೆಯೇ ಮುಂದುವರಿದಿದ್ದಿರಬೇಕು ಅಥವಾ ಅದು ಸ್ವಲ್ಪ ಬದಲಾವಣೆಯಾದ ರೂಪದಲ್ಲಿ ಅಸ್ತಿತ್ವದಲ್ಲಿದ್ದಿರಬೇಕು (ವಿಜಯ 1993: 130–149). ಏಕೆಂದರೆ ಪ್ರೊ. ಧರ್ಮಕುಮಾರ್‌ರವರ ಒಂದು ಅಧ್ಯಯನವು 19ನೇ ಶತಮಾನದ ಆರಂಭವನ್ನೊಳಗೊಂಡಂತೆ ಅದರ ಕೊನೆಯ ಮತ್ತು 20ನೇ ಶತಮಾನದ ಆರಂಭ ಕಾಲದಲ್ಲಿ ಮದ್ರಾಸ್ ಪ್ರಾಂತ್ಯದಲ್ಲಿಯ ಕೆಲವು ಪ್ರದೇಶಗಳಲ್ಲಿ ಜಮೀನುಗಳಿಗೆ 'ಅಂಟಿಕೊಂಡು' ಕೆಲಸಮಾಡುತ್ತಿದ್ದ ಅಸ್ಪೃಶ್ಯ ಜಾತಿಗೆ ಸೇರಿದ ವ್ಯವಸಾಯದ ಕಾರ್ಮಿಕರ ಕುರಿತಾಗಿದೆ (ಕುಮಾರ್ 1965).

1807, 1833, 1843ರ ಬ್ರಿಟಿಷ್ ಸಾಮ್ರಾಜ್ಯದಾದ್ಯಂತ ಜ್ಯಾರಿಗೊಂಡ ಗುಲಾಮ ವ್ಯಾಪಾರ ನಿಷೇಧ ಮತ್ತು ಗುಲಾಮ ಪದ್ಧತಿ ನಿಷೇಧ ಕಾನೂನುಗಳ ಪರಿಣಾಮವಾಗಿ ಆಗಿನ ಕಾನೂನು ಸಮ್ಮತ ಗುಲಾಮ ಪದ್ಧತಿಗೆ ಒಂದು ರೀತಿಯಲ್ಲಿ ಕಡಿವಾಣ ಹಾಕಿದಂತಾಯಿತು. ಆದರೆ ಗುಲಾಮರ ಜಾಗದಲ್ಲಿ ಕಾರ್ಮಿಕರ ಅವಶ್ಯಕತೆ ಇದ್ದೇ ಇತ್ತು. ಅದನ್ನು ನಿಭಾಯಿಸಲಿಕ್ಕೆ ಹುಟ್ಟಿ ಕೊಂಡ ವ್ಯವಸ್ಥೆ 'ಇಂಡೆಂಚರ್ಡ್ ಲೇಬರ್'. ಮೊದಲು ಅದು ಬ್ರಿಟಿಷ್ ಸಾಮ್ರಾಜ್ಯದಡಿಯ ಉತ್ತರ ಅಮೇರಿಕದಲ್ಲಿ ಹುಟ್ಟಿ ನಂತರ ಇತರ ಬ್ರಿಟಿಷ್ ವಸಾಹತುಗಳಲ್ಲೂ ಅದು ಹಬ್ಬಿತು. ಅದರ ಪ್ರಕಾರ ಮೊದಲು ಅಮೇರಿಕಕ್ಕೆ ಹೋಗುತ್ತಿದ್ದ ಬ್ರಿಟಿಷ್ ಕಾರ್ಮಿಕರು ಒಂದು ಒಪ್ಪಂದ ಮಾಡಿ ಮುಂಗಡ ಹಣ ಪಡೆದು ಇಂತಿಷ್ಟು ವರ್ಷಗಳಿಗೆ ಕೆಲಸ ಮಾಡಲು ಒಪ್ಪ ಬೇಕಾಗಿತ್ತು. ನಂತರ ಆಫ್ರಿಕಾದ ಕಪ್ಪು ಜನರನ್ನು ಸೆರೆಹಿಡಿದು ಹಡಗುಗಳಲ್ಲಿ ಸಾಗಿಸಿ 'ಸೊತ್ತು'ಗಳಂತೆ ಮಾರಾಟಮಾಡಿ ದುಡಿಸಿಕೊಳ್ಳುವ ವ್ಯವಸ್ಥೆ ತಳವೂರಿತು. ಭಾರತದಲ್ಲಿ 1843ರಲ್ಲಿ ಗುಲಾಮ ಪದ್ಧತಿ ರದ್ದಾದಾಗ ಈ ತರಹ ಒಪ್ಪಂದಕ್ಕೊಳಗಾಗಿಸಿ ಬ್ರಿಟಿಷರು ಭಾರತದ ಪಂಚಮ ಜಾತಿಯ, ಮೂಲನಿವಾಸಿ ಜನಾಂಗದ ಮತ್ತು ಹಿಂದುಳಿದ ಜಾತಿಗಳ ಕಾರ್ಮಿಕರನ್ನು ತಾವು ನಡೆಸುತ್ತಿದ್ದ ಬೇರೆ ಬೇರೆ ದೇಶಗಳ ಪ್ಲಾಂಟೇಷನ್‌ಗಳಿಗೆ ಕೊಂಡೊಯ್ಯಲು ಶುರು ಮಾಡಿದರು (ಟಿಂಕರ್ 1974: 18, 44). ತೋರಿಕೆಗೆ ಅದು ನ್ಯಾಯ ಸಮ್ಮತ ಒಪ್ಪಂದದಂತೆ ಕಂಡುಬಂದರೂ ಅದೂ ಕೂಡಾ ಕಾರ್ಮಿಕರನ್ನು ಬಲಾತ್ಕಾರದಿಂದ ನಿರ್ಬಂಧಿಸಿ ದುಡಿಸಿಕೊಳ್ಳುವ ವ್ಯವಸ್ಥೆಯೇ ಆಗಿತ್ತು.

### 4.4 'ಜಾತಿ ಗುಲಾಮಿ ಪದ್ಧತಿ'ಯಲ್ಲಿಯ ದಲಿತ ಸೇವೆಗಳು

ಬ್ರಿಟೀಷರು ಬರುವ ಕಾಲದ ತನಕ ನಮ್ಮ ದೇಶದ ಎಲ್ಲಾ ದಲಿತರು ಮತ್ತು ಹೆಚ್ಚಿನ ಮೂಲನಿವಾಸಿಗಳು ಎಲ್ಲಾ ಮೇಲ್ಜಾತಿ – ಮೇಲ್ವರ್ಗದವರಿಗೆ ಅಡಿಯಾಳಾಗಿದ್ದರು. ಇದನ್ನೇ 'ಜಾತಿ ಗುಲಾಮಿ ಪದ್ಧತಿ' ಎನ್ನಬಹುದು. ಈಗ ದಲಿತರು ಮತ್ತು ಮೂಲನಿವಾಸಿಗಳ ಸಂಖ್ಯೆ ಒಟ್ಟು ಜನಸಂಖ್ಯೆಯ ಸುಮಾರು ಕಾಲುಭಾಗದಷ್ಟು ಆಗಿದ್ದರೆ ಆಗಲೂ ಅವರು ಅದೇ ಪ್ರಮಾಣದಲ್ಲಿದ್ದಿರಬಹುದು ಎಂದು

ಅಂದಾಜು ಮಾಡಬಹುದು. ಭಾರತದಲ್ಲಿ ಗುಲಾಮಿ ವ್ಯವಸ್ಥೆ ಇರಲಿಲ್ಲ; ಕೂಲಿ ಕಾರ್ಮಿಕರೂ ಇರಲಿಲ್ಲ ಎಂಬ ಎರಡೂ ವಾದಗಳಲ್ಲಿ ಸತ್ಯಾಂಶವಿರಬಹುದು. ಮನುಸ್ಮೃತಿ ಆಧಾರಿತ ಭಾರತೀಯ ಸಮಾಜದಲ್ಲಿ ಅಸ್ಪೃಶ್ಯ ಜಾತಿಗಳೇ ಎಲ್ಲಾ ನಿಕೃಷ್ಟ ಸೇವೆಗಳನ್ನು ಮಾಡುತ್ತಿದ್ದು ಅವರ ಸೇವಾ ವ್ಯವಸ್ಥೆ ಹಾಗೂ ಗ್ರೀಸ್ ಮತ್ತು ರೋಮ್ ಸಾಮ್ರಾಜ್ಯದ್ದಲಿದ್ದ ನಂತರ ಅಮೇರಿಕದ ಕಪ್ಪುಜನರ ಗುಲಾಮಿ ವ್ಯವಸ್ಥೆಗೆ ಹಲವಾರು ಭಿನ್ನತೆಗಳಿದ್ದವು. ಜಾತಿ ಸಮುದಾಯಗಳ ಸದಸ್ಯತ್ವ ಹುಟ್ಟಿನಿಂದಲೇ ನಿರ್ಧಾರವಾಗುತ್ತಿದ್ದುದರಿಂದ ಬೇರೆ ಗುಲಾಮಿ ವ್ಯವಸ್ಥೆಗಳಲ್ಲಿದ್ದಂತೆ ಮಾರಾಟದ ಮೂಲಕ ಇಲ್ಲವೇ ಒಂದು 'ದೇಶ' ಅಥವಾ ಜನಾಂಗವನ್ನು ಯುದ್ಧದಲ್ಲಿ ಸೋಲಿಸಿ 'ಗುಲಾಮ'ರನ್ನು ಪಡೆಯುವ ಮತ್ತು ಅವರನ್ನು 'ಸೊತ್ತು' ಆಗಿ ವ್ಯವಹರಿಸುವ ಗುಣಗಳು ಭಾರತೀಯ ಜಾತಿ ವ್ಯವಸ್ಥೆಯಲ್ಲಿ ಕಂಡು ಬರುತ್ತಿರಲಿಲ್ಲ[68]. ಜೊತೆಗೆ ಜಾತಿ ಸಮುದಾಯಗಳೇ ಎಲ್ಲಾ ನಿಕೃಷ್ಟ ಸೇವೆಗಳು ಮತ್ತು ಬೇರೆ ಗೌರವಯುಕ್ತ ಸೇವೆಗಳನ್ನು ಸಲ್ಲಿಸುತ್ತಿದ್ದುದರಿಂದ ಧರ್ಮಶಾಸ್ತ್ರಗಳಲ್ಲಿ ಉಲ್ಲೇಖಗೊಂಡಿದ್ದ 'ದಾಸ'ರ ಸಂಖ್ಯೆ ಅಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಇಲ್ಲದಿದ್ದಿರಬಹುದು[69]. ಮುಸ್ಲಿಮರು ಭಾರತಕ್ಕೆ ಬಂದಾಗಿನಿಂದ ಗುಲಾಮರ ಸಂಖ್ಯೆ ಪ್ರತ್ಯೇಕವಾಗಿ ಕಪ್ಪು ಜನರಾಗಿದ್ದ ಗುಲಾಮರ ಸಂಖ್ಯೆ ಸ್ವಲ್ಪ ದೊಡ್ಡ ಮಟ್ಟದಲ್ಲಿ ಗೋಚರಿಸುತ್ತಿತ್ತು (ಬಣಜಿ 1933. 3–11). ಹಾಗೆಯೇ ವ್ಯವಸಾಯ ಕ್ಷೇತ್ರದಲ್ಲಿಯೂ ಜಾತಿ ಆಧಾರಿತ ಕೀಳೆಂದು ಪರಿಗಣಿಸಿದ ಜಾತಿಗಳೇ ದುಡಿಮೆ ಮಾಡುತ್ತಿದ್ದುದರಿಂದಲೇ ಕೂಲಿಕಾರ್ಮಿಕರ ಅವಶ್ಯಕತೆ ಬ್ರಿಟಿಷರು ಬರುವ ತನಕ ಇದ್ದಿರಲಿಲ್ಲ. ಆದ್ದರಿಂದ 18ನೇ ಶತಮಾನದ ಕೊನೆ ಅವಧಿ ತನಕ ದಿನಗೂಲಿ ಕಾರ್ಮಿಕರು ಇದ್ದರೂ ಬಹಳ ಕಡಿಮೆ ಪ್ರಮಾಣದಲ್ಲಿ ಇದ್ದಿರಬಹುದು (ಬ್ರೆಮೆನ್ 1974: 1. ಭಾರತದಲ್ಲಿಯ ಜಾತಿ ವ್ಯವಸ್ಥೆ ಒಂದು ಕಡೆ ಗುಲಾಮಿ ವ್ಯವಸ್ಥೆಯ ಕೆಲವು ಲಕ್ಷಣಗಳು ಇನ್ನೊಂದು ಕಡೆ ಊಳಿಗಮಾನ್ಯ ಸಮಾಜದ ಕೆಲವು ಲಕ್ಷಣಗಳನ್ನು ಮೇಳೈಸಿದ್ದರಿಂದ ಮತ್ತು ಪಾಶ್ಚಾತ್ಯ ದೇಶಗಳಲ್ಲಿದ್ದ ಗುಲಾಮಿ ವ್ಯವಸ್ಥೆ ಹಾಗೂ ಊಳಿಗಮಾನ್ಯ ವ್ಯವಸ್ಥೆಗಳಿಗೆ ಬದಲಾಗಿ ಜಾತಿ ವ್ಯವಸ್ಥೆ ಸಂಪೂರ್ಣವಾಗಿ ಭಾರತೀಯ ಸಮಾಜವನ್ನು ನಿಯಂತ್ರಿಸುತ್ತಿದ್ದುದರಿಂದ ಮತ್ತು ಪಾಶ್ಚಾತ್ಯ ಗುಲಾಮಿ ವ್ಯವಸ್ಥೆ ಹಾಗೂ ಊಳಿಗಮಾನ್ಯ ವ್ಯವಸ್ಥೆಗಳು ಅಸ್ಥಿತ್ವದಲ್ಲಿದ್ದ ಕಾಲದಲ್ಲಿಯೇ ಅಂದರೆ ಕ್ರಿ. ಪೂರ್ವ 7–6ನೇ ಶತಮಾನಗಳಿಂದ ಕ್ರಿ. ಶ. 18ನೇ ಶತಮಾನದ ಕಾಲಘಟ್ಟದಲ್ಲಿದ್ದ ವರ್ಣ–ಜಾತಿ ಸಮಾಜವನ್ನು 'ಜಾತಿ ಗುಲಾಮಿ' ವ್ಯವಸ್ಥೆಯೆಂದು ಈ ಅಧ್ಯಯನದಲ್ಲಿ ತಿಳಿದುಕೊಳ್ಳಲಾಗಿದೆ.

'ಜಾತಿ ಗುಲಾಮಿ ಪದ್ಧತಿ'ಯಲ್ಲಿರುವ ಆರ್ಥಿಕ ವ್ಯವಸ್ಥೆಯ ರೂಪವನ್ನು ಸ್ಥೂಲವಾಗಿ ವೈಸರ್‌ರವರು ಉತ್ತರ ಪ್ರದೇಶದ್ದಲ್ಲಿ 20ನೇ ಶತಮಾನದಲ್ಲಿ ವಿವರಿಸಿರುವ 'ಜಜ್‌ಮನಿ' ಎಂದೇ ತಿಳಿದುಕೊಳ್ಳಬಹುದು (ವೈಸರ್: 1988, ಬ್ರೆಮನ್ 1974: 16–23). ಏಕೆಂದರೆ ಬ್ರಿಟಿಷರು ಭಾರತವನ್ನು

---

68 ಭಾರತದಲ್ಲಿ ವರ್ಣ ವ್ಯವಸ್ಥೆ ಹುಟ್ಟುವಾಗ ಮೂಲನಿವಾಸಿ ಜನಾಂಗಗಳನ್ನು ಸೋಲಿಸಿ ಶೂದ್ರ ವರ್ಣದಲ್ಲಿಯ ಜನಾಂಗಗಳನ್ನಾಗಿಯೋ ನಾಲ್ಕು ವರ್ಣಗಳ ಹೊರಗಿನ ಜನಾಂಗಳನ್ನಾಗಿಯೋ ಪರಿಗಣಿಸಿರಬೇಕು. ವರ್ಣ ವ್ಯವಸ್ಥೆಯ ಮೂಲ ಜನಾಂಗ ಆಧಾರಿತವಾಗಿದ್ದರೂ ನಂತರ ಅದರಿಂದ ಬೆಳೆದ ಜಾತಿ ವ್ಯವಸ್ಥೆ ಜನಾಂಗ ಆಧಾರಿತವಗಿರಲಿಲ್ಲ (ಚನನ 1990: ).

69 ಚನನ 1990.

ಆಳುತ್ತಿದ್ದರೂ ಅವರ ಮುಖ್ಯ ಧೋರಣೆ ಭಾರತದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ವ್ಯವಸ್ಥೆಗಳಲ್ಲಿ ಯಾವುದೇ ಹಸ್ತಕ್ಷೇಪ ಮಾಡಬಾರದೆಂದಿತ್ತು (ಕುಮಾರ್ 1965: 68, ಬಣಜಿ 1993: 26, 219–20, 253, 285, 314). ಆದ್ದರಿಂದ ಜಾತಿ ವ್ಯವಸ್ಥೆಯು ಮನುಸ್ಮೃತಿ ಅಡಿ ಸುಸ್ಥಿರಗೊಂಡಾಗಿನಿಂದ ಬ್ರಿಟಿಷರು ಭಾರತವನ್ನು ಆಳಲಿಕ್ಕೆ ಶುರುಮಾಡಿದಾಗಿನಿಂದಲೂ ಮತ್ತು ಆಳುವ ಕಾಲದಲ್ಲಿಯೂ ದೊಡ್ಡ ಮಟ್ಟದಲ್ಲಿ ಬದಲಾವಣೆ ಕಂಡಿಲ್ಲ. 20ನೇ ಶತಮಾನದ ಆರಂಭದಲ್ಲಿಯ ಜಾತಿವ್ಯವಸ್ಥೆಯ ಆರ್ಥಿಕ ಲಕ್ಷಣಗಳು ಕ್ರಿಸ್ತ ಶಕದ ಆದಿಯಿಂದಲೂ ಹೆಚ್ಚಿನ ರೀತಿಯಲ್ಲಿ ಒಂದೇ ತೆರನಾಗಿತ್ತು ಎಂಬ ಗ್ರಹಿಕೆಯಿಂದ 'ಜಜ್‌ಮನಿ' ವ್ಯವಸ್ಥೆ[70]ಯಲ್ಲಿಯ ಆರ್ಥಿಕ ಚಿತ್ರವನ್ನು ಮುಂದೆ ಕೊಡಲಾಗಿದೆ.

ಒಂದು ಊರಿನ ಪ್ರತಿಯೊಂದು ಜಾತಿಗೂ ಒಂದು ವಿಶಿಷ್ಟ ಸೇವೆ ನಿಗದಿಪಡಿಸಲಾಗಿತ್ತು. ಆ ಆ ಸೇವೆಯನ್ನು ಸಂಪ್ರದಾಯದ ಪ್ರಕಾರ ಅಥವಾ ಮನುಸ್ಮೃತಿ ಅಥವಾ ಇತರ ಸ್ಮೃತಿಗಳಲ್ಲಿ ನಮೂದಿಸಿದ ಕಟ್ಟಳೆಗಳ ಪ್ರಕಾರ ಸಲ್ಲಿಸಲಾಗುತ್ತಿತ್ತು. ಪ್ರತಿಯೊಂದು ಹಳ್ಳಿಯಲ್ಲೂ ಉತ್ಪಾದನೆಯು ವ್ಯವಸಾಯ ಕೇಂದ್ರಿತವಾಗಿತ್ತು. ವ್ಯವಸಾಯವು ಒಕ್ಕಲಿಗರಿಗೆ ಜಾತಿ ನಿರ್ಬಂಧದಿಂದ ಹೇರಲ್ಪಟ್ಟ ಕಸುಬಾಗಿತ್ತು. ಹಳ್ಳಿಯ ಸುತ್ತುಮುತ್ತಲಿನ ವ್ಯವಸಾಯಯೋಗ್ಯ ಭೂಮಿಯನ್ನು ಆ ಊರಿನ ಒಕ್ಕಲಿಗ ಕುಟುಂಬದವರು ವಾಡಿಕೆ ಪ್ರಕಾರ ಹಂಚಿಕೊಂಡು ವ್ಯವಸಾಯ ಮಾಡುತ್ತಿದ್ದರು. ಉಳಿದ ಎಲ್ಲಾ ಜಾತಿಗಳು ಅವರವರ ಕುಲಕಸುಬಿನನ್ವಯ ಒಂದೊಂದು ಅಥವಾ ಕೆಲವೊಂದು ಒಕ್ಕಲಿಗ ಕುಟುಂಬಗಳು ಮತ್ತಿತರ ಜಾತಿಗಳಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು[71]. ಸೇವೆಗೆ 'ಪ್ರತಿಫಲ'ವನ್ನು ವಸ್ತು ಅಥವಾ ಹಣರೂಪದಲ್ಲಿ ಕೊಡಲಾಗುತ್ತಿತ್ತು. ಪ್ರತಿ ಸುಗ್ಗಿಕಾಲದಲ್ಲಿ ಹೊಲದಿಂದ ದವಸಧಾನ್ಯಗಳನ್ನು ಕಣದಲ್ಲಿ ಶೇಖರಿಸಲಾಗುತ್ತಿತ್ತು.

---

70 ಒಂದು ಊರಲ್ಲಿಯ ಪ್ರತಿಯೊಂದು ಜಾತಿಯೂ ಇತರ ಎಲಾ ಅಥವಾ ಹೆಚ್ಚಿನ ಜಾತಿಗಳೊಂದಿಗೆ ವಸ್ತು – ಸೇವೆಗಳನ್ನು ಕೊಡುವ – ಕೊಳ್ಳುವಿಕೆಯ ಜಾಲಕ್ಕೆ ಜಜ್‌ಮನಿ ಪದ್ಧತಿಯೆಂದು ಹೆಸರಿಸಲಾಗಿದೆ. ಸೇವೆ ಪಡೆಯುವವರು 'ಜಜ್‌ಮನ್' (ಯಜಮಾನ); ಸೇವೆ ಕೊಡುವವರು ಕಾಮಿನ್, 'ಊರ ಕೀಳು ಕೆಲಸದಾಳು', 'ಊರ ಸೇವಕ', ಕುಶಲಕರ್ಮಿ, ಇತ್ಯಾದಿ. ಒಬ್ಬ ಕಸುಬುದಾರರು ಅಥವಾ ಸೇವಕನು ಸೇವೆ ಸಲ್ಲಿಸುವ ಇತರರೆಲ್ಲರೂ ಆತನ 'ಜಜ್‌ಮನಿ' ಅಥವಾ 'ಬಿರ್ಟ್'. ಸೇವೆ ಸಲ್ಲಿಸುವವನಿಗೆ ಸೇವೆ ಪಡೆಯುವವನು ಆತನ 'ಜಜ್‌ಮನ್' (ಯಜಮಾನ). ಸೇವೆ ಪಡೆಯುವವನು ತನಗೆ ಸೇವೆ ಸಲ್ಲಿಸುವವರು ಶೂದ್ರರು ಅಥವಾ ಅವರಿಗಿಂತ ಕೆಳಗಿನ ಜಾತಿಯವರಾದರೆ ಅವರೆಲ್ಲರನ್ನೂ ತನ್ನ 'ಕಾಮ್ ವಾಲೆ' ಅಥವಾ ಕಾಮ್ ಕರ್ನೆವಾಲೆ' (ಕೆಲಸ ಮಾಡುವವರು) ಎಂದು ಕರೆಯುತ್ತಾನೆ. ಮೇಲಿನ ಜಾತಿಯವರನ್ನು ಅವರವರ ಜಾತಿಯಿಂದಲೇ ಕರೆಯುತ್ತಾನೆ (ವೈಸರ್ 1988 (1936): xix-xx).

71 ವೈಸರ್‌ರವರು 1925ರಿಂದ 1932ರ ಅವಧಿಯಲ್ಲಿ ಉತ್ತರ ಪ್ರದೇಶದ ಕರಿಮ್‌ಪುರದಲ್ಲಿ ಪಡೆದ ನೇ ಅನುಭವದಿಂದ ಅಲ್ಲಿ 24 ಜಾತಿಗಳನ್ನು ದಾಖಲಿಸಿದ್ದಾರೆ: 1. ಬ್ರಾಹ್ಮಣ್ – ಪೂಜಾರಿ, ಉಪಾಧ್ಯಾಯ), 2. ಭಟ್ – ವಂಶವೃಕ್ಷ ಬರೆಯುವವ, 3. ಕಿಯಸ್ಥ್ – ಲೆಕ್ಕಿಗ, 4. ಸೋನಾರ್ – ಅಕ್ಕಸಾಲಿಗ, 5. ಮಾಲೀ – ಹೂ ತೋಟ ಮಾಡುವವ, 6. ಕಾಚ್ಚೀ – ತರಕಾರಿ ಬೆಳೆಸುವವ, 7. ಲೋಧಾ – ಭತ್ತ ಬೆಳೆಯುವವ, 8. ಬಹ್ರ್ಯಾ – ಬಡಗಿ, 9. ನಿಘೀ (ನಾಯಿ ?) – ಕ್ಷೌರಿಕ, 10. ಕಹಾರ್ – ನೀರು ತರುವವ, 11. ಗದರೀಯಾ – ಕುರುಬ, 12. ಭರ್‌ಭುಂಜಾ – ಕಾಳು ಹುರಿಯುವವ, 13. ದರ್ಜಿ – ಹೊಲಿಯುವವ, 14. ಕುಮ್ಹಾರ್ – ಕುಂಬಾರ, 15. ಮಹಾಜನ್ – ವ್ಯಾಪಾರಿ, 16. ತ್ಹೆಲಿ =– ಗಾಣಿಗ, 17. ಧೋಬಿ – ಅಗಸ, 18. ಧಾನುಕ್ – ಚಾಪೆ ಹೆಣೆಯುವ, 19. ಚಮಾರ್ – ಚರ್ಮಕಾರ (ಮಾದಿಗ ?), 20. ಭಂಗೀ – ಗುಡಿಸುವವ, ಕಕ್ಕಸು ಗುಂಡಿ ಸ್ವಚ್ಛ ಮಾಡುವವ, 21. ಫಕೀರ್ – ಸಾಂಪ್ರದಾಯಿಕ ಮುಸ್ಲಿಂ ಭಿಕ್ಷುಕ, 22. ಮಣೀಹಾರ್ – ಮುಸ್ಲಿಲಿಂ ಬಳೆಗಾರ, 23. ಧೂನಾ – ಮುಸ್ಲಿಂ ಹತ್ತಿ ಹದ (ಜಿನ್ನಿಂಗ್) ಮಾಡುವವ, 24. ತವ್ಹೈಇಫ್– ಮುಸ್ಲಿಂ ನೃತ್ಯಗಾರ್ತಿ. 1ರಿಂದ 16ನೇ ಜಾತಿಗಳು ಸವರ್ಣೀಯರು, 17ರಿಂದ 20 ಜಾತಿಗಳು ಅಸ್ಪೃಶ್ಯ ಜಾತಿಗಳು ಮತ್ತು 21ರಿಂದ 24 ಮುಸ್ಲಿಂ ಗುಂಪುಗಳು. 1ರಿಂದ 19ನೇ ತನಕದ ಎಲ್ಲಾ ಜಾತಿಯವರು 24 ಜಾತಿಗಳಿಂದಲೂ ಸೇವೆ ಪಡೆಯುತ್ತಿದ್ದರು; 20ನೇ ಜಾತಿ (ಭಂಗಿ)ಯವರು 18ರಿಂದ 24ನೇ ಜಾತಿಯಿಂದ ಮಾತ್ರ ಸೇವೆ ಪಡೆಯುತ್ತಿದ್ದರು; 21ರಿಂದ 24ನೇ ಮುಸ್ಲಿಂ ಜಾತಿಗಳು 1ರಿಂದ 3ನೇ ಜಾತಿಗಳನ್ನು (ಬ್ರಾಹ್ಮಣ್, ಭಟ್ ಮತ್ತು ಕಿಯಸ್ಥ್) ಬಿಟ್ಟು ಉಳಿದ ಜಾತಿಗಳಿಂದ ಸೇವೆ ಪಡೆಯುತ್ತಿದ್ದರು. 1ನೇ, 2ನೇ ಮತ್ತು 10ನೇ ಜಾತಿಗಳು 1ರಿಂದ 19ನೇ ಜಾತಿಗಳಿಗೆ ಮಾತ್ರ ಸೇವೆ ಸಲ್ಲಿಸುತ್ತಿದ್ದರೆ, 1ನೇ, 2ನೇ, 9ನೇ, 10ನೇ, 17ನೇ, 21ನೇ ಮತ್ತು 24ನೇ ಜಾತಿಗಳನ್ನು ಬಿಟ್ಟು ಉಳಿದವರು ಎಲ್ಲಾ ಜಾತಿಗಳ ಸೇವೆ ಸಲ್ಲಿಸುತ್ತಿದ್ದರು (ವೈಸರ್ 1988 (1936): xx-xxii).

ಸಾಂಪ್ರದಾಯಿಕ ನಿಯಮದಂತೆ ಮತ್ತು ಒಬ್ಬೊಬ್ಬರು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಒಕ್ಕಲಿಗರು ತಮಗೆ ಸೇವೆ ಸಲ್ಲಿಸಿದವರಿಗೆ ದವಸಧಾನ್ಯಗಳಿಂದ ಭಾಗವನ್ನು ಕೊಡುತ್ತಿದ್ದರು. ಆದರೆ ಈ ವಿನಿಮಯದಿಂದ ದಲಿತರು ಮತ್ತು ಮೂಲನಿವಾಸಿಗಳು ಹೊರಗುಳಿಯುತ್ತಿದ್ದರು. ಏಕೆಂದರೆ ಜಾತಿ ನಿಯಮದ ಪ್ರಕಾರ ದಲಿತರು ಮತ್ತು ಮೂಲನಿವಾಸಿಗಳು ಸೇವೆ ಸಲ್ಲಿಸಬೇಕಾಗಿತ್ತೇ ವಿನಃ 'ಜಜ್‌ಮನಿ' ನಿಯಮದಂತೆ ಅವರಿಗೆ ಪ್ರತಿಫಲವಿರಲಿಲ್ಲ. ಅವರ ಸೇವೆಗೆ ಸಿಗುವ 'ಪ್ರತಿಫಲ'ವೆಂದರೆ ಒಕ್ಕಲಿಗ ಮನೆತನದವರು ತಮ್ಮ ಅಡಿಯಾಳಾಗಿದ್ದ ದಲಿತರ ಅಥವಾ ಮೂಲನಿವಾಸಿಗಳ ಆಗುಹೋಗುಗಳನ್ನು 'ಸಂಪೂರ್ಣ'ವಾಗಿ ನೋಡಿಕೊಳ್ಳುತ್ತಿದ್ದರು. ಮತ್ತು ಮನುಸ್ಮೃತಿ ಮತ್ತು ಇತರೆ ಧರ್ಮಶಾಸ್ತ್ರಗಳ ಪ್ರಕಾರ ದಲಿತರ ಅವಶ್ಯಕತೆಗಳನ್ನು ಅತ್ಯಂತ ನಿಕೃಷ್ಟಗೊಳಿಸಲಾಗಿತ್ತು. ಅವರ ಹೆಸರು ಔನ್ನತ್ಯವನ್ನು ತೋರಿಸದೇ ಕೀಳು ಸೂಚಕವಾಗಿರಬೇಕಾಗಿತ್ತು; ಅವರು ಸಂಪತ್ತನ್ನು ಇಟ್ಟು ಕೊಳ್ಳಬಾರದಿತ್ತು; ಅವರಿಗೆ ಉಳಿದ ಅನ್ನ, ಹಳೆ ಬಟ್ಟೆ, ಜಳ್ಳು ಧಾನ್ಯ, ಸವೆದು ಹೋದ ಪಾತ್ರೆಪಗಡಿಗಳನ್ನು ಕೊಡಬೇಕಾಗಿತ್ತು[72]. ಅವರ ಬಟ್ಟೆ ಕೇವಲ ನಡುಪಟ್ಟಿ – ಗಂಡಸರು ಮತ್ತು ಹೆಂಗಸರಿಗೂ ಕೂಡಾ; ಅವರು ಯಾವುದೇ ಲೋಹದ ಆಭರಣಗಳನ್ನು ಧರಿಸುವಂತಿರಲಿಲ್ಲ; ಚಪ್ಪಲಿಗಳನ್ನು ಅವರೇ ಹೊಲಿಯಬೇಕಾಗಿದ್ದರೂ ಅವರು ಅವನ್ನು ಹಾಕಿಕೊಳ್ಳುವಂತಿರಲಿಲ್ಲ; ಅವರಿಗೆ ಯಾವುದೇ ಶಿಕ್ಷಣ ಅಥವಾ ಸಂಸ್ಕೃತಿಯ ಹಂಗಿರಲಿಲ್ಲ – ಏಕೆಂದರೆ ಶಿಕ್ಷಣ ಪಡೆಯುವ ಒಂದೇ ಒಂದು ಮಾಧ್ಯಮವಾಗಿದ್ದ ಸಂಸ್ಕೃತದ ಶ್ಲೋಕವೊಂದು ಶೂದ್ರರ ಕಿವಿಗೆ ಬಿದ್ದರೆ ಅವರ ಕಿವಿಗೆ ಕಾಯ್ದ ಸೀಸವನ್ನು ಸುರಿಸುವ ಕಠೋರ ಶಿಕ್ಷೆಯನ್ನು ವಿಧಿಸಲಾಗಿತ್ತು; ಶ್ಲೋಕಗಳನ್ನು ಅವನು ಉಚ್ಚರಿಸಿದರೆ ಅವನ ನಾಲಿಗೆಯನ್ನು ಕತ್ತರಿಸಬೇಕಿತ್ತು; ಮತ್ತು ಅವನ್ನು ಬಾಯಿಪಾಠ ಮಾಡಿದರೆ ಅವರ ಹೇಹವನ್ನು ಸೀಳಿ ಎರಡು ಭಾಗ ಮಾಡಬೇಕಾಗಿತ್ತು[73] ಹೀಗೆ ಅವರಿಗೆ ಉಳಿದಿದ್ದ ಕೆಲವೇ ಕೆಲವು ಅನಿವಾರ್ಯ ಅಗತ್ಯಗಳೆಂದರೆ ಊಟ ಮತ್ತು ಮದುವೆ. ಇವನ್ನು ಅವರ ಒಡೆಯ ನೆರವೇರಿಸುತ್ತಿದ್ದ. ಇನ್ನಿತರ ಜಾತಿಗಳಂತೆ ಕಣದ ದವಸಧ್ಯಾನ್ಯಗಳಿಂದ ಅವರಿಗೆ ಭಾಗಹೋಗುತ್ತಿರಲ್ಲಿಲ್ಲ. ಒಂದು ವೇಳೆ ದವಸಧಾನ್ಯಗಳ ಭಾಗ ಹೋಗುವುದಾದರೆ ಎಲ್ಲಾ ಬೇರೆ ಅಸ್ಪೃಶ್ಯರಲ್ಲದ ಜಾತಿಗಳು ತಮ್ಮ ತಮ್ಮ ಭಾಗ ತೆಗೆದುಕೊಂಡ ಮೇಲೆ ಅಳಿದುಳಿದ ಜಳ್ಳು ಕಾಡುಕಡಿಗಳನ್ನೋ ಹೊಲದಲ್ಲಿ ಫಸಲನ್ನು ಆಯುವ ಸಮಯದಲ್ಲಿ ಬಿದ್ದಿರುವ ತೆನೆಕಾಳುಗಳನ್ನೋ ತಮ್ಮ 'ಹಕ್ಕು' ಎಂದೇ ತಿಳಿದು ಅವರು ಸಂಗ್ರಹಿಸುತ್ತಿದ್ದರು (ಪವಾರ್ 2013: 52; ಕುಮಾರ್ 1965: 45). ಇದು ಗುಲಾಮಿಪದ್ಧತಿಗಿಂತ ಕಡಿಮೆಯೇನಲ್ಲ. ಅಥವಾ ನಾವು ಗ್ರೀಕ್, ರೋಮ್ ಮತ್ತು ಅಮೇರಿಕದಲ್ಲಿದ್ದಂತಹ ಗುಲಾಮಿ ಪದ್ಧತಿಗಳಿಗೆ ಹೋಲಿಸಿದರೆ ಒಂದು ರೀತಿಯಲ್ಲಿ ಅವೆಲ್ಲವುಗಳಿಗಿಂತ ಕ್ರೂರ ಮತ್ತು ಅಮಾನವೀಯವೇ ಎಂದು ಹೇಳಬಹುದು. ಏಕೆಂದರೆ ಜಾತಿ ಕರ್ತವ್ಯಗಳು ಧರ್ಮದ ಭಾಗವಾಗಿ ಅವನ್ನು ಪ್ರಶ್ನಿಸದೇ ಕಡ್ಡಾಯವಾಗಿ ಪಾಲಿಸಲೇ ಬೇಕೆಂದು

---

72 ಮನುಸ್ಮೃತಿ 10.125

73 ಗೌತಮ ಧರ್ಮಸೂತ್ರ 4–6: ಕೊತಾನಿ 1999: 5 ನೋಡಿ.

ಮಾನಸಿಕವಾಗಿ ಒಪ್ಪಿಕೊಳ್ಳುವಂತೆ ಧರ್ಮಶಾಸ್ತ್ರಗಳು ಒಂದು ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿದ್ದುವು.

**4.5 'ಜಾತಿ ಗುಲಾಮಿ ಪದ್ಧತಿ' ಮತ್ತು ಇತರೇ ಗುಲಾಮಿ ಪದ್ಧತಿಗಳು**

ಗ್ರೀಕ್ ಮತ್ತು ರೋಮ್ ನಾಗರಿಕತೆಗಳಲ್ಲಿದ್ದ ಗುಲಾಮರು ಹಲವಾರು ದಂಗೆಗಳ ನಂತರ ಸ್ವತಂತ್ರರಾದರು ಅಥವಾ ಗುಲಾಮಿ ಪದ್ಧತಿಯನ್ನು ನಾಶಮಾಡುವಲ್ಲಿ ಯಶಶ್ವಿಯಾದರು.ಅಮೇರಿಕಾದಲ್ಲಿ ಗುಲಾಮರನ್ನಾಗಿ ಆಫ್ರಿಕಾ ಖಂಡದಿಂದ ತರಲ್ಪಟ್ಟ ಕಪ್ಪು ಜನರು ತೀವ್ರ ವಿರೋಧ ವ್ಯಕ್ತಪಡಿಸುತ್ತಾ ಗುಲಾಮಪದ್ಧತಿಯನ್ನು ನಾಶಮಾಡುವಲ್ಲಿ ತಮ್ಮ ವಿಶಿಷ್ಟ ಪಾತ್ರವಹಿಸಿದರು. ಆದರೆ ಕ್ರಿಸ್ತ ಪೂರ್ವ ಅಥವಾ ಕ್ರಿಸ್ತ ಶಕದ ಒಂದೆರಡು ಶತಮಾನಗಳ ಕಾಲದಿಂದ ಭಾರತದಲ್ಲಿ ಹೆಪ್ಪುಗಟ್ಟಿದ್ದ ಜಾತಿ ಗುಲಾಮಿ ಪದ್ಧತಿಗೆ ದಲಿತರಿಂದ ಅಥವಾ ಮೂಲನಿವಾಸಿಗಳಿಂದ ಯಾವುದೇ ತೀವ್ರತರ ವಿರೋಧ ವ್ಯಕ್ತವಾಗಿದ್ದನ್ನು ನಾವು ಚರಿತ್ರೆಯಲ್ಲಿ ಕಾಣುತ್ತಿಲ್ಲ. ಅಥವಾ ವಿರೋಧ ಆಗಿಂದಾಗ ವ್ಯಕ್ತವಾಗುತ್ತಿದ್ದರೂ ಅವನ್ನು ವ್ಯವಸ್ಥಿತವಾಗಿ ಹದಗೆಡೆಯಲಾಗುತ್ತಿತ್ತು. ಜಾತಿ ವ್ಯವಸ್ಥೆ ನಾಶಮಾಡಲು ಬುದ್ಧನ ಕಾಲದ, ಬಸವಣ್ಣನ ಕಾಲದ, ಭಕ್ತಿ ಚಳವಳಿಯ ಪ್ರಯತ್ನಗಳಲ್ಲಿ ದಲಿತರು, ಮೂಲನಿವಾಸಿಗಳು ದೊಡ್ಡ ಪ್ರಮಾಣದಲ್ಲಿ ತಮ್ಮ ಕೊಡುಗೆಯನ್ನು ಕೊಟ್ಟಿದ್ದಾರೆ. ಆದರೆ ಒಟ್ಟಾರೆಯಾಗಿ ಜಾತಿವ್ಯವಸ್ಥೆ ತನ್ನ ಹೆಡೆಮುರಿಯನ್ನು ಇನ್ನೂ ಕರಾಳವಾಗಿ ಪ್ರದರ್ಶಿಸುತ್ತಿದೆ. ಇದಕ್ಕೆ ಮೂಲಕಾರಣವೇನೆಂದರೆ, ಬೇರೆ ಸಮಾಜಗಳಲ್ಲಿ ಗುಲಾಮಿ ಪದ್ಧತಿ ಕೇವಲ ದೈಹಿಕ ಶೋಷಣೆಗೆ ಸೀಮಿತವಾಗಿತ್ತು. ಅದನ್ನು ಮೌಲಿಕವಾಗಿ ವೈಭವೀಕರಿಸಿರಲಿಲ್ಲ. ಆದರೆ ಜಾತಿ ವ್ಯವಸ್ಥೆಯ ರೂಪವೇ ಸಮಾಜದ ಮತ್ತು ಸಂಸ್ಕೃತಿಯ ಎಲ್ಲಾ ಆಯಾಮಗಳನ್ನು ಒಳಹೊಕ್ಕಿರುವಂತಹದ್ದು. ಅದು ಕೇವಲ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಶ್ನೆಯಲ್ಲ. ಅವೆಲ್ಲವುಕ್ಕಿಂತ ಮಿಗಿಲಾಗಿ ಮತ್ತು ಆಳವಾಗಿ ಅದು ಸಾಂಸ್ಕೃತಿಕ, ಮಾನಸಿಕ ಪ್ರಶ್ನೆ. ಜಾತಿ ವ್ಯವಸ್ಥೆ ಹುಟ್ಟುಹಾಕಿರುವ ಧಾರ್ಮಿಕ ನಂಬಿಕೆಗಳಾದ ಧರ್ಮ–ಕರ್ಮ, ಪಾಪ–ಪುಣ್ಯ, ಜನ್ಮ–ಪುನರ್ಜನ್ಮ ಮುಂತಾದವು ಎಲ್ಲಾ ಜಾತಿಗ್ರಸ್ಥ ವ್ಯಕ್ತಿಯಂತೆ ಪ್ರತಿಯೊಬ್ಬ ದಲಿತನನ್ನೂ ತಮ್ಮ ಕಪಿಮುಷ್ಟಿಯಲ್ಲಿಟ್ಟಿವೆ. ದೈಹಿಕ ದಾಸ್ಯಕ್ಕಿಂತ ಮಾನಸಿಕ ದಾಸ್ಯ ಹೆಚ್ಚು ಕ್ರೂರ, ಕಠೋರ. ಕೇವಲ ದೈಹಿಕ ದಾಸ್ಯ ಒಬ್ಬನನ್ನು ಸಿಡಿದೇಳುವಂತೆ ಮಾಡುತ್ತದೆ. ಮಾನಸಿಕ ದಾಸ್ಯ ಒಬ್ಬನನ್ನು ತನ್ನ ದಾಸ್ಯ ಪರಿಸ್ಥಿತಿಗೆ ಒಗ್ಗಿ ಕೊಳ್ಳುವಂತೆ ಮಾಡುತ್ತದೆ; ಅದರಲ್ಲೇ ಎಲ್ಲೂ ಕಾಣದ 'ತೃಪ್ತಿ'ಯನ್ನು ಪಡೆಯುತ್ತದೆ. ದಾಸ್ಯದ ವಿರುದ್ಧ ದಂಗೆ ಏಳುವ ಪ್ರಶ್ನೆ ಎಲ್ಲಿ ಬಂತು?

ಆದರೂ ಭಾರತದಲ್ಲಿಯ 'ಜಾತಿ ಗುಲಾಮಿ ಪದ್ಧತಿ'ಯಲ್ಲಿ ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಆದರೆ ಅವು ಬ್ರಿಟೀಷರ ಕಾಲದಲ್ಲಿ ಮತ್ತು ಈಗ ಸ್ವಾತಂತ್ರ್ಯೋತ್ತರದ ಕಾಲದಲ್ಲಿ; 'ನವ ಮನು'ವಿನ ಅಧ್ಯಕ್ಷತೆಯಲ್ಲಿ ರೂಪಿಸಲ್ಪಟ್ಟು ಭಾರತವು ಅಂಗೀಕರಿಸಿದ ಸಂವಿಧಾನದ ಆಶಯಗಳಿಗನುಗುಣವಾಗಿ. ಆದರೆ ಎಷ್ಟೋ ಬದಲಾವಣೆಗಳನ್ನು ಕಾಣುತ್ತಿದ್ದರೂ ಎಲ್ಲೋ ಮೂಲಭೂತ ವ್ಯವಸ್ಥೆಗಳು ಹಾಗೆಯೇ ಉಳಿದು ಕೊಂಡಿರುವಂತೆ ಕಾಣುತ್ತದೆ. ಅದಕ್ಕೆ 'ಬಿಟ್ಟಿ ಚಾಕ್ರಿ' ಒಂದು ಉದಾಹರಣೆ.

**4.6 'ಜಾತಿ ಗುಲಾಮಿ ವ್ಯವಸ್ಥೆ'ಗೆ ಬ್ರಿಟಿಷರಿಂದ ಕೊಡಲ್ಪಟ್ಟ ಏಟುಗಳು**

ಬ್ರಿಟೀಷರು ಭಾರತಕ್ಕೆ ಕಾಲಿಟ್ಟದ್ದು ವ್ಯಾಪಾರಮಾಡಲಿಕ್ಕೆ. ವ್ಯಾಪಾರ ಮಾಡಿ ಲಾಭ ಗಳಿಸಲಿಕ್ಕೆ.ಲಾಭ ಗಳಿಸಿ ತಮ್ಮ ದೇಶಕ್ಕೆ ರವಾನಿಸಲ್ಲಿಕ್ಕೆ. ವ್ಯಾಪಾರಿಗಳಾಗಿ ಬಂದವರು ಕ್ರಮೇಣ ದೇಶದ ಚುಕ್ಕಾಣಿ ಹಿಡಿದರು. ಆದರೆ ಉದ್ದೇಶ ಬದಲಾಗಲ್ಲಿಲ್ಲ. ಬದಲು ಅದು ವಿಸ್ತಾರವಾಯಿತು, ವ್ಯವಸ್ಥಿತವಾಯಿತು. ಲಾಭಗಳಿಕೆ ಕೇವಲ ವ್ಯಾಪಾರದಿಂದಲ್ಲ.ದೇಶದ ಪ್ರಭುಗಳಾಗಿ ದೇಶದ ಸಂಪತ್ತನ್ನೇ ಲೂಟಿಮಾಡಿ ಕೊಂಡೊಯ್ಯುವ ಮೂಲಕ. ಅದಕ್ಕೋಸ್ಕರ ಆರ್ಥಿಕ ವ್ಯವಸ್ಥೆಯಲ್ಲಿ ಹಲವಾರು ಮಹತ್ತರ ಬದಲಾವಣೆಗಳನ್ನು ತಂದರು. ಆದರೆ ಆ ಉದ್ದೇಶ ಈಡೇರಿಕೆಗೆ ಅವರು ಪ್ರಜ್ಞಾಪೂರ್ವಕವಾಗಿ ಭಾರತದ ಯಾವುದೇ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ವ್ಯವಸ್ಥೆಯಲ್ಲಿ ಯಾವುದೇ ಹಸ್ತಕ್ಷೇಪದಿಂದ ದೂರ ಉಳಿಯಬೇಕಾಗಿತ್ತು.ಅದು ಅವರ ಸ್ಪಷ್ಟ ನಿಲುವೂ ಆಗಿತ್ತು (ಬಣಜಿ 1933: 26, 219–22, 253, 285, 314). ಆದರೆ ಅಚ್ಚರಿಯ ಸಂಗತಿ ಏನೆಂದರೆ ತಮ್ಮ ಮೂಲ ಉದ್ದೇಶದ ಈಡೇರಿಕೆಗೆ ತಮ್ಮ ನೇರ ಧೋರಣೆಯ ಹೊರತಾಗಿಯೂ ದೇಶದ ಹಲವಾರು ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಗಳಲ್ಲಿಯೂ ಅವರು ಹಸ್ತಕ್ಷೇಪ ಮಾಡುವಂತಾಯಿತು. ಪ್ರತ್ಯೇಕವಾಗಿ ಜಾತಿ ವ್ಯವಸ್ಥೆ ಮೇಲೆ ದಲಿತರ ಮತ್ತು ಮೂಲನಿವಾಸಿಗಳ ಜೀವನಕ್ರಮದ ಮೇಲೆ ಹಿಂದೆಂದೂ ಕಾಣದಂತಹ ಪ್ರಭಾವಗಳು ತೋರಿಬಂದವು. ಸಾಮಾಜಿಕ–ಧಾರ್ಮಿಕ ಹಸ್ತಕ್ಷೇಪವಿಲ್ಲದೆ ತೆರಿಗೆ ವಸೂಲಿಯನ್ನು ವ್ಯವಸ್ಥಿತಗೊಳಿಸಲು ಬ್ರಿಟಿಷರು ತೆಗೆದುಕೊಂಡ ಹಲವಾರು ಆರ್ಥಿಕ ಕ್ರಮಗಳು ಜಾತಿ ವ್ಯವಸ್ಥೆ ಮೇಲೆ, ದಲಿತರಿಗೆ ಸಂಬಂಧ ಪಟ್ಟಂತೆ ಅವರ ಜಾತಿ ಗುಲಾಮಿ ವ್ಯವಸ್ಥೆ ಮೇಲೆ ಪ್ರಬಲವಾದ ಪರಿಣಾಮ ಬೀರಿದೆ. ಆದರೆ ಅವು ಸಂಪೂರ್ಣವಾಗಿ ಜಾತಿ ಗುಲಾಮಿ ವ್ಯವಸ್ಥೆಯನ್ನು ಮುರಿದು ಹಾಕಿಲ್ಲ. ಈಗ ಇರುವ ಜೀತ ಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ'ಗಳು ಅದನ್ನು ದೃಢಪಡಿಸುತ್ತವೆ.

ಯಾವುದೇ ದೊರೆಯ ಮೊದಲ ಕೆಲಸ ತೆರಿಗೆ ವಸೂಲಿ. ಇಡೀ ದೇಶದ ತೆರಿಗೆ ವಸೂಲಿಯಾಗಬೇಕು ಆದರೆ ಅಷ್ಟರ ವರೆಗೆ ತೆರಿಗೆ ವಸೂಲಿಯ ಆಧಾರ ಹಳ್ಳಿಯ ಪಟೇಲ–ಶಾನುಭೋಗ, ಕುಲಕರ್ಣಿಗಳ ಬಾಯಿ ಲೆಕ್ಕಾಚಾರಗಳು.ಬಾಯಿ ಲೆಕ್ಕಾಚಾರಗಳು ಸಂಪ್ರದಾಯದ ಕಟ್ಟಳೆಗಳ ಪ್ರಕಾರ.ಭೂಮಿ ಒಡೆತನದ ಮೇಲಲ್ಲ; ಸಾಗುವಳಿಕೆಯ ಫಲದ ಮೇಲೆ.ಏಕೆಂದರೆ ಭೂಮಿ ಜಾತಿ ನಿರ್ಬಂಧದಡಿ ಉಳುಮೆ ಮಾಡುತ್ತಿದ್ದ ಒಕ್ಕಲಿಗರ ಸೊತ್ತಾಗಿರಲ್ಲಿಲ್ಲ. ಬದಲು ಅದು ಹಳ್ಳಿ ಸಮುದಾಯದ ಸೊತ್ತಾಗಿತ್ತು.ರಾಜರು ಭೂಒಡೆಯರಾಗಿರಲಿಲ್ಲ; ತೆರಿಗೆ ವಸೂಲಿಯ ಒಡೆಯರಾಗಿದ್ದರು. ಇಂತಿಷ್ಟು ಬೆಳೆಗೆ ಇಂತಿಷ್ಟು ಪ್ರಮಾಣದ ತೆರಿಗೆ ಎಂದು ಅವರು ನಿರ್ಧಾರ ಮಾಡುತ್ತಿದ್ದರು.ಪಟೇಲ– ಶಾನುಭೋಗರು ಅದನ್ನು ರಾಜರ ಹೆಸರಲ್ಲಿ ವಸೂಲಿ ಮಾಡುತ್ತಿದ್ದರು.ವಸೂಲಿಯಾದ ತೆರಿಗೆಯ ದವಸಧಾನ್ಯಗಳನ್ನು ರಾಜರ ಮಧ್ಯವರ್ತಿಗಳು – ಪಾಳೇಗಾರರು ಎತ್ತು, ಕುದುರೆ ಬಂಡಿಗಳಲ್ಲಿ ರಾಜರ ಖಜಾನೆಗೆ ಸಾಗಿಸುತ್ತಿದ್ದರು.

ದೇಶದ ನೂತನ ಸಾಮ್ರಾಟರಿಗೆ ಈ ತೆರಿಗೆ ವಸೂಲಿ ವಿಧಾನ ಸರಿಕಾಣಲ್ಲಿಲ್ಲ.ಅದು ಅವೈಜ್ಞಾನಿಕವಾಗಿತ್ತು.ಮೂಲ ವಸೂಲಿದಾರರು, ಮಧ್ಯವರ್ತಿಗಳು ಮಧ್ಯದಲ್ಲಿ ದೋಚುವ ಸಾಧ್ಯತೆ

ಹೆಚ್ಚಿತ್ತು.ಪಟೇಲ-ಶಾನುಭೋಗ-ಪಾಳೇಗಾರರು ಕೊಟ್ಟ ಲೆಕ್ಕವನ್ನೇ ನಂಬಬೇಕಾಗಿತ್ತು.ಮೋಸಕ್ಕೆ ಕಡಿವಾಣ ಇರಲಿಲ್ಲ. ಇದನ್ನು ತಡೆಯಲು ಮತ್ತು ತೆರಿಗೆ ನಿಗದಿಪಡಿಸುವಿಕೆಯನ್ನೂ ತೆರಿಗೆ ವಸೂಲಿಯನ್ನೂ ಸುವ್ಯವಸ್ಥಿತಗೊಳಿಸಲು ಬ್ರಿಟೀಷರಿಗೆ ಹೊಳೆದ ಉಪಾಯ ಭೂಒಡೆತನವನ್ನು ಹಳ್ಳಿಸಮುದಾಯದಿಂದ ಹೊರತೆಗೆದು ಖಾಸಗಿ ಒಡೆತನಕ್ಕೆ ತರುವುದು. ಅದೇ 18ನೇ ಶತಮಾನದ ಕೊನೆಯ ದಶಕಗಳಲ್ಲಿ ದೇಶದಾದ್ಯಂತ ಜ್ಯಾರಿಗೊಳಿಸಿದ ಭೂ ವ್ಯವಸ್ಥೆ ಕಾನೂನು (Land Settlement Act). ಇದರಿಂದ ಭೂಮಿ ಹೆಚ್ಚೆಚ್ಚು ಖಾಸಗೀ ಒಡೆತನಕ್ಕೆ ಬಂತು. ವ್ಯವಸಾಯೇತರ ಭೂಮಿ ಸರ್ಕಾರದ ಅಧೀನದಲ್ಲಿ ಬಂತು. ಖಾಸಗಿ ಭೂಮಿ ವ್ಯಾಪಾರಕ್ಕೊಳಗಾಗಿ ಅಥವಾ ದಾವೆಗಳಿಗೊಳಗಾಗಿ ಹಸ್ತಾಂತರಗೊಳ್ಳಲ್ಪಟ್ಟಿತು. ಮಾರುಕಟ್ಟೆಯ ಸರಕಾಯಿತು. ಒಕ್ಕಲಿಗನೊಬ್ಬನ ಜಮೀನಿಗೆ ಅಂಟಿಕೊಂಡಿದ್ದ ದಲಿತ ಕುಟುಂಬಗಳು ಭೂಮಿ ಜೊತೆ ಹೊಸ ಮಾಲಿಕರಿಗೆ ಮಾರಲ್ಪಡತೊಡಗಿದವು (ಕುಮಾರ್ 1965:187–188; ಬ್ರೆಮೆನ್ 1974: 4; ವೈಸರ್ 1988(1936): 86; ಮೇಯ್ನ್ 1871: 103–128).

ಭೂ ವ್ಯವಸ್ಥೆ ಕಾನೂನು ಒಂದು ಮುಖವಾದರೆ ಇನ್ನೊಂದೆಡೆ ಇಡೀ ದೇಶವನ್ನಾಳಲು ಮತ್ತು ವಸೂಲಿಯಾದ ತೆರಿಗೆಯನ್ನು ಕೇಂದ್ರ ಸ್ಥಳಕ್ಕೆ ರವಾನಿಸಲು ಸಂಪರ್ಕಜಾಲದ ಅವಶ್ಯಕತೆಯಿತ್ತು (ಟಿಂಕರ್ 1974: 39). ಅದಕ್ಕೋಸ್ಕರ ಆಗತಾನೇ ಇಂಗ್ಲೆಂಡಿನಲ್ಲಿ ಕಂಡುಹಿಡಿದ ಉಗಿಬಂಡಿಯನ್ನು ಬಳಸಿದರು. ಮತ್ತು ಅದನ್ನು ಓಡಿಸಲು ಕಬ್ಬಿಣದ ರೈಲು ಹಳಿಗಳನ್ನು ಜೋಡಿಸುವ ಮತ್ತು ಅವನ್ನು ಮಲಗಿಸಲು ದಪ್ಪ ದಪ್ಪ ಮರದ ತೋಲುಗಳ ಅವಶ್ಯಕತೆ ಇತ್ತು. ಕಬ್ಬಿಣಕ್ಕೋಸ್ಕರ ಕಬ್ಬಿಣದ ಅದಿರಿನ ಗಣಿಗಳನ್ನು ತೋಡಿ ಕಬ್ಬಿಣದ ಅದಿರನ್ನು ಹೊರತೆಗೆಯಬೇಕಾಗಿತ್ತು. ಅದಿರನ್ನು ಕರಗಿಸಿಬೇರ್ಪಡಿಸಲು, ಕಲ್ಲಿದ್ದಲನ್ನು ಭೂಗರ್ಭದಿಂದ ಹೊರತೆಗೆಯಬೇಕಾಗಿತ್ತು. ಭಾರತದಲ್ಲಿ ಸಮೃದ್ಧವಾಗಿದ್ದ ಇತರ ಖನಿಜದ ಅದಿರುಗಳನ್ನೂ ಹೊರತೆಗೆದು ಲಾಭಗಳಿಸಬೇಕಾಗಿತ್ತು.ಮರಗಳನ್ನು ಕಾಡುಗಳಿಂದ ಕತ್ತರಿಸಿ ಸಾಗಿಸಬೇಕಾಗಿತ್ತು. ಹೊಸ ಕಾಡುಗಳನ್ನು ಬೆಳೆಸಬೇಕಾಗಿತ್ತು. ಜೊತೆಗೆ ಪ್ರಪಂಚದಾದ್ಯಂತ ಬಲು ಬೇಡಿಕೆಯ ಕಾಫಿ, ಚಹಾ, ಕಬ್ಬು ತೋಟಗಳನ್ನು ಬೆಳೆಸಿ ಉತ್ಪಾದಿಸಿದ ಕಾಫಿ, ಚಹಾ ಪುಡಿಗಳನ್ನು ಮತ್ತು ಸಕ್ಕರೆಯನ್ನು ರಫ್ತು ಮಾಡಿ ಲಾಭಮಾಡುವ ಉದ್ದೇಶವೂ ಸೇರಿಕೊಂಡಿತು (ಟಿಂಕರ್ 1974: 20). ಇದಕ್ಕೆಲ್ಲಾ ದುಡಿಮೆದಾರರ ಅವಶ್ಯಕತೆಯಿತ್ತು. ಜಾತಿವ್ಯವಸ್ಥೆಯಲ್ಲಿ ಪುಕ್ಕಟದುಡಿಮೆಯೇ ಸರ್ವಸ್ವವಾಗಿದ್ದ ಸಮುದಾಯಗಳೇ ದಲಿತರು ಮತ್ತು ಮೂಲನಿವಾಸಿಗಳು. ಜೊತೆಗೆ ಮಡಿಮೈಲಿಗೆ ಕುರಿತ ಆಚಾರ, ನಂಬಿಕೆಗಳಿಂದ ದೂರವಾಗಿದ್ದವರು ಅವರೇ[74]. ಬ್ರಿಟೀಷರ ಆಮಿಷಗಳಿಗೆ ಸುಲಭವಾಗಿ ಅವರು ಬಲಿಯಾದರು.ದಲಿತರನ್ನು, ಮೂಲನಿವಾಸಿಗಳನ್ನು ಮತ್ತು ಕೆಲವು ಹಿಂದುಳಿದ ವರ್ಗದವರನ್ನು ಸುಲಭವಾಗಿ ತಮ್ಮ ಮೂಲ ನೆಲದಿಂದ ದೂರದ ಇನ್ನೊಂದು ನೆಲೆಯಲ್ಲಿ ಗಣಿಗಾರಿಕೆಗೆ, ತೋಟಗಾರಿಕೆಗೆ ಕೊಂಡೊಯ್ದರು. ದೇಶದ ಹೊರಗೂ ಸಾಗಿಸಿದರು.ಹೀಗೆ ತಮಿಳುನಾಡಿನ ದಲಿತರು ಕರ್ನಾಟಕದ ಕೆ.ಜಿ.ಎಫ್.ಗೆ, ತಮಿಳುನಾಡಿನ ದಲಿತರು

---

74 ಉದಾಹರಣೆಗಾಗಿ 'ಮೇಲ್ಜಾತಿ'ಯವರು ಸಮುದ್ರಗಳನ್ನು ದಾಟಬಾರದು ಎಂಬ ನಿರ್ಬಂಧಕ್ಕೊಳಗಾಗಿದ್ದರು.

ಶ್ರೀಲಂಕಾದ ಚಹಾ ತೋಟಗಳಿಗೆ, ದೇಶದ ಇತರೆಡೆಯ ದಲಿತರು ಮತ್ತು ಹಿಂದುಳಿದ ವರ್ಗದವರು ದಕ್ಷಿಣ ಆಫ್ರಿಕಾಕ್ಕೆ, ವೆಸ್ಟ್ ಇಂಡೀಸಿಗೆ, ಮೌರೀಷಿಯಸ್ಸಿಗೆ, ಫೀಜಿ, ಜಮೈಕಾ ದ್ವೀಪಗಳಿಗೆ, ಝಾರ್ಖಂಡಿನ ಮೂಲನಿವಾಸಿಗಳು ಆಸ್ಸಾಮಿನ ಚಹಾ ತೋಟಗಳಿಗೆ, ಇತ್ಯಾದಿ (ಟಿಂಕರ್ 1974: 39–60).

ಇದರ ಜೊತೆಗೆ ಆದ ಇನ್ನೊಂದು ಪ್ರಯೋಗವೆಂದರೆ ತೆರಿಗೆಯನ್ನು ಹಣದ ರೂಪದಲ್ಲೇ ವಸೂಲಿ ಮಾಡುವ ಪದ್ಧತಿ (ಕುಮಾರ್ 1965:188). ಇದಕ್ಕೋಸ್ಕರ ಲೋಹದ ನಾಣ್ಯಗಳು ಹೆಚ್ಚೆಚ್ಚು ಚಲಾವಣೆಗೆ ಬಂದವು. ವಸ್ತು ವಿನಿಮಯದ ಬದಲು ವ್ಯಾಪಾರಗಳು ಕೇವಲ ಹಣದ ಮೂಲಕವೇ ಮತ್ತು ಬ್ಯಾಂಕುಗಳ ಮೂಲಕ ನಡೆಯಲಾರಂಭವಾದವು. ಇದರ ಪರಿಣಾಮವನ್ನು ದಲಿತರ ಜೀವನಕ್ಕೆ ಅನ್ವಯಿಸುವುದಾದರೆ ದಿನಕೂಲಿಯನ್ನೂ ಹಣದಿಂದಲೇ ಕೊಡುವಂತಹ ಪ್ರವೃತ್ತಿ ಹೆಚ್ಚಾಯಿತು. 'ಜಾತಿ ಗುಲಾಮಿ' – 'ಜಜ್‌ಮನಿ' ವ್ಯವಸ್ಥೆಯಲ್ಲಿ ದಲಿತರಿಗೆ ದಿನಗೂಲಿ ಎಂಬುದಿರಲ್ಲಿಲ್ಲ (ವೈಸರ್ 1988 (1936): 25–27). ಅವರದ್ದು ಪುಕ್ಕಟೆ ದುಡಿಮೆ ಅಥವಾ 'ಬೇಗಾರ್' ಅಥವಾ 'ಬಿಟ್ಟಿಚಾಕ್ರಿ' ಎಂತಲೇ ಕರೆಯಬಹುದು. ಆದರೆ ಯಾವಾಗ ದಲಿತರು ಮತ್ತು ಮೂಲನಿವಾಸಿಗಳು ಹಳ್ಳಿಯ ಜಾತಿ ವ್ಯವಸ್ಥೆಯಿಂದ ಜಾತಿ ಗುಲಾಮಿ ಪದ್ಧತಿಯಿಂದ ಹೊರಬಂದರೋ ಆವಾಗ ಆ ಶೋಷಣೆಯ ಭಾಗವೇ ಆಗಿದ್ದ 'ರಕ್ಷಣೆ'ಯ ಅಂಶಗಳಿಂದಲೂ ಹೊರದೂಡಲ್ಪಟ್ಟರು. ಜಾತಿ ವ್ಯವಸ್ಥೆಯಲ್ಲಿ ಗುಲಾಮರಾಗಿದ್ದು ಅವರನ್ನು ದೈಹಿಕವಾಗಿ ಸಂಪೂರ್ಣ ಶೋಷಣೆ ಮಾಡುತ್ತಿದ್ದರೂ (ಬ್ರೆಮನ್ 1974: 17) ಅವರನ್ನು ಮಾನಸಿಕವಾಗಿ ಕತ್ತಲಲ್ಲಿಟ್ಟು ತಮ್ಮ ಶೋಷಣೆಯ ಬೇರುಗಳನ್ನು ಲಕ್ಷಿಸದೇ ತಮ್ಮ ಶೋಷಣೆಯೇ ತಮ್ಮ ಜೀವನದ ಅಂತಿಮ ಗುರಿ; ಅದರಲ್ಲಿಯೇ ತಮ್ಮ ಜೀವನದ ಎಲ್ಲಾ ಸಾರ ಮತ್ತು ಆನಂದ ಎಂದು ಅವರು ತಿಳಿದಿದ್ದರೂ ಎಲ್ಲೋ ಒಂದು ಕಡೆ ತಮ್ಮ ಜೀವನದಲ್ಲಿ 'ಭದ್ರತೆ'ಯನ್ನು ಕಾಣುತ್ತಿದ್ದರು. ದನಿ–ಆಳು (patron and client) ಸಂಬಂಧದಲ್ಲಿ ದಲಿತರು ಮತ್ತು ಅವರ ಒಡೆಯರು ಪರಸ್ಪರ ಅವಲಂಬಿತರಾಗಿದ್ದರು. ಒಂದು ರೀತಿಯಲ್ಲಿ ಒಬ್ಬರನ್ನೊಬ್ಬರು ನೆಚ್ಚಿಕೊಂಡಿದ್ದರು (ಬ್ರೆಮನ್ 1974: 17–21).

### 4.7 'ಜಾತಿ ಗುಲಾಮಿ ಪದ್ಧತಿ'ಯಿಂದ ಜೀತ ಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ' ಎಡೆಗೆ

ಇದೆಲ್ಲಾ ಈಗ ಬದಲಾಗತೊಡಗಿತು. ಹಲವಾರು ದಲಿತರು, ಮೂಲನಿವಾಸಿಗಳು ಮೂಲ ಜಾತಿ ಗುಲಾಮಿ ವ್ಯವಸ್ಥೆಯಿಂದ ಹೊರಬಂದರು. 'ಇಂಡೆಂಚರ್ಡ್ ಲೇಬರ್' ಪರಿಣಾಮವಾಗಿ ತಮ್ಮ ಹಳ್ಳಿಯನ್ನು ಬಿಟ್ಟು ದೂರ ಪ್ರದೇಶಗಳಿಗೆ, ದೇಶಗಳಿಗೆ ವಲಸೆ ಹೋಗಲಾರಂಭಿಸಿದರು. ಆದರೆ ಶೋಷಣೆ ಪೂರ್ತಿ ನಿಲ್ಲಲಿಲ್ಲ. ಅದರ ರೂಪ ಮಾತ್ರ ಬದಲಾಗತೊಡಗಿತು. ಹಳ್ಳಿಯಲ್ಲಿ ಜಾತಿ ವ್ಯವಸ್ಥೆಯನ್ನು ಬಿಟ್ಟು ಹೋಗದಿದ್ದರೂ ಅವರ ಆರ್ಥಿಕ ಸಂಬಂಧಗಳಲ್ಲಿ ಸ್ಪಷ್ಟ ಬದಲಾವಣೆಗಳು ಕಾಣತೊಡಗಿದುವು. ಜಾತಿವ್ಯವಸ್ಥೆಯಲ್ಲಿದ್ದ 'ರಕ್ಷಣೆ' ತಾನೇ ತಾನಾಗಿ ಮಾಯವಾಯಿತು. ದಿನಗೂಲಿ ಮಾಡಿ ತನ್ನ ಮತ್ತು ತನ್ನ ಕುಟುಂಬದ ಪೋಷಣೆ ಮಾಡಬೇಕು. ದಿನಗೂಲಿ ಕೊಡುವುದು ಹಣದ ರೂಪದಲ್ಲಿ. ದಿನಗೂಲಿಯನ್ನು ದವಸಧಾನ್ಯಗಳ ರೂಪದಲ್ಲಿ ಕೊಡುವಾಗ ವ್ಯಕ್ತಿ ಮತ್ತವನ ಇಡೀ ಕುಟುಂಬದ ಉದರ ಪೋಷಣೆಯ

ಸಾಧ್ಯತೆಯನ್ನು ಗಮನಿಸಿಯೇ ದವಸಧಾನ್ಯ ರೂಪದ ದಿನಗೂಲಿಯ ಮೊತ್ತವನ್ನು ನಿರ್ಧರಿಸಲಾಗುತ್ತದೆ. ಆದರೆ 'ಹಣ'ದ ಲೆಕ್ಕಚಾರವೇ ತೀರಾ ವ್ಯತಿರಿಕ್ತ. 'ಹಣ'ದ ಪ್ರವೃತ್ತಿ ಏನೆಂದರೆ ಹಣ ಕೈಬಿಡಲು ಒಪ್ಪುವುದಿಲ್ಲ.ಹಣ ಕೂಡಿಡುವ ಹವ್ಯಾಸಕ್ಕೆ ತಾನೇ ತಾನಾಗಿ ಒಗ್ಗಿ ಕೊಳ್ಳುತ್ತದೆ. ಹಣದಿಂದ ಇನ್ನೂ ಜಾಸ್ತಿ ಹಣ ಮಾಡುವ ಲಾಭ ಗಳಿಸುವ ಮನೋಭಾವ ಬೆಳೆಯುತ್ತದೆ. ಮಾನವೀಯತೆ, ನ್ಯಾಯ, ಹಕ್ಕುಗಳ ಗಂಧಗಾಳಿ, ಗಾಳಿ ಮೇಲೇ ತೂರಿ ಹೋಗುತ್ತದೆ. ದವಸಧ್ಯಾನ್ಯಗಳ ರೂಪದಲ್ಲಿ ಊಟೋಪಚಾರಗಳಲ್ಲಿ ಯಥೇಚ್ಛ ದಾನಿಗಳೆನಿಸಿರುವವರು 'ಹಣ' ಕೊಡುವ ಅವಶ್ಯಕತೆ ಇರುವಾಗ ತಾನಾಗಿಯೇ ಜಿಪುಣರಾಗುತ್ತಾರೆ. ಇದು 'ಹಣ'ದ ಮಹಾತ್ಮೆ, ವ್ಯಕ್ತಿ ದೋಷವಲ್ಲ.

ಹಣದ ರೂಪದಲ್ಲಿ ದಿನಗೂಲಿಯನ್ನು ಪಡೆಯುವ ದಲಿತರ, ಮೂಲನಿವಾಸಿಗಳ ಅಥವಾ ಯಾವುದೇ ವ್ಯಕ್ತಿಯ ಪರಿಸ್ಥಿತಿಯನ್ನು ನಾವು ಊಹಿಸಬಹುದು. ಬೆವರನ್ನೇ ಸುರಿಸಿ ಜೀವನ ಮಾಡುವವರಿಗೆ ದಿನಗೂಲಿ ಇಲ್ಲದೆ ಮುಂದಿನ ಊಟಕ್ಕೆ ಗತಿಯಿಲ್ಲ. ಜೀವನಕ್ಕೆ ದುಡಿಮೆ ಇಲ್ಲದೇ ಬೇರೆ ಯಾವುದೇ ಆಧಾರ ಇಲ್ಲ. ದಿನಗೂಲಿ ಕೊಡುವವನಾದರೋ 'ಹಣದ ಮಹಾತ್ಮೆ'ಗೊಳಗಾಗಿ ಎಷ್ಟು ಕಡಿಮೆ ದಿನಗೂಲಿ ನಿಗದಿಪಡಿಸಿ ತನ್ನ ಲಾಭ ಗಳಿಕೆ ಎಷ್ಟು ಹೆಚ್ಚು ಮಾಡಲಿಕ್ಕಾಗುತ್ತದೋ ಅಷ್ಟು ಹೆಚ್ಚು ಮಾಡಲು ಸತತ ಪ್ರಯತ್ನದಲ್ಲಿರುತ್ತಾನೆ. ದಿನಗೂಲಿಯವನ ಅವಶ್ಯಕತೆ, ಅವನ ಕುಟುಂಬದ ಬೇಡಿಕೆಗಳು, ಅವನ ಹೆಂಡತಿ ಮಕ್ಕಳ ಅಗತ್ಯಗಳು ಅವ್ಯಾವುವೂ ಅವನ ಲೆಕ್ಕಕ್ಕೆ ಬರುವುದಿಲ್ಲ. ತನಗಿರುವ ಒಂದೇ ಒಂದು ಉದ್ದೇಶ ಹಣ ತನ್ನ ಕೈಯಲ್ಲಿ ಹೆಚ್ಚೆಚ್ಚು ಉಳಿಯಬೇಕು. ಅದು ಹೆಚ್ಚೆಚ್ಚು ಲಾಭ ಗಳಿಸಬೇಕು. ಲಾಭದ ಹಣವನ್ನು ಇನ್ನೂ ಹೆಚ್ಚು ಹಣ ತರುವ ಉದ್ದಿಮೆಗಳಲ್ಲಿ ತೊಡಗಿಸಿಕೊಳ್ಳಬೇಕು. ಹೀಗೆ ಹಣ ಮತ್ತು ಲಾಭಗಳಿಕೆಯದ ವಿಷವರ್ತುಲದ ಸೆಳೆತದಲ್ಲಿ ಸಿಲುಕಿರುತ್ತಾನೆ. ದಿನಗೂಲಿಯಾಳುಗಳೋ ಹಣ ಪಡೆದು ತನ್ನ ಒಬ್ಬನ ಊಟಕ್ಕೇ ಪರದಾಡುವ ಪರಿಸ್ಥಿತಿಗೆ ಇಳಿಯುತ್ತಾರೆ.ಇನ್ನು ಅವರ ಹೆಂಡಿರು ಮಕ್ಕಳು ಮತ್ತು ಇನ್ನಿತರ ಅವಲಂಬಿತರ ಗತಿಯೇನು?

ಈ ಪರಿಸ್ಥಿಯಲ್ಲಿ 'ನೆರವಿಗೆ' ಬರುವವನೇ ಕೆಲಸದೊಡೆಯ. ದಿನಗೂಲಿಯವನಿಗೆ 'ಸಹಾಯ' ಮಾಡುವ ನೆಪ ಒಡ್ಡಿ ಅವನ ಹಣದ ಕೊರತೆಯನ್ನು ನೀಗಲು ಕೂಲಿಯಾಳುವಿನ ದಿನಗೂಲಿಗೆ ಕೊಡುವ ಹಣವನ್ನು ನ್ಯಾಯಯುತವಾಗಿ ಜಾಸ್ತಿ ಮಾಡಲಿಕ್ಕೆ ಹೋಗುವುದಿಲ್ಲ. ಏನಿದ್ದರೂ ದಿನಗೂಲಿಯನ್ನು ಕಡಿಮೆ ಮಾಡಲಿಕ್ಕೆ ನೋಡುತ್ತಾನೆ ವಿನಃ ಅದನ್ನು ಸಂದರ್ಭೋಚಿತವಾಗಿ ಹೆಚ್ಚು ಮಾಡಲಿಕ್ಕೆ ಮನಸ್ಸು ಮಾಡುವುದಿಲ್ಲ. ಆದರೆ ಇನ್ನೊಂದು 'ಉದಾರ' ಕ್ರಮವನ್ನು ಕೆಲಸದೊಡೆಯ ಬಳಸುತ್ತಾನೆ. ಅದೇನೆಂದರೆ ದಿನಗೂಲಿ ಜಾಸ್ತಿ ಮಾಡುವ ಬದಲು ದಿನಗೂಲಿಯವನ ಅವಶ್ಯಕತೆಗಳನ್ನು ಪೂರೈಸುವಷ್ಟು ಆದರೆ ಒಂದು ಮಿತಿಯಲ್ಲಿ ಮಾತ್ರ ಅವನಿಗೆ ಹಣವನ್ನು ಮುಂಗಡವಾಗಿ ಕೊಡುತ್ತಾನೆ. ಈ ಮುಂಗಡ ಹಣವನ್ನು ಮತ್ತು ಅದಕ್ಕೆ ತಗಲುವ ಬಡ್ಡಿಹಣವನ್ನು ತನ್ನಲ್ಲಿ ಕೂಲಿ ಮಾಡಿಯೇ ತೀರಬೇಕೆಂಬ ಷರತ್ತನ್ನು ಮಾಲಿಕನು ಹಾಕುತ್ತಾನೆ. ಆದರೆ ಕೇವಲ ಕೂಲಿ ಮಾಡಿಯೇ ಜೀವನ ನಡೆಸುವ ವ್ಯಕ್ತಿಗೆ ಆ ಮುಂಗಡ

ಮುಂಗಡವಾಗಿಯೇ ಉಳಿಯುತ್ತದೆ ಮತ್ತು ಅದಕ್ಕೆ ಅದರ ಬಡ್ಡಿ, ಚಕ್ರ ಬಡ್ಡಿ ಸೇರಿ ಅದು ಇನ್ನೂ ದೈತ್ಯಾಕಾರವಾಗಿ ಬೆಳೆಯುತ್ತದೆ ವಿನಃ ಕಡಿಮೆಯಾಗುವುದಿಲ್ಲ. ಜೊತೆಗೆ ವರ್ಷ ಮಧ್ಯೆ ಕುಟುಂಬದ ಇತರ ಸದಸ್ಯರ ಉದರ ಪೋಷಣೆಗೆ ಮತ್ತಿತರ ಅನಿವಾರ್ಯ ಖರ್ಚುಗಳಿಗೆ ಹೊಸ ಮುಂಗಡಗಳನ್ನು ಪಡೆದು ಆ ರೀತಿಯಿಂದಲೂ ಆರಂಭದ ಮುಂಗಡ ಕಡಿಮೆಯಾಗದೇ ಬೆಳೆಯಲಿಕ್ಕೆ ಕಾರಣನಾಗುತ್ತಾನೆ. ಹಲವಾರು ಸಾರಿ ಮಾಲಿಕನ ಹಣದಾಸೆಯು ಅವನಿಂದ ವಿಚಿತ್ರ ಮೋಸ ಮಾಡುವ ಪ್ರವೃತ್ತಿಗೂ ಕೈ ಹಾಕುವಂತೆ ಮಾಡುತ್ತದೆ. ದಿನಗೂಲಿಯವನು ಅನಕ್ಷರಸ್ಥ ಬೇರೆ.ನಂಬಿಕೆ ಇಟ್ಟುಕೊಂಡವ. ಮುಂಗಡವನ್ನು ಬರೆದಿಟ್ಟು ಕೊಂಡಿದ್ದರೆ ಮುಂಗಡದ ಅಂಕಿಯಲ್ಲಿರುವ ಸೊನ್ನೆಗಳು ಮರಿಹಾಕುತ್ತವೆ. ಅಥವಾ ಬಾಯಿ ಮಾತಿನ ಲೆಕ್ಕಾಚಾರಗಳು ತಾನೇ ತಾನಾಗಿ ದಾರಿ ತಪ್ಪುತ್ತವೆ. ಆ ಲೆಕ್ಕಚಾರಗಳನ್ನು ಒಪ್ಪದೇ ಅನಕ್ಷರಸ್ಥ ದಿನಗೂಲಿಯವನಿಗೆ ಬೇರೆ ವಿಧಿಯಿಲ್ಲ.

ಹೀಗೆ ಮುಂಗಡ ಹಣ ಪಡೆದು ವರ್ಷಕ್ಕೆ ಇಷ್ಟು ಹಣ ಎಂಬ ಲೆಕ್ಕದಲ್ಲಿ ಆ ಮುಂಗಡ ಹಣ 'ತೀರುವ' ತನಕ ಮೊದಲಿನಂತೆ ದಿನ ರಾತ್ರಿ ದುಡಿಯುವ ಕೆಲಸದಾಳುಗಳನ್ನು ಜೀತದಾಳುಗಳೆಂದು ಕರೆಯಲಾಯಿತು. ಈ ರೀತಿಯಲ್ಲಿ ಹೀಗೆ 'ಜಾತಿ ಗುಲಾಮಿ ಪದ್ಧತಿ', 'ಜಜ್‌ಮನಿ ಪದ್ಧತಿ' ಹೋಗಿ ಅದರ ಸ್ಥಳದಲ್ಲಿ ಜೀತ ಪದ್ಧತಿ ನೆಲೆಯೂರಿದೆ. 'ಜಾತಿ ಗುಲಾಮಿ ಪದ್ಧತಿ'ಯಲ್ಲಿ 'ಗುಲಾಮ'ರನ್ನು ಅವರ ಜಾತಿಯಿಂದಲೇ ಕರೆಯುತ್ತಿದ್ದರು. ಉದಾಹರಣೆಗಾಗಿ ಕೇರಳ (ಮಲಬಾರ್)ದಲ್ಲಿ ಚೆರುಮಾನ್; ತಮಿಳು ನಾಡಿನ ಪಲ್ಲನ್ ಅಥವಾ ಪುಲ್ಲರ್ ಅಥವಾ ಪರಿಯರ್; ದಕ್ಷಿಣ ಕನ್ನಡದ ಧೇಡ್ ಅಥವಾ ಹೊಲೆಯ ಇತ್ಯಾದಿ (ಕುಮಾರ್ 1965: 49–63). ಜೀತ ಪದ್ಧತಿಯಲ್ಲಿ 'ಮುಂಗಡ' ಅಥವಾ 'ಸಾಲ' ಪಡೆಯುವುದು ಮುಖ್ಯವೆನಿಸತ್ತದೆ. ಯಾರಾದರೂ ಮುಂಗಡ ಅಥವಾ ಸಾಲ ಪಡೆದು ಜೀತಕ್ಕಿರಬಹುದಾದರೂ ದಲಿತರೇ ಹೆಚ್ಚು ಹೆಚ್ಚಾಗಿ ಇಂತಹ ಒಪ್ಪಗಳಿಗೆ 'ಬಲಿ'ಯಾಗುತ್ತಿದ್ದರು. ತೋರಿಕೆಗೆ ಮಾತ್ರ ಇದು ಬದಲಾದ ರೂಪ. ಮೊದಲಿನಂತೆ '24 ಗಂಟೆ'ಗಳಿಗೂ ಅವರು ದುಡಿಯಬೇಕಾಗಿತ್ತು. ಹೊಲಗದ್ದೆಗಳಲ್ಲಿ ಬೆವರು ಸುರಿಸುವ ಕೆಲಸ ಮಾಡಬೇಕಾಗಿತ್ತು; ಅದೇ 'ಕೀಳು' ಎನಿಸುವ ಕೆಲಸಗಳನ್ನು ಮಾಡಬೇಕಾಗಿತ್ತು. ಆದರೆ ಮೊದಲು ಜಾತಿ ಹೆಸರೇ ಮುಖ್ಯವಾದರೆ ಈಗ 'ಜೀತ' ಎಂಬ ಹಣ ಸೂಚಕ ಪದವೇ ಹೊಸ ಕೆಲಸದ ಸಂಬಂಧದ ಸೂಚಕ. ಮೂರನೇ ಅಧ್ಯಾಯದಲ್ಲಿ 'ಜೀತಂ' ಅಂದರೆ ಸಂಬಳ ಎಂದು ತೆಲುಗಿನಲ್ಲಿ ಅರ್ಥ ಕೊಡುವುದನ್ನು ಪ್ರಸ್ತಾಪಿಸಿದ್ದೇವೆ. ಕನ್ನಡದಲ್ಲಿಯೂ ಜೀತದಾಳುಗಳಿಗೆ ಸಂಬಳದಾಳು ಎಂತಲೂ ಕರೆಯುತ್ತಾರೆ. ಆದ್ದರಿಂದ 'ಜೀತ', 'ಜೀತದಾಳು', 'ಜೀತ ಪದ್ಧತಿ' ಎಂಬ ಪದಗಳು ಮತ್ತವನ್ನು ಸೂಚಿಸುವ ದುಡಿಮೆಯ ವ್ಯವಸ್ಥೆಯು ಬ್ರಿಟಿಷರು ಮೇಲೆ ವಿವರಿಸದ ಆರ್ಥಿಕ ಬದಾವಣೆ ತಂದು ದವಸಧಾನ್ಯಗಳಲ್ಲಿ ಕೊಡುತ್ತಿದ್ದ 'ಕೂಲಿ'ಯನ್ನು ಹಣದ ರೂಪದಲ್ಲಿ ಕೊಡಲು ಪ್ರಾರಂಭವಾದ ಕಾಲದಿಂದ ಅಂದರೆ 18ನೇ ಶತಮಾನದ ಕೊನೆಯ ದಶಕಗಳಿಂದಲೇ ರೂಢಿಗತವಾಯಿತು ಎಂದು ಧೃಡವಾಗಿ ಹೇಳಬಹುದು.

'ಜಾತಿ ಗುಲಾಮಿ ಪದ್ಧತಿ' ಸೂಚಿಸಲು ಜಾತಿವಾಚಕಗಳು ಮುಖ್ಯವಾಗಿದ್ದರ ಜೊತೆಗೆ ಇನ್ನೊಂದು ರೀತಿಯಲ್ಲಿ 'ಬಂಧನ' 'ಮಾಲಿಕನ ಒತ್ತೆಯಾಳು' ಎಂದು ಸೂಚಿಸುವ ಪದಪುಂಜಗಳು ಬಳಕೆಯಲಿದ್ದವು. ಅವು ಜಾತಿವಾಚಕಗಳಷ್ಟೇ ಪ್ರಮುಖವಾಗಿ ಚಲಾವಣೆಯಲ್ಲಿದ್ದವು. ಅವುಗಳಲ್ಲಿ ಕೆಲವು ಈಗಲೂ ಬಳಕೆಯಲ್ಲಿವೆ; ಕೆಲವು ಇಲ್ಲ: ಕೊಡಗಿನಲ್ಲಿಯ ಭೂಮಿ ಜಮ್ಮದಾಳು, ಒಕ್ಕಲು ಜಮ್ಮದಾಳು (ವಿಜಯ 1993: 116–17); ದಕ್ಷಿಣ ಕನ್ನಡದ ಹುಟ್ಟಾಳು, ಮಣ್ಣಾಳು, ಮೂಲ ಮುನಿಷೇರ್, ಮೂಲದ ಹೊಲೆಯ, ಸಾಲದ ಹೊಲೆಯ (ಕುಮಾರ್ 1965: 39, 40); ಉತ್ತರ ಕರ್ನಾಟಕದ ಮನೆಮಗ, ಮನೆ ಮಾದಿಗ, ಮನೆ ಹೊಲೆಯ, ಕಟ್ಟಾಳು, ತಮಿಳು ನಾಡಿನ ಪನ್ನೈಯಾಲ್ (ಪನ್ನೈ – ಹೊಲ), ಪಡಿಯಾಲ್ (ಪಡಿ – ದಿನದ ಪಡಿತರ), ಅಡಿಮೈ (ಗುಲಾಮ) (ಕುಮಾರ್ 1965: 41–45); ಕೇರಳದ ವಲ್ಲಿಯಾಲ್ (ಪಡಯಾಲ್), ಆದಿಮ (ಕುಮಾರ್ 1965: 41), ತೆಲುಗು ದೇಶದ ಕಾಸಾಲು, ಪಾಲಾಲು, ಮುಸ್ಲಿಂರಲ್ಲಿಯ ಗುಲಾಂ (ಕುಮಾರ್ 1965: 46), ಗುಜರಾತಿನ ಹಾಲಿ, ಹಾಲಿಪ್ರಥ (ಬ್ರೆಮೆನ್ 1974: 7, 36) ಇತ್ಯಾದಿ. ಈ ಹೆಸರುಗಳು ಬೆಳಗಾವಿ ಜಿಲ್ಲೆಯಲ್ಲಿ 'ಬಿಟ್ಟಿ ಚಾಕ್ರಿ'ಗೆ ಬಳಸುವ ಪರ್ಯಾಯ ಪದಗಳನ್ನೂ ಹೋಲುತ್ತವೆ: ಮನೆ ಹೊಲೆಯ, ಮನೆ ಮಾದಿಗ, ಮನೆ ಮಗ, ಕಟ್ಟಾಳು ಇತ್ಯಾದಿ. ಅಂದರೆ 'ಬಿಟ್ಟಿ ಚಾಕ್ರಿ', ಜೀತಪದ್ಧತಿ, ಜಾತಿ ಗುಲಾಮಿ ಪದ್ಧತಿ (ಅಸ್ಪೃಶ್ಯ ಜಾತಿಯ ಕೆಲಸಗಳು) ಮೂಲಭೂತವಾಗಿ ಒಂದೇ ವ್ಯವಸ್ಥೆ ಅಥವಾ ಪದ್ಧತಿಯ ಬೇರೆ ಬೇರೆ ಮುಖಗಳನ್ನು ಮತ್ತು ಬೇರೆ ಬೇರೆ ಕಾಲಘಟ್ಟಗಳಲ್ಲಿ ಬದಲಾಗುತ್ತಿರುವ ಆದರೆ ಮೂಲಭೂತವಾಗಿ ಒಂದೇ ಮೂಲದಿಂದ ಉದ್ಭವಿಸಿದ 'ಬಂಧನ'ದ ದುಡಿಮೆ ಅಥವಾ ಬಲಾತ್ಕಾರ'ದ ದುಡಿಮೆಯನ್ನು ತೋರಿಸುತ್ತಿರಬಹುದು.

ಕರ್ನಾಟಕದಲ್ಲಿ ಬೇರೆ ಬೇರೆ ಜಿಲ್ಲೆಗಳಲ್ಲಿ ಈಗಲೂ ಅಲ್ಲಲ್ಲಿ ಕಂಡುಬರುತ್ತಿರುವ 'ಬಿಟ್ಟಿ ಚಾಕ್ರಿ'ಗೂ 'ಜಾತಿ ಗುಲಾಮಿ ಪದ್ಧತಿ'ಗೂ ಜೀತ ಪದ್ಧತಿಗೂ ಸಂಬಂಧವಿದೆಯೇ? ಒಟ್ಟಾರೆಯಾಗಿ ಹೇಳುವುದಾದರೆ, 'ಬಿಟ್ಟಿ ಚಾಕ್ರಿ' ಮತ್ತು ಜೀತ ಪದ್ಧತಿಗಳಿಗೆ ಮೂಲ ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿರುವ 'ಜಾತಿ ಗುಲಾಮಿ ಪದ್ಧತಿ'. 'ಜಾತಿ ಗುಲಾಮಿ ಪದ್ಧತಿ'ಯು ಪೂರ್ತಿಯಾಗಿ ನಾಶಗೊಂಡರೂ ಅಲ್ಲಲ್ಲಿ 'ಬಿಟ್ಟಿ ಚಾಕ್ರಿ' ರೂಪದಲ್ಲಿ ಅದು ಮುಂದುವರಿಯುತ್ತಿದೆ. 'ಜಾತಿ ಗುಲಾಮಿ ವ್ಯವಸ್ಥೆ'ಯ ಭಾಗವಾಗಿದ್ದ ದಲಿತರಿಗೆ ಸಂಬಂಧಪಟ್ಟ 'ಜಜ್‌ಮನಿ' ಪದ್ಧತಿಯ ಅವಶೇಷ ಎಂದು ತಿಳಿದುಕೊಳ್ಳಬುಹುದು. ಜೀತ ಪದ್ಧತಿಯು 'ಜಾತಿ ಗುಲಾಮಿ ಪದ್ಧತಿ'ಯ ಮುಂದುವರಿದ ರೂಪ. 'ಜಾತಿ ಗುಲಾಮಿ ಪದ್ಧತಿ'ಯಿಂದ ಹುಟ್ಟಿ ಕೊಂಡಿದ್ದರೂ ಅದು ಸಂಪೂರ್ಣವಾಗಿ ಬ್ರಿಟಿಷರ ಆರ್ಥಿಕ ನೀತಿನಿಯಮಗಳ ಪರಿಣಾಮದಿಂದ ಬದಲಾವಣೆಯಾಗಿ ಬೆಳೆದು ಬಂದಿರುವ ವ್ಯವಸ್ಥೆ ಎಂದು ಮೇಲೆ ಕಂಡುಕೊಂಡಿದ್ದೇವೆ. 'ಬಿಟ್ಟಿ ಚಾಕ್ರಿ' ಬ್ರಿಟಿಷರ ನೀತಿನಿಯಮಗಳಿಂದ ಹುಟ್ಟಿ ಬಂದುದಲ್ಲ. ಬದಲಿಗೆ ಅದು ಜಾತಿ ಗುಲಾಮಿ ವ್ಯವಸ್ಥೆಯ ಪಳೆಯುಳಿಕೆ. 'ಜಾತಿ ಗುಲಾಮಿ ವ್ಯವಸ್ಥೆ' ಇನ್ನಿಲ್ಲ. 'ಬಿಟ್ಟಿ ಚಾಕ್ರಿ'ಯ ಬೇರುಗಳನ್ನು ಹುಡುಕಿಹೋದರೆ 'ಜಾತಿ ಗುಲಾಮಿ ವ್ಯವಸ್ಥೆ'ಯ ವಿರಾಟ್ ರೂಪವನ್ನು ಬಯಲಿಗೆಳೆಯುವ ಸಾಧ್ಯತೆ ಇದೆ. ಜೊತೆಗೆ 'ಬಿಟ್ಟಿ ಚಾಕ್ರಿ'ಯನ್ನು ಅರ್ಥಮಾಡಿಕೊಂಡರೆ ಜೀತ ಪದ್ಧತಿಗೂ 'ಜಾತಿ ಗುಲಾಮಿ ವ್ಯವಸ್ಥೆ'ಗೂ ಇರುವ ನೇರ ನಂಟನ್ನು ಸ್ಪಷ್ಟಪಡಿಸಬಹುದು. ಆಗ ಜೀತ

ವ್ಯವಸ್ಥೆ ಏಕೆ ಕೇವಲ ಬಡತನದ ಪ್ರಶ್ನೆ ಅಲ್ಲ. ಭಾರತ ದೇಶದಲ್ಲಿ ಮಾತ್ರವಲ್ಲ ಇಡೀ ಭರತ ಖಂಡದಲ್ಲಿಯೇ ಅದು ಜಾತಿಯ ಪ್ರಶ್ನೆಯೂ ಹೌದು. ಜೀತ ಪದ್ಧತಿ ರದ್ದತಿಯು ಜಾತಿ ವಿನಾಶದ ಒಂದು ಮುಖ್ಯ ಪ್ರಯತ್ನವೂ ಆಗುತ್ತದೆ.

ಜೀತ ಪದ್ಧತಿಯನ್ನು ಕರ್ನಾಟಕದ ಮೂಲೆಮೂಲೆಗಳಲ್ಲೂ ಕಾಣಬಹುದು. ಸರ್ಕಾರವು ಎಷ್ಟು ಅಲ್ಲಗಳೆದರೂ ಜೀತ ಪದ್ಧತಿ ಅತಿ ದೊಡ್ಡ ಪ್ರಮಾಣದಲ್ಲಿ ಇದೆ ಎಂದು ರಾಷ್ಟ್ರೀಯ ಅಂತಾರಾಷ್ಟ್ರೀಯ ಸಂಘಟನೆಗಳು ಅಂದಾಜು ಮಾಡುತ್ತಿವೆ. ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯು ದಕ್ಷಿಣ ಏಷ್ಯಾದಲ್ಲಿ 12 ದಶ ಲಕ್ಷ ಜೀತದಾಳುಗಳಿರುವ ಅಂದಾಜನ್ನು 2012ರಲ್ಲಿ ಮಾಡಿತ್ತು (ಐಎಲ್ಒ. 2012: 41). 2016ರಲ್ಲಿ ವಾಕ್ ಫ್ರಿ ಎಂಬ ಅಂತಾರಾಷ್ಟ್ರೀಯ ಸಂಸ್ಥೆಯು ಪ್ರಕಟಿಸಿದ ಗ್ಲೋಬಲ್ ಸ್ಲೇವರಿ ಇಂಡೆಕ್ಸ್‌ನಲ್ಲಿ ಭಾರತದಲ್ಲಿ ಸುಮಾರು 18.4 ದಶ ಲಕ್ಷ ಜೀತದಾಳುಗಳಿರುವ ಅಂದಾಜನ್ನು ಮಾಡಲಾಗಿದೆ (ಜಿ.ಎಸ್.ಐ 2016: 30). ಅದೇ ವರ್ಷ ಭಾರತದ ಸಂಸ್ಥೆಯೊಂದು ಪ್ರಕಟಿಸಿದ ಇಂಡಿಯಾ ಎಕ್ಸ್‌ಕ್ಲ್ಯೂಜನ್ ರಿಪೋರ್ಟ್ 2013–2014ರಲ್ಲಿ ಇಡೀ ದೇಶದಲ್ಲಿ ಒಟ್ಟು ಕಾರ್ಮಿಕರ ಸಂಖ್ಯೆಯ 10% ಮಂದಿ ಜೀತದಾಳುಗಳಾಗಿರುತ್ತಾರೆ ಎಂಬ ಒಂದು ಅಂದಾಜಿನ ಪ್ರಸ್ತಾಪವಿದೆ (ಸೆತಿಯಾ 2014: 203–2019). 2016ರಲ್ಲಿ ವಾಕ್ ಫ್ರಿ ಫೌಂಡೇಶನ್ ಪ್ರಕಟಿಸಿದ 'ದಿ ಗ್ಲೋಬಲ್ ಸ್ಲೇವರಿ ಇಂಡೆಕ್ಸ್' ಪ್ರಕಾರ ಭಾರತದಲ್ಲಿ 1,83,54,700 (ಒಟ್ಟು ಜನಸಂಖ್ಯೆಯ 1.4%) ಮಂದಿ ಆಧುನಿಕ ಗುಲಾಮ ಪದ್ಧತಿಯಲ್ಲಿದ್ದರು (30, 108–117). 2017ರ ಜುಲೈ 14ರಂದು ಕೇಂದ್ರೀಯ ಕಾರ್ಮಿಕ ಮತ್ತು ಉದ್ಯೋಗ ಇಲಾಖಾ ಮಂತ್ರಿಗಳು ಸಂಸತ್ಸಭೆಯಲ್ಲಿ ದೇಶದಲ್ಲಿ 184 ಲಕ್ಷ ಜೀತದಾಳುಗಳಿರುವ ಬಗ್ಗೆ ಹೇಳಿಕೆ ನೀಡಿ ಅವರನ್ನೆಲ್ಲಾ 2030ರೊಳಗೆ ಬಿಡುಗಡೆಗೊಳಿಸಿ ಪುನರ್ವಸತಿಗೊಳಿಸುವ ಆಶ್ವಾಸನೆ ನೀಡಿದ್ದರು[75]. ಆ ಸಂಖ್ಯೆ ಆಧರಿಸಿ ಹೇಳುವುದಾದರೆ ದೇಶದ ಜನಸಂಖ್ಯೆಯ 1.4% ಜನರು ಜೀತದಾಳುಗಳು ಎಂದಾಯಿತು. ಕರ್ನಾಟಕಕ್ಕೆ ಅನ್ವಯಿಸಿದರೆ ಸುಮಾರು ಆರು ಕೋಟಿ ಒಟ್ಟು ಜನಸಂಖ್ಯೆಯ 1.4% ಅಂದರೆ ಸುಮಾರು ಎಂಟುವರೆ ಲಕ್ಷ ಮಂದಿ ಎಂದಾಯಿತು.

ಇತ್ತೀಚೆಗೆ ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮುಖ್ಯವಾಗಿ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 'ಬಿಟ್ಟಿ ಚಾಕ್ರಿ' ಇರುವುದು ಗಮನಕ್ಕೆ ಬಂದಿದೆ. ಅದರ ಬಗ್ಗೆ ಇನ್ನೂ ಸ್ವಲ್ಪ ವಿಚಾರಿಸಲಾಗಿ ಉತ್ತರ ಕರ್ನಾಟಕದ ಎಲ್ಲಾ 15 ಜಿಲ್ಲೆಗಳಲ್ಲಿಯೂ ಅದು ಅಸ್ತಿತ್ವದಲ್ಲಿರುವುದು ಬೆಳಕಿಗೆ ಬಂದಿದೆ – ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಬಿಜಾಪುರ, ಬಾಗಲಕೋಟೆ, ಬೆಳಗಾವಿ, ಗದಗ, ಧಾರವಾಡ, ಹಾವೇರಿ, ಉತ್ತರ ಕನ್ನಡ, ದಾವಣಗೆರೆ ಮತ್ತು ಚಿತ್ರದುರ್ಗ. ಆದರೆ ಅದು ಕೇವಲ ಉತ್ತರ ಕರ್ನಾಟಕದಲ್ಲಿದ್ದು ದಕ್ಷಿಣ ಕರ್ನಾಟಕದ ಯಾವುದೇ ಜಿಲ್ಲೆಯಲ್ಲಿ ಕಂಡು ಬರುತ್ತಿಲ್ಲ. ದಕ್ಷಿಣ ಕರ್ನಾಟಕದಲ್ಲಿ 'ಬಿಟ್ಟಿ ಚಾಕ್ರಿ' 5–10 ವರ್ಷಗಳ ಹಿಂದೆ ಇತ್ತು ಎಂದು ನನಗೆ ಹಲವಾರು ಮಂದಿ ದಲಿತ

---

75 ಪತ್ರಿಕೆ ವರದಿ ಜುಲೈ 21, 2017

ಮುಖಂಡರು ತಿಳಿಸಿದ್ದಾರೆ. ತಮಟೆ ಬಾರಿಸುವಿಕೆಗೆ ಸಂಬಂಧಪಟ್ಟಂತೆ 'ತಮಟೆ ಚಾಕರಿ' ಎಂಬ ಪದ್ಧತಿ ಈಗಲೂ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಇದೆ ಎಂಬುದು ತಿಳಿದು ಬಂದಿದೆ.

'ಬಿಟ್ಟಿ ಚಾಕ್ರಿ' ಮಾಡುವವರನ್ನು ಜೀತದಾಳುಗಳನ್ನಾಗಿ ಇಷ್ಟರ ವರೆಗೆ ಪರಿಗಣಿಸಿಲ್ಲ. ಅವರು ಜೀತ ಪದ್ಧತಿ ಕಾನೂನಿನಡಿಯ ವ್ಯಾಖ್ಯಾನದೊಳಗೆ ಬರುತ್ತಾರೆಯೇ ಎಂದು ಇನ್ನೂ ಪರೀಕ್ಷಿಸಬೇಕಾಗಿದೆ. ಅಲ್ಲಲ್ಲಿ ಹಳ್ಳಿಗಳಲ್ಲಿ ಕೆಲವು ದಲಿತ ಕುಟುಂಬಗಳು ಈಗಲೂ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿ ಕೊಂಡಿವೆ. ಪ್ರಸ್ತುತ ಅಧ್ಯಯನಕ್ಕೆ ಆರಿಸಿದ ಹಳ್ಳಿಗಳಂತೆ ಕೆಲವು ಹಳ್ಳಿಗಳಲ್ಲಿ ದಲಿತ ಕೇರಿಯ ಎಲ್ಲಾ ಕುಟುಂಬಗಳು 'ಬಿಟ್ಟಿ ಚಾಕ್ರಿ' ಮಾಡುವುದನ್ನು ಕಾಣುತ್ತೇವೆ. 'ಬಿಟ್ಟಿ ಚಾಕ್ರಿ' ಮಾಡುವ ನಿರ್ಬಂಧವಿರುವ ದಲಿತ ಕುಟುಂಬದ ಒಬ್ಬ ವ್ಯಕ್ತಿಯು ಆ ಹಳ್ಳಿಯ ದೊಡ್ಡ ರೈತ ಕುಟುಂಬವೊಂದಕ್ಕೆ ದಿವಸಾಗಲೂ ಬೆಳಿಗ್ಗೆ ಹೊತ್ತು ಸೇವೆ ಸಲ್ಲಿಸಬೇಕು. ಮುಂಜಾನೆ ಎದ್ದು ಹಟ್ಟಿಯಲ್ಲಿ ಸೆಗಣಿ ಬಾಚಿ ಅದನ್ನು ಸ್ವಚ್ಚ ಮಾಡಿ ಆಕಳುಗಳ ಸೇವೆ ಮಾಡಿ ಮನೆಯಲ್ಲಿಯ ಸ್ವಚ್ಚತೆಯ ಕೆಲಸಗಳನ್ನೂ ಮಾಡಬೇಕಾಗುತ್ತದೆ. ಆ ಕೆಲಸ ಮಧ್ಯಾಹ್ನ ತನಕವೂ ಹೋಗಬಹುದು. ಕೆಲಸದ ನಂತರ ತಂಗಳು ರೊಟ್ಟಿಗಳ ಪ್ರಸಾದ ಸಿಗುತ್ತದೆ. ಪುನಃ ಮಧ್ಯಾಹ್ನ ನಂತರ ಸಂಜೆಯಿಂದ ರಾತ್ರಿ ವರೆಗೆ ಕಾಳುಕಡ್ಡಿ ಹಸನು ಮಾಡುವ ಮತ್ತಿತರ ಮನೆಗೆಲಸಗಳಿರುತ್ತವೆ. ಈ ಎಲ್ಲಾ ಕೆಲಸಗಳಿಗೆ ಪ್ರತ್ಯೇಕ ದಿನಗೂಲಿ ಇಲ್ಲ. ವರ್ಷಕ್ಕೊಮ್ಮೆ ಸುಗ್ಗಿಕಾಲದಲ್ಲಿ 2–3 ಮೂಟೆ ಜೋಳವನ್ನು ಕೊಡಲಾಗುತ್ತದೆ. ಕೆಲವೊಂದು ಕಡೆ ಬೆಳಗಿನ ಕೆಲಸವನ್ನು ಒಂಬತ್ತು ಗಂಟೆಗೆ ಮುಗಿಸಿ ಕೂಲಿ ಕೆಲಸಕ್ಕೆ ಹೋಗುವ ಸಾಧ್ಯತೆ ಇದೆ.

# ಅಧ್ಯಾಯ 5

## ಜೀತ ಪದ್ಧತಿ ರದ್ದತಿ ಕಾನೂನು 1976ರ ಅನ್ವಯ 'ಬಿಟ್ಟಿ ಚಾಕ್ರಿ'

# ಅಧ್ಯಾಯ ಐದು

## ಜೀತ ಪದ್ಧತಿ ರದ್ದತಿ ಕಾನೂನು 1976[76]ರ ಅನ್ವಯ 'ಬಿಟ್ಟಿ ಚಾಕ್ರಿ'

ಜೀತ ಪದ್ಧತಿಗೆ ಸ್ಪಷ್ಟವಾಗಿ ಜಾತಿಯ ಹಿನ್ನೆಲೆಯಿರುವುದರಿಂದ, ಜಾತಿ ವ್ಯವಸ್ಥೆಯ ಜೊತೆಜೊತೆಗೇ ಅದನ್ನು ಅರ್ಥೈಸುವ ಪ್ರಯತ್ನವನ್ನು ಹಿಂದಿನ ಅಧ್ಯಾಯದಲ್ಲಿ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಜೀತ ಕಾನೂನಿನ ಚೌಕಟ್ಟಿನಲ್ಲಿ ಅದನ್ನು ಅರ್ಥೈಸಲು ಪ್ರಯತ್ನಿಸಲಾಗುವುದು.

### 5.1 ಜೀತ ಕಾನೂನಿನ ಮುಂಚೆ ನಡೆದ ಗುಲಾಮಿ ಪದ್ಧತಿ ಮತ್ತು ಜೀತ ನಿರ್ಮೂಲನೆ ಕುರಿತ ಕಾನೂನಾತ್ಮಕ ಪ್ರಯತ್ನಗಳು

ಜೀತ ಕಾನೂನಿಗೆ ದೊಡ್ಡ ಇತಿಹಾಸವಿದೆ. ಭಾರತದಲ್ಲಿ ಕಾನೂನು ಮಾನ್ಯವಾದ ಗುಲಾಮಿ ಪದ್ಧತಿ ಜೊತೆ ಗುಲಾಮಿ ಪದ್ಧತಿ ಎಂದು ಕಾನೂನಿನಲ್ಲಿ ಪರಿಗಣಿಸದಿದ್ದರೂ ಕ್ರಿಸ್ತ ಶಕದ ಆದಿ ಅಥವಾ ಅದಕ್ಕಿಂತ ಸ್ವಲ್ಪ ಮುಂಚೆನಿಂದಲೂ ಪ್ರಚಲಿತವಿದ್ದ ಸಮಾಜದ ಸಂರಚನೆಯೇ ಆಗಿದ್ದ ಜಾತಿ ವ್ಯವಸ್ಥೆಯಲ್ಲಿ ಪೂರ್ತಿಯಾಗಿ ದಲಿತರ ಮತ್ತು ಸುಮಾರಾಗಿ ಮೂಲನಿವಾಸಿಗಳ ಜೀವನವು ಒಂದು ರೀತಿಯ ಗುಲಾಮಿ ಪದ್ಧತಿಗೆ ಹೋಲುತ್ತಿದ್ದು ಅದನ್ನು 'ಜಾತಿ ಗುಲಾಮಿ ವ್ಯವಸ್ಥೆ' ಎಂದು ಅಧ್ಯಾಯ ನಾಲ್ಕರಲ್ಲಿ ವಿಶದ ಪಡಿಸಲಾಗಿದೆ. ಕಾನೂನು ಮಾನ್ಯ ಮತ್ತು ಸಮಾಜ ಅಂಗೀಕೃತವಾಗಿದ್ದ ಎರಡು ರೀತಿಯ ಗುಲಾಮಿ ಪದ್ಧತಿಗಳು ಭಾರತದಲ್ಲಿದ್ದುವು ಎಂದು ನಾವು ತಿಳಿದುಕೊಳ್ಳಬೇಕು. ಎರಡೂ ಪದ್ಧತಿ ಅಥವಾ ವ್ಯವಸ್ಥೆಗಳನ್ನು ಸಮೀಕರಿಸಿದರೆ ಗುಲಾಮಿ ವ್ಯವಸ್ಥೆ ಮತ್ತು ಜೀತ ಪದ್ಧತಿಯ ಪೂರ್ಣ ರೂಪ ನಮಗೆ ಸಿಗದು[77].

ಜಾತಿ ವ್ಯವಸ್ಥೆಗೆ ಪ್ರತಿರೋಧ ಮತ್ತು ಪರ್ಯಾಯ ಸಮಾಜ ಕಟ್ಟುವ ಪ್ರಯತ್ನಗಳು ಕ್ರಿ. ಪೂರ್ವ 6ನೇ ಶತಮಾನದಿಂದ ಬುದ್ಧ ಮತ್ತವರ ಅನುಯಾಯಿಗಳಿಂದ, ತದನಂತರ ಕ್ರಿ.ಶ. 12ನೇ ಶತಮಾನದಲ್ಲಿ ಬಸವಣ್ಣನವರಿಂದ ನಡೆದವು. ಆಮೇಲೆ 17ನೇ ಶತಮಾನದಿಂದೀಚೆಗೆ ಭಕ್ತಿ ಚಳವಳಿಯ ನೇತಾರರಿಂದ ಮತ್ತು 18ನೇ ಶತಮಾನದಿಂದೀಚೆಗೆ ಹಲವಾರು ಸುಧಾರಣಾ ಪಂಥಗಳಿಂದ ಹಿಂದು ಧರ್ಮ ಸುಧಾರಣೆಗೆ ವಿವಿಧ ಪ್ರಯತ್ನಗಳು ಜರುಗಿದುವು. 20ನೇ ಶತಮಾನದಲ್ಲಿ ಜಾತಿ ವಿನಾಶದ ಬಗ್ಗೆ ಅಂಬೇಡ್ಕರ್‌ರವರು ಅಮೋಘ ಚಿಂತನೆ ನಡೆಸಿ ವಿಶಿಷ್ಟ ಆಂದೋಲನಗಳನ್ನು ಮುನ್ನಡೆಸಿದರು.

ಗುಲಾಮಿ ವ್ಯವಸ್ಥೆ ಮತ್ತು ಜೀತ ಪದ್ಧತಿ ಈ ಎರಡೂ ಪದ್ಧತಿಗಳು ಬ್ರಿಟಿಷರ ಆಳ್ವಿಕೆಯ ಕಾಲದಿಂದ ಚರ್ಚೆಗೆ ಗುರಿಯಾಗಿ ಅವನ್ನು ವಿರೋಧಿಸುವ, ತಡೆಗಟ್ಟುವ ಮತ್ತು ನಿಷೇಧಿಸುವ ಪ್ರಯತ್ನಗಳೂ ಆಗ

---

76 ಇನ್ನು ಮುಂದೆ ಜೀತ ಕಾನೂನು ಎಂತಲೇ ಉದ್ಧರಿಸಲಾಗುವುದು

77 ಜೀತ ಪದ್ಧತಿ ಬಗ್ಗೆ ಯಾವುದೇ ಬರವಣಿಗೆ ನೋಡಿದರೂ ಅದರಲ್ಲಿ ಉಲ್ಲೇಖವಾಗಿರುವುದು ಅದು ಬಹಳ ಪುರಾತನ ಸಮಸ್ಯೆ ಆಗಿದ್ದು ಅನಾದಿ ಕಾಲದಿಂದ ಈ ತನಕವೂ ನಿರಂತರವಾಗಿ ನಡೆದುಕೊಂಡು ಬಂದಿರುವ ಆಚರಣೆ ಎಂದು ವರ್ಣಿಸಲಾಗಿದೆ (ಉದಾ: ಪಟ್‌ನ್ಯಾಕ್ ಎಂಡ್ ದಿಂಗ್ವಾನೇ 1985). ಆದರೆ ಯಾರೂ ಜಾತಿ ವ್ಯವಸ್ಥೆಯಲ್ಲಿಯ ದಲಿತರ ಸೇವೆ ಗುಲಾಮ ಸೇವೆಗೆ ಸಮಾನ ಅಥವಾ ಅದಕ್ಕಿಂತ ಹೆಚ್ಚಿನ ಕೀಳು ಮಟ್ಟದ್ದು ಮತ್ತು ಕ್ರೂರ ಎಂದು ಪರಿಗಣಿಸುವುದಿಲ್ಲ. ಕೆಲವೇ ಕೆಲವು ಮಂದಿ ಮಾತ್ರ ಅದನ್ನು 'ಜಾತಿ ಗುಲಾಮಿ ಪದ್ಧತಿ' ಪ್ರಸ್ತಾಪ ಮಾಡಿದ್ದಾರೆ (ಉದಾ: ಕುಮಾರ್ 1998ಬಿ)

ಆರಂಭವಾದವು. ಬ್ರಿಟಿಷರ ಆಳ್ವಿಕೆಯ ಕಾಲದ ನಂತರವೂ ಅವು ಮುನ್ನಡೆದಿವೆ. ಆದರೆ ಈ ಎರಡು ಪದ್ಧತಿಗಳ ವ್ಯತ್ಯಾಸಗಳನ್ನು ಪರಿಗಣನೆಗೆ ತೆಗೆದು ಕೊಂಡಿರದ್ದರಿಂದ ಭಾರತದಲ್ಲಿ ಜೀತ ಪದ್ಧತಿಯನ್ನು ಅರ್ಥೈಸುವ ಹಾಗೂ ನಿಷೇಧಿಸುವ ಪ್ರಯತ್ನಗಳು ಗೊಂದಲಮಯವಾಗಿವೆ.

18ನೇ ಕೊನೇ ಭಾಗದಿಂದ ಇಂಗ್ಲೆಂಡ್ ಮತ್ತು ಅಮೇರಿಕಗಳಲ್ಲಿ ಆರಂಭವಾದ ಗುಲಾಮಿ ನಿರ್ಮೂಲನೆ ಆಂದೋಲನ[78]ದ ಪರಿಣಾಮವಾಗಿ 1843ರಲ್ಲಿ ಭಾರತದಲ್ಲೂ ಗುಲಾಮಿ ನಿಷೇಧ ಕಾನೂನು ಜ್ಯಾರಿಗೆ ಬಂತು. ಅದರ ಪರಿಣಾಮವಾಗಿ ಭಾರತಕ್ಕೆ ಸಂಬಂಧಪಟ್ಟಂತೆ ಅಂತಾರಾಷ್ಟ್ರೀಯ ಗುಲಾಮಿ ವ್ಯಾಪಾರ ಮತ್ತು ಗುಲಾಮಿ ಪದ್ಧತಿಗಳಿಗೆ ನಿರ್ಬಂಧ ಬಂತು. ತದನಂತರ 1860ರಲ್ಲಿ ಜ್ಯಾರಿಗೊಂಡ ಭಾರತೀಯ ಅಪರಾಧೀಯ ಸಂಹಿತೆಯಲ್ಲೂ ಗುಲಾಮಿ ಪದ್ಧತಿ (ಅನುಚ್ಛೇದ 370, 371) ಮತ್ತು ಕಾನೂನು ಬಾಹಿರ ಬಲಾತ್ಕಾರದ ದುಡಿಮೆ (ಅನುಚ್ಛೇದ 374)ಗಳನ್ನು ನಿಷೇಧಿಸಿ ಅವುಗಳ ಆಚರಣೆ ಶಿಕ್ಷಾರ್ಹ ಅಪರಾಧಗಳೆಂದು ಘೋಷಿಸಲಾಯಿತು. ಆದರೆ ಆ ಕಾನೂನುಗಳು ಎಷ್ಟರ ಮಟ್ಟಿಗೆ ಜಾತಿ ವ್ಯವಸ್ಥೆಯ ಭಾಗವಾಗಿದ್ದ 'ಜಾತಿ ಗುಲಾಮಿ ಪದ್ಧತಿ'ಯನ್ನು ನಿರ್ಮೂಲನೆ ಮಾಡಿತು ಎಂಬುದು ವಿವಾದಾಸ್ಪದವಾಗಿದೆ.

ಅಧ್ಯಾಯ ನಾಲ್ಕರಲ್ಲಿ ವಿವರಿಸಿದ ಹಾಗೆ 1807 ಮತ್ತು 1833ರ ಗುಲಾಮಿ ವ್ಯಾಪಾರ ಮತ್ತು ಗುಲಾಮಿ ಪದ್ಧತಿ ನಿಷೇಧ ಕಾನೂನುಗಳ ಪರಿಣಾಮವಾಗಿ 'ಇಂಡೆಂಚರ್ಡ್ ಲೇಬರ್' ಪದ್ಧತಿಯು ಹುಟ್ಟಿಕೊಂಡಿತು. ಬ್ರಿಟಿಷ್ ಸಾಮ್ರಾಜ್ಯದ ಎಲ್ಲಾ ವಸಾಹತುಗಳಲ್ಲಿ ನಿಷೇಧಿಸಲ್ಪಟ್ಟ ಗುಲಾಮರ ಸ್ಥಳದಲ್ಲಿ ಕೆಲಸದಾಳುಗಳನ್ನು ಒಂದು ನಿರ್ದಿಷ್ಟ ಅವಧಿ ತನಕ ಖಾತ್ರಿಗೊಳಿಸಲು 'ಇಂಡೆಂಚರ್ಡ್ ಲೇಬರ್' ಪದ್ಧತಿಯನ್ನು ಬ್ರಿಟಿಷರು ಜ್ಯಾರಿಗೆ ತಂದರು. ಅದು ತೋರಿಕೆಗೆ ಕೆಲಸದಾಳುಗಳ ರಕ್ಷಣೆಗೋಸ್ಕರ ಎಂದಿದ್ದರೂ ಅದು ಅವರ ಶೋಷಣೆಯ ಅಸ್ತ್ರವಾಯಿತು. ಗುಲಾಮಿ ಪದ್ಧತಿಯು ಇನ್ನೊಂದು ರೂಪದಲ್ಲಿ ಮರುಹುಟ್ಟು ಪಡೆಯಿತು. ಆ ಪದ್ಧತಿಯು 1920ರ ತನಕ ಜ್ಯಾರಿಯಲ್ಲಿತ್ತು (ಟಿಂಕರ್ 1974: 334–366). ಆ ಅವಧಿಯಲ್ಲಿ 354 ಲಕ್ಷ ಭಾರತೀಯರನ್ನು 'ಇಂಡೆಂಚರ್ಡ್ ಲೇಬರ್' ಆಗಿ ಯುರೋಪಿನ ವಿವಿಧ ವಸಾಹತುಗಳಲ್ಲಿ ದುಡಿಯಲು ಕರೆದುಕೊಂಡು ಹೋಗಲಾಗಿತ್ತು[79]. ಜಾತಿ ವ್ಯವಸ್ಥೆ ಮತ್ತು ಅದರ ಭಾಗವಾಗಿರುವ 'ಜಾತಿ ಗುಲಾಮಿ ಪದ್ಧತಿ'ಗಳಲ್ಲಿ ಬ್ರಿಟಿಷರು ನೇರವಾಗಿ ಹಸ್ತಕ್ಷೇಪ ಮಾಡದಿದ್ದರೂ ಅವರ ವಿವಿಧ ಆರ್ಥಿಕ ಧೋರಣೆ ಮತ್ತು ಕಾನೂನುಗಳ ಪರಿಣಾಮವಾಗಿ 'ಜಾತಿ ಗುಲಾಮಿ ಪದ್ಧತಿ'ಯು

---

78 1772ರ ಮೇ ತಿಂಗಳಲ್ಲಿ ಲಂಡನ್‌ನಲ್ಲಿ ಲಾರ್ಡ್ ಮ್ಯಾನ್ಸ್‌ಫೀಲ್ಡ್‌ರವರು ಸೊಮರ್‌ಸೆಟ್‌ರವರ ದಾವೆಯಲ್ಲಿ ಒಬ್ಬ ಗುಲಾಮನನ್ನು ಸ್ವತಂತ್ರಗೊಳಿಸಿದರು. ಅದರ ಪರಿಣಾಮವಾಗಿ 1783ರಲ್ಲಿ ಗುಲಾಮಿ ನಿರ್ಮೂಲನೆ ಆಂದೋಲನ ಆರಂಭಗೊಂಡಿತು. 1807ರಲ್ಲಿ ಇಂಗ್ಲೆಂಡ್‌ನಲ್ಲೂ ಅಮೇರಿಕಾದಲ್ಲೂ ಗುಲಾಮಿ ವ್ಯಾಪಾರ ನಿಷೇಧ ಕಾನೂನು ಜ್ಯಾರಿಗೆ ಬಂತು. 1833ರಲ್ಲಿ ಭಾರತ, ಶ್ರೀಲಂಕಾ ಮತ್ತು ಸೆಂಟ್ ಹೆಲೆನ್ ಹೊರತುಪಡಿಸಿ ಬ್ರಿಟಿಷ್ ಸಾಮ್ರಾಜ್ಯದಲ್ಲೆಲ್ಲಾ ಗುಲಾಮಿ ನಿಷೇಧ ಕಾನೂನು ಬಂತು.

79 'ಇಂಡೆಂಚರ್ಡ್ ಲೇಬರ್' ಶೀರ್ಷಿಕೆ ಅಡಿ ವಿಕಿಪಿಡಿಯಾ ಅಂತರ್ಜಾಲದಿಂದ ನವೆಂಬರ್ 25, 2018ರಂದು ಪಡೆದ ಮಾಹಿತಿ.

ಮಾರ್ಪಾಟಾಗಿ ಜೀತ ಪದ್ಧತಿಯು 18ನೇ ಶತಮಾನದ ಕೊನೇ ಭಾಗದಿಂದ ಹುಟ್ಟಿಕೊಂಡಿತು ಎಂದು ನಾಲ್ಕನೇ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದೆ.

ಬ್ರಿಟಿಷ್ ಶಿಕ್ಷಣ ಮತ್ತು ಆಧುನಿಕ ವಿಚಾರಧಾರೆಯ ಪ್ರಭಾವದಿಂದ 19ನೇ ಶತಮಾನದಿಂದಲೇ ಜಾತಿ ವ್ಯವಸ್ಥೆಯೇ ಒಂದು ಗುಲಾಮಿ ಪದ್ಧತಿ, ಅದನ್ನು ನಾಶಮಾಡಬೇಕು ಎಂಬ ಆಂದೋಲನ ಶುರುವಾಯಿತು. ಜೊತಿರಾವ್ ಧೊಂಡಿಬಾ ಫುಲೆರವರು 1873ರಲ್ಲಿ 'ಗುಲಾಮಗಿರಿ' ಪುಸ್ತಕದ ಪ್ರಕಟನೆಯ ಮೂಲಕ ಆ ಆಂದೋಲನಕ್ಕೆ ಚಾಲನೆಕೊಟ್ಟರು. ಅದರಿಂದ 'ಸತ್ಯ ಶೋಧಕ ಸಮಾಜ' ಎಂಬ ಹೆಸರಿನಲ್ಲಿ ಅದೇ ವರ್ಷ ಸಪ್ಟೆಂಬರ್ 24ರಲ್ಲಿ ಒಂದು ಚಳವಳಿಯನ್ನೂ ಅವರು ಹುಟ್ಟು ಹಾಕಿದರು[80]. ಬ್ರಿಟಿಷರ ಆಡಳಿತದಿಂದ ಸ್ವತಂತ್ರರಾಗುವ ಹೋರಾಟವೂ 19ನೇ ಶತಮಾನದ ಕೊನೆಯಲ್ಲಿ ಆರಂಭವಾಯಿತು. ಅದರ ಮುಂದಾಳತ್ವ ವಹಿಸಿದ್ದು ಕಾಂಗ್ರೆಸ್ ರಾಷ್ಟ್ರೀಯ ಪಕ್ಷ. ಬ್ರಿಟಿಷರನ್ನು ಭಾರತದಿಂದ ಓಡಿಸುವುದು ಸ್ವತಂತ್ರ್ಯ ಹೋರಾಟದ ಮುಖ್ಯ ಗುರಿಯಾಗಿದ್ದರೂ ಭಾರತದಲ್ಲಿಯ ಸಾಮಾಜಿಕ ಅನಿಷ್ಟಗಳನ್ನು ಮತ್ತು ಅವುಗಳಲ್ಲಿ ಮುಖ್ಯವಾಗಿದ್ದ ಅಸ್ಪೃಶ್ಯತೆಯನ್ನು ಹೋಗಲಾಡಿಸುವುದು, ಜೀತ ಪದ್ಧತಿಯನ್ನು ಕೊನೆಗಾಣಿಸುವುದು, ದ್ಲಲಿತರನ್ನು ಹಾಗೂ ಮೂಲನಿವಾಸಿಗಳನ್ನು 'ಮುಖ್ಯ ವಾಹಿನಿ'ಗೆ ತರುವುದು ಮುಂತಾದುವು ಸ್ವಾತಂತ್ರ್ಯ ಹೋರಾಟದ ಭಾಗವೇ ಆಗಿದ್ದುವು. ಕೃಷಿಕಾರ್ಮಿಕರು ಮತ್ತು ಜೀತದಾಳುಗಳಿಗೆ ನ್ಯಾಯ ಒದಗಿಸುವುದು, ಜೀತ ಪದ್ಧತಿಯನ್ನು ನಿರ್ಮೂಲನೆ ಮಾಡುವುದು ಮುಂತಾದ ಪ್ರಯತ್ನಗಳೂ ಸ್ವಾತಂತ್ರ್ಯ ಹೋರಾಟದ ಭಾಗವೇ ಆಗಿದ್ದುವು. ಸ್ವಾತಂತ್ರ್ಯ ಸಿಗುವ ಮುಂಚೆ ವಿವಿದ ಪ್ರಾಂತ್ಯಗಳಲ್ಲಿ ಮತ್ತು ತದನಂತರ ಬೇರೆಬೇರೆ ರಾಜ್ಯಗಳಲ್ಲೂ ಜೀತ ನಿರ್ಮೂಲನೆ ಕಾನೂನುಗಳು ಜ್ಯಾರಿಯಾದುವು[81]

## 5.2 ಜೀತ ಕಾನೂನಿ[82]ನಲ್ಲಿ ಜೀತಪದ್ಧತಿಯ ವ್ಯಾಖ್ಯಾನಕ್ಕೆ ಬೇಕಾದ ಪೂರಕ ವಿಚಾರಗಳು[83]:

ಕಾನೂನಿನ ತಿರುಳು ಇರುವುದು ಅದರಲ್ಲಿ ಇರುವ ಪರಿಭಾಷೆಗಳು ಮತ್ತು ಅವುಗಳ ವ್ಯಾಖ್ಯಾನಗಳು. ಸಾಮಾನ್ಯವಾಗಿ ಯಾವುದೇ ಕಾನೂನಿನಲ್ಲಿರುವಂತೆ ಜೀತ ಕಾನೂನಿನಲ್ಲಿಯೂ ಆ ಕಾನೂನಿಗೆ ಸಂಬಂಧಪಟ್ಟ ಕೆಲವು ಮುಖ್ಯ ಪಾರಿಭಾಷಿಕ ಪದಗಳಿಗೆ ವ್ಯಾಖ್ಯಾನಗಳು ಕಾನೂನಿನ ಎರಡನೇ

---

80 ಫುಲೆ 1991; ದೇಶ್‌ಪಾಂಡೆ 2002; ಮಹಾತ್ಮ 2011.

81 ಅವುಗಳು ಹೀಗಿವೆ: The Bihar and Orissa Kamiauti Agreements Act 1920; The Bombay Moneylenders Act, 1946; The Orissa Debt Bondage Abolition and Regulation, 1948; The Rajasthan Sagri System Abolition Act, 1961; The Orissa Dadan Labour (Regulation and Control) Bill, 1975; The UP Landless Agricultural Labourers Debt Relief Act, 1975; and the Maharashtra Debt Relief Act, 1976. ನೋಡಿ: ಶಂಕರ್‌ದಾಸ್ 1986: 19).

82 ಜೀತ ಪದ್ಧತಿ ರದ್ದತಿ ಕಾನೂನು, 1976, ಅದರಡಿಯ ನಿಯಮಗಳು, ಮತ್ತು ಜೀತಕ್ಕೆ ಸಂಬಂದಪಟ್ಟಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್ ರಾಜ್ ಕಾನೂನು, 1993ಕ್ಕೆ 2000ದಲ್ಲಿ ತಂದ ತಿದ್ದುಪಡಿಯನ್ನು ಅನುಬಂಧ IVರಲ್ಲಿ ಕೊಡಲಾಗಿವೆ.

83 ಅಧ್ಯಯನಕ್ಕೆ ಸಲ್ಲಿಸಿದ ಪ್ರಾರಂಭದ ಸಾರಲೇಖದಿಂದ ಮುಂದೆ ಸೂಚಿಸಲಾದ ಭಾಗಗಳನ್ನು ಆಯ್ದು ಅನುಬಂಧ VIರಲ್ಲಿ ಕೊಡಲಾಗಿದೆ: ಜೀತ ಹೆಚ್ಚಿಗೆ ಕಾಣುವ ಕ್ಷೇತ್ರಗಳು, ಸಮುದಾಯಗಳು ಮತ್ತು ಪ್ರದೇಶಗಳು ಹಾಗೂ ಜೀತದ ವ್ಯಾಪ್ತಿ; ಜೀತ ಪದ್ಧತಿಯನ್ನು ಹೋಗಲಾಡಿಸುವಲ್ಲಿ ಕರ್ನಾಟಕ ರಾಜ್ಯ ವಹಿಸುತ್ತಿದ್ದ ಪ್ರಮುಖ ಪಾತ್ರ ಮತ್ತು ಅದರಲ್ಲಿಯ ಕೆಲವು ಲೋಪದೋಷಗಳು; ಜೀತ ಪದ್ಧತಿ ರದ್ದತಿ ಕಾನೂನಿನಡಿ ಕೈಗೊಳ್ಳಬೇಕಾದ ಕ್ರಮಗಳು: ಜೀತದಾಳುಗಳ ಗುರುತಿಸುವಿಕೆ, ಬಿಡುಗಡೆ ಮತ್ತು ಪುನರ್ವಸತಿ ಹಾಗೂ ಅಪರಾಧಿಗಳಿಗೆ ಶಿಕ್ಷೆ ವಿಧಿಸುವುದು; ಉಪಸಂಹಾರ.

ಪರಿಚ್ಛೇದದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾದುವು ಯಾವುವೆಂದರೆ ಮುಂಗಡ (2ಎ), ಒಪ್ಪಂದ (2ಬಿ), ಜೀತ ಸಾಲ (2ಡಿ), ಜೀತ ಅಥವಾ ಜೀತಗಾರಿಕೆ (2ಇ), ಜೀತದಾಳು (2ಎಫ್), ಜೀತ ಪದ್ಧತಿ (2ಜಿ), ನಾಮ ಮಾತ್ರ ಮಜೂರಿ (2ಐ) ಮತ್ತು ಕುಟುಂಬ (2ಹೆಚ್) ಹಾಗೂ ಪೂರ್ವಜ, ವಂಶಜ (2ಸಿ). 'ಇವಲ್ಲೆಲ್ಲಾ ಅತಿ ಮುಖ್ಯವಾದದ್ದೆಂದರೆ ಜೀತ ಪದ್ಧತಿ. ಅದು ವಿವರವಾಗಿರುವುದು ಮಾತ್ರವಲ್ಲದೇ ಜೀತದ ಬಹುತೇಕ ಎಲ್ಲಾ ಅಂಶಗಳು ಅದರಲ್ಲಿ ಒಳಗೊಂಡಿರುತ್ತವೆ ಹಾಗೂ ಮೇಲೆ ನಮೂದಿಸಿದ ಉಳಿದ ಪರಿಭಾಷೆಗಳು ಜೀತ ಪದ್ಧತಿಯ ವ್ಯಾಖ್ಯಾನದೊಳಗೆ ಪ್ರಸ್ತಾಪಿಸಲ್ಪಡುತ್ತವೆ.

ಜೀತ ಪದ್ಧತಿ ವ್ಯಾಖ್ಯಾನವು ನಿರ್ದಿಷ್ಟ ದುಡಿಮೆಗಳನ್ನು ಜೀತ ದುಡಿಮೆ ಎಂದು ಹೆಸರಿಸದೇ ಯಾವುದೇ ಒಂದು ದುಡಿಮೆಯನ್ನು ಜೀತದುಡಿಮೆಯಾಗಿ ಪರಿಗಣಿಸಬಹುದಾದ ಅಂಶಗಳನ್ನು ಒಳಗೊಂಡಿರುತ್ತದೆ. ಆದ್ದರಿಂದ ಜೀತ ಪದ್ಧತಿ ಎಂದರೆ ಯಾವುದೇ ಒಂದು ಅಥವಾ ಹೆಚ್ಚಿನ ಕಾಲಘಟ್ಟಗಳಿಗೆ ಅಥವಾ ಒಂದು ಅಥವಾ ಹೆಚ್ಚಿನ ನಿರ್ದಿಷ್ಟ ಪ್ರದೇಶಗಳಿಗೆ ಅನ್ವಯಿಸಿ ರೂಪಿಸಿದ ವ್ಯಾಖ್ಯಾನವಲ್ಲ. ಅದು ಕಾಲ ಮತ್ತು ಪ್ರದೇಶವನ್ನು ಮೀರುವಂತಹುದ್ದು. ಜೀತ ಕಾನೂನಿನ ಪರಿಚ್ಛೇಧ 23 ಸೂಚಿಸುವಂತೆ ಕಂಪೆನಿಗಳಲ್ಲೂ ಜೀತ ಪದ್ಧತಿಯಲ್ಲಿರಬೇಕಾದಂತಹ ಅಂಶಗಳಿರುವ ದುಡಿಮೆಯು ಕಂಡುಬಂದರೆ ಅದೂ ಜೀತಪದ್ಧತಿ ಆಗುತ್ತದೆ ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಹಳ್ಳಿಗಳಲ್ಲಿ ಮತ್ತು ಸಾಂಪ್ರದಾಯಿಕವಾಗಿರುವ ಅಂದರೆ ಮುಖ್ಯವಾಗಿ ವ್ಯವಸಾಯ ಕ್ಷೇತ್ರದಲ್ಲಿ ಮಾತ್ರ ಜೀತ ಪದ್ಧತಿ ಕಂಡು ಬರಬೇಕೆಂದಿಲ್ಲ. ಪಟ್ಟಣಗಳಲ್ಲೂ ಅದು ಇರಬಹುದು. ಇನ್ನು ಮುಂದೆಯೂ ಜೀತ ಪದ್ಧತಿಯ ಹೊಸ ರೂಪಗಳು ಹುಟ್ಟಿಕೊಳ್ಳಬಹುದು. ಜೀತ ಪದ್ಧತಿ ವ್ಯಾಖ್ಯಾನದಲ್ಲಿ ಬರುವ ಅಂಶಗಳನ್ನು ಒಳಗೊಂಡಿರವಷ್ಟು ಮಟ್ಟಿಗೆ ಅವು ಜೀತ ಎನಿಸುವುವು.

ಆದರೂ ಜೀತ ಕಾನೂನು ದೇಶದಾದ್ಯಂತ ಸಾಂಪ್ರದಾಯಿಕವಾಗಿ ಮತ್ತು ಪ್ರಾದೇಶಿಕವಾರು ಕಂಡುಬರುವ ಕೆಲವು ಪದ್ಧತಿಗಳನ್ನು ಜೀತಪದ್ಧತಿ ಎಂತಲೇ ಗುರುತಿಸುತ್ತದೆ. ಜೀತಪದ್ಧತಿಯ ಮೇರೆಗೆ ಮಾಡುವ ಒಪ್ಪಂದದ ಬಗ್ಗೆ ವ್ಯಾಖ್ಯಾನ (ಪರಿಚ್ಛೇಧ 2ಬಿ) ಕೊಡುವಾಗ ಆ ಸಾಂಪ್ರದಾಯಿಕ ಹಾಗೂ ಪ್ರಾದೇಶಿಕವಾರು ಜೀತಪದ್ಧತಿಗಳನ್ನು ಜೀತ ಕಾನೂನು ಹೆಸರಿಸುತ್ತದೆ. ಜೀತ ಒಪ್ಪಂದ ಏರ್ಪಡುವುದು ಸಾಲಗಾರ ಮತ್ತು ಸಾಲಿಗರ ನಡುವೆ. ಅದು ಮುಂಗಡ (ಪರಿಚ್ಛೇಧ 2ಎ) ಪಡೆಯುವುದಕ್ಕೋಸ್ಕರ. ಮುಂಗಡವು ಜೀತಸಾಲ (ಪರಿಚ್ಛೇಧ 2ಡಿ) ಎಂತಲೂ ಪರಿಗಣಿಸಲಾಗಿದೆ. ಮುಂಗಡವು ಹಣದ ರೂಪದಲ್ಲಿರಬಹುದು ಅಥವಾ ವಸ್ತುವಿನ ರೂಪದಲ್ಲಿರಬಹುದು. ಅದು ಭಾಗಶಃ ಹಣದ ರೂಪದಲ್ಲಿ ಮತ್ತು ಭಾಗಶಃ ವಸ್ತುವಿನ ರೂಪದಲ್ಲಿಯೂ ಇರಬಹುದು. ಜೀತ ಕಾನೂನು ಸಾಂಪ್ರದಾಯಿಕ ಹಾಗೂ ಪ್ರಾದೇಶಿಕವಾರು ಜೀತಪದ್ಧತಿಗಳಲ್ಲಿ ಸಾಲಗಾರ ಮತ್ತು ಸಾಲಿಗರ ನಡುವೆ ಒಪ್ಪಂದ ಏರ್ಪಟ್ಟಿದೆ ಎಂತಲೇ ಪೂರ್ವಭಾವನೆ ಮಾಡುತ್ತದೆ. ಆ ಪದ್ಧತಿಗಳು ಹೀಗಿವೆ:

ಆದಿಯಾಮಾರ್, ಬಾರಾಮಾಸಿಯ, ಬಸಹ್ಯ, ಬೇಘು, ಭಗೇಲಾ, ಚೆರುಮಾರ್, ಗರ್ರು–ಗಾಲು, ಹಾಲಿ, ಹಾರಿ, ಹಾರವಯಿ, ಹೊಲ್ಯ, ಜಾನ, ಜೀತ, ಕಾಮಿಯ, ಖುಂದಿತ್–ಮುಂಡಿತ್, ಕುತಿಯ, ಲಾಖಾರಿ, ಮುಂಗ್ರಿಖಿ, ಮಾಟ್, ಮುನೀಷ್ ಪದ್ಧತಿ, ನೀತ್–ಮಜೂರ್, ಪಲೇರು, ಪಡಿಯಾಲ್, ಪನ್ನೈಯಾಲ್, ಸಾಗ್ರಿ, ಸಂಜಿ, ಸಂಜಾವತ್, ಸೇವಕ, ಸೇವಕಿಯಾ, ಸೆರಿ, ವೆಟ್ಟಿ[84].

ಈ ಮೇಲಿನವುಗಳಲ್ಲಿ ಕೇವಲ 'ಜೀತ'[85] ಎಂಬುದು ಕರ್ನಾಟಕಕ್ಕೆ ಮತ್ತು ಅವಿಭಜಿತ ಆಂಧ್ರ ಪ್ರದೇಶಕ್ಕೆ ಸಂಬಂಧಪಡುತ್ತದೆ. ಆದರೆ ಕರ್ನಾಟಕದಲ್ಲಿ ಬೇರೆ ಪದಗಳಲ್ಲಿ ಜೀತದಾಳು, ಜೀತ –

---

[84] 'ವೆಟ್ಟಿ'ಯು ಸಾಂಪ್ರದಾಯಿಕ ಜೀತ ಪದ್ಧತಿಯ ಒಂದು ರೂಪವಾಗಿದೆ. ಮೂರನೇ ಅದ್ಯಾಯದಲ್ಲಿ ವಿಶ್ಲೇಷಿಸಿದ ಪ್ರಕಾರ 'ಬಿಟ್ಟಿ'ಯು 'ವೆಟ್ಟಿ'ಯ ರೂಪಾಂತರ; ಮತ್ತು ಅವೆರಡರ ಮೂಲ ಸಂಸ್ಕೃತದ 'ವಿಷ್ಠಿ'. ಆದ್ದರಿಂದ 'ಬಿಟ್ಟಿ ಚಾಕ್ರಿ'ಯನ್ನೂ ನೇರವಾಗಿ ಜೀತ ಕಾನೂನಿನ ಪರಿವ್ಯಾಪ್ತಿಯೊಳಗೆ ತರುವ ಸಾಧ್ಯತೆಯ ಬಗ್ಗೆ ಕಾನೂನು ತಜ್ಞರು ಮತ್ತು ನ್ಯಾಯಧೀಶರು ಪರಿಗಣಿಸಬೇಕು.

[85] 'ಜೀತ' ಪದವನ್ನು ಕನ್ನಡದಲ್ಲಿ ಈಗ 'ಬಂಧನ' (bond, bondage, bonded) ಮತ್ತು 'ಬಂಧನದ ಸೇವೆ' (bonded labour) ಎಂಬ ಅರ್ಥಗಳಲ್ಲಿ ವ್ಯಾಪಕವಾಗಿ ಬಳಸಲಾಗುತ್ತಿದೆ. ಆದರೆ ಮೂಲದಲ್ಲಿ ಅದರ ಅರ್ಥ ಸಂಬಳ, ವೇತನ ಅಥವಾ ಜೀವಿತ ಎಂತಲೇ ಇತ್ತು. 1894ರಲ್ಲಿ ಮೊದಲು ಮುದ್ರಣಗೊಂಡ "ಕಿಟ್ಟೆಲ್ ಕನ್ನಡ – ಇಂಗ್ಲಿಷ್ ನಿಘಂಟು"ವಿನ ಸಂಪುಟ 2. ಪುಟ 691ರಲ್ಲಿ (ಪರಿಷ್ಕೃತ, ವಿಸ್ತೃತ ಮುದ್ರಣ 1969. ಮದ್ರಾಸ್: ಮದ್ರಾಸ್ ವಿಶ್ವ ವಿದ್ಯಾಲಯ) 'ಜೀತ'ವು 'ಜೀವಿತ'ದ ತದ್ಭವ ರೂಪವೆಂದು ತಿಳಿಸಿ ಅದರ ಅರ್ಥಗಳನ್ನು ಇಂಗ್ಲಿಷ್‌ನಲ್ಲಿ ಈ ರೀತಿ ಕೊಡಲಾಗಿದೆ: living(ಮರಾಠಿ); a living; salary, wages, pay (ಸಾಮಾನ್ಯವಾಗಿ ಮತ್ತು ತೆಲುಗು); work (ಮೈಸುರು) ಎಂದು ಕೊಡಲಾಗಿದೆ. ನಿಘಂಟುವಿನಲ್ಲಿ ಕನ್ನಡದ 'ಸಂಬಳ' ಪದವನ್ನು ಪರ್ಯಾಯವಾಗಿ ಅಥವಾ ಪ್ರತ್ಯೇಕವಾಗಿ ಉಲ್ಲೇಖಿಸಿಲ್ಲವಾದರೂ 'ಜೀತ'ಕ್ಕೆ 'ಸಂಬಳ' ಎಂಬುದೇ ಮೂಲಾರ್ಥ ಎಂದು ತಿಳಿಯಲಿಕ್ಕೆ ಅವಕಾಶವಿದೆ. ಅದೇ ನಿಘಂಟುವಿನಲ್ಲಿ 'ಜೀತಗಾರ' ಪದಕ್ಕೆ 'a man receiving wages, a paid servant (ಮೈಸುರು) ಮತ್ತು ತೆಲುಗಿನ 'ಜೀತಗಾಡು' ಪದವನ್ನು ಆವರಣಗಳಲ್ಲಿ ಕೊಟ್ಟು 'ಜೀತಗಾರಗೆ ಯಾತಕ್ಕೆ ಜೇರಿಗೆ ಬೆಲ್ಲ?' ಎಂಬ ಗಾದೆ ಮಾತಿನ ಉಲ್ಲೇಖವಿದೆ. ತೆಲುಗು ಬರವಣಿಗೆಯಲ್ಲಿ ಈಗಲೂ 'ಜೀತಂ'ಗೆ ಸಂಬಳ ಎಂಬ ಅರ್ಥದಲ್ಲೇ ಬಳಸುತ್ತಿರುವುದನ್ನು ಗಮನಿಸುತ್ತೇವೆ (ನೋಡಿ: ಅಂತರ್ಜಾಲ ಕೊಂಡಿ 7 ಮತ್ತು ಮೇಲೆ ಪುಟ 86).

ಜೀತ ಶಬ್ದವು ಸಂಬಳದಿಂದ ಬಂಧನದ ಅರ್ಥವ್ಯಾಪ್ತಿ ಪಡೆದಿರುವ ಪ್ರಕ್ರಿಯೆಯನ್ನು ಕಿಟ್ಟೆಲ್‌ರವರ ನಿಘಂಟುವಿನಲ್ಲೇ ಊಹಿಸಿಕೊಳ್ಳಬಹುದು. ಅದಕ್ಕೆ ಮೂಲದಲ್ಲಿದ್ದ ಸಂಸ್ಕೃತ ಮೂಲದ 'ಜೀವಿತ' ಅರ್ಥವಿದ್ದು ಅದರ ಅರ್ಥವಿಸ್ತಾರವನ್ನು ಪ್ರದೇಶಕನ್ನುಗುಣವಾಗಿ ಮೂರು ಗುಂಪುಗಳಾಗಿ ಕೊಟ್ಟಿದ್ದಾರೆ: ಮೂಲದ 'ಜೀವಿತ' ಅರ್ಥ ಮರಾಠಿಯಲ್ಲಿ – living; ಎರಡನೇ ಅರ್ಥ 'ಸಂಬಳ'ವೆಂದು ತೆಲುಗುವಿನಲ್ಲಿ ಮತ್ತು ಸಾಮಾನ್ಯವಾಗಿ ಕನ್ನಡದಲ್ಲಿ – a living; salary, wages, pay; ಮೂರನೇ ಅರ್ಥ 'ಕೆಲಸ'ವೆಂದು ಮೈಸೂರು ಪ್ರಾಂತ್ಯದಲ್ಲಿ – work. ಮೂಲ ಜೀವಿತ, ಚುಟುಕಾಗಿ ಜೀತವಾಗಿದ್ದು ಅದಕ್ಕೆ ನಂತರ ಸಂಬಳ, ನಂತರ ಕೆಲಸದ ಅರ್ಥಾಂತರವಾಗಿ ಮೈಸೂರಲ್ಲಿ ಸಂಬಳದ ಕೆಲಸವೇ ಬಂಧನದ ಕೆಲಸವಾಗಿ ಜೀತ ಅಂದರೆ ಬಂಧನದ ಕೆಲಸ, ದಾಸ್ಯ ಗುಲಾಮತನ ಎಂಬ ನಿರ್ದಿಷ್ಟ ಅರ್ಥ ಪಡೆದು ಜೀತ ಕಾನೂನು ಬಂದ ಮೇಲೆ ಕರ್ನಾಟಕದಲ್ಲೆಲ್ಲೂ ಅದೇ ಅರ್ಥ ರೂಢೀಗತವಾಗಿರಬೇಕು. ಈಗಲೂ ನೋಡಿದರೆ ಮೈಸೂರಲ್ಲಿ ಮಾತ್ರ ಜೀತವನ್ನು ಬಂದನ, ದಾಸ್ಯ ಗುಲಾಮತನ ಅರ್ಥದಲ್ಲಿ ಹೆಚ್ಚಾಗಿ ಬಳಸಲಾಗುತ್ತದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂಧನದ ದುಡಿಮೆಗೆ ಸಂಬಳಕ್ಕಿರುವುದು, ಸಂಬಳದಾಳು ಪದ ಬಳಸುತ್ತಾರೆ ಉತ್ತರ ಕರ್ನಾಟಕದಲ್ಲಿ ಇತರೆ ಪದಗಳನ್ನು ಬಳಸಲಾಗುತ್ತದೆ. ಆಂಧ್ರ ಪ್ರದೇಶದಲ್ಲಿ 'ಬಂಧನದ ದುಡಿಮೆ' ಜೊತೆ 'ಸಂಬಳ' ಅರ್ಥವೂ ರೂಢಿಯಲ್ಲಿದೆ.

2007ರಲ್ಲಿ ಮುದ್ರಿತವಾದ ಪ್ರಶಾಂತ್ ಮಾಡ್ತರಿಂದ ಸಂಪಾದಿತ 'ಕನ್ನಡ ಪದನಿಧಿ'ಯಲ್ಲಿ 'ಸಂಬಳ' ಪದಕ್ಕೆ 'ಜೀತ' ಎಂಬ ಸಮಾನಾರ್ಥಕ ಪದವನ್ನು ಕೊಡಲಾಗಿದೆ. ಒಟ್ಟು ಸಮಾನಾರ್ಥಕ ಪದಗಳು ಹೀಗಿವೆ: 'ಅರ್ಜನೆ, **ಅಧಿಕ ಕಾಲಿಕ ಮಜೂರಿಗಳು**, ಆದಾಯ, ಆಯ, ಕಂಬಳ, ಕಂಪಲು, ಕಂಬಲ್, ಕಂಬಳಿ, ಕುಂಬಳಿ, ಕನಿಷ್ಠ ಮಜೂರಿಗಳು, ಕೂಲಿ ಕೋತಲು **ಸಂಬಳ**, ಖರ್ಚು. ಗಳಿಗೆ, ಚಾಲ್ತಿ ಆದಾಯ. ಜೀತ, ತಲು, ದರಮಹಾ, ಪಗಾರ, ಪ್ರತಿಫಲ, ಬಾಡಿಗೆ, ಬೆಲೆ. ಭತ್ಯ, ಭರ್ಮ, ಭರಣ, ಭರಣ್ಯೆ, ಮಜೂರಿ, ಮಜೂರಿ ಸಂಬಳ. ಮಾಸಾಶನ, ಮುಷಾರ. ಮುಷಾಹರ, ರೋಜು. ರೋಜುಗಾರಿ. ವರ್ತನ. ವರಮಾನ. ವರ್ಷಾಸನ, ವಸ್ನಿ, ವೆಚ್ಚ, ವೇತನ, ವ್ಯ. ಸಂಪಾದನೆ. ಸಂಭಾವನೆ, ಸಮ್ಬಲ, ಸಲ್ಲು, ಸಾಗಾಳು, ಸುತ್ತಾಲೆ, **ಹಡದೆ**.' (ಪ್ರಶಾಂತ್ ಮಾಡ್ತ 2007: 501, 461). ಮೇಲಿನ ಅರ್ಥಗಳಲ್ಲಿ '**ಅಧಿಕ ಕಾಲಿಕ ಮಜೂರಿಗಳು**' ಎಂಬ ಪದಗುಚ್ಛ ಸಂಬಳ ಮತ್ತು ಜೀತದ ಬಗೆಗಿನ ಸಂಬಂಧದ ಬಗ್ಗೆ ಆಸಕ್ತಿ ಕೆರಳಿಸುವಂತಹದ್ದು. ಆದರೆ ಪದನಿಧಿಯ 461ನೇ ಪುಟದಲ್ಲಿ ಬರುವ 'ಜೀತ' ಪದಕ್ಕೆ ಈ ಯಾವ ಪದಗಳ ಉಲ್ಲೇಖವಿಲ್ಲ. ಬದಲು ಅಲ್ಲಿ ಬರುವ ಸಮಾನಾರ್ಥಕ ಪದಗಳು: 'ಉಂಡು ಉಟ್ಟ ಜೀತ, ಉಂಡೂಟ್ಟ ಜೀತ, ಉಡುಟ್ಟ ಜೀತ, ಉಣಸಿ ಜೀತ, ಊಳಿಗ ಜೀತ, ಒಣ ಜೀತ, ಒಣಮುಸರಿ ಜೀತ, ಒಣ ಮೂಸ್ಯಾಕಿ ಜೀತ.' ಅಂದರೆ ಈಗ ಪ್ರಚಲಿತವಿರುವ 'ಬಂಧನದ ಸೇವೆ' ಎಂಬ ಅರ್ಥದಲ್ಲಿ ಬಳಸಲಾಗುವ ಪದಗಳನ್ನೇ ಕೊಡಲಾಗಿದೆ. ಷ ಶೆಟ್ಟರ್‌ರವರ 2018ರ "ಪ್ರಾಕೃತ – ಕನ್ನಡ – ಸಂಸ್ಕೃತ ಭಾಷೆಗಳ ಅನುಸಂಧಾನ"ದ ಪುಟ 175ರಲ್ಲಿ "ಸಮಾನ ಪದಗಳು – ಪ್ರಾಕೃತ ಕನ್ನಡ – ಸಂಸ್ಕೃತ" ಪಟ್ಟಿಯ ಅಡಿಯಲ್ಲಿ ಕ್ರಮವಾಗಿ "ಸಂಬಲ – ಸಂಬಳ – ಶಂಬಲ" ಎಂದು ಪ್ರಸ್ತಾಪವಿದೆ. ವಾಮನ್ ಶಿವರಾಮ್ ಆಪ್ಟೆಯವರ "The Student's Sanskrit English dictionary"ಯ ಪುಟ 548ರಲ್ಲಿ **ಶಂಬಲಃ / ಶಂಬಲಂ** ಪದಗಳಿಗೆ ಈ ಅರ್ಥಗಳನ್ನು ಕೊಡಲಾಗಿದೆ: '1. A bank, shore, 2. **Provisions for a journey, viaticum.** 3. Envy, jealousy' ಹಾಗೆಯೇ 'ಶಂಬಲೀ' ಪದಕ್ಕೆ 'procuress' ಎಂಬ ಅರ್ಥದ ಒಂದೇ ಪದವಿದೆ. ಹೀಗೆ 'ಶಂಬಲ'ಕ್ಕೆ 'ಜೀವಿತ' ಎಂಬ ಅರ್ಥ ಇರುವುದನ್ನು ಗಮನಿಸಬಹುದು. ಪ್ರೊ. ಈ ವೆಂಕಟಸುಬ್ಬಯ್ಯರವರು ತಮ್ಮ 'ಸಾಮಾಜಿಕ ನಿಘಂಟು'ವಿನಲ್ಲಿ ಈ ರೀತಿ ದಾಖಲಿಸುತ್ತಾರೆ: "ಸಂಬಳ ಇದು

ಜೀತಪದ್ಧತಿಯನ್ನು ಕರೆಯುವುದನ್ನು ನಾವು ಕಾಣುತ್ತೇವೆ. ಉದಾಹರಣೆಗಾಗಿ: ಆಳು[86], ಒತ್ತೆಯಾಳು, ಅಡಿಯಾಳು, ಆಳು ಮಗ, ಆಳು ಮನುಷ್ಯ, ಗೌಡರ ಆಳು, ಮನೆಮಗ, ಸಂಬಳದಾಳು, ಸಂಬಳಕ್ಕಿರುವುದು, ವಾರ್ಷಿಕ ಸಂಬಳ, ನೌಕ್ರಿ ಮಾಡುವವ, ಕಮತ, ಕಮತಕ್ಕಿಟ್ಟಿರುವುದು, ದುಡಿಯಲಿಕ್ಕಿರುವುದು (ಗೌಡರ / ಸೌಕಾರ್ರ ಮನೇಲಿ) ಇತ್ಯಾದಿ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಒಂದು ದುಡಿಮೆಯು ಜೀತದುಡಿಮೆಯಾಗಬೇಕಾದರೆ ಅದಕ್ಕಿರುವ ಹೆಸರು ಮುಖ್ಯವಲ್ಲ; ಆ ದುಡಿಮೆಯಲ್ಲಿ ತೋರಿಬರುವ ಜೀತ ಕಾನೂನು ಸ್ಪಷ್ಟಪಡಿಸುವ ಅಂಶಗಳು ಆಗಿವೆ.

ಜೀತ ಪದ್ಧತಿಯ ವ್ಯಾಖ್ಯಾನವನ್ನು ಪರಿಶೀಲಿಸುವ ಮುಂಚೆ ಎರಡು ವಿಷಯವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ:

1. ಮೊದಲನೆಯದಾಗಿ ಬಲಾತ್ಕಾರದ ದುಡಿಮೆಯ ಪರಿಕಲ್ಪನೆ. ಜೀತಕ್ಕೆ ಸಂಬಂಧ ಪಟ್ಟಂತೆ ಒಂದು ಬಹುಮುಖ್ಯ ಪರಿಭಾಷೆಗೆ ಅಥವಾ ಪರಿಕಲ್ಪನೆಗೆ ಜೀತ ಕಾನೂನಿನಲ್ಲಿ ವ್ಯಾಖ್ಯಾನ ಇಲ್ಲ. ಅದು ಬಲಾತ್ಕಾರದ ದುಡಿಮೆ. ಜೀತ ಕಾನೂನು 'ಬಲಾತ್ಕಾರದ ದುಡಿಮೆ'ಯನ್ನು ವ್ಯಾಖ್ಯಾನಿಸದೇ ಇರಲು ಕಾರಣ ಅದು ಭಾರತೀಯ ಸಂವಿಧಾನದಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದರಿಂದ ಎನಿಸುತ್ತದೆ. ಜೀತ ಕಾನೂನಿನ ಆಧಾರ ಸ್ತಂಭ ಭಾರತೀಯ ಸಂವಿಧಾನ. ಆ ಸಂವಿಧಾನದ ವಿಧಿ 23 ಬಲಾತ್ಕಾರದ ದುಡಿಮೆಯ ಕುರಿತಾದದ್ದು[87].

ಆದರೆ ಆ ವಿಧಿಯೂ ಕೂಡಾ ಬಲಾತ್ಕಾರದ ದುಡಿಮೆಯನ್ನು ನಿಷೇಧಿಸಲ್ಪಟ್ಟಿದೆ ಎನ್ನುವುದನ್ನು ಘೋಷಿಸುತ್ತದೆ ಮಾತ್ರ; ಅದರ ವ್ಯಾಖ್ಯಾನವನ್ನು ನೀಡುವುದಿಲ್ಲ. ಅದಕ್ಕೂ ಒಂದು ಕಾರಣವಿರಬಹುದು. 19ನೇ ಶತಮಾನದ ಎರಡನೇ ದಶಕದ ಆರಂಭದಲ್ಲೇ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ ಮತ್ತು ಮಧ್ಯ ಭಾಗದಲ್ಲಿ ಸಂಯುಕ್ತ ರಾಷ್ಟ್ರಗಳ ಸಂಘಟನೆಗಳು ಜಾಗತಿಕ ಮಟ್ಟದಲ್ಲಿ ಹಲವಾರು ಒಡಂಬಡಿಕೆಗಳನ್ನು ರೂಪಿಸಿದುವು. ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯು 1939ರಲ್ಲಿ ಬಲಾತ್ಕಾರ ದುಡಿಮೆ ಒಡಂಬಡಿಕೆಯನ್ನು ಹೊರಡಿಸಿತು (ಅಡಕ V). ಸಂಯುಕ್ತ ರಾಷ್ಟ್ರಗಳ ಸಂಘಟನೆಯು 1948ರಲ್ಲಿ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯನ್ನು ಹೊರಡಿಸಿತು (ಅಡಕ V). ಮೊದಲನೆಯದರಲ್ಲಿ

---

ಸಂಸ್ಕೃತದ ಶಂಬಲ ಎಂಬ ಶಬ್ದದಿಂದ ಬಂದಿದ್ದು ಇದಕ್ಕೆ ಮೂಲದಲ್ಲಿ ಪ್ರಯಾಣ ಕಾಲದಲ್ಲಿ ಜೊತೆಗೆ ತೆಗೆದುಕೊಂಡು ಹೋಗುನ ಆಹಾರ ಸಾಮಾಗ್ರಿ ಎಂಬುವ ಅರ್ಥ, ಪಾಥೇಯ. ಅದೇ ವ್ಯಾಪಕವಾದ ಅರ್ಥವನ್ನು ಪಡೆದು ತಿಂಗಳು ತಿಂಗಳಿಗೂ ಪಡೆಯುವ ವೇತನ ಎಂಬ ಅರ್ಥವನ್ನು ಪಡೆದಿದೆ. ಹಿಂದೀ ಮತ್ತು ಮರಾಠಿ ಭಾಷೆಗಳಲ್ಲಿಯೂ ಈ ಶಬ್ದವು ವ್ಯಾಪಕವಾಗಿ ಪ್ರಯೋಗದಲ್ಲಿದೆ" (ವೆಂಕಟಸುಬ್ಬಯ್ಯ 1996: 380). 'ಸಂಕ್ಷಿಪ್ತ ಕನ್ನಡ ನಿಘಂಟು'ವಿನಲ್ಲಿ 'ಸಂಬಲ' ಶಬ್ದಕ್ಕೆ "ಪ್ರಯಾಣ ಕಾಲಕ್ಕೆ ಬೇಕಾಗುವ ಹಣ, ಬುತ್ತಿ ಮುಂತಾದ ಪ್ರಯಾಣ ಸಾಮಾಗ್ರಿ; ಪಾಥೇಯ" ಎಂದು ಅರ್ಥ ಕೊಟ್ಟರೆ 'ಸಂಬಳ' ಶಬ್ದಕ್ಕೆ "1. ವೇತನ, ಪಗಾರ, 2. ಬುತ್ತಿ, ಊಟದ ಗಂಟು" ಎಂಬು ಪ್ರತ್ಯೇಕ ಅರ್ಥಗಳನ್ನು ಕೊಡುತ್ತದೆ (2001: 1235).

86 "ಆಳ್ ಎಂದರೆ ಮನುಷ್ಯ ಈಗ ಸೇವಕನಾಗುತ್ತಾನೆ" ಎಂದು 'ಕನ್ನಡ ಗಾದೆ ಮಾತುಗಳು' ಪುಸ್ತಕದಲ್ಲಿ ದಾಖಲಾಗಿದೆ (ನಾಯಕ 1976: 101).

87 ಸಂವಿಧಾನದ ವಿಧಿ 23 ಮೂಲಭೂತ ಹಕ್ಕುಗಳು ಇರುವ ಭಾಗ ಮೂರರಲ್ಲಿ ಬರುತ್ತದೆ. ವಿಧಿ 23ರ ಪ್ರಕಾರ "ಮಾನವ ವ್ಯಾಪಾರ, *ಬೇಗಾರ್* ಮತ್ತು ಅದೇ ರೀತಿಯ ಇತರ ಬಲಾತ್ಕಾರದ ದುಡಿಮೆಗಳು ನಿಷೇಧಿಸಲ್ಪಟ್ಟಿವೆ; ಮತ್ತು ಈ ವಿಧಿಯ ವಿರುದ್ಧ ಹೋಗುವುದು ಒಂದು ಅಪರಾಧ ಮತ್ತದನ್ನು ಕಾನೂನು ಪ್ರಕಾರ ಶಿಕ್ಷಾರ್ಹವಾದುದು."

ಬಲಾತ್ಕಾರದ ದುಡಿಮೆಯನ್ನು ವ್ಯಾಖ್ಯಾನಿಸಿದರೆ, ಎರಡನೇದರಲ್ಲಿ ಗುಲಾಮಿ ಪದ್ಧತಿಯು ಮಾನವ ಹಕ್ಕುಗಳ ಉಲ್ಲಂಘನೆ ಎಂದು ಘೋಷಿಸುತ್ತದೆ. ಆದ್ದರಿಂದ ನಮ್ಮ ಸಂವಿಧಾನ ರಚನಾಕಾರರು ಬಲತ್ಕಾರದ ದುಡಿಮೆ ಮತ್ತು ಗುಲಾಮಿ ಪದ್ಧತಿಗಳನ್ನು ಆ ಅಂತಾರಾಷ್ಟ್ರೀಯ ಒಡಂಬಡಿಕೆಯಲ್ಲಿಯ ಅರ್ಥದಲ್ಲಿಯೇ ಬಳಸುತ್ತವೆ ಮತ್ತು ಅವನ್ನು ಪ್ರತ್ಯೇಕವಾಗಿ ವ್ಯಾಖ್ಯಾನಿಸಬೇಕಿಲ್ಲವೆಂದು ತಿಳಿದುಕೊಂಡಂತಿದೆ. ಬಲತ್ಕಾರದ ದುಡಿಮೆಯ ವ್ಯಾಖ್ಯಾನವನ್ನು ಮುಂದೆ ವಿಶ್ಲೇಷಿಸಲಾಗಿದೆ.

2. ಎರಡನೆಯದಾಗಿ ಜೀತ ಪದ್ಧತಿ ರದ್ದತಿ ಕಾನೂನು ಅನುಷ್ಠಾನಗೊಳಿಸಿದ ಸಂದರ್ಭ.

ಜೀತ ಕಾನೂನು ತುರ್ತು ಪರಿಸ್ಥಿತಿಯ ಕೂಸು. ಆದ್ದರಿಂದ ಜೀತ ಕಾನೂನನ್ನು ಸಿದ್ಧಪಡಿಸಲು ಬೇಕಾದ ಕಾಲಾವಕಾಶದ ಕೊರತೆಯಿಂದ ಕೆಲವು ಅಸ್ಪಷ್ಟತೆಗಳು ಕಾನೂನಿನಲ್ಲಿ ಉಳಿದಿರುವ ಸಂಗತಿಯನ್ನು ಒಪ್ಪಿಕೊಳ್ಳಬೇಕಾದದ್ದೇ. ಜೀತ ಪದ್ಧತಿ ರದ್ದತಿ 1970ರ ದಶಕದಲ್ಲಿದ್ದ ಆಗಿನ ಕೇಂದ್ರ ಸರ್ಕಾರವನ್ನು ನಡೆಸುತ್ತಿದ್ದ ಪಕ್ಷದ 20 ಅಂಶಗಳ ಯೋಜನೆಯಲ್ಲಿಯ ಒಂದು ಕಾರ್ಯಕ್ರಮವಾಗಿದ್ದು 1975ರಲ್ಲಿ ಅದರ ಕುರಿತು ಒಂದು ಅಧಿನಿಯಮವನ್ನು ಸುಗ್ರೀವಾಜ್ಞೆ ಮೂಲಕ ಅಕ್ಟೋಬರ್ 25ರಂದು ಜ್ಯಾರಿಗೊಳಿಸಲಾಯಿತು. ಆಗ ದೇಶವು ತುರ್ತು ಪರಿಸ್ಥಿತಿಯನ್ನು ಅನುಭವಿಸುತ್ತಿತ್ತು. ದೇಶದ ಅತಂತ್ರ ಪರಿಸ್ಥಿತಿಯನ್ನು ಹೋಗಲಾಡಿಸಲು ಆ ಕ್ರಮವನ್ನು ಬಳಸಲಾಗಿತ್ತು ಎಂದು ಆಗಿನ ಆಡಳಿತ ಪಕ್ಷವು ತನ್ನ ಕ್ರಮವನ್ನು ಸಮರ್ಥಿಸಿತ್ತು. ಆದರೂ ಅದಕ್ಕೆ ಬಲವಾದ ಹಾಗೂ ವ್ಯಾಪಕವಾದ ವಿರೋಧಗಳು ತಕ್ಷಣದಿಂದಲೇ ಹುಟ್ಟುಕೊಂಡಿದ್ದುವು. ಆದ್ದರಿಂದ ತನಗೆ ಜನ ಮನ್ನಣೆ ಪಡೆಯಲು ಹಲವಾರು ಜನಹಿತ ಕೆಲಸಗಳನ್ನು ಸರ್ಕಾರವು ಕೈಗೆತ್ತಿಕೊಂಡಿತ್ತು. ರಾಜಕೀಯ ಮತ್ತು ವ್ಯಕ್ತಿಗತವಾದ ಹಲವಾರು ಹಕ್ಕುಗಳನ್ನು ಮೊಟಕುಗೊಳಿಸಿದ್ದರೂ ಕಡುಬಡವರ ಉದ್ಧಾರಕ್ಕೆಂದು ಹಲವು ಉದಾತ್ತ ಕ್ರಮಗಳನ್ನು ಸರ್ಕಾರವು ತರಾತುರಿಯಲ್ಲಿ ರೂಪಿಸಿ ಅವನ್ನು ಜ್ಯಾರಿಗೊಳಿಸಲಾಗುತ್ತಿತ್ತು.

ಅಂತಹ ಒಂದು ಸನ್ನಿವೇಶವನ್ನು ಜೀತ ಪದ್ಧತಿ ರದ್ದತಿ ಅಧಿನಿಯಮವೂ ಎದುರಿಸಿತ್ತು. ಮೊದಲು 1975ರ ಅಕ್ಟೋಬರ್ 25ರಂದು ಸುಗ್ರೀವಾಜ್ಞೆ ಮೂಲಕ ಕಾರ್ಯರೂಪಕ್ಕೆ ಬಂದು ಅದಕ್ಕೆ ಸುದೀರ್ಘ ಕಾಲದ ಮಾನ್ಯತೆ ಸಿಗಲು ತುರ್ತು ಪರಿಸ್ಥಿತಿಯಲ್ಲಿ 1976ರ ಫೆಬ್ರವರಿ 9ರಂದು ನಡೆದ ಸಂಸತ್ಸಭೆಯಿಂದ ಅದು ಕಾನೂನಾಗಿ ಮಂಜೂರು ಆಯಿತು; ಮತ್ತು ಅದನ್ನು 1975ರ ಅಕ್ಟೋಬರ್ 25ರಿಂದಲೇ ಪೂರ್ವಾನ್ವಯವಾಗುವಂತೆ ಜ್ಯಾರಿಗೊಳಿಸಲಾಗಿತ್ತು. ಅಂದರೆ ಜನ ಪ್ರತಿನಿಧಿಗಳ ವ್ಯಾಪಕ ಚರ್ಚೆ, ವಿಮರ್ಶೆ ಇಲ್ಲದೇ ರೂಪಿಸಲ್ಪಟ್ಟ ಮತ್ತು ಜ್ಯಾರಿಗೊಳಿಸಲ್ಪಟ್ಟ ಕಾನೂನು ಇದು. ಅದರಿಂದಾಗಿ ಭಾರತೀಯ ಜೀತ ಕಾನೂನು ದೇಶದಲ್ಲಿ ಮಾತ್ರವಲ್ಲದೇ ಇಡೀ ಜಗತ್ತಿನಲ್ಲೇ ಸಾಮಾಜಿಕ ಪಿಡುಗಿನ ನಿವಾರಣೆಯೊಂದಕ್ಕೆ ಇರುವ ಅತ್ಯುತ್ತಮ ಕಾನೂನುಗಳಲ್ಲಿ ಅದು ಒಂದಾಗಿದೆ ಎಂದು ಪರಿಗಣಿಸಲ್ಪಟ್ಟಿದ್ದರೂ ಕೂಡಾ (ಕಾರ 2012:186, ಬೇಲ್ಸ್ 2004 (2000): 229) ಅದರಲ್ಲಿ ಕೆಲವು ಗೊಂದಲಗಳೂ ಅಸ್ಪಷ್ಟತೆಗಳೂ ಉಳಿದುಕೊಂಡು ಬಿಟ್ಟಿವೆ. ಅಂತಹ ಕೆಲವು ಗೊಂದಲಗಳು ಜೀತ ಪದ್ಧತಿ ವ್ಯಾಖ್ಯಾನವನ್ನೂ ಒಳಗೊಂಡಿವೆ.

ಆದರೆ ಅವು ಅಂತಹ ದೊಡ್ಡ ಗೊಂದಲಗಳೇನೂ ಅಲ್ಲ. ಹೆಚ್ಚಿನ ಅಥವಾ ಎಲ್ಲಾ ನ್ಯಾಯಿಕ ಗೊಂದಲಗಳನ್ನು ಸರ್ವೋಚ್ಚ ನ್ಯಾಯಾಲಯವು ತನ್ನ ಹಲವಾರು ತೀರ್ಪುಗಳಲ್ಲಿ ನೀಡಿದೆ. ಕೆಲವೊಂದು ಆಡಳಿತಾತ್ಮಕ ಅಸ್ಪಷ್ಟತೆಗಳನ್ನು ಕಾನೂನಿನ ಪರಿಮಿತಿಯಲ್ಲೇ ಸರಿಪಡಿಸಿಕೊಳ್ಳುವ ಸಾಧ್ಯತೆ ಇದೆ.

ಜೀತ ಪದ್ಧತಿ ರದ್ದತಿ ಕಾನೂನನ್ನು ಅನುಷ್ಠಾನಕ್ಕೆ ತರಲು ಸರ್ಕಾರದಲ್ಲಿ ಕೆಲವು ನಿರ್ದಿಷ್ಟ ಅಂಗಗಳಿವೆ. ಅವುಗಳಲ್ಲಿ ಮುಖ್ಯವಾಗಿ ಮೂರನ್ನು ಹೆಸರಿಸಬೇಕಾಗುತ್ತದೆ: 1. ರಾಷ್ಟ್ರ ಮಟ್ಟದಲ್ಲಿ ಜೀತಕಾನೂನಿನ ಅನುಷ್ಠಾನದ ಮತ್ತು ಅದರಡಿ ನಿಯಮಗಳನ್ನು ಹಾಗೂ ಯೋಜನೆಗಳನ್ನು ಸಿದ್ಧಪಡಿಸುವ ಜವಾಬ್ದಾರಿ ಕೇಂದ್ರ ಸರ್ಕಾರದ್ದು. 2. ಜೀತಕಾನೂನನ್ನು ಕಾರ್ಯರೂಪಕ್ಕೆ ತರುವ ಜವಾಬ್ದಾರಿ ರಾಜ್ಯ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳದ್ದು. 3. ರಾಷ್ಟ್ರಾದ್ಯಂತ ಜೀತ ಕಾನೂನಿನ ಅನುಷ್ಠಾನವನ್ನು ನಿರ್ವಹಣೆ ಮಾಡುವ ಜವಾಬ್ದಾರಿಯನ್ನು ಸರ್ವೋಚ್ಚ ನ್ಯಾಯಾಲಯದ ಒಂದು ಮಧ್ಯಂತರ ತೀರ್ಪಿನ ಕಾರಣದಿಂದ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು 1997ರಿಂದ ನಡೆಸುತ್ತಿದೆ. ಕೇಂದ್ರ ಸರ್ಕಾರದಲ್ಲಿ ಕಾರ್ಮಿಕ ಮತ್ತು ಉದ್ಯೋಗ ಇಲಾಖೆಯು ಜೀತ ಕಾನೂನನ್ನು ಅನುಷ್ಠಾನಗೊಳಿಸುತ್ತಿದ್ದರೆ ಬಹುತೇಕ ಎಲ್ಲ ರಾಜ್ಯಗಳಲ್ಲಿಯೂ ಕಾರ್ಮಿಕ ಇಲಾಖೆಗಳು ಜೀತ ಕಾನೂನಿನ ಅನುಷ್ಠಾವನ್ನು ನಿರ್ವಹಿಸುತ್ತಿವೆ. ಕರ್ನಾಟಕದಲ್ಲಿ ಮಾತ್ರ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಆ ಜವಾಬ್ದಾರಿಯನ್ನು ಹೊತ್ತಿದೆ.

**5.3 ಜೀತ ಪದ್ಧತಿಯ ವ್ಯಾಖ್ಯಾನ:**

1976ರ ಜೀತಪದ್ಧತಿ ರದ್ದತಿ ಕಾಯ್ದೆಯ ಅನುಚ್ಛೇದ 2ಜಿಯಲ್ಲಿಯ ವ್ಯಾಖ್ಯಾನ[88]ವನ್ನು ಸರಳವಾಗಿ ಹಾಗೂ ಸ್ಪಷ್ಟವಾಗಿ ಮುಂದೆ ವಿವರಿಸಲಾಗಿದೆ.

ಸರಳವಾಗಿ ಮತ್ತು ಚುಟುಕಾಗಿ ಹೇಳುವುದಾದರೆ ಜೀತ ಪದ್ಧತಿಯು ಒಂದು ಬಲಾತ್ಕಾರದ ದುಡಿಮೆ. ಅದರಲ್ಲಿ ಒಬ್ಬ ವ್ಯಕ್ತಿಯು ಐದು ಕಾರಣಗಳಲ್ಲಿ ಯಾವುದಾದರೂ ಒಂದು ಅಥವಾ ಹೆಚ್ಚು ಕಾರಣಗಳಿಂದಾಗಿ ನಾಲ್ಕು ತರಹದ ಹಕ್ಕು ಅಥವಾ ಸ್ವಾತಂತ್ರ್ಯಗಳಲ್ಲಿ ಯಾವುದಾದರೂ ಒಂದು ಅಥವಾ ಹೆಚ್ಚಿನ ಹಕ್ಕು ಅಥವಾ ಸ್ವಾತಂತ್ರ್ಯಗಳನ್ನು ಕಳೆದುಕೊಳ್ಳುತ್ತಾಳೆ.

ಜೀತ ಮಾಡಲು ಒಪ್ಪುವಂತೆ ಒತ್ತಡ ತರುವ ಅಥವಾ ಒಪ್ಪಂದಕ್ಕೆ ಬರುವಂತೆ ನಿರ್ಬಂಧಿಸುವ ಐದು ಕಾರಣಗಳು ಈ ರೀತಿಯಾಗಿರುವುವು:

1. ಮುಂಗಡ ಅಥವಾ ಸಾಲ ತೆಗೆದುಕೊಂಡಿರುವುದು; ಅಥವಾ
2. ಬೇರೆ ತರಹದ ಆರ್ಥಿಕ ಸೌಲಭ್ಯವನ್ನು ಪಡೆದಿರುವುದು; ಅಥವಾ
3. ತಂದೆ ಅಥವಾ ಇತರೆ ಪೂರ್ವಜರಿಂದ ಬಂದಿರುವ ಭಾದ್ಯತೆ; ಅಥವಾ

---

[88] ಮೂಲ ಪಾಠವನ್ನು ಅಡಕ IIIರಲ್ಲಿ ನೋಡಬಹುದು)

4. ಸಾಮಾಜಿಕ ಪದ್ಧತಿಯಿಂದ ಇರುವ ನಿರ್ಬಂಧ; ಅಥವಾ

5. ಒಂದು ನಿರ್ದಿಷ್ಟ ಸಮುದಾಯದಲ್ಲಿ ಹುಟ್ಟಿರುವುದರಿಂದ ಬಂದಿರುವ ಕರ್ತವ್ಯ.

ಜೀತ ನಿಮಿತ್ತ ಒಬ್ಬ ಜೀತದಾಳು ಕಳಕೊಳ್ಳುವ ನಾಲ್ಕು ಹಕ್ಕು ಅಥವಾ ಸ್ವಾತಂತ್ರ್ಯಗಳು ಈ ತೆರನಾಗಿರುವುವು:

1. ಕನಿಷ್ಠ ವೇತನ ಪಡೆಯುವುದು; ಅಥವಾ

2. ಇಷ್ಟಪಟ್ಟಲ್ಲಿ ಕೆಲಸಕ್ಕೆ ಹೋಗುವುದು; ಅಥವಾ

3. ಸ್ವತಂತ್ರವಾಗಿ ಚಲಿಸುವುದು; ಅಥವಾ

4. ತನ್ನ ಶ್ರಮ ಅಥವಾ ಆಸ್ತಿಗೆ ಮಾರುಕಟ್ಟೆಯಲ್ಲಿ ಸಿಗಬೇಕಾದ ಮೌಲ್ಯ ಪಡೆಯುವುದು.

ಈ ಅಂಶಗಳನ್ನಲ್ಲಾ ಸಂಕ್ಷಿಪ್ತಗೊಳಿಸಿ ಹೇಳುವುದಾದರೆ ತಾನು ಸಾಲ ತೆಗೆದು ಕೊಂಡಿರುವುದರಿಂದ (ಅಥವಾ ಇನ್ನಿತರ ಆರ್ಥಿಕ ಸೌಲಭ್ಯ ಪಡೆದಿರುವುದರಿಂದ ಅಥವಾ ವಂಶಪಾರಂಪರ್ಯದ ಅಥವಾ ಸಾಮಾಜಿಕ ಅಥವಾ ಸಮುದಾಯದ ನಿರ್ಬಂಧಕ್ಕೊಳಗಾಗಿರುವುದರಿಂದ) ಕಾನೂನು ಸಮ್ಮತ ರೀತಿಯಲ್ಲಿ ತನ್ನ ಶ್ರಮಕ್ಕೆ ಸಂಬಂಧ ಪಟ್ಟ ಲಾಭ ಮತ್ತು ಸ್ವಾತಂತ್ರ್ಯಗಳನ್ನು ಕಳೆದು ಕೊಂಡು ಸಲ್ಲಿಸುವ ಸಂಪೂರ್ಣ ಅಥವಾ ಭಾಗಶಃವಾಗಿರುವ ಬಲಾತ್ಕಾರದ ದುಡಿಮೆಯ ಪರಿಸ್ಥಿತಿಯು ಜೀತ ಪದ್ಧತಿ ಆಗಿರುತ್ತದೆ.

ಮೇಲೆ ವಿವರಿಸಿರುವ ಅಂಶಗಳನ್ನೆಲ್ಲಾ ಮುಂದಿನ ನಾಲ್ಕು ಮುಖ್ಯ ಅಂಶಗಳಲ್ಲಿ ಕ್ರೋಢೀಕರಿಸಬಹುದು:

1) ಅದು ಒಂದು ಬಲಾತ್ಕಾರದ ದುಡಿಮೆ. ಅದು ಪೂರ್ಣ ಪ್ರಮಾಣದ್ದಾಗಿರಬಹುದು ಅಥವಾ ಭಾಗಶಃವೂ ಆಗಿರಬಹುದು.

2) ಜೀತದಾಳು ಯಜಮಾನನಿಂದ ಸಾಲ ಪಡೆದು ಅಥವಾ ಅವನಿಂದ ಬೇರೆ ರೀತಿಯ ಆರ್ಥಿಕ ಸೌಲಭ್ಯ ಪಡೆದು ಅಥವಾ ತನ್ನ ವಂಶಪಾರಂಪರ್ಯದ, ಸಾಮುದಾಯಿಕ ಅಥವಾ ಸಾಮಾಜಿಕ ಬದ್ಧತೆಗೆ ಒಳಗಾಗಿ ಅವನಿಗೆ ಸೇವೆ ಸಲ್ಲಿಸುವ ನಿರ್ಬಂಧಕ್ಕೊಳಗಾಗಿರುತ್ತಾನೆ.

3) ಸೇವೆ ಸಲ್ಲಿಸುವಾಗ ಒಬ್ಬ ಜೀತದಾಳು ಕನಿಷ್ಠ ವೇತನಕ್ಕಿಂತ ಕಡಿಮೆ ಮಜೂರಿ ಅಥವಾ ನಾಮಮಾತ್ರ ಮಜೂರಿ ಪಡೆಯುತ್ತಾನೆ ಅಥವಾ ಮಜೂರಿಯನ್ನೇ ಪಡೆದಿರುವುದಿಲ್ಲ.

4) ಸಾಲ ತೀರುವ ತನಕ ಅಥವಾ ಬೇರೆ ನಿರ್ಬಂಧ ಕೊನೆಗಾಣುವ ತನಕ ಜೀತದಾಳುವು ತನ್ನ ಶ್ರಮವನ್ನು ಬೇರೆಯವರಿಗೆ ಮಾರುವಂತಿಲ್ಲ.

ಈ ಮೇಲಿನ ನಾಲ್ಕು ಅಂಶಗಳಿದ್ದರೆ ಒಬ್ಬ ವ್ಯಕ್ತಿಯನ್ನು ಜೀತದಾಳುವೆಂದು ಪರಿಗಣಿಸಬಹುದು. ಒಂದು ವೇಳೆ ಸಾಲವಿಲ್ಲದೇ ಕೊನೆಯ ಎರಡು ಅಂಶಗಳಿದ್ದರೂ ಅದು ಜೀತವೆನಿಸುತ್ತದೆ[89]. ಸರ್ವೋಚ್ಚ ನ್ಯಾಯಾಲಯದ ಒಂದು ತೀರ್ಪಿನ ಪ್ರಕಾರ ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿಗೆ ದುಡಿಯುವ ವ್ಯಕ್ತಿಯನ್ನೂ ಜೀತದಾಳುವೆಂದು ಪರಿಗಣಿಸಬಹುದಾಗಿರುಗುತ್ತದೆ[90]. ಆದರೆ ಜೀತ ಪದ್ಧತಿ ರದ್ದತಿ ಕಾನೂನನ್ನು ಒಟ್ಟಾರೆಯಾಗಿ ಪರಿಗಣಿಸಿದರೆ ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿಯ ಜೊತೆಗೆ ಬೇರೆ ಕಡೆ ಕೆಲಸಕ್ಕೆ ಹೋಗುವ ಸ್ವಾತಂತ್ರ್ಯವಿಲ್ಲದಿದ್ದರೆ ಅಥವಾ ಬೇರೆ ಸ್ವಾತಂತ್ರ್ಯಗಳನ್ನು ಕಳೆದುಕೊಂಡಿದ್ದರೆ ಮಾತ್ರ ಒಬ್ಬನನ್ನು ಜೀತದಾಳುವೆಂದು ತೀರ್ಮಾನಿಸಬೇಕೆಂದು ತಿಳಿಯುತ್ತದೆ. ಅಥವಾ ಆ ಅರ್ಥದಲ್ಲಿ ಮಾತ್ರ ಒಬ್ಬ ವ್ಯಕ್ತಿಯನ್ನು ಜೀತದಾಳುವೆಂದು ಕಾನೂನಿನಲ್ಲಿ ಪರಿಗಣಿಸಲಾಗಿದೆ ಎಂದು ತಿಳಿದು ಕೊಳ್ಳಬೇಕು. ಅದೇ ಅರ್ಥದಲ್ಲಿಯೇ ಈ ಅಧ್ಯಯನದಲ್ಲಿಯೂ ಈ ರೀತಿ ಪರಿಗಣಿಸಲಾಗಿದೆ. ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿಗೆ ಕೆಲಸ ಮಾಡುವ ಕಾರ್ಮಿಕರೆಲ್ಲಾ ಜೀತದಾಳುಗಳಾದರೆ ಅಸಂಘಟಿತ ಕ್ಷೇತ್ರದ ಎಲ್ಲಾ ಕಾರ್ಮಿಕರು ಅಂದರೆ ಇಡೀ ಕಾರ್ಮಿಕ ವರ್ಗದ 93%ರಷ್ಟಿರುವ ಅಸಂಘಟಿತ ವಲಯದ

---

89 ಅಧ್ಯಾಯ ನಾಲ್ಕರಲ್ಲಿ ವಿವರಿಸಿರುವಂತೆ, ಭಾರತದಲ್ಲಿರುವ 'ಜೀತ ಪದ್ಧತಿ'ಯ ಪರಿಕಲ್ಪನೆಯಲ್ಲಿ ಬೇರೆಬೇರೆ ಕಾಲಘಟ್ಟಗಳಲ್ಲಿ ಬೇರೆಬೇರೆ ರೂಪಾಂತರಗಳಾಗಿದ್ದು ಈಗ ಇರುವ 'ಜೀತ ಪದ್ಧತಿ'ಯು ಬ್ರಿಟಿಷರು ಭಾರತವನ್ನು ಆಳಲಿಕ್ಕೆ ಶುರು ಮಾಡಿದ ನಂತರದ ಕಾಲದಲ್ಲಿ ರೂಪಾಂತರ ಪಡೆದಿದ್ದು ಎಂದು ಪ್ರತಿಪಾದಿಸಲಾಗಿದೆ. ಆ ಪರಿಕಲ್ಪನೆಯ ಒಂದು ಮುಖ್ಯ ಅಂಶವೇನೆಂದರೆ ಪಡೆದಿರುವ ಮುಂಗಡ ಅಥವಾ ಸಾಲ. ಭಾರತದಲ್ಲಿ ಅದೇ ಕಾಲದಲ್ಲಿ ಪ್ರಚಲಿತವಿದ್ದ ಇನ್ನೊಂದು ಗುಲಾಮಿ ಪದ್ಧತಿ ತರಹದ ಪದ್ಧತಿ ಎಂದರೆ 'ಇಂಡೆಂಚರ್ಡ್ ಲೇಬರ್' ಅದರಲ್ಲಿಯೂ ಮುಂಗಡ ಪಡೆದು ಇಂತಿಷ್ಟೇ ವರ್ಷ ದುಡಿಯಬೇಕೆಂದು ಒಪ್ಪಂದ ಮಾಡಲಾಗುತ್ತಿತ್ತು. ತೋರಿಕೆಗೆ ಇದೊಂದು ಮುಕ್ತವಾಗಿ ಸ್ವ ಇಚ್ಛೆಯಿಂದ ಮಾಡಿದ ಬಲಾತ್ಕಾರವಿಲ್ಲದ ಅಥವಾ ವಿಪರೀತ ಶೋಷಣೆ ಇಲ್ಲದ ಕಾರ್ಮಿಕರ ಹಿತರಕ್ಷಣೆಗಾಗಿ ಇರುವ ದುಡಿಮೆಯ ಒಪ್ಪಂದವೆಂದು ಇದ್ದರೂ ಅದರ ಕಾರ್ಯಾಚರಣೆಯಲ್ಲಿ ಅದು ಮಾಲಿಕರ ಹಿತರಕ್ಷಣೆ ಮಾಡುವ, ಕಾರ್ಮಿಕರನ್ನು ಅವರು ಒಪ್ಪಿರುವ ಅವಧಿಗಿಂತಲೂ  ಅವರನ್ನು ಬಲಾತ್ಕಾರವಾಗಿ ದುಡಿಸುವ, ಮತ್ತು ಒಪ್ಪಿದ 'ಕೂಲಿ' ಅಥವಾ ಸಂಭಾವನೆಗಿಂತ ಬಹಳ ಕಡಿಮೆ ಕೂಲಿ ಕೊಡುತ್ತಿರುವ ವ್ಯವಸ್ಥೆಯಾಗಿ ಅದು ಮಾರ್ಪಟ್ಟಿತು. ತೀವ್ರ ಪ್ರತಿರೋಧದ ನಂತರ ಅದನ್ನು ತಡೆಹಿಡಿಯಲಾಯಿತು (ನೋಡಿ: ಟಿಂಕರ್ 1974: 365).

ಪಡೆದಿರುವ ಮುಂಗಡ ಸಾಮಾನ್ಯವಾಗಿ ಹಣ ರೂಪದಲ್ಲೇ ಇತ್ತು. ಆದರೆ ಜೀತ ಕಾನೂನು ಮುಂಗಡವು ಹಣ ರೂಪದಲ್ಲಿರಬಹುದು; ಅಥವಾ ದವಸಧಾನ್ಯ ರೂಪದಲ್ಲಿರಬಹುದು; ಅಥವಾ ಭಾಗಶಃ ಹಣ, ಭಾಗಶಃ ದವಸಧಾನ್ಯದ ರೂಪದಲ್ಲಿರಬಹುದು. ಇದು ಏತಕ್ಕೆಂದರೆ, ಬ್ರಿಟಿಷರ ಆಳ್ವಿಕೆ ಮುಂಚೆ ಮತ್ತು ನಂತರವೂ ಜಾತಿ ಪದ್ಧತಿಯ ಆರ್ಥಿಕ ರೂಪವಾಗಿ 'ಜಜ್‌ಮನಿ' (ಆಯಗಾರಿಕೆ) ಪದ್ಧತಿ ಇತ್ತು. ಅದರಲ್ಲಿ ಸಂಬಂಧಪಟ್ಟ ಎಲ್ಲಾ ಜಾತಿಯವರು ನೀಡುವ ಸೇವೆಗಳಿಗೆ ದವಸಧಾನ್ಯ ರೂಪದಲ್ಲಿಯೇ 'ಪ್ರತಿಫಲ' ಸಿಗುತ್ತಿತ್ತು. ಇದನ್ನು ಅಧ್ಯಾಯ ಮೂರರಲ್ಲಿ ವಿವರಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಇನ್ನೊಂದು ಕಡೆ ವಿವರಿಸಿದ್ದಂತೆ ಭಾರತದಲ್ಲಿಯ ಜಾತಿ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಯಾಗಿಲ್ಲ; ಹಿಂದಿನ ಹಲವಾರು ವ್ಯವಸ್ಥೆಗಳು, ಆಚರಣೆಗಳು, ಶೋಷಣೆಯ ಪದ್ಧತಿಗಳು ಸ್ವಲ್ಪ ತೋರಿಕೆಯ ಬದಲಾವಣೆಗಳೊಂದಿಗೆ ಈಗಲೂ ಮುಂದುವರಿಯುತ್ತಿವೆ. ಬ್ರಿಟಿಷರ ಆಳ್ವಿಕೆಯ ಮುಂಚಿನ ಮತ್ತು ಕ್ರಿಸ್ತ ಶಕದ ಆರಂಭದಿಂದ ದಲಿತರ ಶೋಷಣೆಯನ್ನು 'ಜಾತಿ ಗುಲಾಮಿ ಪದ್ಧತಿ'ಯೆಂದು ಗುರುತಿಸಲಾಗಿದೆ. ಅಲ್ಲಿ ಯಾವುದೇ ಹಣದ ಪ್ರತಿಫಲ ಇರಲಿಲ್ಲ. ಹಾಗೆಯೇ ಬ್ರಿಟಿಷರ ಆಳ್ವಿಕೆಯ ಕಾಲದ ಜೀತಪದ್ಧತಿಯಲ್ಲಿ ಹಣರೂಪದ ಮುಂಗಡವು ಸಾಮಾನ್ಯವಾಗಿದ್ದರೂ ದವಸಧಾನ್ಯ ರೂಪದ ಮುಂಗಡವೂ ಹಲವಾರು ಕಡೆ ಬಳಕೆಯಲ್ಲಿತ್ತು. ಅದಕ್ಕೋಸ್ಕರ ಜೀತದಾಳುಗಳ ವಾಸ್ತವ ಪರಿಸ್ಥಿತಿಯ ಕುರಿತು ಉತ್ತಮ ಅರಿವು ಮತ್ತು ತೀಕ್ಷ್ಣ ಒಳನೋಟವಿದ್ದ ಜೀತ ಕಾನೂನು ರಚನಕಾರರು ಜೀತ ಪದ್ಧತಿಯ ವ್ಯಾಖ್ಯಾನದಲ್ಲೂ ಮುಂಗಡದ ವ್ಯಾಖ್ಯಾನದಲ್ಲೂ ಈ ಅಂಶಗಳನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ.

ಜೀತ ಪದ್ಧತಿ ವ್ಯಾಖ್ಯಾನದ ಆರಂಭದಲ್ಲಿ ಸಾಲ ಮತ್ತು ಸಾಲಗಾರ ಹಾಗೂ ಸಾಲಿಗರ ನಡುವಿನ ಸಂಬಂಧದ ಪ್ರಸ್ತಾಪವಿದ್ದರೂ ಇಡೀ ವ್ಯಾಖ್ಯಾನವನ್ನು ಒಟ್ಟಾರೆ ಗ್ರಹಿಸಿದರೆ ಸಾಲವು ಜೀತಪದ್ಧತಿಯಲ್ಲಿ ಇರಬಹುದಾದ ಐದು ನಿರ್ಬಂಧಿಸುವ ಕಾರಣಗಳಲ್ಲಿ ಅದು ಒಂದು ಮಾತ್ರ ಎಂಬುದು ಸ್ಪಷ್ಟ (ನೋಡಿ: ಎಐಆರ್ ಸರ್ವೋಚ್ಚ ನ್ಯಾಯಾಲಯ 1473: ಪ್ಯಾರ 15; ರಾಷ್ಟ್ರೀಯ ಗ್ರಾಮೀಣ ಕಾರ್ಮಿಕತೆ ಆಯೋಗದ ವರದಿ 1991: ಅಧ್ಯಾಯ 8).

90 ಎಐಆರ್ 1982 ಸರ್ವೋಚ್ಚ ನ್ಯಾಯಾಲಯ 1473: ಪ್ಯಾರ 15; ಎಐಆರ್ 1984 ಸರ್ವೋಚ್ಚ ನ್ಯಾಯಾಲಯ 802, ಪ್ಯಾರ 3: ಕನಿಷ್ಠ ವೇತನಕ್ಕಿಂತ ಕಡಿಮೆ ಸಿಗುವ ದುಡಿಮೆಗಳೆಲ್ಲಾ ಜೀತ ಆಗುತ್ತದೆ ಎಂದು ಕೆಲವರು ಸಮರ್ಥಿಸುತ್ತಾರೆ. ಜೀತ ಕಾನೂನಿನ ಪ್ರಕಾರ ಅದು ಸಮರ್ಪಕ ನಿಲುವಲ್ಲ. ಆದರೆ 'ಪರಿವರ್ತನಾತ್ಮಕ ಸಂವಿಧಾನ'ದ ಪರಿಕಲ್ಪನೆಯಲ್ಲಿ ಸಂವಿಧಾನದ ವಿಧಿ 23ರಲ್ಲಿಯ 'ಬಲಾತ್ಕಾರದ ದುಡಿಮೆ'ಯು ಕನಿಷ್ಠ ವೇತನ ಕೊಡದೇ ದುಡಿಸವುದೂ ಒಳಗೊಂಡಿರುತ್ತದೆ ಎಂದು ತಿಳಿದುಕೊಳ್ಳಬಹುದು; ಮತ್ತು ಅದೇ ಅರ್ಥದಲ್ಲಿ ಸರ್ವೋಚ್ಚ ನ್ಯಾಯಾಲಯವು 1982ರಲ್ಲಿ ತೀರ್ಪನನು ನೀಡಿತ್ತು (ಎಐಆರ್ ಸರ್ವೋಚ್ಚ ನ್ಯಾಯಾಲಯ 1473: ಪ್ಯಾರ 15).

ಕಾರ್ಮಿಕರೆಲ್ಲರನ್ನೂ ಜೀತದಾಳುಗಳೆಂದು ಪರಿಗಣಿಸಬೇಕಾಗುತ್ತದೆ. ಸಂಘಟಿತ ವಲಯದಲ್ಲಿಯೂ ಅಸಂಘಟಿತರಾಗಿ ದುಡಿಯುವ ಹಲವಾರು ಮಂದಿಯನ್ನೂ ಜೀತದಾಳುಗಳೆಂದು ಪರಿಗಣಿಸಬೇಕಾಗುತ್ತದೆ.

1976ರ ಜೀತಪದ್ಧತಿ ರದ್ದತಿ ಕಾಯ್ದೆಯ ಅನುಚ್ಛೇದ 2ಜಿಯಲ್ಲಿಯ ವ್ಯಾಖ್ಯಾನದ ಒಂದು ವಿವರವನ್ನು ಈಗ ಸ್ಪಷ್ಟ ಪಡಿಸುವ ಅಗತ್ಯವಿದೆ. ಅದು ಬಲಾತ್ಕಾರದ ದುಡಿಮೆ ಕುರಿತು. ಅದು ಏನೆಂದು ಕಾನೂನು ಅಥವಾ ಸಂವಿಧಾನವೂ ತಿಳಿಸಿರುವುದಿಲ್ಲ. ಆದ್ದರಿಂದ ಅದರ ಅರ್ಥಕ್ಕೆ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ 1939ರ ಒಡಂಬಡಿಕೆಗೆ ಮೊರೆ ಹೋಗಬೇಕಾಗುತ್ತದೆ. ಅದರ ಪ್ರಕಾರ ಬಲಾತ್ಕಾರ ದುಡಿಮೆಯಲ್ಲಿ ಎರಡು ಅಂಶಗಳಿರುತ್ತವೆ: 1. ಒಬ್ಬನ ಇಚ್ಛೆಗೆ ವಿರುದ್ಧವಾಗಿ ಅಥವಾ ಅವನ ಒಪ್ಪಿಗೆ ಇಲ್ಲದೇ ಅವನಿಂದ ಸೇವೆಯನ್ನು ಪಡೆಯುವುದು (ಸ್ವ ಇಚ್ಛಾ ವಿರೋಧವಾಗಿ). 2. ಆ ಸೇವೆಯನ್ನು ಹಿಂಸೆ ನೀಡುವ ಅಥವಾ ನೀಡಬಹುದಾದ ಭಯದಿಂದ ಪಡೆಯುವುದು (ಹಿಂಸಾಭಯದಿಂದ). ಕಾನೂನು ಬಂದಾಗ ಮತ್ತು ಈಗಿನ ಹೆಚ್ಚಿನ ಸಂದರ್ಭಗಳಲ್ಲಿ ಜೀತದಾಳುಗಳೇ ಸ್ವ ಇಚ್ಛೆಯಿಂದ ತಮಗೆ ಸಾಲದ ಅಗತ್ಯವಿದ್ದಾಗ ತಾವೇ ಮನಸ್ಸು ಮಾಡಿ ಸಾಲ ನೀಡುವ ವ್ಯಕ್ತಿಯ ಹತ್ತಿರ ಹೋಗಿ ತಮಗೆ ಸಾಲ ನೀಡಬೇಕೆಂದು ಸಾಲಿಗನಿಗೆ ಮನವರಿಕೆ ಮಾಡಿ ಸಾಲಿಗನ ಯಾವುದೇ ಷರತ್ತುಗಳನ್ನು ಒಪ್ಪಿಕೊಂಡೇ ಆ ಸಾಲವನ್ನು ತನ್ನ ಅಥವಾ ತನ್ನ ಇತರ ಅವಲಂಬಿತರ ದುಡಿಮೆಯಿಂದ ತೀರಿಸುವುದಾಗಿ ಒಪ್ಪಂದ ಮಾಡಿರುತ್ತಾನೆ. ಹೀಗಿರುವಾಗ ಇದು ಬಲಾತ್ಕಾರ ದುಡಿಮೆ ಕುರಿತ ಅಂತಾರಾಷ್ಟ್ರೀಯ ಒಡಂಬಡಿಕೆಯ ಎರಡು ಮುಖ್ಯ ಅಂಶಗಳಲ್ಲಿ ಒಂದನ್ನು ನಿರಾಕರಿಸಿದಂತಾಗುತ್ತದೆ. ಇದೇ ವಾದವನ್ನು ಬಳಸಿ ಕಾನೂನು ಬಂದಾಗ ದೇಶದಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಪ್ರಚಲಿತವಿದ್ದ ಜೀತಪದ್ಧತಿಯು ಜೀತವಲ್ಲ; ತಮ್ಮ ಮೇಲೆ ವಿನಾಕಾರಣ ಅಧಿಕಾರಿಗಳು ಕ್ರಮಕೈಗೊಳ್ಳುವುದನ್ನು ಅನೂರ್ಜಿತಗೊಳಿಸಬೇಕೆಂದು ಹಲವಾರು ಜಮೀನ್ದಾರರು ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗಿದ್ದರು. ಸರ್ವೋಚ್ಚ ನ್ಯಾಯಾಲಯವು ಆ ವಾದಗಳನ್ನೆಲ್ಲಾ ತಿರಸ್ಕರಿಸಿ ಸ್ವ ಇಚ್ಛೆಯಿಂದ ಸ್ವತಃ ಜೀತಸಾಲಕ್ಕೆ ಮೊರೆಹೋಗಿ ಜೀತಸೇವೆ ಮುಖಾಂತರ ಅದನ್ನು ತೀರಿಸಲಿಕ್ಕೆ ಸ್ವ ಇಚ್ಛೆಯಿಂದ ಮಾಡಿದ ಒಪ್ಪಂದವೂ ಬಲಾತ್ಕಾರದ ಒಪ್ಪಂದವೆನಿಸುತ್ತದೆ; ಆದ್ದರಿಂದ ಅದು ಸಂವಿಧಾನದ ವಿಧಿ 23ರಲ್ಲಿ ಪ್ರಸ್ತಾಪಿಸಲಾದ ಬಲಾತ್ಕಾರದ ದುಡಿಮೆಯ ವ್ಯಾಪ್ತಿಯೊಳಗೆ ಬರುತ್ತದೆ ಎಂದು 1982ರಲ್ಲಿ ತನ್ನ ಒಂದು ಮಹತ್ತರ ತೀರ್ಪಿನಲ್ಲಿ ಸ್ಪಷ್ಟ ಪಡಿಸಿದೆ[91] (ಲಿಬರೇಷನ್ ಫ್ರಮ್ ಬಾಂಡೇಜ್ 2003: 100–123). ಇದೇ ರೀತಿಯ ತೀರ್ಪನ್ನು ಸರ್ವೋಚ್ಚ ನ್ಯಾಯಾಲಯವು 1984ರಲ್ಲೂ ಇನ್ನೊಂದು ಸುಧೀರ್ಘ ತೀರ್ಪಲ್ಲಿ[92] ಪುನರುಚ್ಚಿಸಿದೆ (ಲಿಬರೇಷನ್ ಫ್ರಮ್ ಬಾಂಡೇಜ್. 2003: 124–195). ಒಬ್ಬ ವ್ಯಕ್ತಿಯು ತನ್ನ ಮೇಲೆ ದೈಹಿಕ ಅಥವಾ ಕಾನೂನಾತ್ಮಕ ಒತ್ತಡ ಇಲ್ಲದಿದ್ದರೂ ತನ್ನ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಕಾರಣವಾಗಿ ಒಬ್ಬ ವ್ಯಕ್ತಿಯು ಕನಿಷ್ಠ ವೇತನಕ್ಕಿಂತ ಕಡಿಮೆ ವೇತನಕ್ಕೆ ದುಡಿಯಲು ಒಪ್ಪುವುದೂ

---

91 ಎಐಆರ್ 1982 ಸರ್ವೋಚ್ಚ ನ್ಯಾಯಾಲಯ 1473: ಪ್ಯಾರಾ 15

92 ಎಐಆರ್ 1984 ಸರ್ವೋಚ್ಚ ನ್ಯಾಯಾಲಯ 802: ಪ್ಯಾರಾ 3

ಬಲಾತ್ಕಾರವೇ ಆಗಿದೆ ಎಂದು ಸರ್ವೋಚ್ಚ ನ್ಯಾಯಾಲಯವು ವ್ಯಾಖ್ಯಾನಿಸಿ ಅಂತಾರಾಷ್ಟ್ರೀಯ ಬಲಾತ್ಕಾರದ ಒಡಂಬಡಿಕೆಯಲ್ಲಿಯ 'ಬಲಾತ್ಕಾರ' ಕಲ್ಪನೆಗೆ ವಿಶಾಲಾರ್ಥ ಕಲ್ಪಿಸಿದೆ; ಮಾತ್ರವಲ್ಲ ಜೀತ ಕಾನೂನಿನಲ್ಲಿಯ ಜೀತ ಪದ್ಧತಿಯಲ್ಲಿ ತೋರಿಕೆಗೆ ಸ್ವ ಇಚ್ಛೆಯಿಂದ ಮಾಡಿದ ಒಪ್ಪಂದದ ಮೇರೆಗಿನ ದುಡಿಮೆಯೂ ನಿಜಾರ್ಥದಲ್ಲಿ ಬಲಾತ್ಕಾರದ ದುಡಿಮೆಯಾಗುತ್ತದೆ ಎಂದು ಸ್ಪಷ್ಟಪಡಿಸಿದೆ.

ಜೊತೆಗೆ 1976ರ ಜೀತಪದ್ಧತಿ ರದ್ದತಿ ಕಾಯ್ದೆಯ ಅನುಚ್ಛೇದ 2ಜಿಯಲ್ಲಿಯ ವ್ಯಾಖ್ಯಾನದಲ್ಲಿ ಬರುವ ಕೆಲವು ಆನುಷಂಗಿಕ ಅಂಶಗಳನ್ನು ಪ್ರಸ್ತಾಪಿವುದು ಆವಶ್ಯಕವಾಗಿದೆ:

1. ಜೀತ ದುಡಿಮೆಯು ಸಂಪೂರ್ಣವಾಗಿ ಬಲಾತ್ಕಾರದ ದುಡಿಮೆಯಾಗಿರಬೇಕೆಂದಿಲ್ಲ. ಒಂದು ದುಡಿಮೆಯಲ್ಲಿ ಭಾಗಶಃ ಬಲಾತ್ಕಾರವಿದ್ದರೂ ಅದು ಜೀತ ದುಡಿಮೆಯಾಗಿರುತ್ತದೆ.

2. ಜೀತ ಕಾನೂನಿನ 2ನೇ ಪರಿಚ್ಛೇದದ ಎರಡು ವ್ಯಾಖ್ಯಾನಗಳು– ಜೀತದಾಳು (2ಡಿ) ಮತ್ತು ಜೀತ ಪದ್ಧತಿ(2ಜಿ) – ಜೀತದಲ್ಲಿ ಜೀತಸಾಲ ಇದ್ದೇ ಇರಬೇಕೆಂಬ ವಿವರಣೆಗೆ ಆಸ್ಪದ ಕೊಡುತ್ತವೆ. ಆದರೆ 2ಜಿಯನ್ನು ಆಳವಾಗಿ ಅಭ್ಯಸಿಸಿದರೆ ಜೀತಸಾಲವು ಜೀತ ಒಪ್ಪಂದಕ್ಕೆ ಬರಲು ಇರಬಹುದಾದ ಐದು ಕಾರಣಗಳಲ್ಲಿ ಅದು ಒಂದು ಮಾತ್ರ. ಅಂದರೆ ಜೀತಸಾಲವಿಲ್ಲದಿದ್ದರೂ ಮೇಲೆ ವಿವರಿಸಿದ ಎರಡು ಅಂಶಗಳು (3ನೇ ಮತ್ತು 4ನೇ ಅಂಶಗಳು: ಕಡಿಮೆ ಕೂಲಿ ಸಿಗುವುದು ಮತ್ತು ಕೆಲಸ ಬಿಟ್ಟು ಹೋಗುವ ಸ್ವಾತಂತ್ರ್ಯ ಇಲ್ಲದಿರುವುದು) ಇರುವ ಯಾವುದೇ ದುಡಿಮೆಯೂ ಜೀತವಾಗುತ್ತದೆ.

3. ಜೀತ ಕುರಿತಾಗಿ ಮಾಡುವ ಒಪ್ಪಂದಕ್ಕೆ ದಸ್ತಾವೇಜಿನ ಸಾಕ್ಷ್ಯ ಬೇಕಿಲ್ಲ. ಮೌಖಿಕ ಒಪ್ಪಂದವೂ ಜೀತ ಒಪ್ಪಂದವಾಗುತ್ತದೆ (ಜೀತ ಕಾನೂನು 2ಜಿ). ಜೀತಸಾಲವನ್ನು ಅಲ್ಲಗಳೆಯಲು ಸಾಲಿಗನೇ ರುಜುವಾತುಪಡಿಸಬೇಕು (ಜೀತ ಕಾನೂನು 15).

4. ಕೇವಲ ವಯಸ್ಕರಿಂದ ಮಾಡಿದ ಸೇವೆಯು ಮಾತ್ರ ಜೀತ ದುಡಿಮೆ ಆಗುತ್ತದೆ ಹೇಳಲು ಬರುವುದಿಲ್ಲ. ಮಕ್ಕಳ ದುಡಿಮೆಯೂ ಜೀತ ಕಾನೂನಿಗೆ ಒಳಪಡಬಹುದು (ಜೀತ ಕಾನೂನು 2ಜಿ).

5. ಜೀತ ದುಡಿಮೆಗೆ ಒಂದು ನಿರ್ದಿಷ್ಟ ಅವಧಿ ಇರಲೇ ಬೇಕೆಂದಿಲ್ಲ. ಅದನ್ನು ಒಂದು ನಿರ್ದಿಷ್ಟ ಅಥವಾ ಅನಿರ್ದಿಷ್ಟ ಅವಧಿಗೆ ಮಾಡಲು ಒಪ್ಪಂದ ಮಾಡಬಹುದು. ಅಂದರೆ ಸಾಯುವ ತನಕ ಅಥವಾ "ಇಡೀ ವರ್ಷ ತನಕ ಅಥವಾ ವಂಶಪಾರಂಪರ್ಯವಾಗಿ ದುಡಿದರೆ ಮಾತ್ರ ಅದು ಜೀತದುಡಿಮೆ ಆಗುತ್ತದೆ; ಇಲ್ಲದಿದ್ದರೆ ಅದು ಜೀತ ಅಲ್ಲ" ಎಂದು ಹೇಳಲು ಬರುವುದಿಲ್ಲ. ಒಂದು ಕಾಲಕ್ಕೆ ಸೀಮಿತವಾಗಿ ಮಾಡುವ ದುಡಿಮೆಯೂ ಜೀತವೆನಿಸಬಹುದು (ಜೀತ ಕಾನೂನು 2ಜಿ).

6. ಜೀತದಾಳುವಿನ ಪರವಾಗಿ ಒಬ್ಬ ವ್ಯಕ್ತಿಯು ಜಾಮೀನು ನಿಂತರೆ ಅಂತಹ ವ್ಯಕ್ತಿಯೂ ಜೀತದಾಳುವೆನಿಸುತ್ತಾನೆ (ಜೀತ ಕಾನೂನು 2ಜಿ).

7. ಗುತ್ತಿಗೆ ಕಾರ್ಮಿಕತೆ (ನಿಯಂತ್ರಣ ಮತ್ತು ನಿರ್ಮೂಲನೆ) ಕಾನೂನು, 1970 ಮತ್ತು ಅಂತಾರಾಜ್ಯ ವಲಸೆ ಕಾರ್ಮಿಕರ (ಕೆಲಸದ ಮತ್ತು ಸೇವೆಯ ಷರತ್ತುಗಳ ನಿಯಂತ್ರಣ) ಕಾನೂನು, 1979 ಅಡಿ ಬರುವ ಕಾರ್ಮಿಕರ ದುಡಿಮೆಯೂ ಜೀತ ಪದ್ಧತಿಯ ವ್ಯಾಖ್ಯಾನದಡಿ ಬಂದರೆ ಅವನ್ನೂ ಜೀತವೆಂತಲೇ ಪರಿಗಣಿಸಬೇಕಾಗುತ್ತದೆ (ಜೀತ ಕಾನೂನು 2ಜಿ).

ಸಾಮಾನ್ಯವಾಗಿ ಕಾನೂನಿನಡಿ ತನ್ನ ಸೇವೆಗೆ ಕನಿಷ್ಠ ವೇತನ ಸಿಗಬೇಕು ಎಂದು ಗೊತ್ತಿರುವಾಗ ಒಬ್ಬನು ಇನ್ನೊಬ್ಬನಿಗೆ ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿಗೆ ಸೇವೆ ಸಲ್ಲಿಸಲಾರನು. ಒಬ್ಬನು ಮತ್ತೊಬ್ಬನಿಗೆ ಕನಿಷ್ಠ ವೇತನಕ್ಕಿಂತ ಕಡಿಮೆ ಇರುವ ಕೂಲಿಗೆ ಸೇವೆ ಸಲ್ಲಿಸಿದರೆ ಅವನು ಕೆಲವೊಂದು ಒತ್ತಡಗಳಿಂದ ಆ ರೀತಿ ಮಾಡುತ್ತಾನೆ ಎಂದು ನ್ಯಾಯಬದ್ಧವಾಗಿ ತಿಳಿದುಕೊಳ್ಳಬಹುದು.... ಒಬ್ಬ ವ್ಯಕ್ತಿಯು ಕನಿಷ್ಠ ವೇತನಕ್ಕಿಂತ ಕಡಿಮೆ ವೇತನಕ್ಕೆ ಮತ್ತೊಬ್ಬನಿಗೆ ಸೇವೆ ಸಲ್ಲಿಸಿದರೆ ಆ ಸೇವೆಯು ಸ್ಪಷ್ಟವಾಗಿ ಸಂವಿಧಾನದ ವಿಧಿ 23ರಲ್ಲಿ ಪ್ರಸ್ತಾಪಿಸಿದ ಬಲಾತ್ಕಾರದ ದುಡಿಮೆಯಡಿ ಬರುತ್ತದೆ[93].

ಒಬ್ಬ ಕಾರ್ಮಿಕನು ಬಲಾತ್ಕಾರದ ದುಡಿಮೆ ಸಲ್ಲಿಸಲು ಅವನ ಮೇಲೆ ನಿರ್ಬಂಧ ಹೇರಲಾಗಿದೆ ಎಂದು ತೋರಿಸಲ್ಪಟ್ಟರೆ ಅವನು ಪಡೆದ ಮುಂಗಡ ಅಥವಾ ಬೇರೆ ಆರ್ಥಿಕ ಪ್ರಯೋಜನದಿಂದ ಅದು ಮಾಡಲಾಗಿದೆ; ಆದ್ದರಿಂದ ಅವನು ಒಬ್ಬ ಜೀತದಾಳು ಎಂದು ನ್ಯಾಯಾಲಯವು ತಿಳಿದುಕೊಳ್ಳುತ್ತದೆ[94].

ಮಜೂರಿ ಇಲ್ಲದೇ ಅಥವಾ ನಾಮಮಾತ್ರ ಮಜೂರಿಗೆ ಕೆಲಸ ಮಾಡಲು ಒಬ್ಬ ಕಾರ್ಮಿಕನ ಮೇಲೆ ಬಲಾತ್ಕಾರ ಮಾಡಿದರೆ ಆ ಕಾರ್ಮಿಕನು ಜೀತದಾಳುವೆಂದು ತಿಳಿದುಕೊಳ್ಳಬೇಕು[95].

ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿ ಕೊಟ್ಟ ಕೂಡಲೇ ಜೀತ ಎಂದು ಪರಿಗಣಿಸಬಹುದೇ? ಕಾನೂನಿನ ಪ್ರಕಾರ ಮತ್ತು ಸುಪ್ರೀಂ ಕೋರ್ಟಿನ ತೀರ್ಪುಗಳನ್ನು ಒಂದು ರೀತಿಯಲ್ಲಿ ಅರ್ಥೈಸುವಾಗ ಹೌದೆನಿಸುತ್ತದೆ. ಆದರೆ ವಾಸ್ತವ ಗ್ರಾಮೀಣ ಪರಿಸ್ಥಿತಿಯನ್ನು ಗಮನಿಸಿದರೆ ಮತ್ತು ಜೀತ ಕಾನೂನನ್ನೂ ಸುಪ್ರೀಂ ಕೋರ್ಟಿನ ತೀರ್ಪುಗಳನ್ನೂ ಒಟ್ಟಾರೆಯಾಗಿ ಅರ್ಥೈಸಿದರೆ ಕೇವಲ ಕನಿಷ್ಠ ವೇತನ ದೊರಕದಿರುವುದನ್ನೇ ಜೀತ ಎಂದು ಪರಿಗಣಿಸಲಿಕ್ಕಾಗದು. ಅಸಂಘಟಿತ ಕ್ಷೇತ್ರದಲ್ಲಿ ಮತ್ತು ಪ್ರತ್ಯೇಕವಾಗಿ ವ್ಯವಸಾಯ ರಂಗದಲ್ಲಿ ಕನಿಷ್ಠ ವೇತನ ಸಿಗುವುದು ಬಹಳ ಅಪರೂಪ. ಕನಿಷ್ಠ ವೇತನ ಸಿಗದ ಮಂದಿಯಲ್ಲೂ ಎರಡು ಬಹು ಮುಖ್ಯ ವಿಧಗಳನ್ನು ನಾವು ನೋಡುತ್ತೇವೆ. ಒಂದು ವರ್ಗ ಸಾಮಾನ್ಯವಾಗಿ ದಿನಗೂಲಿ ಲೆಕ್ಕದಲ್ಲಿ ಅಥವಾ ಗುತ್ತಿಗೆ ಮೂಲಕ

---

[93] ಎಐಆರ್ 1982 ಸರ್ವೋಚ್ಚ ನ್ಯಾಯಾಲಯ 1473: ಪ್ಯಾರಾ 15

[94] ಎಐಆರ್ 1983 ಸರ್ವೋಚ್ಚ ನ್ಯಾಯಾಲಯ 328: ಪ್ಯಾರಾ 24

[95] ಎಐಆರ್ 1984 ಸರ್ವೋಚ್ಚ ನ್ಯಾಯಾಲಯ 802: ಪ್ಯಾರಾ 3

ಕೂಲಿ ಪಡೆಯುವವರು. ಅವರಿಗೆ ದಿವಸದ ಕೊನೆಗೆ ಅಥವಾ ವಾರದ ಕೊನೆಗೆ ಅಥವಾ ಗುತ್ತಿಗೆ ಕೆಲಸದ ನಂತರ ಕೂಲಿ ಸಿಗುವುದು. ಇದು ಸಾಮಾನ್ಯವಾಗಿ ಕನಿಷ್ಠ ವೇತನಕ್ಕಿಂತ ಕಡಿಮೆ ಇರುತ್ತದೆ. ಅದನ್ನು ಪ್ರಚಲಿತ ಕೂಲಿ ಎಂದು ನಾವು ಕರೆಯಬಹುದು. ಇದು ಜೀತ ಆಗದೇ ಇರಬಹುದು. ಇನ್ನೊಂದು ವರ್ಗದಲ್ಲಿ ಅಂಥಹ ಪ್ರಚಲಿತ ಕೂಲಿಯೂ ಸಿಗುವುದಿಲ್ಲ. ಅವರಿಗೆ ಹೆಚ್ಚಾಗಿ ವರ್ಷದ ಲೆಕ್ಕದಲ್ಲಿ 'ಸಂಬಳ' ನಿಗದಿಯಾಗಿರುತ್ತದೆ. ಕೆಲವು ಕಡೆ ತಿಂಗಳ ಲೆಕ್ಕದಲ್ಲಿ 'ಸಂಬಳ' ನಿಗದಿಯಾಗಿರಬಹುದು. ಕೆಲವೇ ಕೆಲವು ಪ್ರದೇಶಗಳಲ್ಲಿ ದಿನದ ಲೆಕ್ಕದಲ್ಲಿಯೂ ಕೂಲಿ ನಿಗದಿಯಾಗಬಹುದು. ಆದರೆ ಇವರೆಲ್ಲರ ಕೈಗೆ ಆ ಸಂಬಳ ಬರುವುದಿಲ್ಲ. ಬರಬೇಕಾದ ಸಂಬಳವನ್ನು ಮಾಡಿದ ಮುಂಗಡದಿಂದ ವಜಾ ಮಾಡಲಾಗುವುದು. ಅಷ್ಟೇ ಅಲ್ಲ ಅವರು ತಮ್ಮ ಮುಂಗಡ ವಜಾ ಆಗುವ ತನಕ ಮಾಲಿಕನಿಗೆ ದುಡಿಮೆಯನ್ನು ಕಡ್ಡಾಯವಾಗಿ ಸಲ್ಲಿಸಲೇ ಬೇಕು. ಕನಿಷ್ಠ ವೇತನ ಸಿಗದೇ ಇರುವ ಜೊತೆಗೆ ಮುಂಗಡ ನೀಡಿದ ಮಾಲಿಕನಿಗೆ ಕಡ್ಡಾಯವಾಗಿ ದುಡಿಮೆ ಸಲ್ಲಿಸಬೇಕಾಗಿರುವುದರಿಂದ ಅದು ಜೀತವೇ ಆಗುತ್ತದೆ.

ಆದರೂ ಕೂಡಾ ಕನಿಷ್ಠ ವೇತವನ್ನು ಕಾನೂನು ನಿಗದಿ ಪಡಿಸಿರುವಾಗ ಅದು ಗೊತ್ತಿದ್ದೂ ಕನಿಷ್ಠ ವೇತನಕಿಂತ ಕಡಿಮೆ ವೇತಕ್ಕೆ ದುಡಿಯಲು ಪ್ರೇರೇಪಿಸುವ ಒಬ್ಬ ವ್ಯಕ್ತಿಯ ಕಡು ಬಡತನದ ಒತ್ತಡವು ಬಲಾತ್ಕಾರವಾಗುತ್ತದೆ; ಆ ದೃಷ್ಟಿಯಿಂದ ಅದು ಸಂವಿಧಾನದ ಬಲಾತ್ಕಾರದ ದುಡಿಮೆ ನಿಷೇಧದ ಮೂಲಭೂತ ಹಕ್ಕಿನ ವ್ಯಪ್ತಿಗೆ ಬರುತ್ತದೆ ಎಂದು 1982ರಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪು[96] ಬಲಾತ್ಕಾರದ ದುಡಿಮೆಯ ಅರ್ಥವ್ಯಾಪ್ತಿಯನ್ನು ವಿಶಾಲಗೊಳಿಸಿದ್ದು 'ಪರಿವರ್ತನಾತ್ಮಕ ಸಂವಿಧಾನ'ದ ಸಾಧ್ಯತೆಗಳನ್ನು ಮತ್ತು ಈಗಿನ ಕಾಲಘಟ್ಟದಲ್ಲಿ ಅದರ ಅವಶ್ಯಕತೆಯನ್ನು ತೋರಿಸುತ್ತದೆ.

### 5.4 ಜೀತ ಕಾನೂನಿನಲ್ಲಿ ಅರ್ಥೈಸಲಾದ ಜೀತಪದ್ಧತಿ ಮತ್ತು 'ಬಿಟ್ಟಿ ಚಾಕ್ರಿ'

'ಬಿಟ್ಟಿ ಚಾಕ್ರಿ'ಗೆ ನಿರ್ದಿಷ್ಟವಾಗಿ ಜೀತಪದ್ಧತಿಯ ಮತ್ತು ಜಾತಿ ವ್ಯವಸ್ಥೆಯ ಸಂಬಂಧವಿದೆ ಎಂದು ನಾಲ್ಕನೇ ಅಧ್ಯಾಯದಲ್ಲಿ ಗಮನಿಸಲಾಗಿದೆ. ಜೀತ ಪದ್ಧತಿ ರದ್ದತಿ ಕಾನೂನಿನಲ್ಲಿ ಜೀತ ಪದ್ಧತಿ ಎಂದರೇನು ಎಂಬುದನ್ನೂ ಸವಿಸ್ಥರವಾಗಿ ಮೇಲೆ ವಿವರಿಸಲಾಗಿದೆ. ಅಲ್ಲಿಯ ಬಹಳ ಮುಖ್ಯ ಅಂಶಗಳನ್ನು ಈಗ ಒಂದೊಂದಾಗಿ ಪರಿಶೀಲಿಸೋಣ.

1. ಬಲಾತ್ಕಾರದ ದುಡಿಮೆ" ಜೀತ ಕಾನೂನು ಮತ್ತು ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳ ಪ್ರಕಾರ ಬಲಾತ್ಕಾರದ ದುಡಿಮೆ ಕೇವಲ ದೈಹಿಕ ಮತ್ತು ಕಾನೂನಾತ್ಮಕ ಒತ್ತಡ ಅಥವಾ ಹಿಂಸೆಗೆ ಸೀಮಿತವಾದುದಲ್ಲ. ಕಾನೂನಾತ್ಮಕ ಕನಿಷ್ಠ ವೇತನಕ್ಕಿಂತ ಅಥವಾ ಪ್ರಚಲಿತ ವೇತನಕ್ಕಿಂತ ಕಡಿಮೆ ವೇತನಕ್ಕೆ ದುಡಿಯುವುವಂತೆ ಒಪ್ಪಂದ ಮಾಡಲು ಒಬ್ಬನನ್ನು ಪ್ರೇರೇಪಿಸುವ ಆರ್ಥಿಕ ಒತ್ತಡಗಳೇ ಬಲಾತ್ಕಾರವೆನಿಸುತ್ತವೆ. ಆ ಒಪ್ಪಂದವನ್ನು ಸ್ವ ಪ್ರೇರಣೆಯಿಂದ ಮಾಡಿದ್ದರಾದರೂ ಅದು ಬಲಾತ್ಕಾರದ

---

[96] (ಎಐಆರ್ ಸರ್ವೋಚ್ಚ ನ್ಯಾಯಾಲಯ 1473: ಪ್ಯಾರ 15).

ದುಡಿಮೆಯಾಗುತ್ತದೆ. ನಾವು ಗಮನಿಸಿದ ಪ್ರಕಾರ 'ಬಿಟ್ಟಿ ಚಾಕ್ರಿ' ಮಾಡುವವರಿಗೆ ದಿನ ನಿತ್ಯ ಕೂಲಿ ಸಿಗುವುದಿಲ್ಲ. ವರ್ಷಾಂತ್ಯದಲ್ಲಿ ಸಿಗುವ ದವಸಧಾನ್ಯಗಳು ಕೆಲವು ತಿಂಗಳುಗಳಿಗೆ ಮಾತ್ರ ಅವರ ಜೀವನಕ್ಕೆ ಸಾಕಾಗುತ್ತವೆ. ಎಷ್ಟೋ ಸಾರಿ ಅವನ್ನು ಮಾರಿ ತಮ್ಮ ಹಣಕಾಸಿನ ಅಗತ್ಯಗಳನ್ನು ತೀರಿಸಿಕೊಂಡಿರುವ ಕುರಿತು ಗಮನಿಸಲಾಗಿದೆ. ಜೊತೆಗೆ 'ಬಿಟ್ಟಿ ಚಾಕ್ರಿ' ಮಾಡದಿದ್ದರೆ ಅವರನ್ನು ಬೆದರಿಸುವ, ಅವರ ಮೇಲೆ ಬಹಿಷ್ಕಾರ ಹಾಕುವ, ಅವರ ದಿನ ನಿತ್ಯ ಜೀವನಕ್ಕೆ ತೊಂದರೆ ಕೊಡುವ ಪ್ರಕರಣಗಳೂ ನಡೆಯುತ್ತವೆ.

2. 'ಬಿಟ್ಟಿ ಚಾಕ್ರಿ' ಮಾಡಲೇ ಬೇಕಾದ ನಿರ್ಬಂಧ: 'ಬಿಟ್ಟಿ ಚಾಕ್ರಿ' ಮಾಡುವವರು 'ಬಿಟ್ಟಿ ಚಾಕ್ರಿ' ಮುಗಿದ ಮೇಲೆ ಅದೇ ಅಥವಾ ಬೇರೆ ಮಾಲಿಕರಲ್ಲಿ ದಿನಗೂಲಿಗೆ ಹೋಗಬಹುದು. ಆದರೆ ಎಷ್ಟೋ ಸಾರಿ 'ಬಿಟ್ಟಿ ಚಾಕ್ರಿ'ಯ ವೇಳೆ ಮಧ್ಯಾಹ್ನ ತನಕ ಹೋದರೆ ಮತ್ತು ಮದುವೆ, ತಿಥಿ, ಸಾವು, ಹಬ್ಬ ಮುಂತಾದ ವಿಶೇಷ ಸಂಬರ್ಭಗಳ ಸಮಯದಲ್ಲಿ ಕೆಲವು ಸಾರಿ ದಿನವಿಡೀ ಮತ್ತು ದಿನಗಟ್ಟಲೆ 'ಬಿಟ್ಟಿ ಚಾಕ್ರಿ' ಮಾಡಬೇಕಾಗುತ್ತದೆ. ಆ ದಿನಗಳಂದು ಬೇರೆ ಕಡೆಯೂ ಕೆಲಸಕ್ಕೆ ಹೋಗಲಿಕ್ಕೆ ಆಗುವುದಿಲ್ಲ. 'ಬಿಟ್ಟಿ ಚಾಕ್ರಿ'ಯ ಮಾಲಿಕನೂ ದಿನಗೂಲಿ ಕೊಡುವುದಿಲ್ಲ. ಸುಗ್ಗಿಯ ಸಮಯದಲ್ಲಿ ಕಣ ಮಾಡುವಾಗ 'ಬಿಟ್ಟಿ ಚಾಕ್ರಿ' ಮಾಡುವವರ ಸೇವೆ ಹದಿನೈದು ದಿನದಿಂದ ತಿಂಗಳು ತನಕ ಇರಬಹುದು. "ಹಿಂದೆ ಮುಂದಿನ ಜಳ್ಳು ಕಾಳು ಆಯ್ದು" ಕನಿಷ್ಟ ಗುಣಮಟ್ಟದ ಕಾಳುಗಳನ್ನು ಪಡೆಯುವುದನ್ನು ಬಿಟ್ಟರೆ ಅವರಿಗೆ ಬೇರೆ ದಿನಗೂಲಿ ಇಲ್ಲ.

'ಬಿಟ್ಟಿ ಚಾಕ್ರಿ' ಮಾಡುವವರ ಆಸ್ತಿ ಪಾಸ್ತಿಯೂ ಬಹಳ ಕಡಿಮೆ. ಆದ್ದರಿಂದ ಅವರು ತಮ್ಮ ಮಾಲಿಕರ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿದ್ದಾರೆ. ತಮಗೆ ಬೇಕಾದಾಗ ಸಹಾಯ ಮಾಡುತ್ತಾರೆ ಎಂಬ ನಂಬಿಕೆ ಅವರನ್ನು 'ಬಿಟ್ಟಿ ಚಾಕ್ರಿ'ಗೆ ಅಂಟಿಕೊಂಡು ಹೋಗುವಂತೆ ಮಾಡುತ್ತದೆ. ಶಿಕ್ಷಣ ತಮ್ಮ ಬಿಡುಗಡೆಗೆ ಮತ್ತು ತಮ್ಮ ಮುಂದಿನ ಉತ್ತಮ ಬಾಳಿಗೆ ಒಂದು ದಾರಿ ಎಂಬುದನ್ನು ಕೆಲವರಾದರೂ ಕಂಡುಕೊಂಡಿದ್ದಾರೆ. 'ಬಿಟ್ಟಿ ಚಾಕ್ರಿ'ಯು ಒಂದು ವಿಷವರ್ತುಲದಂತಿದ್ದು ಶಿಕ್ಷಣದ ಪ್ರಗತಿಯೂ ಅಷ್ಟಕಷ್ಟೆ ಎಂದು ಹೇಳಿಕೊಳ್ಳಬಹುದು.

ಭಾಗಶಃ ಬಲಾತ್ಕಾರದ ದುಡಿಮೆ ಇದ್ದರೂ ಅದು ಜೀತ ಪದ್ಧತಿ ಆಗುತ್ತದೆ ಎಂದು ಜೀತ ಕಾನೂನಿನ ಜೀತ ಪದ್ಧತಿ ವ್ಯಾಖ್ಯಾನ ಸ್ಪಷ್ಟಪಡಿಸುತ್ತದೆ. ಹೀಗೆ ಆ ದೃಷ್ಟಿಯಿಂದಲೂ ಮತ್ತು 'ಬಿಟ್ಟಿ ಚಾಕ್ರಿ'ಯು ಒಟ್ಟಾರೆಯಾಗಿ ಅದನ್ನು ಮಾಡುತ್ತಿರುವವರ ಮೇಲೆ ಹಾಗೂ ಈ ಪ್ರಬಂಧದಲ್ಲಿ ಅಧ್ಯಯಿಸಲಾದ ಮೂರೂ ಊರುಗಳ ದಲಿತರ ಜೀವನಮಟ್ಟವನ್ನು ಗಮನಿಸದಾಗ 'ಬಿಟ್ಟಿ ಚಾಕ್ರಿ'ಯನ್ನು ಜೀತ ಪದ್ಧತಿಯ ಒಂದು ರೂಪವೆಂತಲೇ ಪರಿಗಣಿಸಬೇಕಾಗುತ್ತದೆ ಎಂದು ತಿಳಿದುಕೊಳ್ಳಬಹುದು.

# ಅಧ್ಯಾಯ 6

## ಉಪಸಂಹಾರ

# ಅಧ್ಯಾಯ ಆರು

## ಉಪಸಂಹಾರ

### 6.1 ಜೀತಪದ್ಧತಿಯ ಹೊಸ ಆವಿಷ್ಕಾರಗಳು ಹಾಗೂ ಪಳೆಯುಳಿಕೆಗಳು

ಜೀತ ಕಾನೂನು ಅಸ್ಥಿತ್ವದಲ್ಲಿರುವ ಕಾರಣದಿಂದ ಬ್ರಿಟಿಷರ ಕಾಲದಿಂದ ಅಸ್ಥಿತ್ವದಲ್ಲಿರುವ ಜೀತ ಪದ್ಧತಿಯು ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ಹಲವಾರು ಅಧಿಕಾರಿ ವರ್ಗದವರು ಅಥವಾ ಸರ್ಕಾರವು ಮತ್ತು ಸಾರ್ವಜನಿಕರೂ ಕೂಡಾ ಬಹುತೇಕವಾಗಿ ನಂಬಿರುವ ಹಾಗಿದೆ. ಆದರೆ ದಲಿತರು ಮತ್ತು ಮೂಲನಿವಾಸಿಗಳ ಬಗ್ಗೆ ಕೆಲಸ ಮಾಡುತ್ತಿರುವ ಸಂಘ ಸಂಸ್ಥೆಗಳು ಜೀತಪದ್ಧತಿಯ ವಾಸ್ತವ್ಯದ ಪರಿಣಾಮಗಳನ್ನು ಸದಾ ಎದುರಿಸುತ್ತಲೇ ಇವೆ. ಮಾಧ್ಯಮಗಳು ನಿರಂತರವಾಗಿ ಜೀತದಾಳುಗಳ ಬಗ್ಗೆ ವರದಿ ಮಾಡುತ್ತಲೇ ಇವೆ. ಭಾರತದಲ್ಲಿ 20ನೇ ಶತಮಾನದ ಕೊನೆ ದಶಕಾದಿಯಿಂದ ತೀವ್ರತರವಾಗಿ ಆರಂಭಗೊಂಡ ಗೋಳೀಕರಣದ ಪರಿಣಾಮದಿಂದ ಒಟ್ಟಾರೆಯಾಗಿ ಕಾರ್ಮಿಕರ ಹಕ್ಕುಗಳು ಮೊಟಕುಗೊಳುತ್ತಿದ್ದರೆ ಅಸಂಘಟಿತ ಕಾರ್ಮಿಕರ ಬದುಕು ಹೆಚ್ಚೆಚ್ಚು ಹತಾಶವಾಗುತ್ತಿದೆ. ಕೆಲಸವನ್ನು ಹುಡುಕಿಕೊಂಡು ಹೋಗುತ್ತಿರುವ ಅಸಂಘಟಿತ ಕಾರ್ಮಿಕರ ಪರಿಸ್ಥಿತಿ ಚಿಂತಾಜನಕವಾಗುತ್ತಿದೆ. ವಲಸೆ ಕಾರ್ಮಿಕರು ಮತ್ತು ಮನೆಗೆಲಸದವರ ಸಂಖ್ಯೆ ಹೆಚ್ಚಾಗುತ್ತಿರುವ ಜೊತೆಗೆ ಅವರಿಗೆ ಸಿಗಬೇಕಾದ ಕೂಲಿಯೂ ವಿಪರೀತ ಕಡಿಮೆಯಾಗುತ್ತಿದೆ. ಅವರಿಂದ ಪಡೆಯಬಹುದಾದ ಸೇವೆಯನ್ನು ಭದ್ರಪಡಿಸಲು ಹೊಸ ಹೊಸ ನಿರ್ಬಂಧಗಳನ್ನು ಅವರ ಮೇಲೆ ಹೇರಲಾಗುತ್ತಿದೆ. ಬ್ರಿಟಿಷರ ಕಾಲದ ಜೀತ ಪದ್ಧತಿ ಕಡಿಮೆಯಾಗುತ್ತಿದ್ದರೂ ಹೊಸ ರೀತಿಯ ಜೀತದ ರೂಪಗಳು ಕಣ್ಣಿಗೆ ಬೀಳುತ್ತಿವೆ. ಅವುಗಳ ಜೊತೆಗೆ ಹಳೇಕಾಲದ ಜೀತದ ಪಳೆಯುಳಿಕೆಗಳು ಅಲ್ಲಲ್ಲಿ ಕಾಣಿಸುವಂತಿವೆ.

ಈ ಹಿನ್ನೆಲೆಯಲ್ಲಿ ಜೀತ ಪದ್ಧತಿ ಪರಿಕಲ್ಪನೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಪುನರ್ವ್ಯಾಖ್ಯಾನಕ್ಕೊಳಪಡಿಸಲಾಗಿದೆ. ಗ್ರಂಥಾಧ್ಯಯನದ ಮೂಲಕ ಜೀತ ಪದ್ಧತಿಯ ಪರಿಕಲ್ಪನೆಯನ್ನು ಐತಿಹಾಸಿಕವಾಗಿಯೂ ರಚನಾತ್ಮಕವಾಗಿಯೂ ವಿಶ್ಲೇಷಿಸಿದರೆ 'ಬಿಟ್ಟಿ ಚಾಕ್ರಿ'ಯೆಂಬ ಒಂದು ವಿಶಿಷ್ಟ ಆಚರಣೆಯ ಸ್ವರೂಪವನ್ನು ಕ್ಷೇತ್ರಾಧ್ಯಯನ ಮತ್ತಿತರ ವಿವಿಧ ಆಯಾಮಗಳಿಂದ ಅಧ್ಯಯನ ಮಾಡಿ ಜೀತ ಪದ್ಧತಿಯ ಪರಿಕಲ್ಪನೆಯ ಮೂಲಕ ಅದನ್ನು ಅರ್ಥೈಸಲು ಪ್ರಯತ್ನಿಸಲಾಗಿದೆ.

### 6.2 ಗ್ರಂಥಾಧ್ಯಯನದಿಂದ ಜೀತ ಪದ್ಧತಿ ಪರಿಕಲ್ಪನೆಯ ಪುನರ್ವ್ಯಾಖ್ಯಾನದ ನೋಟಗಳು

ಜೀತ ಪದ್ಧತಿಯ ಪರಿಕಲ್ಪನೆಗೆ ಜೀತ ಪದ್ಧತಿ ರದ್ದತಿ ಕಾನೂನು 1976ರಲ್ಲಿ ನೀಡಿದ ವ್ಯಾಖ್ಯಾನವನ್ನೇ ಮೂಲ ವ್ಯಾಖ್ಯಾನವನ್ನಾಗಿ ಬಳಸಲಾಗಿದೆ. ಅದರ ಅರ್ಥವಿವರಣೆಯಲ್ಲೂ ಸರ್ವೋಚ್ಚ ನ್ಯಾಯಾಲಯವು 1982 ಮತ್ತು 1983ರಲ್ಲಿ ಪುನರ್ವ್ಯಾಖ್ಯಾನಕ್ಕೊಳಗಾಗಿಸಿರುವುದನ್ನು ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ. 'ಪರಿವರ್ತನಾತ್ಮಕ ಸಂವಿಧಾನ'ದ ಪರಿಕಲ್ಪನೆಯಡಿ ಜೀತ ಪದ್ಧತಿ ಪರಿಕಲ್ಪನೆಯನ್ನು

ಸಂವಿಧಾನದ ಮೂಲ ಆಶಯಗಳಾದ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವ ಮೌಲ್ಯಗಳನ್ನು ಸಾಕಾರಗೊಳಿಸಲು ನಿರಂತರವಾಗಿ ಪುನರ್ವ್ಯಾಖ್ಯಾಗೊಳಿಸುವ ಸಾಧ್ಯತೆ ಕುರಿತೂ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ.

ಜೀತ ಪದ್ಧತಿ ಪದಕ್ಕೆ ಇಂಗ್ಲಿಷ್‌ನಲ್ಲಿ 'bonded labour system' ಎಂಬ ಪದವನ್ನು ಬಳಸುತ್ತಾರೆ. ಜೀತ ಪದಕ್ಕೆ 'bonded labour' ಎಂಬ ಅರ್ಥ ಬರುತ್ತದೆ. ಕನ್ನಡದಲ್ಲಾಗಲೀ ಇಂಗ್ಲಿಷ್ ನಲ್ಲಾಗಲೀ ಈ ಪದಪ್ರಯೋಗಗಳು ಸಮಕಾಲೀನವು ಅಥವಾ ಆಧುನಿಕ ಕಾಲದವು[97]. ಆಧುನಿಕ ಕಾಲದ ಮುಂಚೆ ಜೀತದಾಳುವಿಗೆ ಬೇರೆ ಹೆಸರುಗಳಿದ್ದುವು. ದಾಸ/ದಾಸಿ, ಗುಲಾಮ, ಇತ್ಯಾದಿ. ಭಾರತದಲ್ಲಿ ಚಾರಿತ್ರಿಕ ಕಾಲದಲ್ಲಿ ಪಾಶ್ಚಾತ್ಯ ದೇಶದ್ಲಲಿದ್ದಂತಹ ಗುಲಾಮ ಪದ್ಧತಿ ಇರಲಿಲ್ಲ. ಬದಲಿಗೆ ಅಲ್ಲಿದ್ದುದು 'ಜಾತಿ ಗುಲಾಮಿ ವ್ಯವಸ್ಥೆ'. 'ಜಾತಿ ಗುಲಾಮಿ ವ್ಯವಸ್ಥೆ' ಜೊತೆ ಮನೆ ಸೇವೆಗಳಿಗೆ, ವೈಯಕ್ತಿಕ ಕೆಲಸಗಳಿಗೆ ಬಳಸುವಂತಹ ಗುಲಾಮರೂ ಇದ್ದರು. ಆದರೆ 'ಜಾತಿ ಗುಲಾಮಿ ವ್ಯವಸ್ಥೆ'ಗೊಳಗಾಗಿದ್ದ ದಲಿತರು ಮತ್ತು ಮೂಲನಿವಾಸಿಗಳ 'ಬಂಧನ'ದಲ್ಲಿದ್ದಂತಹ ಸೇವೆ/ಜೀವನವನ್ನು ಗುಲಾಮತನ ಎಂದು ಪರಿಗಣಿಸಲಾಗಿರಲಿಲ್ಲ. ಆದರೆ ಬ್ರಿಟಿಷರ ಕಾಲದಲ್ಲಿ ಹೊಲದಲ್ಲಿ ಜಾತಿ ವ್ಯವಸ್ಥೆಯ ನಿರ್ಬಂಧಕ್ಕೊಳಗಾಗಿ ದುಡಿಯುವ ದಲಿತರನ್ನು 'ಎಗ್ರೆಸ್ಟಿಕ್ ಸ್ಲೇವ್ಸ್' ಎಂದು ಕರೆಯುವ ಪರಿಪಾಠವು ಬಂತು.

ಬ್ರಿಟಿಷರ ಕಾಲನಂತರ 'ಜಾತಿ ಗುಲಾಮಿ ವ್ಯವಸ್ಥೆ'ಯಲ್ಲಿಂದಂತಹ ದಲಿತರು ಮತ್ತು ಮೂಲನಿವಾಸಿಗಳ ಗುಲಾಮರ ಬದುಕಿನಂತಿದ್ದ ಸೇವೆಗಳು ಜೀತಪದ್ಧತಿಯಾಗಿ ಮಾರ್ಪಾಡಾಯಿತು ಎಂದು ಅಧ್ಯಯನವು ಸ್ಪಷ್ಟಪಡಿಸಿದೆ. ಆ ಕಾಲವ್ಯಾಪ್ತಿಯಲ್ಲಿ ಭಾರತದಲ್ಲಿ ಹಲವಾರು ಆಚರಣೆಗಳು ಚಾಲ್ತಿಯಲ್ಲಿದ್ದವು ಎಂಬುದನ್ನೂ ದಾಖಲಿಸಲಾಗಿದೆ. ಅವುಗಳಲ್ಲಿ ಕೆಲವಾದ 'ಇಂಡೆಂಚರ್ಡ್ ಲೇಬರ್', 'ಜಜ್‌ಮನಿ ಪದ್ಧತಿ', 'ವೆಟ್ಟಿ ಚಾಕಿರಿ', 'ಬಲುತ', 'ಬರ್ತನ್' ಮತ್ತು 'ಹಿಟ್ಟಿ ಬಿಟ್ಟಿ ಚಾಕ್ರಿ' ಯಂತಹ ಪದ್ಧತಿಗಳನ್ನು ವಿಶ್ಲೇಷಿಸಲಾಗಿದೆ.

ಕರ್ನಾಟಕ / ಕನ್ನಡಕ್ಕೆ ಅನ್ವಯಿಸುವುದಾದರೆ ಜೀತ ಪದ್ಧತಿ, ಜೀತ, ಜೀತದಾಳು ಮುಂತಾದ 'bonded labour system', 'bonded labour', 'bonded labourer' ಎಂದು ಈಗ ಅರ್ಥ ಕೊಡುವ ಪದಗಳು ಮೂಲವಾಗಿ ಆ ಅರ್ಥಗಳನ್ನು ಕೊಡುತ್ತಿರಲಿಲ್ಲ. ಅದನ್ನು ಗಮನಿಸಿದರೂ 'ಜೀತ ಗುಲಾಮಿ ಪದ್ಧತಿ'ಯಿಂದ ಜೀತ ಪದ್ಧತಿಗೆ ಬ್ರಿಟಿಷರ ಕಾಲದಲ್ಲಿ ಬದಲಾಯಿತು ಎಂದು ಅಧ್ಯಯನದಲ್ಲಿ ಸ್ಪಷ್ಟಪಡಿಸಿದ ವಾದಕ್ಕೆ 'ಶಬ್ದಕೋಶೀಯ ಅಧ್ಯಯನ'ದಿಂದ ಪುರಸ್ಕಾರವೂ ಸಿಗುತ್ತದೆ. 'ಜೀತ', ಜೀತದಾಳು', 'ಜೀತಕ್ಕಿರುವುದು' ಮುಂತಾದ ಪದಗಳಿಗೆ 'ಸಂಬಳ', 'ಸಂಬಳದಾಳು', ಸಂಬಳಕ್ಕಿರುವುದು ಮುಂತಾದ

---

97 ವಿಶ್ವ ಸಂಸ್ಥೆಯ 2000ದ ಸ್ಲೇವರಿ ಅನದ ಸರ್ವಿಟ್ಯಡ್ ಪ್ರಕಾರ ಜೀತ ಪದ್ಧತಿಯು (bonded labour) ಗುಲಾಮ ಪದ್ಧತಿಯ ಸಮಕಾಲೀನ ರೂಪ. ಅಂದರೆ ಆಧುನಿಕ ಕಾಲದ ಮುಂಚೆ ಪ್ರಚಲಿತವಿದ್ದ ಬಲಾತ್ಕಾರದ ದುಡಿಮೆಯ ಪದ್ಧತಿಗಳೇ 'ಸ್ಲೇವರಿ, ಸರ್ಫ್‌ಡಮ್ಮುಂತಾದುವು.

ಪದಗಳನ್ನು ಬಳಸುತ್ತಾರೆ. ಆಶ್ಚರ್ಯವೆಂದರೆ 'ಜೀತ' ಪದಕ್ಕೆ 'ಬಂಧನ', 'ಗುಲಾಮ' ಎಂಬ ಅರ್ಥಗಳು ಮೂಲದಲ್ಲಿಲ್ಲ. ಮೂಲದಲ್ಲಿ 'ಜೀತ' ಅಂದರೆ 'ಸಂಬಳ' ಎಂದೇ ಅರ್ಥ. ತೆಲುಗಿನಲ್ಲಿ ಈಗಲೂ ದೈನಂದಿನ ಭಾಷೆಯಲ್ಲಿ ಜೀತಕ್ಕೆ ಸಂಬಳ ಎಂದೇ ಅರ್ಥ.

ಜೀತ ಪದ್ಧತಿಯು 'ಜಾತಿ ಗುಲಾಮಿ ವ್ಯವಸ್ಥೆ'ಯ ಮುಂದುವರಿಕೆಯ ರೂಪಾಂತರವಾದರೆ, 'ಬಿಟ್ಟಿ ಚಾಕ್ರಿ'ಯು ಅದರ ಪಳೆಯುಳಿಕೆ ಎಂದೇ ಅಧ್ಯಯನದಲ್ಲಿ ಪರಿಗಣಿಸಲಾಗಿದೆ. ಆದ್ದರಿಂದ 'ಬಿಟ್ಟಿ ಚಾಕ್ರಿ'ಯನ್ನು ಸುಸ್ಪಷ್ಟವಾಗಿ ಬಲಾತ್ಕಾರದ ದುಡಿಮೆಯ ಒಂದು ರೂಪವೆಂತಲೇ ತಿಳಿದುಕೊಳ್ಳಬಹುದು. ಆ ರೀತಿಯಲ್ಲಿ ಅದು ಜೀತ ಪದ್ಧತಿಯಂತಿರುವ ಶೋಷಣೆ ಮತ್ತು ಬಲಾತ್ಕಾರದ ದುಡಿಮೆಯ ಇನ್ನೊಂದು ರೂಪವೆನಿಸುತ್ತದೆ.

**6.3 'ಬಿಟ್ಟಿ ಚಾಕ್ರಿ' ಕುರಿತ ಕ್ಷೇತ್ರಾಧ್ಯಯನದಿಂದ ಪಡೆದ ಫಲಿತಗಳು**

'ಬಿಟ್ಟಿಚಾಕ್ರಿ'ಯ ಅನ್ವೇಷಣೆಯಲ್ಲಿ ಕಂಡು ಬಂದ ಸಂಗತಿಗಳನ್ನೂ ಈ ಕೆಳಗಿನಂತೆ ಪ್ರಸ್ತಾಪಿಸಬಹುದು:

1. ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮುಖ್ಯವಾಗಿ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ದಲಿತರು ರೈತರಿಗೆ ಪ್ರತಿನಿತ್ಯ ಕೆಲವು ಗಂಟೆ ಮತ್ತು ಅವುಗಳ ಜೊತೆ ವಿವಿಧ ವಿಶಿಷ್ಟ ಸಂದರ್ಭಗಳಲ್ಲಿ ಕೆಲವು ವಿಶಿಷ್ಟ ಸೇವೆಗಳನ್ನು ಸಲ್ಲಿಸುತ್ತಿರುವುದು ಜೀತ ಪದ್ಧತಿ ನಿರ್ಮೂಲನೆಯಲ್ಲಿ ಕೆಲವು ದಶಕಗಳಿಂದ ತೊಡಗಿರುವ ನನಗೆ ಇತ್ತೀಚೆಗೆ ಗಮನಕ್ಕೆ ಬಂತು. ಉತ್ತರ ಕರ್ನಾಟಕದ ಎಲ್ಲಾ 15 ಜಿಲ್ಲೆಗಳಲ್ಲಿಯೂ ಅದು ಅಸ್ತಿತ್ವದಲ್ಲಿದೆ ಎಂದು ನಂತರ ತಿಳಿಯಿತು. ಅದಕ್ಕೆ ಪ್ರಾದೇಶಿಕವಾರು ಬೇರೆ ಬೇರೆ ಹೆಸರುಗಳಿದ್ದರೂ ಅವನ್ನು 'ಬಿಟ್ಟಿ ಚಾಕ್ರಿ' ಎಂತಲೇ ಒಟ್ಟಾರೆಯಾಗಿ ಗುರುತಿಸಲಾಗುವುದೆಂದು ನಾಲ್ಕನೇ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಕೆಲವು ಪ್ರದೇಶಗಳಲ್ಲಿ ಅಥವಾ ಒಂದೇ ಕಡೆ ಅದಕ್ಕೆ ಪರ್ಯಾಯವಾಗಿ ಸೆಗಣಿ ಬಳಿಯುವುದು, ಹೆಂಡಿ ಕಸ ಬಳಿಯುವುದು, ಹೆಂಡಿ ಕಸ ಎತ್ತುವುದು ಮುಂತಾದ ಪದಪುಂಜಗಳನ್ನು ಬಳಸುತ್ತಾರೆ. ಇಲ್ಲಿ ಬಳಸುವ ಪದಗಳು ಮುಖ್ಯವಲ್ಲ. ಬದಲಿಗೆ ಆ ಪದಗಳು ಸೂಚಿಸುವ ಅಥವಾ ಪ್ರತಿನಿಧಿಸುವ ಆಚರಣೆ ಅಥವಾ ಪದ್ಧತಿ ಪ್ರಮುಖವಾಗಿದೆ. ಪದ್ಧತಿ ಎನ್ನುವಾಗ ಒಂದು ವ್ಯವಸ್ಥಿತವಾದ ಮತ್ತು ವ್ಯಾಪಕವಾದ ಆಚರಣೆ ಎಂಬುದನ್ನು ತೋರಿಸುತ್ತದೆ. ಈ ಪದ್ಧತಿಯು ಸಾಂಪ್ರದಾಯಿಕವಾಗಿ ತಲೆತಲೆಮಾರುಗಳಿಂದ ಆಚರಣೆಗೆ ಬಂದಿದ್ದು ಮುಂದಿನ ಪೀಳಿಗೆಗೂ ಅದು ಮುಂದುವರಿಯುವಂತಹ ಲಕ್ಷಣಗಳನ್ನು ತೋರಿಸುತ್ತದೆ. ಈ ಆಚರಣೆಗಳನ್ನು ಮಾಡುವವರು ದಲಿತರಾಗಿದ್ದು ದಲಿತರಲ್ಲೂ ಮಾದಿಗ ಜನಾಂಗವೆಂದು ಗುರುತಿಸಲಾದ ಸಮುದಾಯದವರು ಮಾತ್ರ ನಡೆಸಿಕೊಂಡು ಹೋಗುವುದು ಕಂಡು ಬರುತ್ತದೆ. ಅವುಗಳಿಗೆ ವ್ಯಾಪಕವಾದ ಅತೃಪ್ತಿಯೂ ವಿರೋಧವೂ ಇರುವುದನ್ನು ಎರಡನೇ ಮತ್ತು ನಾಲ್ಕನೇ ಅಧ್ಯಾಯದಲ್ಲಿ ದಾಖಲಿಸಲಾಗಿದೆ. ಆದರೆ ಅದರ ಬಗ್ಗೆ ತಟಸ್ಥ ಭಾವನೆಯೂ ಅದರಲ್ಲಿ ಪ್ರಯೋಜನವಿದೆ ಎಂಬ ಭಾವನೆಗಳೂ

ವ್ಯಕ್ತವಾಗಿವೆ. 'ಬಿಟ್ಟಿ ಚಾಕ್ರಿ'ಯಲ್ಲಿ ಬದಲಾವಣೆಯಾಗುವ ಅಂಶಗಳೂ ತೋರಿ ಬರುತ್ತಿವೆ. ಒಟ್ಟಾರೆಯಾಗಿ ವೈಯಕ್ತಿಕವಾಗಿಯೂ ಸಾಮುದಾಯಿಕವಾಗಿಯೂ ಅದು ಅಹಿತಕರ, ಅವರ ಒಟ್ಟಾರೆ ಅಭಿವೃದ್ಧಿಗೆ ಮಾರಕ, ಮಾತ್ರವಲ್ಲ ಅವು ಸಂವಿಧಾನದ ಆಶಯಗಳಿಗೆ ವಿರೋಧವಾಗಿವೆ ಎಂಬ ನಿಲುವಿಗೆ ಬಂದರೆ ಅದನ್ನು ಸಂಪೂರ್ಣವಾಗಿ ನಿಲ್ಲಿಸುವ ಅಗತ್ಯವಿದೆ ಮತ್ತು ಅದಕ್ಕೋಸ್ಕರ ಹಲವಾರು ಕ್ರಮಗಳನ್ನು ಕೈಗೊಳ್ಳುವ ಅಗತ್ಯವಿದೆ.

2. 'ಬಿಟ್ಟಿ ಚಾಕ್ರಿ' ಮಾಡುವವರನ್ನು ಜೀತದಾಳುಗಳನ್ನಾಗಿ ಸರ್ಕಾರವು ಇಷ್ಟರ ವರೆಗೆ ಪರಿಗಣಿಸಿಲ್ಲ. ಆದರೆ ಜೀತ ಪದ್ಧತಿಯ ಹಲವಾರು ಲಕ್ಷಣಗಳು ಅದರಲ್ಲಿ ಕಂಡು ಬರುತ್ತದೆ. ಆ ಸೇವೆ ಮಾಡಬೇಕಾಗಿರುವ ದಲಿತ ಕುಟುಂಬದ ಒಬ್ಬ ಅಥವಾ ಹೆಚ್ಚಿನ ವ್ಯಕ್ತಿಗಳು ಆ ಹಳ್ಳಿಯ ಒಂದು ಅಥವಾ ಹೆಚ್ಚಿನ ದೊಡ್ಡ ರೈತ ಕುಟುಂಬಗಳಿಗೆ ದಿವಸಾಗಲೂ ಮನೆಯಂಗಳ ಮತ್ತು ಹಟ್ಟಿಗಳನ್ನು ಸ್ವಚ್ಛಮಾಡಬೇಕು ಮತ್ತಿತರ ಸೇವೆಗಳನ್ನು ಸಲ್ಲಿಸಬೇಕು. ಇವೆಲ್ಲಾ ಕೆಲಸಗಳು ಬೆಳಿಗ್ಗೆ ಮಾತ್ರ ಇರಬಹುದು; ಬೆಳಿಗ್ಗೆ ಮತ್ತು ಸಂಜೆಯೂ ಇರಬಹುದು; ಅಥವಾ ಇಡೀ ದಿವಸವೂ ಇರಬಹುದು. ಕೆಲವೊಂದು ಕಡೆ ಬೆಳಗಿನ 'ಬಿಟ್ಟಿಚಾಕ್ರಿ'ಯನ್ನು ಒಂಬತ್ತು ಗಂಟೆಗೆ ಮುಗಿಸಿ ದಿನಗೂಲಿಗೆ ಹೋಗುವ ಸಾಧ್ಯತೆ ಇದೆ. ದಿನನಿತ್ಯದ 'ಬಿಟ್ಟಿಚಾಕ್ರಿ' ಜೊತೆ ಮದುವೆ, ಸಾವು, ತಿಥಿ, ಹಬ್ಬ, ಜಾತ್ರೆಗಳ ಸಂಬರ್ಭದಲ್ಲಿಯೂ ಸುಗ್ಗಿ ಕಾಲದಲ್ಲಿಯೂ ಬಿಟ್ಟಿ ಚಾಕ್ರಿಯನ್ನು ಮಾಡಬೇಕಾಗುತ್ತದೆ. ಖಾಯಂ ಆಗಿ ಒಂದೇ ಮನೆಯಲ್ಲಿ ಕೆಲಸ ಮಾಡುವ ಸಾಂಪ್ರದಾಯಿಕವಾಗಿ ಬಂದ ನಿರ್ಬಂಧ 'ಬಿಟ್ಟಿಚಾಕ್ರಿ'ಯಲ್ಲಿದೆ. 'ಬಿಟ್ಟಿ ಚಾಕ್ರಿ' ಮಾಡುವವರೆಲ್ಲರೂ ದಲಿತರು ಮಾತ್ರವಲ್ಲದೇ ಅವರಲ್ಲಿಯೇ ತೀರಾ ಬಡವರಾಗಿದ್ದು, ವಾಸವಿರುವ ಮನೆ ಒಂದನ್ನು ಬಿಟ್ಟರೆ ಮನೆಯಲ್ಲಿ ಯಾವುದೇ ಬೆಲೆಬಾಳುವ ವಸ್ತು ಇರುವುದಿಲ್ಲ. ಭೂಮಿ ಇರುವುದಿಲ್ಲ. ಹಣದ ಅಗತ್ಯ ಬಿದ್ದರೆ ಭೂಮಾಲಿಕರನ್ನು ನಿರಂತರವಾಗಿ ಅವಲಂಬಿಸಬೇಕಾದ ಪರಿಸ್ಥಿತಿ. ಅಡಿಗೆ ಮಾಡಲು ಅಗತ್ಯವಿರುವ ಕಟ್ಟಿಗೆಗೆ, ಸಾಕಿದ ಒಂದೆರಡು ಕುರಿ ಮೇಕೆಗಳ ಮೇವಿಗೆ ಬೇಕಾದ ಸೊಪ್ಪು, ಹುಲ್ಲುಗಳಿಗೆ, ದಿನಕರ್ಮಗಳನ್ನು ಪೂರೈಸಲು ಊರವರ ಜಮೀನುಗಳ ಪ್ರಯೋಜನ ಪಡೆಯಬೇಕಾದ ಅನಿವಾರ್ಯತೆ ಅವರ ಅಸಹಾಯಕತೆ ಮತ್ತು ಅವಲಂಬನೆಯನ್ನು ತೋರಿಸುತ್ತದೆ. ಈ ಅಸಹಾಯಕತೆಯನ್ನು ಬಳಸಿ 'ಬಿಟ್ಟಿ ಚಾಕ್ರಿ' ನಿಲ್ಲಿಸಿದರೆ ಅವರ ಮೇಲೆ ಬಹಿಷ್ಕಾರದ ಬೆದರಿಕೆ ಹಾಕಲಾಗುತ್ತದೆ.

3. ಕೆಲಸಕ್ಕೆ ದಿನ ನಿತ್ಯ ಕೂಲಿ ಇಲ್ಲ. ತಂಗಳು ಊಟ, ಚಹಾ–ಕಾಫಿ ಸಿಗುತ್ತದೆ. ವರ್ಷಕ್ಕೆ ಸುಗ್ಗಿ ಕಾಲದಲ್ಲಿ ಕೆಲವು ಚೀಲ ದವಸ ಧಾನ್ಯಗಳನ್ನು ಕೊಡಲಾಗುತ್ತದೆ. ಹಬ್ಬ ಹರಿದಿನಗಳು, ಮೈ ನೆರೆಯುವುದು, ಮದುವೆ, ತಿಥಿ, ಇತ್ಯಾದಿ ವಿಶೇಷ ದಿನಗಳಲ್ಲಿ ಹೆಚ್ಚುವರಿ ಕೆಲಸದ ನಿರ್ಬಂಧಗಳಿರುತ್ತವೆ. ಹೆಚ್ಚುವರಿ ಕೆಲಸಗಳು ಇಡೀ ದಿವಸ ಅಥವಾ ರಾತ್ರಿ–ಹಗಲೂ ಇರುತ್ತವೆ;

ಕೆಲಸವು ಹಲವಾರು ದಿನಗಳಿಗೆ ಹಬ್ಬುತ್ತದೆ. ಆಗಲೂ ದಿನಗೂಲಿ ಇಲ್ಲ. ಬದಲಿಗೆ ಹೆಚ್ಚಿನ ಊಟ, ಬಟ್ಟೆಗಳು ಸಿಗುತ್ತವೆ. ರೋಗ ಬಂದರೂ ಇದನ್ನು ತಪ್ಪಿಸುವಂತಿಲ್ಲ. ಮನೆಯ ಯಾವನಾದರು ಒಬ್ಬ ಅದನ್ನು ಮಾಡಿಯೇ ತೀರಬೇಕು. ಕೆಲವು ಸಾರಿ ಒಂದು ದಿನ ತಪ್ಪಿದರೆ ಆ ಕೆಲಸಗಳನ್ನು ಮುಂದಿನ ದಿನ ನೆರವೇರಿಸಬೇಕಾಗುತ್ತದೆ. ಹೀಗಿದ್ದರೂ ಅವರಿಗೆ ದಿನ ನಿತ್ಯ, ವಿಶೇಷ ಸಂದರ್ಭಗಳಲ್ಲಿ ಮತ್ತು ವರ್ಷಾಂತ್ಯದಲ್ಲಿ ಸಿಗುವ ಎಲ್ಲಾ ಪ್ರಯೋಜನಗಳು ಮತ್ತು ದವಸ ಧಾನ್ಯಗಳು ಅವರ ಸೇವೆಗೆ ಸಲ್ಲಿಸಲಾಗುವ ಸರಿಯಾದ ವೇತನವಲ್ಲ. ಬಿಳಿ ಜೋಳಕ್ಕೆ ಚೀಲಕ್ಕೆ 2000–3000 ರೂ. ಇದ್ದರೆ ಐದನೇ ನಂ. ಜೋಳಕ್ಕೆ 1000–1500 ರೂ. ಇರುತ್ತದೆ. ಜಾಲಿಕೊಪ್ಪದಲ್ಲಿ ಒಂದಕ್ಕಿಂತ ಹೆಚ್ಚಿನ ಮನೆಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವುದಿದ್ದರೆ ಚಿವಟ ಗುಂಡಿ ಮತ್ತು ಚಿಕ್ಕ ಬಾಗೇವಾಡಿಯಲ್ಲಿ ಒಂದೊಂದು ಮನೆಯಲ್ಲಿ ಮಾತ್ರ 'ಬಿಟ್ಟಿ ಚಾಕ್ರಿ' ಮಾಡುತ್ತಾರೆ. ಚಿವಟ ಗುಂಡಿ ಮತ್ತು ಚಿಕ್ಕ ಬಾಗೇವಾಡಿಯಲ್ಲಿ ಹೆಚ್ಚೆಂದರೆ 3–4 ಚೀಲ ಬಿಳಿ ಜೋಳ ಪಡೆದರೆ, ಜಾಲಿಕೊಪ್ಪದಲ್ಲಿ ಹೆಚ್ಚಾಗಿ 5–6 ಚೀಲ ಮತ್ತು ಒಬ್ಬಿಬ್ಬರು 10–12 ಚೀಲ ಐದು ನಂ. ಜೋಳ ಪಡೆಯುತ್ತಾರೆ. ಆದರೆ ಒಂದು ಕುಟುಂಬದ ಜೀವನ ನಿರ್ವಹಣೆಗೆ ಅದು ಯಾವುದೂ ಸಾಲದು. ದಿನಗೂಲಿಯಿಂದ ಸಿಗುವ ಮಜೂರಿಯೂ ಬಹಳ ಕಡಿಮೆ. ಬೈಲಹೊಂಗಲದ ಹೆಚ್ಚಿನ ಕಡೆ ದಿನಗೂಲಿಗೆ ಗಂಡಸರಿಗೆ 150ರಿಂದ 200 ರೂ. ಸಿಗುತ್ತಿದ್ದರೆ ಹೆಂಗಸರಿಗೆ 100ರಿಂದ 150 ರೂ. ಮಾತ್ರ ಸಿಗುತ್ತದೆ. ದಿನಗೂಲಿಯೂ ವರ್ಷಕ್ಕೆ 90ರಿಂದ 120 ದಿನ ಮಾತ್ರ ಸಿಗುತ್ತದೆ.

4. 'ಬಿಟ್ಟಿಚಾಕ್ರಿ' ವಂಶಪಾರಂಪರ್ಯದಿಂದ ಬಂದುದು. ಹೊಸದಾಗಿ ಯಾರೂ 'ಬಿಟ್ಟಿಚಾಕ್ರಿ'ಗೆ ಸೇರಿಕೊಳ್ಳುವುದಿಲ್ಲ. 'ಬಿಟ್ಟಿ ಚಾಕ್ರಿ' ಇಲ್ಲದ ಗಂಡನ ಮನೆಯಿಂದ ಕಾರಣಾಂತರಗಳಿಂದ 'ಬಿಟ್ಟಿ ಚಾಕ್ರಿ' ಮಾಡುತ್ತಿರುವ ತವರು ಮನೆಗೆ ಬಂದು ನೆಲಸುವ ಪರಿಸ್ಥಿತಿ ಬಂದರೆ ಆಗ ಆ ಮಹಿಳೆ ಮತ್ತವಳ ಮಕ್ಕಳು 'ಬಿಟ್ಟಿ ಚಾಕ್ರಿ' ಮಾಡುವ ಒತ್ತಡಕ್ಕೆ ಒಳಗಾಗುತ್ತಾರೆ.

5. ಕೆಲವು ಸಾರಿ ಅಗತ್ಯ ಬಿದ್ದಾಗ ಮಾಲಿಕರು ಸಾಲವನ್ನು ಕೊಡುತ್ತಾರೆ. ಅದನ್ನು ಮನೆಯ ಯಾರಾದರೂ ಕೂಲಿ ಮಾಡಿ ತೀರಿಸಬೇಕು. ಆದರೆ ಸಾಲದಿಂದ 'ಬಿಟ್ಟಿ ಚಾಕ್ರಿ' ಆರಂಭವಾಗುವುದಿಲ್ಲ. 'ಬಿಟ್ಟಿ ಚಾಕ್ರಿ'ಯ ತಳಹದಿ ಸಂಪ್ರದಾಯ.

6. 'ಬಿಟ್ಟಿಚಾಕ್ರಿ'ಯನ್ನು ಕೇವಲ ದಲಿತರು ಮಾತ್ರ ಮಾಡುತ್ತಾರೆ. ದಲಿತರಲ್ಲಿಯೂ ಅತಿ ನಿರ್ಗತಿಕರು ಮಾತ್ರ ಇದನ್ನು ಮಾಡುತ್ತಾರೆ. ಆರ್ಥಿಕ ಪರಿಸ್ಥಿತಿಯು ಸ್ವಲ್ಪ ಸುಧಾರಿಸಿದ ದಲಿತರು 'ಬಿಟ್ಟಿಚಾಕ್ರಿ' ಮಾಡುವುದನ್ನು ಅವಮಾನದ ಸಂಗತಿಯೆಂದು ಪರಿಗಣಿಸುತ್ತಾರೆ. 'ಬಿಟ್ಟಿಚಾಕ್ರಿ' ಮಾಡುವವರೂ ಅದೇ ರೀತಿ ತಿಳಿದು ಕೊಳ್ಳುತ್ತಾರೆ. ಆದರೆ ತಮ್ಮ ಬಡತನದ ಕಾರಣದಿಂದ ಅದನ್ನು ಮಾಡುವುದು ಅನಿವಾರ್ಯವೆಂದು ಒಪ್ಪಿಕೊಂಡಿದ್ದಾರೆ. 'ಬಿಟ್ಟಿಚಾಕ್ರಿ' ಮಾಡುವ ಕುಟುಂಬಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡದ ಕುಟುಂಬದವರು ಮದುವೆ ಸಂಬಂಧ ಇಟ್ಟುಕೊಳ್ಳಲು ಇಷ್ಟ ಪಡುವುದಿಲ್ಲ.

7. 'ಬಿಟ್ಟಿಚಾಕ್ರಿ'ಗೂ ಜಾತಿ ವ್ಯವಸ್ಥೆಗೂ ಅತ್ಯಂತ ನಿಕಟ ಸಂಬಂಧವಿದೆ. 'ಬಿಟ್ಟಿಚಾಕ್ರಿ' ಮಾಡುವವರೆಲ್ಲರೂ ದಲಿತರೇ. ದಲಿತರಲ್ಲೂ ಹೆಚ್ಚು ಬಡತನ ಮತ್ತು ಶೋಷಣೆಗೆ ಒಳಗಾದ ಸಮುದಾಯದವರೇ ಅದರಲ್ಲಿ ತೊಡಗಿದ್ದಾರೆ. ಬ್ರಿಟಿಷರ ಕಾಲಕ್ಕಿಂತ ಮುಂಚೆ ಪ್ರಚಲಿತವಿದ್ದ 'ಜಾತಿ ಗುಲಾಮಿ ಪದ್ಧತಿ' ಅಥವಾ 'ಜಜ್‌ಮನಿ' (ಆಯಗಾರಿಕೆ) ಪದ್ಧತಿಯಲ್ಲಿ ದಲಿತರು ಆರ್ಥಿಕವಾಗಿ ನಡೆದುಕೊಳ್ಳುತ್ತಿದ್ದ ವ್ಯವಸ್ಥೆಯ ಪಳೆಯುಳಿಕೆ 'ಬಿಟ್ಟಿ ಚಾಕ್ರಿ' ಎಂದು ಪರಿಗಣಿಸಬಹುದು.

8. 'ಬಿಟ್ಟಿಚಾಕ್ರಿ'ಯು ಎಷ್ಟೇ ಅವಮಾನದ ಸಂಗತಿಯಾದರೂ ಬಡ ದಲಿತ ಕುಟುಂಬಗಳಿಗೆ ಅದು ಒಂದು ರೀತಿಯ ಜೀವನಾಧಾರ ಒದಗಿಸಿ ಕೊಡುತ್ತದೆ. ಅಂತೆಲೇ 'ಬಿಟ್ಟಿಚಾಕ್ರಿ' ಮಾಡುವವರಲ್ಲಿ ಕೆಲವರು ಅದನ್ನು ಒಪ್ಪಿಕೊಳ್ಳಲು ಮುಂದೆ ಬರುವುದಿಲ್ಲ. ಅದರಲ್ಲೂ 'ಬಿಟ್ಟಿ ಚಾಕ್ರಿ'ಗೆ ವಿರೋಧವನ್ನು ದೊಡ್ಡ ಮಟ್ಟದಲ್ಲಿ ವ್ಯಕ್ತಪಡಿಸುವವರು 'ಬಿಟ್ಟಿ ಚಾಕ್ರಿ'ಯ ದಿನನಿತ್ಯದ ಅವಮಾನಕರ ಕೆಲಸ ಮಾಡುತ್ತಿರುವ ಹೆಂಗಸರು. ಆದರೆ ಅವರ ಮನೆಯ ಕೆಲ ಗಂಡಸರು ಮೊದಮೊದಲು "'ಬಿಟ್ಟಿಚಾಕ್ರಿ' ಸರಿಯಿಲ್ಲ; ಅದನ್ನು ನಿಲ್ಲಿಸಬೇಕು" ಎಂದು ಸಹಮತ ವ್ಯಕ್ತಪಡಿಸಿದವರು ನಂತರ ಮಾಲಿಕರ ಒತ್ತಡಕ್ಕೆ ಬಲಿಯಾಗಿ "'ಬಿಟ್ಟಿ ಚಾಕ್ರಿ' ಬಗ್ಗೆ ಪ್ರಸ್ತಾಪ ಮಾಡಬೇಡಿ" ಎಂದು ತಮ್ಮ ಅಸಹಕಾರ, ವಿರೋಧವನ್ನು ವ್ಯಕ್ತಪಡಿಸುತ್ತಾರೆ. "'ಬಿಟ್ಟಿಚಾಕ್ರಿ'ಯನ್ನು ಜೀತ ಪದ್ಧತಿಯೆಂದು ತಮ್ಮನ್ನು ಅದರಿಂದ ಮುಕ್ತಗೊಳಿಸಿದರೆ ತಮ್ಮ ಜೀವನದ ಒಂದು ಆಧಾರ ತಪ್ಪಿದಂತಾಗುತ್ತದೆ" ಎಂಬುದು 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿಸಿಕೊಂಡಿರುವ ಕೆಲವರ ಅಭಿಪ್ರಾಯ. ಅಂತಹ ಸಂದರ್ಭದಲ್ಲಿ ಅವರನ್ನು 'ಬಿಟ್ಟಿ ಚಾಕ್ರಿ' ಮಾಡುವುದನ್ನು ನಿಲ್ಲಿಸಲು ಆಗ್ರಹಿಸುವುದು ಸರಿಯೇ ಎಂಬ ನೈತಿಕ ಪ್ರಶ್ನೆ ಉದ್ಭವಿಸುತ್ತದೆ. 'ಬಿಟ್ಟಿ ಚಾಕ್ರಿ'ಯಲ್ಲಿರುವ ಮಹಿಳೆಯರು ಮತ್ತು ಪುರುಷರು ವಿಭಿನ್ನ ರೀತಿಯ ಪ್ರತಿಕ್ರಿಯೆಗಳನ್ನು ಕೊಡುತ್ತಾರೆ. ಹೆಚ್ಚಾಗಿ 'ಬಿಟ್ಟಿ ಚಾಕ್ರಿ' ಮಾಡುವುದು ಮಹಿಳೆಯರು. ಸೆಗಣಿ ಬಾಚುವುದು ಮತ್ತು ಹೊರುವುದು ತುಂಬ ಬೇಸರದ ಕೆಲಸ. ಅದನ್ನು ನಿಲ್ಲಿಸಬೇಕೆಂದು ಅವರು ಹೆಚ್ಚಾಗಿ ಇಷ್ಟ ಪಡುತ್ತಾರೆ. ಆದರೆ ಗಂಡಸರು 'ಬಿಟ್ಟಿ ಚಾಕ್ರಿ'ಯಿಂದ ತಮಗೆ ಏನೋ ಆಧಾರವಾಗುತ್ತದೆ ಎಂದು ನಂಬುತ್ತಾರೆ ಮತ್ತು ಯಜಮಾನರನ್ನು ಎದುರು ಹಾಕಲು ಇಷ್ಟ ಪಡುವುದಿಲ್ಲ. ಆದರೂ ಕೆಲವು ಕುಟುಂಬಗಳು 'ಬಿಟ್ಟಿಚಾಕ್ರಿ'ಯಿಂದ ಹೊರಬರಲು ಅವಕಾಶವಿದ್ದಾಗ ತಮ್ಮ ಕುಟುಂಬದ ಹಿಂದಿನ ಹೀನಾಯ ಬದುಕನ್ನು ನೆನಪಿಸಿ ಇನ್ನೆಂದೂ 'ಬಿಟ್ಟಿಚಾಕ್ರಿ'ಗೆ ಅವಕಾಶ ಕೊಡುವುದಿಲ್ಲ ಎಂಬ ದಿಟ್ಟ ನಿಲುವು ತಾಳಿರುವುದನ್ನು ಕಾಣುತ್ತಿದ್ದೇವೆ.

9. 'ಬಿಟ್ಟಿ ಚಾಕ್ರಿ'ಯಿಂದ ಹೊರಬರಲು ಮುಖ್ಯ ಕಾರಣ ಸ್ವಲ್ಪವಾದರೂ ಶಿಕ್ಷಣ – ಜಿವಟಗುಂಡಿ ಮತ್ತು ಜಾಲಿಕೊಪ್ಪದಲ್ಲಿ ಕೆಲವೇ ಕೆಲವು ಮಂದಿ ಪ್ರೌಢ ಶಿಕ್ಷಣ, ಚಿಕ್ಕ ಬಾಗೇವಾಡಿಯಲ್ಲಿ ನಾಲ್ಕೈದು ಮಂದಿ ಪದವಿ ಮತ್ತು ವೃತ್ತಿಪರ ಶಿಕ್ಷಣ – ಪಡೆದು ತಿಂಗಳ ಸಂಬಳ ಲೆಕ್ಕದಲ್ಲಿ ಸ್ವಲ್ಪ

ಹೆಚ್ಚಿನ ಮಟ್ಟಗಿನ ನೌಕರಿಯನ್ನು ಖಾಸಗಿ ವಲಯದಲ್ಲೋ ಗ್ರಾಮ ಪಂಚಾಯತಿಯಲ್ಲೋ ಪಡೆದಿರುವುದನ್ನು ಗಮನಿಸಲಾಗಿದೆ. ಆದರೆ ಎಷ್ಟೋ ಕಡೆ ಶಾಲೆಗೆ ಹೋಗುವ ಮಕ್ಕಳನ್ನು ಪ್ರಾಥಮಿಕ ಹಂತದಲ್ಲೇ ನಿಲ್ಲಿಸಿ ಅವರನ್ನು 'ಬಿಟ್ಟಿ ಚಾಕ್ರಿ'ಗೋ ಜೀತಕ್ಕೋ ಹಾಕಿರುವ ಪ್ರಕರಣಗಳು ಹೆಚ್ಚಿಗಿವೆ. ಹಿಂದೆ ಎಲ್ಲರೂ ಅನಕ್ಷರಸ್ಥರಾಗಿದ್ದು 'ಬಿಟ್ಟಿ ಚಾಕ್ರಿ'ಯಲ್ಲೋ ಜೀತದಲ್ಲೋ ತೊಡಗಿರುತ್ತಿದ್ದರು. ಆದರೆ ಈಗ ಅಲ್ಪ ಸ್ವಲ್ಪ ಶಿಕ್ಷಣ ಪಡೆದರೂ 'ಬಿಟ್ಟಿ ಚಾಕ್ರಿ' ಮತ್ತು ಜೀತಕ್ಕೆ ಹೋಗುವ ಪರಿಸ್ಥಿತಿ ನಿಂತಿಲ್ಲ. ಪ್ರಾಥಮಿಕ ಶಿಕ್ಷಣವೂ ಪೂರ್ತಿಯಾಗಿ ಮತ್ತು ಗುಣ ಮಟ್ಟದಲ್ಲಿ ಸಿಗದಿರುವುದು ನೋವಿನ ಸಂಗತಿ ಒಂದಾದರೆ ಉತ್ತಮ ಮತ್ತು ಉನ್ನತ ಶಿಕ್ಷಣದಿಂದ ಇಡೀ ಸಮುದಾಯಗಳೇ ಏಕೆ ವಂಚಿತರಾಗಬೇಕೆಂಬುದು ಆತಂಕದ ಸಂಗತಿ. ಜನರೆಲ್ಲಾ 'ಬಿಟ್ಟಿಚಾಕ್ರಿ'ಯಲ್ಲಿ ತೊಡಗಿರುವುದೇ ಅದಕ್ಕೆ ಕಾರಣ ಎಂಬ ತೀರ್ಮಾನವೇ ಸರಿ ಎನಿಸುತ್ತದೆ.

10. ಕೇವಲ ಬೆಳಿಗ್ಗೆ ಮಾತ್ರ 'ಬಿಟ್ಟಿಚಾಕ್ರಿ' ಮಾಡುವವರು ಅದೇ ಮಾಲೀಕರಲ್ಲಿ ಅಥವಾ ಬೇರೆಕಡೆ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಇದು ಒಂದು ರೀತಿಯಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರಿಗೆ ಹೆಚ್ಚಿನ ಉದ್ಯೋಗದ ಅವಕಾಶ ನೀಡುವ ವ್ಯವಸ್ಥೆ ತರಹ ಕಾಣುತ್ತದೆ. ದಲಿತರ ಅಸಹಾಯಕ ಪರಿಸ್ಥಿತಿಯಲ್ಲಿ ಯಾವುದೇ ನೆರವು ಸ್ವಲ್ಪವಾದರೂ ಭದ್ರತೆಯನ್ನು ಒದಗಿಸುತ್ತದೆ. ಆದರೆ ಹೆಚ್ಚಿನ ಉದ್ಯೋಗದ ಅವಕಾಶವಿದ್ದರೆ ಹೆಚ್ಚಿನ ಆದಾಯದ ಅವಕಾಶವೂ ಇರಬೇಕು. ಆದರೆ 'ಬಿಟ್ಟಿ ಚಾಕ್ರಿ' ಮಾಡುವವರ ಪ್ರತಿಕ್ರಿಯೆಯಿಂದ ಮತ್ತು ಅವರಿಗೆ ಸಿಗುವ ಪ್ರತಿಫಲಗಳನ್ನು ಲೆಕ್ಕಾಚಾರ ಮಾಡಿದಾಗ ಅವರಿಗೆ ಸಿಗುವ ಪ್ರತಿಫಲ ಕನಿಷ್ಟ ವೇತನಕ್ಕಿಂತ ಬಹಳ ಕಡಿಮೆ ಇರುವುದು ಕಂಡು ಬರುತ್ತದೆ. ಎಷ್ಟೋ ಸಮಯ ದಿನನಿತ್ಯ 'ಬಿಟ್ಟಿ ಚಾಕ್ರಿ' ಮಾಡಿದ ಮೇಲೆ ಬೇರೆ ದಿನಗೂಲಿಗೆ ಹೋಗಲು ಸಾಧ್ಯವಾಗಿರುವುದಿಲ್ಲ. ವಿಶೇಷ ಸಂದರ್ಭಗಳಲ್ಲಿ 'ಬಿಟ್ಟಿ ಚಾಕ್ರಿ' ಮಾಡುವಾಗ ದಿನಗಟ್ಟಲೆ ಕೆಲವು ಸಾರಿ 10–15 ದಿನ ಇಡೀ ದಿವಸ ಯಜಮಾನರ ಮನೆಯಲ್ಲಿಯೇ ಕೆಲಸಗಳನ್ನು ಮಾಡುತ್ತಾ ಸಮಯ ಕಳೆಯಬೇಕಾಗುತ್ತದೆ. ಸುಗ್ಗಿ ಸಮಯದಲ್ಲಂತೂ ಅವರು ಮಾಡುವ ಸೇವೆ ಒಂದು ತಿಂಗಳೂ ದಾಟಬಹುದು. 'ಬಿಟ್ಟಿ ಚಾಕ್ರಿ' ಮಾಡುವುದರಿಂದ ಅವರಿಗೆ ಹೆಚ್ಚಿನ ಗಳಿಗೆಗೆ ಆಧಾರವಾಗಿದೆ ಎನ್ನುವುದಾದರೆ 'ಆ ಹೆಚ್ಚುವರಿ ಗಳಿಕೆಯಿಂದ ಅವರ ಜೀವನ ಮಟ್ಟ ಗಣನೀಯವಾಗಿ ಮುಂದುವರಿದಿದೆ; ಅವರು ಜೀವನದಲ್ಲಿ ಮುಂದುವರಿಯಲಿಕ್ಕೆ ಅದು ಸಹಾಯ ಮಾಡುತ್ತದೆ' ಎಂದಾಗಬೇಕು. ಆದರೆ ಈಗಲೂ ಅವರ ಜೀವನದ ಪರಿಸರ, ಅವರ ಶಿಕ್ಷಣದ ಮಟ್ಟ, ಅವರ ತೀವ್ರ ಬಡತನ ಇವೆಲ್ಲವುಗಳಿಗೆ ಅವರು 'ಬಿಟ್ಟಿ ಚಾಕ್ರಿ'ಯಲ್ಲಿ ಮುಂದುವರಿಯುತ್ತಿರುವುದೇ ಒಂದು ಮುಖ್ಯ ಕಾರಣ ಎಂದು ತಿಳಿದುಕೊಳ್ಳುವ ತೀರ್ಮಾನಕ್ಕೆ ಬರಬೇಕಾಗುವುದು ಅನಿವಾರ್ಯ.

11. ಜೀತಕಾನೂನನ್ನು ಅರ್ಥೈಸಿದ ಪ್ರಕಾರ, 'ಒಂದು ದುಡಿಮೆಯನ್ನು ಎಷ್ಟು ಕಾಲ ಮಾಡಿದರೆ ಅದು ಜೀತದ ವ್ಯಾಖ್ಯಾನದೊಳಗೆ ಬರುತ್ತದೆ?' ಎಂಬುದಾಗಿ ನಿರ್ಧರಿಸುವುದಲ್ಲ. ಆ ರೀತಿಯ ಪ್ರಶ್ನೆಯೇ ಪ್ರಸ್ತುತವಲ್ಲ. ಜೀತ ಕಾನೂನಿನ ಪರಿಚ್ಛೇದ 2ಜಿಯಲ್ಲಿಯ ಜೀತ ಪದ್ಧತಿಯ ವ್ಯಾಖ್ಯಾನದಲ್ಲಿ ಜೀತ ಮಾಡುವ ಒಟ್ಟು ಸಮಯದ ಬಗ್ಗೆಯೇ ಪ್ರಸ್ತಾಪವಿಲ್ಲ. ನಿರ್ಬಂಧಕ್ಕೊಳಗಾಗಿ ಸ್ವಾತಂತ್ರಯ ಇಲ್ಲದೇ ಮತ್ತು ವೇತನವಿಲ್ಲದೇ ಅಥವಾ ನಾಮ ಮಾತ್ರ ಮಜೂರಿಗೆ ದುಡಿಯುವುದೇ ಜೀತ.

ಜೀತ ಕಾನೂನಿನ ಪ್ರಕಾರ ಒಂದು ದುಡಿಮೆ ಜೀತದ ದುಡಿಮೆ ಎನಿಸಬೇಕಾದರೆ ಮುಖ್ಯವಾಗಿ ಇರಬೇಕಾದ ಅಂಶಗಳು ಎಂದರೆ: 1. ಜೀತದ ದುಡಿಮೆ ಬಿಟ್ಟು ಬೇರೆ ಕಡೆ ಕೆಲಸಕ್ಕೆ ಹೋಗುವ ಸ್ವಾತಂತ್ರ್ಯವಿಲ್ಲದಿರುವುದು; 2. ಮಾಡುವ ಕೆಲಸಕ್ಕೆ ವೇತನ ಸಿಗದೇ ಇರುವುದು ಅಥವಾ ಒಂದು ವೇಳೆ ಸಿಕ್ಕರೆ ಅದು ಕನಿಷ್ಠ ವೇತನ ಅಥವಾ ಪ್ರಚಲಿತ ವೇತನಕ್ಕೆ ಕಡಿಮೆ ಇರುವುದು.

ಅದೇ ರೀತಿಯಲ್ಲಿ ಮೂರನೇ ಅಧ್ಯಾಯದಲ್ಲಿ ವಿವರಿಸಿದಂತೆ ಒಡಿಶಾದ ಬರ್ತನ್ ಆಚರಣೆಯಲ್ಲಿರುವ ಕ್ಷೌರಿಕರು ಒಂದೊಂದು ಮನೆಗೆ ಕೆಲವೇ ಗಂಟೆಗಳ ಕಾಲ ಕ್ಷೌರ ಮತ್ತಿತರ ಸೇವೆ ನೀಡಿದರೂ ಕೂಡಾ ಕ್ಷೌರದ ಜೊತೆಗೆ ಮಾಡಬೇಕಾದ ಸೇವೆಗಳು ಅವಮಾನವೀಯವಾಗಿದ್ದು ಅವುಗಳಿಗೆ ಸಿಗುವ ಸಂಭಾವನೆಯು ವರ್ಷಕ್ಕೆ 15 ಕಿ. ಗ್ರಾಂ ಭತ್ತದಷ್ಟು ಕ್ಷುಲ್ಲಕವಾಗಿದ್ದು ಅವರು ಆ ಸೇವೆಗಳನ್ನು ಮಾಡಲೇ ಬೇಕೆಂಬ ಸಾಂಪ್ರದಾಯಿಕ ನಿರ್ಬಂಧವಿರುವುದರಿಂದ ಆ ನಿರ್ಬಂಧದ ಜೊತೆಗೆ ಅವರು ಬೇರೆ ಬೇರೆ ಕಡೆ ಕೆಲಸ ಮಾಡುವ ಸ್ವಾತಂತ್ರ್ಯವಿದ್ದರೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವೂ ಒಡಿಶಾ ಸರ್ಕಾರವೂ ಒಡಿಶಾ ರಾಜ್ಯ ಮಾನವ ಹಕ್ಕುಗಳ ಆಯೋಗವೂ ಬರ್ತನ್ ಒಂದು ಜೀತ ಪದ್ಧತಿ ರದ್ದತಿ ಕಾನೂನಿನಡಿ ಬರುವ ಆಚರಣೆಯಾಗಿದೆ ಎಂಬ ತೀರ್ಮಾನಕ್ಕೆ ಬಂದಿವೆ.

ಅದೇ ಧಾಟಿಯಲ್ಲಿ ಕರ್ನಾಟಕದ 'ಬಿಟ್ಟಿ ಚಾಕ್ರಿ'ಯಲ್ಲಿ ತಲೆತಲೆಮಾರುಗಳ ಮೇಲೆ ವಿಧಿಸಬಹುದಾದ ನಿರ್ಬಂಧವಿದೆ; ಅವರಿಗೆ ಸಿಗುವ ದವಸಧಾನ್ಯಗಳ ರೂಪದ ಪ್ರತಿಫಲವು ಅವರ ಸೇವೆಗಳಿಗೆ ತಕ್ಕುದಾದ ಪ್ರತಿಫಲವಲ್ಲ; ಜೊತೆಗೆ 'ಬಿಟ್ಟಿ ಚಾಕ್ರಿ' ಮಾಡುವ ಬಹುತೇಕ ಎಲ್ಲರ ಅಭಿಪ್ರಾಯದಲ್ಲಿ ಮತ್ತು ಇತರರ, ಪ್ರತ್ಯೇಕವಾಗಿ ಅವರ ಜೊತೆ ನೆಂಟಸ್ತಿಕೆ ಬೆಳೆಸಬೇಕೆಂದು ಇಷ್ಟ ಪಡುವವರಲ್ಲಿ ಅದು ತುಂಬಾ ಅವಮಾನದ ಸಂಗತಿಯಾಗಿದೆ. ಈ ಎಲ್ಲಾ ಕಾರಣಗಳಿಂದ 'ಬಿಟ್ಟಿ ಚಾಕ್ರಿ'ಯನ್ನು ಜೀತ ಪದ್ಧತಿ ರದ್ದತಿ ಕಾನೂನಿನಡಿ ಬರಬೇಕಾದ ಆಚರಣೆ ಎಂದೇ ಪರಿಗಣಿಸಬೇಕಾಗುತ್ತದೆ. ಜೊತೆಗೆ 'ಬಿಟ್ಟಿ ಚಾಕ್ರಿ'ಯಲ್ಲಿರುವವರ ಮನೆಗಳು, ಅವರ ಆದಾಯ ಮೂಲಗಳು ಮತ್ತು ಅವರ ಒಟ್ಟು ಜೀವನವನ್ನು ಗಮನಿಸಿದಾಗ ಅವರು ಇಂತಹ ಪರಿಸ್ಥಿತಿಯಲ್ಲಿ ಸ್ವತಂತ್ರ ಭಾರತದ 70 ವರ್ಷಕ್ಕೂ ಮೀರಿದ ನಂತರದ ಅವಧಿಯಲ್ಲಿ ಬಾಳುತ್ತಿರಬೇಕಾದರೆ ಅವರು

'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವುದರಿಂದಲೇ ಅವರು ಅಂತಹ ಜೀವನವನ್ನು ನಡೆಸುವ ಅನಿವಾರ್ಯತೆಗೆ ಒಳಗಾಗಿದ್ದಾರೆ ಎಂದು ತಿಳಿದು ಕೊಳ್ಳುವ ಸಾಧ್ಯತೆ ಇದೆ.

**6.4 ಅಧ್ಯಯನದ ಕಾಲದಲ್ಲಿ ಮಾಡಿದ 'ಪರಿಣಾಮ ಬೀರುವ ಕಾರ್ಯ'ಗಳ ಬಗ್ಗೆ ಪ್ರಸ್ತಾಪ**

ಮೊದಲ ಅಧ್ಯಾಯದಲ್ಲಿ ಈ ಅಧ್ಯಯನದ ವಿಧಾನವನ್ನು ಸ್ಪಷ್ಟಪಡಿಸಿದ್ದಂತೆ ಅಧ್ಯಯನವು 'ಭಾಗವಹಿಸುವಿಕೆಯಿಂದ ಪರಿಣಾಮ ಬೀರುವ ರೀತಿಯಲ್ಲಿ' ನಡೆಯಬೇಕೆಂದು ರೂಪರೇಷೆ ಹಾಕಲಾಗಿತ್ತು. ಅಧ್ಯಯನದ ಮೊದಲ ಭಾಗದ ಕೆಲವು ಫಲಿತಾಂಶಗಳನ್ನು ಇಷ್ಟರ ವರೆಗೆ ದಾಖಲಿಸಲಾಗಿದೆ. ಕೊನೆ ಅಧ್ಯಾಯದಲ್ಲಿ 'ಪರಿಣಾಮ ಬೀರುವ ರೀತಿಯಲ್ಲಿ' 'ಬಿಟ್ಟಿ ಚಾಕ್ರಿ'ಯ 'ಭಾಗವಹಿಸುವಿಕೆಯ ಅಧ್ಯಯನ'ದ ಸಮಯದಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರ ಮೇಲೆ ಸಕಾರಾತ್ಮಕ ಪರಿಣಾಮ ಬೀರಲು ಕೈಕೊಂಡ ಕೆಲವು ಪ್ರಯತ್ನಗಳನ್ನು ಮುಂದೆ ದಾಖಲಿಸಲಾಗಿದೆ.

'ಪರಿಣಾಮ ಬೀರಲು' ಎರಡು ರೀತಿಯಲ್ಲಿ ಅಥವಾ ಸಮಯದಲ್ಲಿ ಕ್ರಮಗಳನ್ನು ಕೈಗೊಳ್ಳುವ ಸಾಧ್ಯತೆ ಇದೆ ಎಂದು ಮೊದಲ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿತ್ತು. ಒಂದು ಅಧ್ಯಯನ ಪೂರ್ಣಗೊಂಡ ನಂತರ. ಇನ್ನೊಂದು ಅಧ್ಯಯನ ನಡೆಯುತ್ತಿರುವಾಗಲೇ. 'ಬಿಟ್ಟಿ ಚಾಕ್ರಿ' ಕುರಿತು ಮೊದಲ ಮಾಹಿತಿ ಬಂದಾಗಿನಿಂದ ಪ್ರತಿಹಂತದಲ್ಲೂ 'ಬಿಟ್ಟಿ ಚಾಕ್ರಿ'ಯು ಒಂದು ಅನಿಷ್ಟ ಪದ್ಧತಿ ಎಂಬ ಭಾವನೆ 'ಬಿಟ್ಟಿ ಚಾಕ್ರಿ'ಯಲ್ಲಿ ತೊಡಗಿರುವವರಿಂದ ಕೇಳಿಬರುತ್ತಿತ್ತು. ಅದರ ನಿವಾರಣೆಯ ಕ್ರಮಗಳ ಬಗ್ಗೆ ಈ ರೀತಿಯ ಸಾಧ್ಯತೆಗಳಿವೆ:

1. 'ಬಿಟ್ಟಿ ಚಾಕ್ರಿ'ಯು ಕೇವಲ ಬಡತನದ ಪ್ರಶ್ನೆಯಾಗಿದ್ದು ಬಡತನ ನಿರ್ಮೂಲನೆಯ ಕಾರ್ಯಕ್ರಮಗಳಿಗೆ ಆದ್ಯತೆ ಕೊಡುವುದು. ಅಥವಾ

2. ಅದು ಬಡತನದ ಜೊತೆಗೆ ತಿಳಿವಳಿಕೆಯ ಕೊರತೆಯೇ ಪ್ರಮುಖ ಪ್ರಶ್ನೆಯಾಗಿದ್ದು ತಿಳಿವಳಿಕೆ ಹೆಚ್ಚಿಸುವ ಮತ್ತು ಶಿಕ್ಷಣ ಒದಗಿಸುವುದು. ಅಥವಾ

3. ಬಡತನ ಮತ್ತು ಅರಿವಿನ ಕೊರತೆಯ ಜೊತೆಗೆ 'ಬಿಟ್ಟಿ ಚಾಕ್ರಿ'ಯು ಅಸ್ಪೃಶ್ಯ ಜಾತಿಯ ಪ್ರಶ್ನೆಯಾಗಿದ್ದು ಅದನ್ನು ಅಸ್ಪೃಶ್ಯ ಜಾತಿಗಳ ಜನರು ಎದುರಿಸಬೇಕಾದ ರೀತಿಯಲ್ಲಿ ಎತ್ತಿಕೊಳ್ಳುವುದು. ಅಥವಾ

4. 'ಬಿಟ್ಟಿ ಚಾಕ್ರಿ'ಯು ಬಡತನ, ಶಿಕ್ಷಣದ ಕೊರತೆ, ಜಾತಿ ತಾರತಮ್ಯಗಳ ಜೊತೆಗೆ ಜೀತದ ಒಂದು ರೂಪವೂ ಆಗಿದ್ದರೆ ಜೀತ ಪದ್ಧತಿ ರದ್ದತಿ ಕಾನೂನಿನಡಿ ಅದಕ್ಕೆ ಪರಿಹಾರ ಸಿಕ್ಕುವಂತೆ ನೋಡಿಕೊಳ್ಳುವುದು.

ಕೊನೆಯ ಅಭಿಪ್ರಾಯವೇ ಸೂಕ್ತ ಎಂಬುದು ಕೆಲ ಮುಖಂಡರ ಮತ್ತು ಹಲವಾರು ಮಂದಿ 'ಬಿಟ್ಟಿ ಚಾಕ್ರಿ' ಮಾಡುವವರ ಅಭಿಪ್ರಾಯವಾಗಿತ್ತು.

ಏನೇ ಪ್ರಯತ್ನ ಕೈಗೊಂಡರೂ ಅದು 'ಬಿಟ್ಟಿ ಚಾಕ್ರಿ' ಮಾಡುವವರ ಸಹಭಾಗಿತ್ವದಲ್ಲೇ ನಡೆಯಬೇಕೆಂಬುದು 'ಭಾಗವಹಿಸುವಿಕೆಯ ಅಧ್ಯಯನ'ದ ಮೂಲಭೂತ ಆಶಯ. 2013ರಲ್ಲಿ ಬೈಲಹೊಂಗಲ ತಾಲೂಕಿನಲ್ಲಿ 'ಬಿಟ್ಟಿ ಚಾಕ್ರಿ' ಇರುವ ಬೇರೆ ಬೇರೆ ಊರುಗಳ ಮಾಹಿತಿ ಪಡೆಯುತ್ತಿರುವಾಗ ಜಾಲಿಕೊಪ್ಪದಲ್ಲಿಯ ಎಲ್ಲಾ ದಲಿತರು 'ಬಿಟ್ಟಿ ಚಾಕ್ರಿ' ಮಾಡುತ್ತಿರುವುದು ಕಂಡು ಬಂತು. ಅಲ್ಲಿಯ ಕೆಲವು ಮುಖಂಡರನ್ನು ಭೇಟಿಯಾದಾಗ 'ಬಿಟ್ಟಿ ಚಾಕ್ರಿ'ಯು ಅವರ ಜೀವನದಲ್ಲಿ ಕೆಡುಕನ್ನು ತಂದಿದೆ; ಸಾಧ್ಯವಾದರೆ ಅದನ್ನು ನಿಲ್ಲಿಸಬೇಕು ಎಂಬ ಅಭಿಪ್ರಾಯ ಕೇಳಿಬಂತು. 'ಬಿಟ್ಟಿ ಚಾಕ್ರಿ'ಯಲ್ಲಿ ಸ್ಪಷ್ಟವಾಗಿ ಜೀತ ಕಾನೂನಿನ ಪ್ರಕಾರ ಜೀತದ ಅಂಶಗಳಿರುವುದೂ ತೋರಿಬರುತ್ತಿತ್ತು. ಜೀತ ಪದ್ಧತಿ ರದ್ದತಿ ಕಾನೂನಿನಡಿ 'ಬಿಟ್ಟಿ ಚಾಕ್ರಿ' ಕುರಿತು ಕ್ರಮ ತೆಗೆದು ಕೊಳ್ಳಲಿಕ್ಕೆ ಪ್ರಯತ್ನ ಮಾಡೋಣ ಎಂಬ ಅಭಿಪ್ರಾಯ 'ಬಿಟ್ಟಿ ಚಾಕ್ರಿ'ಯಿಂದ ನೊಂದ ಕೆಲವು ಮುಖಂಡರದ್ದು ಆಗಿತ್ತು. ಆದ್ದರಿಂದ 'ಬಿಟ್ಟಿ ಚಾಕ್ರಿ'ಯ ಅಧ್ಯಯನವು ಮುನ್ನಡೆಯುತ್ತಿರುವಾಗ ಜೀತ ಪದ್ಧತಿ ರದ್ದತಿ ಕಾನೂನಿನಡಿ ಅದನ್ನು ಎತ್ತಿ ಕೊಳ್ಳುವ ಪ್ರಯತ್ನವನ್ನೂ ಮಾಡಲಾರಂಭಿಸಲಾಗಿತ್ತು.

2013ರ ಜೂನ್ ತಿಂಗಳಲ್ಲಿ ಕರ್ನಾಟಕದಲ್ಲಿ ಜೀತ ಪದ್ಧತಿ ರದ್ದತಿ ಕಾನೂನಿನ ಅನುಷ್ಠಾನವನ್ನು ನಿರ್ವಹಿಸುತ್ತಿರುವ ಜವಾಬ್ದಾರಿ ಇರುವ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಚಿವರು ರಾಜ್ಯದಲ್ಲಿಯ ಜೀತ ಪದ್ಧತಿಯ ಪರಿಶೀಲನೆಗೆಂದು ಒಂದು ರಾಜ್ಯ ಮಟ್ಟದ ಸಮಿತಿಯನ್ನು ರಚಿಸಿತ್ತು. ಅದರ ಒಬ್ಬ ಸದಸ್ಯನಾಗಿ ನಾನು ನೇಮಿಸಲ್ಪಟ್ಟಿದ್ದೆನು. ಜೀತ ಪದ್ಧತಿಯ ಬಗ್ಗೆ ಅನ್ವೇಷಣೆ ನಡೆಯುತ್ತಿದ್ದಂತೆ 'ಬಿಟ್ಟಿ ಚಾಕ್ರಿ' ಬಗ್ಗೆ ಇಷ್ಟರ ವರೆಗೆ ಕಲೆ ಹಾಕಿದ ಮಾಹಿತಿಯನ್ನು ನಾನು ಸಮಿತಿಗೆ ಸಲ್ಲಿಸಿದ್ದೆ. ಸಮಿತಿಯು ತನ್ನ ವರದಿಯನ್ನು 2015ರ ಜುಲೈನಲ್ಲಿ ಸರ್ಕಾರಕ್ಕೆ ಒಪ್ಪಿಸಿದ್ದು ಸರ್ಕಾರವು 2015ರ ಸಪ್ಟೆಂಬರ್ 24ರಂದು ವರದಿಯನ್ನು ವಿಧಾನಸೌಧದಲ್ಲಿ ಬಿಡುಗಡೆಗೊಳಿಸಿ ಅದರಲ್ಲಿಯ 22 ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಒಂದು ತಿಂಗಳೊಳಗೆ ಒಂದು ಕ್ರಿಯಾಯೋಜನೆ ಹಾಕಬೇಕೆಂದು ಅಧಿಕಾರಿಗಳಿಗೆ ಸೂಚನೆ ನೀಡಿತು. ಆ ವರದಿಯ 22ನೇ ಶಿಫಾರಸ್ಸು 'ಬಿಟ್ಟಿ ಚಾಕ್ರಿ' ಕುರಿತದ್ದಾಗಿದೆ.

> ಜೀತಕ್ಕಿಂತಲೂ ಕ್ರೂರವಾಗಿರುವ ಬಿಟ್ಟಿ ಚಾಕರಿ ಎಂಬ ಮತ್ತೊಂದು ಸ್ವರೂಪದ ಜೀತ ಪದ್ಧತಿಯನ್ನು ಸಮೀಕ್ಷೆಯಿಂದ ಪತ್ತೆಹಚ್ಚಿ ಅದನ್ನು ಕೊನೆಗಾಣಿಸಬೇಕು.
>
> ವಿವರಣೆ: ಬಿಟ್ಟಿ ಚಾಕರಿ ಎನ್ನುವ ಜೀತ ಪದ್ಧತಿಯ ಮತ್ತೊಂದು ಶೋಷಣೆ ಉತ್ತರ ಕರ್ನಾಟಕದ ಕೆಲವು ಗ್ರಾಮಗಳಲ್ಲಿ ಇನ್ನೂ ಜೀವಂತವಿದೆ. ಜೀತದಾಳುಗಳ ಸಮೀಕ್ಷೆ ನಡೆಸುವಾಗ ಈ ಬಿಟ್ಟಿ ಚಾಕರಿ ಪದ್ಧತಿಯನ್ನು ಪತ್ತೆಹಚ್ಚಿ ಜೀತ ಪದ್ಧತಿ (ರದ್ದತಿ) ಕಾಯ್ದೆ 1976ರ ಅನ್ವಯ ಕಾನೂನು ಕ್ರಮ ಕೈಗೊಳ್ಳಬೇಕು.

ಬೈಲಹೊಂಗಲದಲ್ಲಿ ಜೀತ ಪದ್ಧತಿ ರದ್ದತಿ ಕಾನೂನನ್ನು ಅನುಷ್ಠಾನಗೊಳಿಸಲು ಜೀವಿಕದ 7-8 ಮಂದಿಯ ಒಂದು ತಂಡವಿತ್ತು. ಅದು ಜಾಲಿಕೊಪ್ಪ ಮತ್ತು ಚಿವಟಗೊಂಡಿಯ ದಲಿತ ಮುಖಂಡರ ಮೂಲಕ 'ಬಿಟ್ಟಿ ಚಾಕ್ರಿ'ಯನ್ನು ಜೀತಪದ್ಧತಿ ಎಂದೇ ಪರಿಗಣಿಸಬೇಕೆಂದು ಸಂಬಂದಪಟ್ಟ ಅಧಿಕಾರಿಗಳಲ್ಲಿ ಮನವರಿಕೆ ಮಾಡುವ ಪ್ರಯತ್ನ ಮಾಡುತ್ತಿತ್ತು. ರಾಜ್ಯ ಸರ್ಕಾರದ "ಜೀತ ಪದ್ಧತಿ ಪರಿಶೀಲನಾ ಸಮಿತಿಯ ವರದಿ 2015" ಮತ್ತು ಅದರಲ್ಲಿಯ 22ನೇ ಶಿಫಾರಸ್ಸನ್ನು ಅವರು ಬಳಸಿಕೊಂಡರು. ಅದರ ಪರಿಣಾಮವಾಗಿ ತಾಲೂಕಿನಲ್ಲಿ ಅಲ್ಲಿ ತನಕ ಗುರುತಿಸಿದ 254 ಜೀತದಾಳುಗಳಿಗೆ ಬಿಡುಗಡೆ ಪತ್ರ ಕೊಡಲು ಮತ್ತು 'ಬಿಟ್ಟಿ ಚಾಕ್ರಿ' ಮಾಡುವವರನ್ನು ಖುದ್ದು ಭೇಟಿಯಾಗಿ ಅವರು ಜೀತ ಕಾನೂನಿನಡಿ ಬರುತ್ತಾರೆಯೋ ಇಲ್ಲವೋ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವ ಭರವಸೆಯನ್ನು ಬೈಲಹೊಂಗಲದ ಉಪವಿಭಾಗಾಧಿಕಾರಿಗಳು ನೀಡಿದರು. ಅದರ ಪರಿಣಾಮವಾಗಿ 2016ರಲ್ಲಿ 17 ಮಂದಿ ಜೀತದಾಳುಗಳಿಗೆ ಮೊದಲ ಹಂತದಲ್ಲಿ ಬಿಡುಗಡೆ ಪತ್ರ ಕೊಡಲಾಯಿತು.

ನಂತರ ಚಿವಟಗುಂಡಿಯ 'ಬಿಟ್ಟಿ ಚಾಕ್ರಿ' ಮಾಡುವವರನ್ನು ಭೇಟಿಕೊಡಲು ಮೊದಲು 2016ರ ಆಗಸ್ಟ್ 11ರನ್ನು ನಿಗದಿಪಡಿಸಿ ನಂತರ ಅದನ್ನು ಆಗಸ್ಟ್ 22ಕ್ಕೆ ಮುಂದೂಡಿ ನಿಗದಿತ ಸಮಯಕ್ಕೆ ಊರಿಗೆ ಭೇಟಿ ನೀಡಿದರು. ದಲಿತರ ಸಮುದಾಯ ಭವನದಲ್ಲೇ 'ಬಿಟ್ಟಿಚಾಕ್ರಿ' ಮಾಡುವವರನ್ನು ಬೆಳಿಗ್ಗೆ 10.30ಗೆ ವಿಚಾರಿಸಲಾರಂಭಿಸಿದರು.

ಆದರೆ ಅವರು ದಲಿತ ಕೇರಿಗೆ ಬರುವ ಮೊದಲು ಚಿವಟ ಗುಂಡಿಯ ಗ್ರಾಮ ಪಂಚಾಯತಿ ಕಛೇರಿಗೆ ಭೇಟಿಕೊಟ್ಟು ಕೆಲವು ಮಾಲಿಕರನ್ನೂ 'ಬಿಟ್ಟಿಚಾಕ್ರಿ' ವಿಚಾರಣೆ ಸಮಯದಲ್ಲಿ ಹಾಜರಿರುವಂತೆ ತಮ್ಮ ಸಹಾಯಕರಿಂದ ಹೇಳಿಕಳುಹಿಸಿದರು[98]. ನಾನು ಆಗಸ್ಟ್ 21 ಬೆಳಿಗ್ಗೆಯಿಂದಲೇ ಊರಲ್ಲಿ ತಂಗಿದ್ದು 'ಬಿಟ್ಟಿ ಚಾಕ್ರಿ' ಕುರಿತು ಉಪವಿಭಾಗಾಧಿಕಾರಿ ಮುಂದೆ ಯಾವ ರೀತಿ ತಮ್ಮ ಬಗ್ಗೆ ಹೇಳಿಕೊಳ್ಳಲಿದ್ದಾರೆ ಎಂಬುದನ್ನು ಖಾತ್ರಿ ಪಡಿಸುತ್ತಿದ್ದೆ. ಆ ದಿನ ಸಂಜೆ ದಲಿತ ಕೇರಿಯ ಮುಖಂಡರು ಪ್ರತ್ಯೇಕ ಸಭೆಸೇರಿದ್ದರು. ಯುವಕರೂ ಅಲ್ಲಲ್ಲಿ ಕೂಡಿ ಮಾತಾಡುತ್ತಿದ್ದರು. ಮಹಿಳೆಯರು ಕೂಡಾ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ಎಲ್ಲರೂ ತಮ್ಮ ಧಾರುಣ ಪರಿಸ್ಥಿತಿ ಬಗ್ಗೆ ಹೇಳಿಕೊಳ್ಳತ್ತಿದ್ದರು. ತಾವು ತಮ್ಮ ಕೇರಿಯ ಒಂದು ಬೀದಿಯ ಇಕ್ಕೆಲಗಳಲ್ಲಿ ಬಂಧಿತರಾಗಿದ್ದು ಅದರ ಹೊರಗಿನ ಒಂದಿಂಚೂ ತಮಗೆ ಸೇರಿದ್ದಲ್ಲವೆಂದು ತಮ್ಮ ಅಸಹಾಯಕ ಪರಿಸ್ಥಿತಿಯನ್ನು ಹೇಳಿಕೊಳ್ಳುತ್ತಿದ್ದರು. ಸ್ವತಂತ್ರ ಜೀವನ ಸಾಗಿಸಲು ತಮಗೆ ಸೂಕ್ತ ಜಮೀನನ್ನು ನೀಡುವಂತೆ

[98] ಉಪವಿಭಾಗಾಧಿಕಾರಿಗಳ ಈ ನಡವಳಿಕೆ ಮೂಲಭೂತವಾಗಿ ಜೀತದಾಳುಗಳ ವಿಚಾರಣೆ ಮಾಡುವಾಗ ಅಧಿಕಾರಿಗಳು ಅನುಸರಿಸಬೇಕಾದ ಕ್ರಮಗಳ ವಿರುದ್ಧವಾಗಿದೆ. ಸರ್ವೋಚ್ಚ ನ್ಯಾಯಾಲವು 2012ರ ಅಕ್ಟೋಬರ್ 15ರಂದು ನೀಡಿದ ತೀರ್ಪಿನಲ್ಲಿಯ ನಿರ್ದೇಶನದಂತೆ ಜೀತ ವಿಚಾರಣಾಧಿಕಾರಿಗಳು ಎಸ್. ಆರ್. ಸಂಕರನ್ ರವರ ಮಾರ್ಗದರ್ಶನಗಳನ್ನೇ ಅನುಸರಿಸಬೇಕು. ಆ ಮಾರ್ಗದರ್ಶನಗಳಲ್ಲಿ ಮುಖ್ಯವಾದ ಎರಡು ಅಂಶಗಳು ಈ ರೀತಿ ಇವೆ: 1. ವಿಚಾರಣಾಧಿಕಾರಿಗಳು ನೇರವಾಗಿ ದಲಿತ ಕೇರಿಗೆ ಹೋಗಿ ವಿಚಾರಣೆ ನಡೆಸಬೇಕು. 2. ಜೀತದಾಳುವಿನ ವಿಚಾರಣೆಯನ್ನು ಯಾವುದೇ ಕಾರಣಕ್ಕೂ ಅವರ ಯಜಮಾನನ ಸಮಕ್ಷಮ ಮಾಡಬಾರದು. ಈ ಮಾರ್ಗದರ್ಶನಗಳನ್ನು ಅಧಿಕಾರಿಗಳು ಕಡ್ಡಾಯವಾಗಿ ಪಾಲಿಸಬೇಕೆಂದು ಕರ್ನಾಟಕ ಸರ್ಕಾರವು 199ರಲ್ಲೇ ಸುತ್ತೋಲೆ ಹೊರಡಿಸಿತ್ತು (ನೋಡಿ: ಕರ್ನಾಟಕ ಜೀತದಾಳುಗಳ ಪುನರ್ವಸತಿ: ಒಂದು ಕ್ರಿಯಾಯೋಜನೆ 2008. ಕರ್ನಾಟಕ ಸರ್ಕಾರ. ಪುಟ 5)

ಉಪವಿಭಾಗಾಧಿಕಾರಿಗಳಿಗೆ ಬಲವಾಗಿ ಮನವರಿಕೆ ಮಾಡುವುದಾಗಿ ಭರವಸೆ ನೀಡಿದರು. ಹಾಗೆಯೇ ಬೇರೆ ಮನೆಗಳನ್ನು ಭೇಟಿ ಕೊಡುತ್ತಿದ್ದಾಗ ಒಂದು ಮನೆಯಲ್ಲಿ ರಾತ್ರಿ ಕವಿಯುವ ಹೊತ್ತಿನಲ್ಲಿ ಒಬ್ಬ ಮಾಲಿಕನು ಬಂದು ಮಾತಾಡುತ್ತಿದ್ದುದನ್ನು ನಾನು ಗಮನಿಸಿದ್ದೆನು. ಅವರು ಹೋದ ಮೇಲೆ ಅವರು ಬಂದ ಕಾರಣವನ್ನು ಊರ ಕೆಲ ಮಂದಿಯನ್ನು ವಿಚಾರಿಸಿದಾಗ "ಮರುದಿನ ಉಪವಿಭಾಗಾಧಿಕಾರಿಗಳು 'ಬಿಟ್ಟಿ ಚಾಕ್ರಿ' ಬಗ್ಗೆ ವಿಚಾರಿಸಲು ಬರುವಾಗ ನೀವು ಯಾರೂ 'ಬಿಟ್ಟಿ ಚಾಕ್ರಿ' ಮಾಡುವುದನ್ನು ಒಪ್ಪಬಾರದು ಎಂದು ಹೇಳಲಿಕ್ಕೆ ಬಂದಿದ್ದರು" ಎಂದು ನನಗೆ ಮನೆಯ ಯಜಮಾನರು ವಿವರಿಸಿದರು. "ನಾವು ಅವರ ಮಾತಿಗೆ ಸೊಪ್ಪು ಹಾಕುವುದಿಲ್ಲ. ನಮ್ಮ ವಾಸ್ತವ ಪರಿಸ್ಥಿತಿಯನ್ನು ಇದ್ದಕ್ಕಿದ್ದ ಹಾಗೆ ಉಪವಿಭಾಗಾಧಿಕಾರಿಗಳಿಗೆ ಹೇಳುತ್ತೇವೆ" ಎಂದು ಅವರು ನನಗೆ ಆಶ್ವಾಸನೆ ಕೊಟ್ಟರು.

ಉಪವಿಭಾಗಾಧಿಕಾರಿಗಳು ವಿಚಾರಣೆ ಮಾಡಲು ಆರಂಭಿಸಿದ ಐದು ನಿಮಿಷಗಳಲ್ಲಿ ಒಬ್ಬನೇ ಒಬ್ಬ ಮಾಲಿಕ ದಲಿತರ ಸಮುದಾಯದೊಳಗೆ ಬಂದು ಉಪವಿಭಾಗಾಧಿಕಾರಿಗಳ ಎಡಬದಿಯಲ್ಲಿ ನಾಲ್ಕನೇ ಖಾಲಿ ಕುರ್ಚಿಯಲ್ಲಿ ನೆರೆದ ಜನರಿಗೆ ಎದುರಾಗಿ ಮತ್ತು ಉಪವಿಭಾಗಾಧಿಕಾರಿಗಳಿಗೆ ಮುಖಮಾಡಿ ಕುಳಿತುಕೊಂಡರು. ನಾನು ಉಪವಿಭಾಗಾಧಿಕಾರಿಗಳ ಬಲಬದಿಯಲ್ಲಿ ಅವರ ನಂತರದ ಕುರ್ಚಿಯಲ್ಲಿ ಕುಳಿತುಕೊಂಡಿದ್ದೆನು. ಉಪವಿಭಾಗಾಧಿಕಾರಿಯವರು "ನೀವು 'ಬಿಟ್ಟಿ ಚಾಕ್ರಿ' ಮಾಡುತ್ತೀರಾ?" ಎಂದು ಮಾಲಿಕನು ಬಂದ ಮರುಗಳಿಗೆಯಲ್ಲಿ ದಲಿತರನ್ನು ವಿಚಾರಿಸಿದರು. ಅಷ್ಟರ ವರೆಗೆ ಉಪವಿಭಾಗಾಧಿಕಾರಿಗಳು ಕೇಳುವ ಪ್ರಶ್ನೆಗಳಿಗೆ ಅವರನ್ನು ನೋಡಿಯೇ ಉತ್ತರಿಸುತ್ತಿದ್ದವರು ಉಪವಿಭಾಗಾಧಿಕಾರಿಗಳನ್ನು ನೋಡಿ ಉತ್ತರ ಕೊಡುವ ಬದಲು ಮಾಲಿಕನಿಗೆ ಮುಖಮಾಡಿ "ಇಲ್ಲ ಸ್ವಾಮಿ. ನಾವ್ಯಾರೂ 'ಬಿಟ್ಟಿ ಚಾಕ್ರಿ' ಮಾಡುತ್ತಿಲ್ಲ" ಎಂದು ಎಲ್ಲರ ಪರವಾಗಿ ದಲಿತ ಕೇರಿಯ ಮುಖಂಡರೊಬ್ಬರು ಉತ್ತರಿಸಿದರು. ಆಗ ಉಪವಿಭಾಗಾಧಿಕಾರಿಗಳಿಗೆ ನಾನು "ಜನರು 'ಬಿಟ್ಟಿ ಚಾಕ್ರಿ' ಬದಲು 'ಹೆಂಡಿ ಬಳಿಯುವುದು' 'ಸೆಗಣಿ ಕಸ ಬಳಿಯುವುದು' ಎಂದು ಹೇಳುತ್ತಾರೆ ಅದರ ಬಗ್ಗೆ ಕೇಳಿ" ಎಂದಾಗ ಅಧಿಕಾರಿಗಳು ಅದನ್ನೇ ಕೇಳಿದರು. ಅದಕ್ಕೆ ದಲಿತ ಮುಖಂಡರು "ಹೌದು" ಎಂದು ಒಪ್ಪಿಕೊಂಡರು. "ಅದಕ್ಕೆ ನಿಮಗೆ ಏನೇನು ಕೊಡುತ್ತಾರೆ" ಎನ್ನುವ ಪ್ರಶ್ನೆಗೆ ದಿನಗೂಲಿ ಬಗ್ಗೆ ಹೇಳುವುದರ ಬದಲು, "ನಮಗೆ ಕಾಳುಕಡಿ, ಬಳ್ಳುಳ್ಳಿ, ಗೋದಿ, ಕೇಳಿದ್ದನ್ನೆಲ್ಲವನ್ನೂ ಕೊಡುತ್ತಾರೆ" ಎಂದು ಉತ್ತರಿಸಿದರು. ನಂತರ ಉಪವಿಭಾಗಾಧಿಕಾರಿಗಳು ಜೀತದ ಬಗ್ಗೆ ಪ್ರಶ್ನೆಗಳನ್ನು ಮುಂದುವರಿಸಿ ಅಲ್ಲಿ ಹೇಳಿಕೆ ಕೊಟ್ಟ ನಾಲ್ಕು ಮಂದಿ ಜೀತದಾಳುಗಳ ಬಗ್ಗೆ ಎಲ್ಲ ವಿವರಗಳನ್ನು ಬರೆದುಕೊಳ್ಳುವಂತೆ ತಮ್ಮ ಸಹಾಯಕರಿಗೆ ಹೇಳಿದರು. ಅದಕ್ಕೆಲ್ಲ ಒಂದು ಗಂಟೆ ತೆಗೆದುಕೊಂಡು ಉಪವಿಭಾಧಿಕಾರಿಗಳು ಬೈಲಹೊಂಗಲಕ್ಕೆ 11.30ಕ್ಕೆ ತೆರಳಿದರು.

ಸಭೆಯಲ್ಲಿ ಯಾವ ಮಹಿಳೆಯೂ ಇರಲಿಲ್ಲ; ಯಾವ ಯುವಕನೂ ಇರಲಿಲ್ಲ. ದಲಿತರನ್ನು ಅವರ ಗಂಡಸು ಮುಖಂಡರೇ ಪ್ರತಿನಿಧಿಸಬೇಕೆಂಬುದು ಊರಿನ ನಿಯಮವೆಂದು ಆನಂತರ ತಿಳಿಯಿತು. ತಮ್ಮ ಯಜಮಾನರು ನಿಜಸ್ಥಿತಿಯನ್ನು ಮರೆಮಾಚಿದ್ದಕ್ಕೆ ಸಮುದಾಯದ ಹೊರಗೆ ಮಹಿಳೆಯರು ಅವರನ್ನು

ಉಗುಳುತ್ತಿದ್ದರು. ಯುವಕರು ಮಾತ್ರ ಸುಮ್ಮಗಿದ್ದರು. ನೀವು ಒಂದು ಅದ್ಭುತ ಅವಕಾಶವನ್ನು ಕಳೆದು ಕೊಂಡಿದ್ದೀರಿ. ಅದನ್ನು ಹೇಗೆ ಸರಿಪಡಿಸಲು ಸಾಧ್ಯ ಎಂಬುದನ್ನು ನೀವೇ ಚರ್ಚೆ ಮಾಡಿ ಒಂದು ತೀರ್ಮಾನಕ್ಕೆ ಬನ್ನಿ ಎಂದು ಅವರಿಗೆ ಸಮಾಧಾನ ಮಾಡಲು ಅಥವಾ ಅವರಿಗೆ ತಿಳಿಹೇಳಲು ಪ್ರಯತ್ನಿಸಿದೆ. ಜೊತೆಗೆ ಮಾಡಬಹುದಾದ ಒಂದು ಕ್ರಮವನ್ನೂ ಸೂಚಿಸಿದೆ. ಅವರೆಲ್ಲರೂ ಗುಂಪಾಗಿ ಹೋಗಿ ಉಪವಿಭಾಗಾಧಿಕಾರಿಗಳನ್ನು ಅವರ ಕಛೇರಿಯಲ್ಲೇ ಭೇಟಿಯಾಗಿ ತಾವು ತಪ್ಪು ಮಾಹಿತಿಗಳನ್ನು ಕೊಡಲು ತಮ್ಮ ಮೇಲೆ ಇದ್ದ ಒತ್ತಡಗಳನ್ನು ವಿವರಿಸಿ ತಮ್ಮ ನಿಜಸ್ಥಿತಿಯನ್ನು ಮನವರಿಕೆ ಮಾಡಿಕೊಡಬೇಕು ಎಂದು ಊರ ಹಿರಿಯರಿಗೆ, ಮಹಿಳೆಯರಿಗೆ, ಯುವಕರಿಗೆ ಮನದಟ್ಟು ಮಾಡಲು ಪ್ರಯತ್ನಿಸಿದೆನು[99]. ತದನಂತರ ಶೀಘ್ರದಲ್ಲಿ ಉಪವಿಭಾಗಾಧಿಕಾರಿಗಳು ವರ್ಗಾವಣೆಯಾಗಿ ಹೊಸಬರ ನಿಲುವುಗಳು 'ಬಿಟ್ಟಿ ಚಾಕ್ರಿ' ಬಿಡಿ ಜೀತ ಪದ್ಧತಿ ಬಗ್ಗೆಯೂ ಅಷ್ಟೊಂದು ಸಹಾನುಭೂತಿಯಿಂದಿರಲಿಲ್ಲವೆಂದು ತಿಳಿದು ಬಂತು.

ಚಿವಟಗುಂಡಿಯಲ್ಲಿ ಇಂತಹ ಪ್ರತಿಕ್ರಿಯೆಯಾದರೆ ಜಾಲಿಕೊಪ್ಪದಲ್ಲಿ ಇನ್ನೊಂದು ರೀತಿಯ ಮತ್ತು ಇನ್ನೂ ಹೆಚ್ಚಿನ ನೋವು ಕೊಡುವ ಪ್ರಸಂಗ ನಡೆಯಿತು. ಜಾಲಿಕೊಪ್ಪವನ್ನು ಕೇಂದ್ರವಾಗಿಸಿ 'ಬಿಟ್ಟಿ ಚಾಕ್ರಿ' ಮತ್ತದರ ಎಲ್ಲಾ ಆಯಾಮಗಳ ಕುರಿತು ಆಳವಾಗಿ ಅಭ್ಯಸಿಸಿ ಮಹತ್ತರ ಅಧ್ಯಯನ ನಡೆಸಬೇಕೆಂದು ಆಗಾಗಲೇ ನಿರ್ಧಾರ ಮಾಡಲಾಗಿತ್ತು. ಊರಲ್ಲಿ ಕೆಲವು ಒಂದೆರಡು ದಿನದ ಓಡಾಟದ ನಂತರ 2015ರ ಅಕ್ಟೋಬರ್‌ನಲ್ಲಿ ಐದು ದಿನ ಅವರ ಮಧ್ಯ ಅವರ ಒಂದು ಮನೆಯಲ್ಲೇ ತಂಗಿದ್ದು ಅವರ ಜೀವನಕ್ರಮವನ್ನು ಗಮನಿಸಿದ್ದೆ. ನಂತರ ಪ್ರತಿ ತಿಂಗಳೂ 5–5 ದಿನ ಊರಲ್ಲಿ ವಾಸಮಾಡಲು ಬಯಸಿದ್ದರೂ ಹಾಗೆ ಮಾಡಲು ಆಗಲಿಲ್ಲ. ಆ ಮೇಲೆ ಡಿಸೆಂಬರ್ ತಿಂಗಳಲ್ಲಿ ಅಲ್ಲಿಗೆ ಹೋದಾಗ ಒಂದು ಆಘಾತ ನನ್ನನ್ನು ಕಾದಿತ್ತು. ನಾನು ಅಲ್ಲಿ ತಂಗಿದ್ದ ಎರಡನೇ ದಿನವೇ ಕೆಲ ಗಂಡಸರು ಬಂದು "ಊರಲ್ಲಿ 'ಬಿಟ್ಟಿ ಚಾಕ್ರಿ' ಇಲ್ಲ; ನೀವು ಈ ಊರಲ್ಲಿ ಇರುವುದು ಬೇಡ" ಎಂದು ನಿಷ್ಠುರವಾಗಿ ಹೇಳಿದರು. ಆ ಮಾತು ನನಗೆ ತುಂಬಾ ಆಘಾತವನ್ನು ತಂದಿತ್ತು. ನಂತರ ನಾನು ಆ ಊರಲ್ಲಿ 2018ರ ತನಕ ನೆಲಸಿರಲಿಲ್ಲ. ಅಲ್ಲಿಗೆ ಹೋಗಿ ಬರುತ್ತಿದ್ದೆ ಅಷ್ಟೆ. ಆನಂತರವೇ ಚಿವಟಗುಂಡಿಯನ್ನೂ 'ಬಿಟ್ಟಿ ಚಾಕ್ರಿ' ಅಧ್ಯಯನಕ್ಕೆ ಆರಿಸಿದ್ದು.

2017ರ ಆರಂಭದಲ್ಲಿ ಜೀವಿಕವು 2012ದಿಂದ ಈ ತನಕ ಗುರತಿಸಿದ 14,217 ಜೀತದಾಳುಗಳಿಗೆ ಜೀತ ಕಾನೂನಿನಡಿ ನ್ಯಾಯ ದೊರಕಿಸಲು ಸುಮಾರು 8,000 ಮಂದಿ ಜೀತದಾಳುಗಳನ್ನು ಬೆಂಗಳೂರಿನಲ್ಲಿ

---

[99] ಕೆಲ ದಿನಗಳ ನಂತರ ಚಿವಟಗುಂಡಿಯ ಕೆಲವು ಮುಖಂಡರು ಒಬ್ಬ ಜೀವಿಕ ಕಾರ್ಯಕರ್ತರ ಜೊತೆ ಉಪವಿಭಾಗಾಧಿಕಾರಿಗಳನ್ನು ಅವರ ಕಛೇರಿಯಲ್ಲಿ ಭೇಟಿಯಾಗಿ ತಮ್ಮ 'ಬಿಟ್ಟಿ ಚಾಕ್ರಿ' ಕುರಿತು ನಿಜಸ್ಥಿತಿಯನ್ನು ಮನವರಿಕೆ ಮಾಡಲು ಪ್ರಯತ್ನಿಸಿದರೂ ಫಲಕಾರಿಯಾಗಿಲ್ಲ. ಜೀವಿಕ ಕಾರ್ಯಕರ್ತರು ಅವರ ಜೊತೆಗಿದ್ದುದೇ ಉಪವಿಭಾಗಾಧಿಕಾರಿಗಳು ತಮ್ಮ ನಿಲುವನ್ನು ಬದಲಾಯಿಸದಿರಲು ಕಾರಣ ಎಂದು ತಿಳಿದು ಕೊಳ್ಳಬಹುದು. ಏಕೆಂದರೆ ಚಿವಟಗುಂಡಿಯ ದಲಿತರು ಜೀವಿಕ ಕಾರ್ಯಕರ್ತರ ಜೊತೆ ಉಪವಿಭಾಗಾಧಿಕಾರಿಗಳ ಕಛೇರಿಗೆ ಹೋದಾಗ "ಜೀವಿಕದವರು ನಿಮ್ಮನ್ನು ಇಲ್ಲಿ ಕರಕೊಂಡು ಬಂದಿದ್ದರೇನು?" ಎಂದು ಅವರಿಗೆ ಉಪವಿಭಾಗಾಧಿಕಾರಿಗಳು ಪ್ರಶ್ನೆ ಹಾಕಿದ್ದರು. ಮುಖಂಡರು ಉಪವಿಭಾಗಾಧಿಕಾರಿಗಳನ್ನು ಭೇಟಿಯಾಗುವಾಗ, "ನಮಗೆ ಭಯವಾಗುತ್ತದೆ. ನಮಗೆ ಧೈರ್ಯ ತುಂಬಲು ನೀವು ನಮ್ಮ ಜೊತೆ ಬರಲೇ ಬೇಕು" ಎಂದು ಜೀವಿಕ ಕಾರ್ಯಕರ್ತರಲ್ಲಿ ಪಟ್ಟು ಹಿಡಿದಿದ್ದರು.

ಸಭೆಸೇರಿಸಿ ರಾಜ್ಯಮಟ್ಟದಲ್ಲಿ ಗಮನಸೆಳೆಯುವ ಪ್ರಯತ್ನದಲ್ಲಿ 'ಬಿಟ್ಟಿ ಚಾಕ್ರಿ' ಮಾಡುವವರ ಪರಿಸ್ಥಿತಿ ಬಗ್ಗೆಯೂ ಪಸ್ತಾಪ ಮಾಡಲಾಗಿತ್ತು.

ಪರಿಣಾಮ ಬೀರುವ ಪ್ರಯತ್ನವಾಗಿ ಮಾಡಿದ ಇನ್ನೊಂದು ಕೆಲಸ ರಾಷ್ಟ್ರ ಮಟ್ಟದಲ್ಲಿ ಜೀತಕಾನೂನಿನ ಅನುಷ್ಠಾನದ ಜವಾಬ್ದಾರಿಯಿರುವ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಗಮನ ತಂದಿರುವುದು. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಜೀತ ಕುರಿತ ತಿರುಳು ಗುಂಪಿನ ಸಭೆಯನ್ನು 2018ರ ಮೇ 29ರಂದು ನವದೆಹಲಿಯಲ್ಲಿ ಕರೆದಾಗ ಆ ಸಭೆಯಲ್ಲಿ ಚರ್ಚಿಸಬೇಕಾದ ವಿಷಯಸೂಚಿಯಲ್ಲಿ ವಿಷಯಗಳನ್ನು ಸೂಚಿಸಲು ಕೇಳಿದಾಗ ಜೀತಸಮಸ್ಯೆ ಕುರಿತು ಹಲವಾರು ಸಲಹೆಗಳನ್ನು ನೀಡಿ 'ಬಿಟ್ಟಿ ಚಾಕ್ರಿ' ಕುರಿತೂ ಚುಟುಕಾದ ಮಾಹಿತಿ ನೀಡಿ ಸೂಕ್ತ ಕ್ರಮಗಳನ್ನು ಕೈಗೊಳ್ಳುವ ಮುಂಚೆ ಅದರ ಪರಿಸ್ಥಿತಿ ಬಗ್ಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವೇ ಒಂದು ತನಿಖಾ ತಂಡ ಅಥವಾ ಅಧ್ಯಯನ ತಂಡ ರಚಿಸಿ ಒಂದು ತೀರ್ಮಾನಕ್ಕೆ ಬರಬೇಕೆಂದು ವಿಷಯಸೂಚಿಯಲ್ಲಿ ಸೇರಿಸಿ ಸಭೆಯಲ್ಲೂ ಅದರ ಬಗ್ಗೆ ಮನವರಿಕೆ ಮಾಡಿಕೊಟ್ಟೆನು. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಮುಂದೆ ತೆಗೆದುಕೊಳ್ಳಬಹುದಾದ ನಿಲುವು ಬಗ್ಗೆ ಕಾದು ನೋಡಬೇಕಾಗಿದೆ. ಈ ಅಧ್ಯಯನದ ಫಲಿತಗಳನ್ನೂ ಅದರಿಂದ ಕಂಡುಕೊಂಡ ಪರಿಹಾರ ಮಾರ್ಗಗಳನ್ನೂ ಅದರ ಮುಂದೆ ಪ್ರಸ್ತಾಪಿಸಬೇಗುತ್ತದೆ

'ಬಿಟ್ಟಿ ಚಾಕ್ರಿ' ಮಾಡುವವರೇ ಅದರ ಬಗ್ಗೆ ಪರಿಣಾಮಕಾರಿಯಾದ ತೀರ್ಮಾನ ತೆಗೆದುಕೊಳ್ಳುವ ನಾಯಕತ್ವ ವಹಿಸುವುದು ಇನ್ನೊಂದು ಆಶಯ. ಜಾಲಿಕೊಪ್ಪ, ಚಿವಟಗುಂಡಿ ಮತ್ತು ಚಿಕ್ಕ ಬಾಗೇವಾಡಿಗಳಲ್ಲಿ ಇಷ್ಟರ ವರೆಗೆ ಯಾವನೇ ಯುವಕ ಯುವತಿ ಆನಾಯಕತ್ವಕ್ಕೆ ದೊಡ್ಡ ಮಟ್ಟದಲ್ಲಿ ಮುಂದೆ ಬಂದಿಲ್ಲ. ಜಾಲಿಕೊಪ್ಪದ ಒಬ್ಬ ಯುವಕ, ಚಿವಟಗುಂಡಿಯ ಮೂವರು ಮಹಿಳೆಯರು, ಚಿಕ್ಕ ಬಾಗೇವಾಡಿಯ ಒಬ್ಬ ಯುವಕ ನಾಯಕರಾಗಿ ಬೆಳೆಯುವ ಸಾಧ್ಯತೆ ಇದೆ.

### 6.5 ಮುಂದಿನ ಮಾರ್ಗೋಪಾಯಗಳು

ಯಾವುದೇ ಸಮಸ್ಯೆಯ ಪರಿಹಾರಕ್ಕೆ ಆ ಸಮಸ್ಯೆಗೆ ಒಳಗಾದವರೇ ಜವಾಬ್ದಾರಿ ಮತ್ತು ನಾಯಕತ್ವ ವಹಿಸಿಕೊಳ್ಳಬೇಕು. ಈ ಅಧ್ಯಯನವು ಆ ನಾಯಕತ್ವ ಬೆಳೆಯುವಂತೆ ಸಹಕಾರಿಯಾದರೆ ಅಧ್ಯಯನದ ಉದ್ದೇಶ ಫಲಿಸಿದಂತೆ. ನಾಯಕತ್ವ ಬೆಳೆಯಲು ಈ ಅಧ್ಯಯನದಿಂದ ಬೆಳಕಿಗೆ ತಂದ ವಿಷಯಗಳು 'ಬಿಟ್ಟಿಚಾಕ್ರಿ'ಗೆ ಒಳಗಾದ ಸಮುದಾಯದ ಪ್ರಜ್ಞೆಯನ್ನೂ ಅರಿವನ್ನೂ ಜಾಗೃತಗೊಳಿಸಬಹುದು. ನೇರವಾಗಿ 'ಬಿಟ್ಟಿಚಾಕ್ರಿ'ಗೊಳಗಾದವರಿಗೆ ಮಾತ್ರ ಈ ಅಧ್ಯಯನ ಸಂಬಂಧಪಡಬೇಕೆಂದಿಲ್ಲ. ಅನುಸೂಚಿತ ಜಾತಿ ಜನಾಂಗದ ಮುಖಂಡರು, ಜನನಾಯಕರು, ವಿಚಾರವಂತರು, ಪ್ರಜ್ಞಾವಂತರು, ಶಿಕ್ಷಿತರು ಹಾಗೂ ಎಲ್ಲಾ ವರ್ಗದ ಮತ್ತು ಸಮಾಜದ ಸಮಸ್ತ ನಾಯಕರು ಮತ್ತು ವಿಚಾರಸ್ಥರು ಇನ್ನೂ ಜೀವಂತವಿರುವ 'ಬಿಟ್ಟಿ ಚಾಕ್ರಿ' ಪದ್ಧತಿ ಬಗ್ಗೆ ತಲೆ ಕೆಡಿಸಿಕೊಳ್ಳಬೇಕಾಗುತ್ತದೆ. ಅದು ಕೇವಲ 'ಬಿಟ್ಟಿ ಚಾಕ್ರಿ'ಗೊಳಗಾದವರ ಪ್ರಶ್ನೆ ಅಲ್ಲ. ಎಲ್ಲರ ಪ್ರಶ್ನೆಯೂ ಹೌದು.

ಅಧ್ಯಯನದ ಸಂದರ್ಭದಲ್ಲಿ ಲಿಂಗದಳ್ಳಿಯಲ್ಲಿಯ ದಲಿತ ಸಂಘಟನೆಯಲ್ಲಿ ತೊಡಗಿರುವ ಒಬ್ಬ ಯುವಕರಿಂದ ಪಡೆದ ಹೇಳಿಕೆ 'ಬಿಟ್ಟಿ ಚಾಕ್ರಿ'ಯ ಕರಾಳ ಮುಖ ಅನಾವರಣಗೊಳಿಸುತ್ತದೆ. ತಾಲೂಕಿನಾದ್ಯಂತ ಸಂಘಟಕರಾಗಿದ್ದರೂ ಅವರು ದಿವಸಾಗಲೂ ಬೆಳಿಗ್ಗೆ ಆ ಊರಿನ ಜಮೀನ್ದಾರರ ಮನೆಯಲ್ಲಿ 'ಬಿಟ್ಟಿ ಚಾಕ್ರಿ'ಯನ್ನು ಮಾಡಲೇ ಬೇಕು. ತನ್ನಿಂದ ತನ್ನ ಮಗನಿಗೆ ಆ ಪದ್ಧತಿ ಹಸ್ತಾಂತರವಾಗಬಾರದೆಂಬುದು ಅವರ ಅಳಲು. "ಅವನು ಈಗ ಇಂಗ್ಲಿಷ್ ಮೀಡಿಯಮ್‌ನಲ್ಲಿ ಓದುತ್ತಿದ್ದಾನೆ. ಮುಂದೆ ಅವನು ಏನೇ ಕೆಲಸ ಮಾಡುತ್ತಿದ್ದರೂ ಊರಲ್ಲಿ ಇರಬೇಕಾದರೆ 'ಬಿಟ್ಟಿಚಾಕ್ರಿ'ಯನ್ನಂತೂ ಬಿಡುವ ಹಾಗಿಲ್ಲ" ಎಂಬ ಮಾತಿನ ಹಿಂದೆ ಇರುವ ವಿಷಾದ, ಅಸಹಾಯಕತೆ ಮನಮುಟ್ಟುವಂತಹದ್ದು, ಹೃದಯ ತಟ್ಟುವಂತಹದ್ದು.

# ಗ್ರಂಥಸೂಚಿ

*ಅಂಬೇಡ್ಕರ್ ಚಿಂತನೆಗಳ ಪ್ರವೇಶಿಕೆ*. 2017. ಬೆಂಗಳೂರು: ಕರ್ನಾಟಕ ಸರ್ಕಾರ.

ಅರವಿಂದ ಮಾಲಗತ್ತಿ. 2002ಅ. "ವೈಶಾಖ: ಸಾಂಸ್ಕೃತಿಕ ಸಂದರ್ಭ ಮತ್ತು ದಲಿತ ಧ್ವನಿಗಳು". *ದಲಿತ ಮಾರ್ಗ*. ಸಂಪಾದಕರು: ಅರವಿಂದ ಮಾಲಗತ್ತಿ. ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ.

__________ . (ಸಂ.). 2002ಆ. *ದಲಿತ ಮಾರ್ಗ*. ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ.

ಇರ್ಫಾನ್ ಹಬೀಬ್. 2013 (1990). *ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ*. ಬೆಂಗಳೂರು: ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

*ಕರ್ನಾಟಕ ಜೀತದಾಳುಗಳ ಪುನರ್ವಸತಿ: ಒಂದು ಕ್ರಿಯಾಯೋಜನೆ 2008*. 2009. ಬೆಂಗಳೂರು: ಕರ್ನಾಟಕ ಸರ್ಕಾರ

*ಕನ್ನಡ ವಿಶ್ವಕೋಶ*. ಸಂಪುಟ ಎಂಟು. 1975. ಮೈಸೂರು: ಮೈಸೂರು ವಿಶ್ವ ವಿದ್ಯಾಲಯ.

"ಕಾಫಿ ನಾಡಿನ ಗುಲಾಮಗಾಥೆ". 2011. *ದ ಸಂಡೆ ಇಂಡಿಯನ್ (ವಾರ ಪತ್ರಿಕೆ)*. ಪು.ಸಂ. 26–30. ಜನವರಿ.

*ಕಿಟ್ಟೆಲರ ಕನ್ನಡ – ಇಂಗ್ಲಿಷ್ ನಿಘಂಟು*, ಸಂಪುಟ ಎರಡು. 1969 (1894). ಮದ್ರಾಸ್: ಮದ್ರಾಸ್ ವಿಶ್ವ ವಿದ್ಯಾಲಯ.

ಕಿರಣ ಕಮಲ ಪ್ರಸಾದ. 2017. *ಜೀವಿಕದ ನೆಲೆ ಸೆಲೆಗಳು, ಜೀತ ನಿರ್ಮೂಲನೆಗೆ ಪಣತೊಟ್ಟಿರುವ ಜೀವಿಕ– ಜೀತ ವಿಮುಕ್ತಿ ಕರ್ನಾಟಕದ ಉಗಮ ಬೆಳವಣಿಗೆಗಳ – ಮೂಲ ನೆಲೆ–ಸೆಲೆಗಳು*. ಬೆಂಗಳೂರು: ಜನಜಾಗೃತಿ ಪ್ರಕಾಶನ.

__________ . 1991. *ಅನೇಕಲ್ ತಾಲ್ಲೂಕಿನಲ್ಲಿ ಜೀತಪದ್ಧತಿ*. ಬೆಂಗಳೂರು: ಜೀವಿಕ.

ಕುವೆಂಪು. 2018 (1967). *ಮಲೆಗಳಲ್ಲಿ ಮದುಮಗಳು*. ಮೈಸೂರು: ಉದಯರವಿ ಪ್ರಕಾಶನ.

ಕೋಟಿಗಾನಹಳ್ಳಿ ರಾಮಯ್ಯ. 2005. *ತಲಪರಿಗೆ, ಜೀವನದಿಯ ಜಾಡು ಹಿಡಿದು ಅಸ್ಪೃಶ್ಯ ಲೋಕದಲ್ಲೊಂದು ಪಯಣ*. ಬೆಂಗಳೂರು: ಕರ್ನಾಟಕ ಪರಿಶಿಷ್ಟ ಜಾತಿ / ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ.

ಕೃಷ್ಣಪ್ಪ ಬಿ. 2002. "ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರ". *ದಲಿತ ಮಾರ್ಗ*. ಸಂಪಾದಕರು: ಅರವಿಂದ ಮಾಲಗತ್ತಿ. ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ.

ಗಂಗಾಧರ ಮೂರ್ತಿ ಬಿ. 1989. *ನಾಗಸಂದ್ರ ಭೂ ಅಕ್ರಮಣ ಚಳುವಳಿ*. ಬೆಂಗಳೂರು: ಲಡಾಯಿ ಪ್ರಕಾಶನ.

ಗುರುಮಲ್ಲದೇವರು ಕೆ.ಸಿ. 2016. *ಮನುಸ್ಮೃತಿ.* ಮೈಸೂರು: ಜೆ. ಹೆಚ್. ಸ್ವಾಮಿ.

ಚನ್ನಮ್ಮ ಕೆ.ಸಿ. 2010. *ಕುವೆಂಪು ಬಿಂಬಿಸಿದ ಆರ್ಥಿಕ ನೆಲೆಗಳು.* ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ಚಂದ್ರಶೇಖರ್, ಟಿ.ಆರ್. (ಸಂ.). 2005. *ದಲಿತ ಅಧ್ಯಯನ.* ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ.

*ಜೀತಪದ್ಧತಿ ಪರಿಶೀಲನಾ ಸಮಿತಿ ವರದಿ.* 2015. ಖೆ. 2015. ಬೆಂಗಳೂರು: ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ.

ತ. ರಾ. ಸು. 1986(1951). *ಜೀತದ ಜೀವ.* ಮೈಸೂರು: ಗೀತಾ ಬುಕ್ ಹಾಸ್.

ದಯಾ ಪವಾರ. 2013. *ಬಲುತ,* ದಲಿತ ಲೇಖಕನ ಅತ್ಮಕಥನ. ಮರಾಠಿ ಮೂಲದಿಂದ ಕನ್ನಡಕ್ಕೆ ಚಂದ್ರಕಾಂತ ಪೋಕಳೆ. ಬೆಂಗಳೂರು : ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

ದೇವನೂರು ಮಹಾದೇವ. 2012. *ಎದೆಗೆ ಬಿದ್ದಕ್ಷರ.* ಬೆಂಗಳೂರು: ಅಭಿನವ. ಬೆಂಗಳೂರು.

__________ . 1992. "ಅಮಾಸ". *ದೇವನೂರು ಮಹಾದೇವ ಅವರ ಕೃತಿಗಳು.* ಪುಟ: 44–52. ಬೆಂಗಳೂರು: ಪತ್ರಿಕೆ ಪ್ರಕಾಶನ.

ನಾಗರಾಜ್ ಹೆಸ್ತೂರು. 2014. *ಜಾಡಮಲಿ ಜಗತ್ತು.* ಹಸನ: ಹಡಲ್ಹಳ್ಳಿ ಪಬ್ಲಿಕೇಷನ್ಸ್.

ನಾಗೇಶ್ ಹಾ.ವೆಂ. 1986. *ಭಾರತೀಯ ಗ್ರಾಮ.* ಮೈಸೂರು: ವಿನಾಯಕ ಪ್ರಿಂಟಿಂಗ್ ವರ್ಕ್ಸ್.

ನಾಯಕ್ ಎಸ್. ಎಂ. 1976. *ಕನ್ನಡ ಗಾದೆಮಾತುಗಳು.* ಧಾರವಾಡ: ಕರ್ನಾಟಕ ವಿಶ್ವ ವಿದ್ಯಾಲಯ.

ಪರಮಶಿವಯ್ಯ ಜಿ.ಶಂ. 1988 (1974). *ಮಬ್ಬು ಜಾರಿದ ಕಣಿವೆಯಲ್ಲಿ.* ಮೈಸುರು: ಸಾಹಿತ್ಯ ಸದನ.

ಪ್ರಶಾಂತ್ ಮಾಡ್ತ. 2007. *ಕನ್ನಡ ಪದನಿಧಿ.* ಬೆಂಗಳೂರು: ಸಂತ ಜೋಸೆಫ್ ಸಂಜೆ ಕಾಲೇಜು.

ಬಾಬಾ ಸಾಹೇಬ್ ಅಂಬೇಡ್ಕರ್ ಡಾ. *ಸಮಗ್ರ ಬರೆಹಗಳು ಮತ್ತು ಭಾಷಣಗಳು.* 2015. ಸಂಪುಟ–1, 5, 7. ಬೆಂಗಳೂರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ.

ಬೇಲೂರು ಕೃಷ್ಣಮೂರ್ತಿ. 1995. *ಜೀತ* (ಸಾಮಾಜಿಕ ನಾಟಕ). ಬೆಂಗಳೂರು: ಪ್ರಕಾಶ ಸಾಹಿತ್ಯ.

ಭಂಡಾರಿ ಆರ್.ವಿ. 2002. "'ಚೋಮನ ದುಡಿ'ಯ ವಸ್ತು ಮತ್ತು ವಿನ್ಯಾಸ". *ದಲಿತ ಮಾರ್ಗ.* ಸಂಪಾದಕರು: ಅರವಿಂದ ಮಾಲಗತ್ತಿ. (ಸಂ.). ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ.

__________ . 2002. "ಬರಗೂರರ ಎರಡು ಕಾದಂಬರಿಗಳು". *ದಲಿತ ಮಾರ್ಗ.* ಸಂಪಾದಕರು: ಅರವಿಂದ ಮಾಲಗತ್ತಿ. (ಸಂ.). ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ.

ಭಾಸ್ಕರ್ ಪ್ರಸಾದ್. ಬಿ.ಆರ್, ನಾಗರಾಜ್ ಹೆತ್ತೂರ್, ಅಪ್ಪಗೆರೆ ಡಿಟಿ. ಲಂಕೇಶ್. 2014. *ಬೆವರ ದನಿಗಳು.* ಬೆಂಗಳೂರು: ಸಿರಿವರ ಪ್ರಕಾಶನ.

ಮಹಾತ್ಮ ಜ್ಯೋತಿರಾವ್ ಫುಲೆ. 2011 (2009). *ಗುಲಾಮಗಿರಿ.* ಕನ್ನಡಕ್ಕೆ ಡಾ. ಸೂರ್ಯಕಾಂತ ಸುಜ್ಯಾತ್. ಗುಲ್ಬರ್ಗ: ಸುಮೇಧ ಪ್ರಕಾಶನ.

ರಹಮತ್ ತರೀಕೆರೆ (ಸಂ). 2010. *ಮಲೆಗಳಲ್ಲಿ ಮದುಮಗಳು.* ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

__________ . 2012. "ಸಂಗ್ಯಾ ಬಾಳ್ಯಾ ವಿವಾದ." *ಕನ್ನಡ ಸಾಹಿತ್ಯ ವಾಗ್ವಾದಗಳು.* ಪುಟ: 183–197. ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ರಾಮಕೃಷ್ಣ, ಜಿ. 2011. (ಸಂಗ್ರಹಾನುವಾದ). *ದೇವಿ ಪ್ರಸಾದ ಚಟ್ಟೋಪಾಧ್ಯಾಯ,* ಬೆಂಗಳೂರು: ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

ವೀರಭದ್ರಪ್ಪ ಕುಂ. 1989. "ಹುಗ್ಗಿ". *ಕುಂವೀ ಆಯ್ದ ಕತೆಗಳು.* ಪುಟ 58–64. ಧಾರವಾಡ: ಅನನ್ಯ ಪ್ರಕಾಶನ.

ವೇಣುಗೋಪಲ ಟಿ.ಎಸ್. 2009. *ದೇವಿಪ್ರಸಾದ್ ಚಟ್ಟೋಪಾಧ್ಯಾಯ.* ಹಂಪಿ: *ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.*

ವೆಂಕಟಸ್ವಾಮಿ ಎಂ. 2003. *ಅಸ್ಪೃಶ್ಯರು, ಒಂದು ಪರಿಶೀಲನೆ.* ಬೆಂಗಳೂರು: ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

ವೆಂಕಟಸುಬ್ಬಯ್ಯ ಜಿ. ಪ್ರೊ. 1996. *ಇಗೋ ಕನ್ನಡ (ಸಾಮಾಜಿಕ ನಿಘಂಟು).* ಬೆಂಗಳೂರು: ನವಕರ್ನಾಟಕ ಪಬ್ಲಿಕೇಷನ್ ಪ್ರೈವೆಟ್ ಲಿಮಿಟೆಡ್.

ಸುಭಾಷ್ ಭರಣಿ ಡಾ. 2005. "ದೇವರಾಜು ಅರಸರ ಕೊಡುಗೆ – ಜೀತ ವಿಮುಕ್ತಿ, ಭೂ ಸುಧಾರಣೆ". *ಧರೆಗೆ ದೊಡ್ಡವರು.* ಪುಟ 84–93. ಮೈಸೂರು: ದರಾವಿಡ್ ಪಬ್ಲಿಕೇಷನ್ಸ್.

ಸೂರ್ಯಕಾಂತ ಸುಜ್ಯಾತ್ ಡಾ. 2009. *ಗುಲಾಮಗಿರಿ, ಮಹಾತ್ಮ ಜ್ಯೋತಿರಾವ್ ಫುಲೆ.* ಗುಲ್ಬರ್ಗ: ಸಮೇಧ ಪ್ರಕಾಶನ.

*ಸಂಕ್ಷಿಪ್ತ ಕನ್ನಡ ನಿಘಂಟು.* 2001 (1975). ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

ಶರ್ಮ ಆರ್. ಎಸ್. 2006 (2004). *ಪ್ರಾಚೀನ ಭಾರತದಲ್ಲಿ ಶೂದ್ರರು.* ಬೆಂಗಳೂರು: ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

__________ . (2010: 1997). *ಪ್ರಾಚೀನ ಭಾರತ.* ಬೆಂಗಳೂರು: ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್.

ಶಿವರಾಮ ಕಾರಂತ. ಡಾ. 2018 (1933). *ಚೋಮನ ದುಡಿ.* ಬೆಂಗಳೂರು: ಎಸ್ ಬಿಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್.

ಶ್ರೀಮತಿ, ಎಚ್. ಎಸ್. 2012(1998). *ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೊಸಾಂಬಿಯವರ ಚಿಂತನೆಗಳು.* (ಕೆ.ಗೋಪಾಲ್‌ರವರ ಸಂಗ್ರಹ ಕೃತಿಯ ಅನುವಾದ). ಬೆಂಗಳೂರು: ಪ್ರಗತಿ ಗ್ರಾಫಿಕ್ಸ್.

ಷಣ್ಮುಗಂ ವಿ. ಡಾ. 2014. *ಅಧುನಿಕ ಭಾರತದ ನಿರ್ಮಾಪಕ ಡಾ. ಬಿ. ಆರ್. ಅಂಬೇಡ್ಕರ್.* ಬೆಂಗಳೂರು: ಸರ್ವಜನ ಸಮಾಜ ಪ್ರಕಾಸನ.

Adam, William. 1940. *The Law and Custom of Slavery in British India.* Boston & Wecker:

Adapa, Satyanarayana. "Globalisation and the Telugu (South Indian) Diaspora in South East Asia 1987-1964". *Source Proceedings of the Indian History Crongress - 2006-2007.* Vol.62.845-858. Indian History Congress.

"Agricultural Labour in Bondage and Freedom". *EPW*. 1976. May.

AIR. 1982. Supreme Court. Writ Petion No.8143 of 1981. d/18-9-1982. *Liberation from Bondage.* 100-123.

AIR 1984. Supreme Court 802 Writ Petition. No 2135 of 1982. D/16-12.1982. *Liberation from Bondage*. 124-195.

AIR 1984 Supreme Court. Writ Petition.(Crl.) No 1263 of 1982. D/08-05-1984. *Liberation from Bondage.* 196-208.

Alexander, K.C. 1976. *Abolition of Bonded Labour.* Hyderabad: National Institute of Community Development.

__________ . 1976. "*A Note on Bonded Labourers, An Extract from Readings on Agricultural labour,* Select Material for the 1st Course on Agricultural Labour". 2-9 January. Hyderabad: NICD.

__________ . 1979. "Bonded Labour System – Government Measures for its Abolition". *Man in India.* Vol. 59.2. April – June.

Ambedkar, Babasaheb Dr. *1979.Writings and Speeches.* Vol -1. Bombay: Education Department, Government of Maharashtra.

__________ . *1989a. Writings and Speeches.* Vol 3. Bombay: Education Department, Government of Maharashtra.

__________ . 1989b. *Writings and Speeches.* Vol 5. Bombay: Education Department. Government of Maharashtra.

__________ . 1990.*Writings and Speeches.* Vol 7. Bombay: Education Department, Government of Maharashtra.

__________ . 1993. *Writings and Speeches.* Vol 12. Bombay:Education Department, Government of Maharashtra.

__________ . 1994. *Writings and Speeches. Vol 13.* Bombay: Education Department, Government of Maharashtra.

Amludkur, J.B. 1974. "Is Jeeta a Form of Slavery Contract Labour?" *Man in India.* April-June 54(2). 145-160.

Anders, W. Johnson and Lindhalt, Elik. 2008. "Emancipation or Workability?: Critical versus Pragmatic Scientific Orientation in Action Research." *Action Research (Sage Publiciatons).* 6:95. http://arj.sagepub.com/cont/6/1/95

Angustial, P.A. 1997. "They Snap their Bonds." *Youth Times.* 4 Feb.

Apte, Vaman Shivram. 1982(1970). *The Students Sanskrit English Dictionary*. Delhi: Motilal Banarsidass.

Archer, Leonie (ed.). 1988. *Slavery and other Forms of Unfree Labour.* London: Routledge.

Arora, V.P. n.d. Nutrients of Bonded Labour. Allahabad: Indian Academy of Social Science.

Baks, C.J. et al. 1966. "Slavery as a System of Production in Tribal Societies." *Bijdregen totde Taat Land-en Volkenkunde.* 122. 1966. 90-109.

Balagopal, K. 1983. "Telangana Movement Revisited." *Economic & Political Weekly*. pp. 709-712. 30 April.

Balasubramanian, S. 1976. *"Abolition of Bonded Labour and After in Wynad".* *Vanyajati.* Vol. XXIV.3. July.

Bales, Kevin. 2004 (1999). *Disposable People, New Slavery in the Global Economy.* Berkeley/Los Angeles/London: University of California Press.

Baber, T.H. 1834. "Slavery in India". *Asiatic Journal and Monthly Register for British India and its Dependencies.* (NS) 15 (SR No.58) October 81-90, (SR No.59) November 206-212, (SR No.60) December 206-277.

Banaji, D.R. 1933. *Slavery in British India.* Bombay: D.D. Taraporewalla.

Bandopadhayay, M.K. Indra. 1976. "Vettichakri of Lohar and the Due Process of Law". *NLIB.*

___________ . 1977. "Halis of Delanpore". *NLIB.* 3. 173 - 177.

Bardhan, P. 1984. *Land, Labour, and Rural Poverty.* Delhi: Oxford University Press.

Barooah, N.K. 1969. "David Scott and Question of Slavery in Assam, a Case Study in British Paternalism". *Indian Economic and Social History Review.* 6:2. 179 -196.

Barwell and Kar. 1952. *The Law of Master and Servant.* Bombay: Orient Longman.

Basvalingappa, B. 1975. "Bonded Labour". *Socialist in India.* Vol.II.22.

Basu, B.K. 1930. "Notes on Slave Trade and Slavery in India During the Early Days of John Company". *Muslim Review.* 4. April-June. 21-34.

Benjamin, N. 1946. "Arab Merchants of Bombay and Surat." *Indian Economic and Social History Review.* 13:1. 85-95.

Bhaduri, A. 1984. *The Economic Structure of Backward Agriculture.* Delhi: Macmillan.

Bhatia, M.P. 1976. "Abolition of Bonded Labour in India". *Industrial Worker.* November 29.

__________ . 1977. "Abolition of Bonded Labour in India." *Labour Gazette.* 56(5).

Bhushan, Shashi. 1977. "Bonded Labour, Freedom and After." *Mainstream*. 26 March

Blackmon, Douglas A. 2012 (2008). *Slavery by Another Name, the Re-Enslavement of Block Americans from the Civil War to World War.* London: Icon Books Ltd.

Bloch, Marc. 1971(1961)a. *Feudal Society, Vol I, The Growth of Ties of Dependence.* London: Routledge & Kegan Paul Ltd.

__________ .1971 (1961)b. *Feudal Society, Vol II, Social Classes and Political Organisation.*

"Bonded Labour Abolition by Redefinition". *1976 Mainstream*. Annual Number. 89-90. May.

"Bonded Labour in Gaya District, a Study". 1975.*NLIB.*1(11). Patna: ANS Institute.

"Bonded labour in India." 1976. *India School of Book Science.* Calcutta: India Book Exchange.

*Bonded Labour in India, a Shocking Tale of Slave Labour in Rural India*. 1975. Calcutta: Indian institute of Social Science.

"Bonded Labour in India, Location, Emancipation and Rehabilitation – Workshop Documents". 1977. *NLIB.* VoL III.12. December.

Brass, T. 1983. "Of Human Bondage: Compesinos, Coffee and Capitalism on the Peruvian Frontier." The *Journal of Peasant Studies.* Vol. 11.1.

__________ . 1984. *Debt Bondage and Forced Labour*. London: A Research Paper for the Anti-Slavery Society. (Unpublished}.

__________ . 1990. "Class Struggle and Deproletarianisation of Agricultural Labour in Haryana (India)". *The Journal of Peasant Studies*. Vol 18 (1) 36 -87.

__________ .1995. "UnFree Labour and Agrarian Change, A Different View". *EPW*. April . 697-99.

Breman, Jan. 1974. *Patronage and Exploitation, Changing Agrarian relations in South Gujarat, India.* California: University of California Press.

__________ . 1985. *Of Peasant Migrants and Paupers, Rural Labour Circulation and Capitalist Production in West India.* Delhi: Oxford University Press.

__________ . 1993. *Beyond Patronage and Exploitation, Changing Agrarian Relations in South Gujarat.* Delhi: Oxford University Press.

__________ . 1996. *Footloose Labour. Working in India's Informal Economy.* Cambridge: Great Britain at the University Press.

__________ 2003. *The Labouring Poor in India, Patterns of Exploitation, Subordination. and Exclusion.* New Delhi: Oxford University Press.

__________ . 2007a. *Labour Bondage in West India*. New Delhi: Oxford University Press.

__________ . 2007b. *The Poverty Regime in Village India.* New Delhi: Oxford University Press.

__________ . 2013. *At Work in the Informal Economy of India.* New Delhi: Oxford University Press.

__________ . 2016. *On Pauperism In Present And Past.* New Delhi: Oxford University Press.

__________ . 2018. *Bonded Labour, a Paper at the International Seminar.* Bengaluru: National Law School of India Univrsity.

Burra, Neera. 1995. *Born to Work, Child labour in India.* Delhi: Oxford University Press.

Byres, T.J. 1972. "The Dialectics of India's Green Revolution." *South Asian Review.* Vol. V.2.

Campbell, A.D. 1833. "Slavery in South India." *Madras Journal of Literature and Science.* 1. 243-255.

Census of India 1991. 1992. *Series 11, Karnataka, Part XII-B: District Census Handbook, Belgaum, Villages and Towns, Primary Census Abstract. Bengaluru:* Directorate of Census Opertions, Karnataka.

__________ 2011. 2014a. *Series 30, Karnataka: District Census Booklet, Belgaum, Population Profile: District/Taluk/Town/Village. Bengaluru:* Directorate of Census Opertions, Karnataka.

__________ *2011* . 2014b. *Series 30, Karnataka: Primary Census Abstract. Bengaluru:* Directorate of Census Opertions, Karnataka.

Chanana, D.R. 1960. *Slavery in Ancient India*. Delhi: People's Publishing House.

Chandhuri, Kalyan. 1976. "Bonded Labour." *Economic and Political Weekly.* 415-418.

Chandramouli, V. 1976. "Bonded labour Abolition, a Conspectus". *Kurukshetra.*

Chattopadhyay, Amal Kumar. 1959. *Slavery In India.* Culcutta: Nagarjun Press.

Chaudhary, D.S. 1976. "*Fight to Free Bonded Labour*". New Age.

Checkland, Peter and Holwell, Sue. 1998. "Action Research, Its Nature and Validity." *Systemic Practice and Action Research.* Vol 11, Issue 1.pp.9-21 http://doi.org/10.1007/9678-0-387-36060-7_1

*Child Labour, Targeting the Intolerable.* 1990. Geneva: International Labour Office.

*Children in Bondage, Slaves of the Subcontinent*. 1989. London: Anti-Slavery International.

Chinkalkar, J.H. 1976. "Bonded Labour". *Vanyajati.* Vol. XXIV.

"Coffee Served Dark." 2011. *The Sunday Indian Weekly Magazine*. 24-26. January.

Dalwai, Hussain. 1977. "Bonded Labour Continues". Maharashtra: EFW 12 (22). 28 May.\Dange, S A. 2012 (1949). *India: From Primitive Communism to Slavery*. New Delhi: People's Publishing House.

"The Dark World of Jeeta Gadu". 1975. *NLIB*. Vol III.12. Nov. Das, A.N. 1976.

Dasgupta, B. 1977. *Village Society and Labour Use*. Delhi: Oxford University Press.

Davis, David Brian. 1966a. *The Problem of Slavery in Western Culture*. Ithaca: Cornell University Press.

__________ . 1966b. *Slavery and Human Progress*. New York: Oxford University Press.

__________ . 1987. "Reflections on Abolition and Ideological Hegemony." *American Historical Review*. 92. 797-812.

__________ . 1988. "The Benefit of Slavery." *The New York Review of Books*. 35. 5.43-4.

De Mellow, Melville. 1977. "The Tribe that Lost its Chains" *Surya*. India. 65-70. February.

Desai, A.R.. 1984 (1938). *Rural Sociology In India*. Bombay: The Indian Society of Agricultural Economics.

Desai, Dinkar. 1942. "Agrarian Serfdom in India." *Indian Sociologist*.

Deshpande, G.P. (ed.). 2002. Selected Writings of Jotirao Phule. New Delhi: LeftWord Books.

Devi, Mahasveta. 1981. "Contract Labour or Bonded Labour". *EPW*. Vol. XVI (23) June.

Dhalu, S.W. 1976. "Abolition of Bonded Labour". *Industrial Worker*. 26 Jan.

Dhamme, P.J. 1958. *Summary on the Report on Forced Labour*. New Delhi: Ministry of Labour.

Dhar, B.M. 1976. "Seminar on Bonded Labour." *Social Weekly*. December.

Dhar, Hiranmay. 1973. "Agricultural Servitude in Bengal Presidency Around 1800." *EPW*. 1349-1351. 28 July.

Dickens, Linda and Watkins, Karen. 1999. "Action Research: Rethinking Lewin." *Sage Journal.* Vol. 30. Issue 2. 127-140 https://doi.org/10.1177/1350507699302002

Dingwaney, Manjari, Vidyasagar, R. and Chaudhary, Anil . *Bonded Labour in India.* New Delhi: Rural Labour Cell

Dovering, F. 1965. "Bondage Tenure and Progress, Reflections on Economics of Forced Labour". *Comparative Studies in Society and History.*

Dubey, Anand K. 1989. *Social Justice and Bonded Labour in India.* Jaipur: Printwell Publishers.

Dubey, R.C. *1972.* "Plan to Save Adivasis from Predators." *Free Press Journal.* 20 June.

Duby, S.C. *Changing Villages, Human Factors in Community Development.* London: Routledge and Kengan Paul Ltd.

__________ . 1990. *Indian Society*. New Delhi: National Book Trust.

Eachman, V. 1976. "Abolition of Forced Labour and After" *Vanyajati.*24(3) July.

Elden, Max and Chisholen, Rupert F. 1993. "Emerging Varieties of Action Research: Introduction to the Special Issue". *Sage Journal.* Vol. 46. Issue 2. 121-142. http://doi.org/10.1177/001872679304600201

Finley, M.I. 1968. "Between Slavery and Freedom". *Comparative Studies in Society and History.* Vol.VI. 1903-14.

"Freedom from Bondage". 1995. *Citizens Commission on Bonded and Child Labour.* New Delhi: Indian Social Institute.

Fuchs, Stephan. 1981. *At the Bottom of Indian Society.*

Fukuzawa, Hiroshi. 1966. "Rural Servants in the Eighteenth Century Maharashtra Villages, Demiurgic or JaJmani System?" *The Studies in Economics Annual Journal of the Faculty of Economics.* : Hitotsubashi University. No.8 March.

__________ . 1998. *The Medieval Deccan, Peasants, Social Systems ad States, Sixteenth to Eighteenth Centuries.* Delhi: Oxford University Press.

Gandhi, P.K. 1985. *Social Action Through Law, Partnership for Social Justice.* New Delhi: Concept Publishing Company.

Ganguli, Dwarakanath. 2014. "Slavery in the British Dominion (1886)". *Global Muckraking, 100 Yeras of Investigative Journalism from around the World*. Edited by Schiffrin, Anya. 2014. New York: The New Press.

Gazetteer of India. 1987. *Belgaum District, Karnataka State.* Bangalore: Governement of Karnataka.

The Global Slavery Index 2016. 2016. Australia/ United Kingdom/ India: Walk Free Foundaiton. 30, 108-117.

Gokhale, Balakrishna Govind. 1973."Slavery in South East Asia in the Seventeenth Century". *Royal Asiatic Society of Bengal Year book. (*NS) 47:48. 108-117.

Govia, Elsa V. 1965. *Slave Society in the British Leeward Islands at the End of the Eighteenth Century*. New Haven:

Ghosh, Amitav. 1992. *In an Antique Land*. Gurgaon: The Penguin Groups.

*Global Estimate of Forced Labour.* 2012. Geneva: ILO.

Gray, Haugen, A. and Victor Boutros. 2014. *The Locust Effect, Why the End of Poverty Requires the End of Violence:* Oxford University.

Greenword, Davydek J., Whyte William Foot and Harkavy Iraa. 1993. "Participatory Action Research as a Pprocess and as a Goal." *Human Relations.* Vol.46. Issue 2. February. 175-192. https://doi.org/10.1177/001872679304600203

Guha, Sumit. 2016. *Beyond Caste, Identity and Power in South SIA, Past and Presetn.* Ranikhet: Permanent Balck.

Haksar, P.N. 1978. "Bonded Labour and Social Transformation Process". NLIB. 2.

Hamilpurker, J.L. 1989. *Changing Aspects of Bonded Labour in India*. Bombay: Himalaya Publishing House.

Haragopal, G. *Telangana People's Movement, the Unfolding Political Culture.* www.telangana.org

Harris, John and Barbara. 1981. "Seasonality and Dependence in South Asia". *Seasonal Dimensions of Rural Poverty.* Edited by Chambers el.al. 206-210. London: Usmun Publishers.

Harris-White, Barbara. 2005. India's Market Society, Three Essays in Political Economy. Gurgaon: Three Essays Collective.

Hashmi, Salman. 1976. *"A Study in Backwardness." NLIB*. 2. 159.

Hasnain, Nadeem. 1982. *Bonded Forever, a Study of Kolta CIS Himalayan Tribe.* New Delhi: Harnam Publications.

Hemadee, V.M. 1976. "Freedom for Bonded Labour". The Educational Journal'. December.

Hijejie, Benedicatec. 1967. "Slavery and Agricutural Bondage in South India in the Nineteenth Century". *The Scandinavain Economic History Review"* Vol.XI. Nos. 1-2.

Imperial Gazeteer of India. 1974(Reprint). Vol XXII. New Delhi: Today Tomorrow's Printers & Publishers.

India Exclusion Report 2013-14. 2014. *A Comprehensive, Annually updated Analysis on the Exclusion of Disadvantaged Groups in India.* Bengaluru: Books for Change. 202-219.

"The Institution of Slavery in Mithila." 1959. *Indian Historical Quarterly.* 35.3. 209-226. September.

Irschick, Eugene F. 1994. *Dialogue and History, Constructing South India: 1795-1895.* Delhi: Oxford University Press.

Iyer, Gopal K. 1976. "From Bondage to Brothel". *NLIB* 2. 497-504. December.

__________ . 1997. "Bonded Labour in Two villages of Bihar". *Mainstream*. 19 February.

Iyer, K.G. and Par, A.N. 1976. "*A Study of Poverty and Bondage:* Orissa". *NLIB.* 2. p.179.

Jain, Mahaveer. 1997. *Bonded Labour, Justice through Judiciary*. New Delhi: Manak Publications (P) Ltd.

Jain, P.C. 1971. *Labour in Ancient India*. Delhi:

Jangam, Chinnaiah. 2005. *Contesting Hinduism, Emergence of Dalit Paradigm in Telgu country* (Thesis submitted for the Degree of Doctor of Philosophy at the School of Oriental and African Study). London.

Jatava, D. R. 1998. *B.R. Ambedkar, a Study in Society and Politics.* Delhi: National Publishing House.

Jodhka, Surinder S. 1992. "Agrarian Changes and Attached Labour - Emerging Patterns in Haryana Agriculture" *EPW.* Vol.XXIX (39). 24 September.

__________ . 1994a. *Development and Debt: A Sociological Study of the Changing Credit Relations in Haryana Agriculture. (*Ph. D. Thesis (Unpublished). Chandigarh: Punjab University.

__________ . 1994b. "Agrarian Changes and Attached Labour, Emerging Patterns in Haryana Agriculture." *EPW*. A- 102-105. September.

__________ . 1995a. "Agrarian Changes, Unfreedom and Attached labour." *EPW*. 2011-2013. 5-12 August.

__________ . 1995b. *Debt, Dependence and Agrarian Change*. Jaipur and New Delhi: Rawat Publications.

Jayashankar, K. *Telangana Movement, the Demand for a Separate State,* a *Historic Perspective.*

Kamble, N.D. 1982. *Bonded labourer in India*. New Delhi: Uppal Publishing House.

Kantowsky, Detlef. 1995. A*n Indian Village through Letters and Pictures*. New Delhi: Oxford University Press.

Kara, Siddharth. 2012. *Bonded Labor, Tackling the System of Slavery in South Asia.* New York: Columbia University Press.

"Kerala Bill on Bonded Labour Plugs Loopholes". 1967. *Socialist India*. Vol. II.8.

Kotani, H. (ed.). 1999. *Caste System, Untouchability and the Depressed.* New Delhi: Manohar.

Kotiswaran, Prabha. 2017. *Revisiting the Law and Governance of Trafficking, Forced Labour And Modern Slavery*. Cambridge: Cambridge University Press.

Krishna, Mohana. A. 2004. *Irrigation Development in Andra Pradesh.* New Delhi: Indian National Committee on Irrigation and Drainage, Ministry of Water Recourses, Government of India.

Kulkarni, A.R. 2008. *Maharshtra: Society and Culture, Medieval & Modern.* Pune: Diamond Publiciatons.

Kumar, B. 1976. "Bonded Labour". *Seminar.* Vol. 98. February.

Kumar, Dharma. 1985. *Land and Caste in South India*. London: Cambridge University Press.

__________ . 1998a. Colonialism, Property and the State. New Delhi: Oxford University press.

__________ . 1998b. "Aboliton and Anti-Slavery: India". *A Historical Guide to World Slavery.* Edited by Seymour Dreschner and Stanley L. Engerman. New York – Oxford: Oxford University Press. 5-7.

Kusuman, K.K. 1977. "The English and the Abolition of Slavery in Travancore". *Journal of Indian History.* 49. 1 -3, 305-313. April-December.

Lakinddin, Ahmed 1966. "Slavery in Eighteenth Century Bengal." *Journal of the Asiatic Society of Pakistan.* 11(3).

Lal, AK. 1977. *Plolitics of Poverty, a Study of Bonded Labour.* New Delhi: Chethana Publications.

Leach, E.R. 1987. *Class and Slavery*. Cambridge: Cambridge University Press.

*The Legacy of Eric Williams.* 1987. New York: Cambridge University Press.

Lerche, Jens. 2017. *Entrenching Inequality: Dalits, Adivasis and Class inside the Indian Economic Miracle.* 14th Dr. Ambedkar Memorial lecture, Ambedkar Chair, CSSS, JNU, New Delhi. 17 March.

*Liberation From Bondage, Landmark Judgments by Supreme Court of India.* 2005. Vols. I & II. Phillaur: Volunteers for Social Justice in Partnership With Anti-Slavery International.

Lowenthal, David. 1945. "Agrestic Serfdom in Northern India". *Indian Journal of Social Welfare.* Vol.5. 133-141.

Lewin, Kurt. 1946. "Action Research and Minority Problems." *Journal of Social Issues.* 2(4). 34-46.

Macumun, George. 1938. *Slavery through the Ages.* London:

Maharaj, R.N. 1976. "Freed Bonded labour Camp at Palmau". *NLIB.* 2.

Maine, Henry Sumner. 1871. *Village Communities in the East and West*. London: Spottiswoodr And Company.

Mannheim, Karl. 1972. *Ideology and Utopia. London*: Routledge & Kegan Paul Ltd.

Manor, James. 1977. *Political Change in an Indian State*. New Delhi: Ramesh C. Jain for Manohar Book Services.

Marla, Sarma. 1977. "Bonded Labour in Medak District (AP)." *NLIB.* October-November.

__________ . 1978. *National Survey on the incidence of Bonded Labour, a Preliminary Report.* New Delhi: Gandhi Peace Foundation..

__________ . 1981. *Bonded Labour in India*. National Survey on the Incidence of Bonded labour, Final Report January. New Delhi: Bibillia Impex Pvt. Ltd.

Mathieson, W.L. 1932. *British Slave Emancipation*. London: 1848-1849.

Mathur, P.R.G. 1976. "Bonded Labour in Kerala". *Vanyajati.* July Medhekar, M.N. 1955. "Forced Labour in India". *Journal of National institute of Labour Management*. Vol.V{2}.

Mehta, G.C. and Prasad, Awad. 1988. *Agrarian Relations and Rural Exploitation.* New Dehi: Ashish Publishing House.

Metcalf, Thomas R. 1979. *Land, Landlords and British Raj, Northern India in the Nineteenth Century*. Delhi: Oxford University Press.

M.K.T. l976. "Bonded Labour: Missing Numbers." *EPW.* Dec.2S..

Millers, Suzanne and Igor Koftoff. 1977. "A Slavery as an Institution of Marginality". *Slavery in Africa: Historical and Anthropological Perspectives*. Edited by Millers and Kofytoff. Madison: The University of Wisconsin Press.

Mishra, Lakshmidhar. 1997. *Burden of Bondage, an enquiry into the Affairs of the Bonded Quarry Mine Workers of Faridabad.* New Delhi: Manik Publications (P) Ltd.

__________ . 2011. *Human Bondage. Tracing its Roots in India*. New Delhi: Sage Publications India Pvt Ltd.

__________ . 2017. *Discovery of Truth and Nothing but Truth, Memoirs of a Civil Servant.* Delhi: Aakar Books.

Mishra, Yugal Kishore. 1977. "Slavery". *Social Economic History of Eastern India*. Edited by Y.K. Mishra. Delhi: B.K. Publication Corporation.

Mondal, Puja. *Peasant Movement, Telangana Peasant Struggle (1947-1951):* http://popup.taboola.com/en/?template=colorboxintim-source=your articklibrary&itm_medium=refer&utm_content=thumbnails-rrr-2:raight

Moorthy, C.K. 1976. "Rehabilitation of Trends of Bonded Labourers." *Vanyaiati*. 24(4) October.

Mukerje, S.N. 1963. "A Note on Sir William John and the Slave Trade in Bengal". *Bengal: Past and Present* 82:2. (SR No.154) 106-111 July-Dec.

Mukherjee, Amitabha. 1965. "Slavery in Bengal in the Early 19th Century". *Calcutta Review* (3rd series). 176. 5l-S7 July.

Mukherjee, Sandhya. 1972. "Employment of Slaves in Villages and Production Agencies in Ancient India". *Indian Studies Past and Present*. 393-396.

Mundle, Sudipto. 1976. "Bonded of Palamau". *EPW*. May.

___________ . 1979. *Backwardness and Bondage, Agrarian Relations in a South Bihar District*. New Delhi: Indian Institute of Public Administration.

Nagesh, H.V. 1981. *"Forms of Non-free Labour in Indian Agriculture". EPW - Review of Agriculture*. September.

Naidic, Mark. 1970. "India and the Slavery Question". *South Asiatic Quarterly*. 534-542.

Naik, D.D. 1977. "Freedom for Labour". *Economic Revolution in India*. Edited by S.D. Punekar. Delhi: Himalaya Publishing House.

Nair, Adoor and K. K. Ramachandran. 1986. *Slavery In Kerala*. New Delhi: K M Mittal Publications.

Nair, Thankppan P. 1966. "Slavery in Nefa". *Vanyajati*. 19-29. January.

Nallamuthu, T.G. 1976. "Tamil Nadu: New Life for Panias". *Yojana*. 1 May.

Narasimhan, S. "Bondad Labour among the Paniyas of the Nilgiri Hills, Tamil Nadu". *Vanyajati*. 17-19.

Narisetti, Innaiah. *Political History of Andra Pradesh, 1909-2009.*

Natarajan, B. 1939. "Slave Trade in Madras". *Madras Tercentenary Commemoration Volume*. lvladrar: Oxford University Press.

Omvedt, G. 1982. "Capitalist Agricultral and Rural Classes in India." *EPW*. XVIA 140-159.

Padgaonkar, D. l977. "Bonded Labour in India". *Mainstream*. 5 February.

Panday, Sheo Kumar. l972. "Role of Kamia System among the Kharias cf Eastern Madhya Pradesh". *Vanyajati*. 145-154. July - October.

Park, Peter. 1999. "People, Knowledge, and Change in Participatory Research." *Sage Journals.* Vol 30, Issue 2. Pp.141-157. https://doi.org/10.1177/13.50507699302003

Patil, B.R. 1988. *Working Children in Urban India.* Bangalore: D.B. Publishers.

Patil, Sharad. 1973. "Problems of Slavery in Ancient India." *Social Scientist.* 32-48.

__________ . 1982. *Dasa-Shudra, Origins of Indian Slavery and Feudalism and their Philosophies.* Madras: Allied Publishers Pvt. Ltd.

Patnaik, Utsa. 1987. *Peasant Class Differentiation.* Delhi: Oxford University Press.

__________ . 1998b. "Asia: South Asia". *A Historical Guide to World Slavery.* Edited by Seymour Dreschner and Stanley L. Engerman. New York – Oxford: Oxford University Press. 77-80.

__________ . and Dingwany Manjari (ed.). 1985. *Chains of Servitude,Bondage and Slavery in India.* Hyderabad: Sangam Books.

Patterson, Orlando. 1982. *Slavery and Social Death: A Comparative Study.* Cambridge: Mass Harvard University Press.

Phule, Jotirao Govindrao. 1991. "Slavery (In the Civilised British Government under the Cloak of Brahminism." *Collected Works of Mahatma Jotirao Phule*. Vol. I. translated by Prof. P.G. Patil. Bombay: Government of Maharashtra.

Pillai, P.S. 1929. "Indian Labour Organisation and Forced Labour". *Indian Journal of Economics.* 635-662. April.

Prakash, Gyan. 1990. *Bonded Histories: Genealogies of Labour Servitude in Colonial India.* Cambridge: Cambride University Press.

Prasad, Kiran Kamal. 1991. *Bonded Labour in Anekal Taluk, Bangalore Urban District, an Analysis.* Bangalore: Jeevika- Jeeta Vimukti Karnataka.

__________ . 2008. *Training Manual on Bonded Labour.* Bangalore: Jana Jagrati Prakashana.

__________ . (ed.). 2008. *Understanding and Eradicating Bonded Labour in India*. Bangalore: Jana Jagrati Prakashana.

ಬಿಡುತ್ತೇವೆ. ಒಂದೊಂದು ಸಂದರ್ಭದಲ್ಲಿ ನಮ್ಮ ಮಕ್ಕಳು ಶಾಲೆ ಬಿಟ್ಟು ಈ ಕೆಲಸಕ್ಕೆ ಹೋಗಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ನಮಗೆ ಕಣ್ಣೀರು ಬರುತ್ತದೆ. ಇವೆಲ್ಲ ಮಾಡುವ ಈ ಕೆಲಸ ಸಾಕಾಗುತ್ತದೆ."

02.07.2015 "ಈ ದಿವಸ ಮಳೆ ಬಹಳ ಆಯಿತು. ಆದ್ದರಿಂದ ನಾವು ಲೇಟಾಗಿ ಎದ್ದು ಮುಖ ತೊಳೆದುಕೊಂಡು ಈಚೆ ನಿಂತಿದೆವು ನೋಡ್ರೀ. ಅಷ್ಟರಲ್ಲಿ ನೀವು ಬಂದ್ರೀ, 8.30 ಗಂಟೆ ಆಗಿದೆ. ನಾವು ಈಗ ಸೌಕಾರ ಮನೆಗೆ ಹೋಗಬೇಕು. ಮೊದಲೇ ಲೇಟಾಗ್ಯೆತಿ. ಆದರೆ ನಮ್ಮ ಮಗ ಹೇಳುತ್ತಾರೆ ನೀವು ಬರೆದುಕೊಂಡು ಹೋಗಿ ಸರ್" ಎಂದು ಬಿಟ್ಟಿ ಚಾಕ್ರಿ ಮಾಡುವ ಹೆಂಗಸು ಹೋದರು. ಅವರ ಮಗ ಈ ಕೆಲಸದ ಬಗ್ಗೆ ಹೇಳಲಿಕ್ಕೆ ಶುರು ಮಾಡಿದ. "ನಾನು ಈ ಕೆಲಸ ಬೇಡ ಅಂತ ಹೇಳಿದರೆ ನಮ್ಮ ತಾಯಿ ತಂದೆ ಕೇಳುತ್ತಿಲ್ಲರೀ. ಹೀಗ ಮಳೆ, ಬಿಸಿಲು, ಅನ್ನದೇ ಅವರು ಚಾಕರಿ ಕೆಲಸ ಮಾಡಲೇ ಬೇಕರ್ರೀ. ಒಂದು ವೇಳೆ ಮಾಡದೇ ಹೋದರೆ ಅವರು ಬಾಯಿಗೆ ಬಂದಂತೆ ಬೈತಾರೆ. ಮತ್ತೆ ನಾಳೆ ಕಾಳು ಕೊಡುವಾಗ ನೀ ಹಂಗ್ ಮಾಡಿದೆ, ನೀ ಇಂಗ್ ಮಾಡಿದೆ ಅಂತ ಸಿಟ್ಟುಗೊಳ್ಳುತ್ತಾರೆ. ಹೀಗ ಹೋದರೆ 10 ಗಂಟೆಗೆ ಬರುತ್ತಾರೆ. ಒಂದೊಂದು ದಿವಸ ಕೂಲಿಗೆ ಹೋಗುತ್ತಾರೆ. ಒಂದೊಂದು ದಿವಸ ಲೇಟಾಗಿ ಬಂದರೆ ಕೂಲಿಗೆ ಯಾರೂ ಇವರನ್ನು ಕರೆದುಕೊಳ್ಳದಿಲ್ಲರ್ರೀ. ನಾನು ಬೇಡವೆಂದರೆ ಕೇಳಲ್ಲರ್ರೀ ಸರ್. ನೀವಾದ್ರೂ ಹೇಳಿ ನೀವಾದ್ರೂ ಈ ಕೆಲಸ ಬಿಡಿಸಿರಿ ಸರ್."

6.07.2015 ಹೆಂಡತಿ: "ಈ ದಿವಸ ನಾವು ಬಹಳ ಬೆಳಿಗ್ಗೆ ಎದ್ದು, ನಮ್ಮ ಮನೆಯಲ್ಲಿ ಇರುವಂತಹ ಸಣ್ಣ ಪುಟ್ಟ ಕೆಲಸಗಳನ್ನು ಮುಗಿಸಿಕೊಂಡೆವು. ನಮ್ಮೂರಲ್ಲಿ ಶ್ರೀ ಕಟ್ಟೇಶ್ವರ ಜಾತ್ರೆ ಇರುವುದರಿಂದ ಆರು ಗಂಟೆಗೆ ಎಲ್ಲಾ ಮುಗಿಸಿ 6.30ಕ್ಕೆ ಸೌಕಾರ್ರ ಮನೆಗೆ ಹೋಗಿ ಅವರ ಅಂಗಳ ಬಾಗಿಲ ಕಸ ಹೊಡೆದು, ನೀರು ಸಿಂಪಡಿಸಿ ಮಾಡಿ, ಬೇಗ ಬೇಗ ಸಗಣಿ ತುಂಬಿ, ಅಡಿವಿಗೆ ಹಾಕಿ, ಮದ್ಯಾಹ್ನದ ಮೇವು ಹಿರಿದು ಇಟ್ಟು, ಕಟ್ಟಿಗೆ ಹಿರಿದು ಒಡೆದು, ಸೌಕಾರತಿಗೆ ಕೊಟ್ಟು ನಾವು ಅವರನ್ನು ಕೂಡಿಕೊಂಡು ಚಹಾ ಕುಡಿದು ನಾನು ಮನೆಗೆ ಹೋಗುತ್ತೇನೆಂದಾಗ ಅವರು ರಾತ್ರಿ ಮಾಡಿದಂತಹ ಅಡಿಗೆಯನ್ನು ಕೊಟ್ಟರು. ಅದನ್ನು ತೆಗೆದುಕೊಂಡು ಬಂದು, ನಮ್ಮ ಮನೆಯಲ್ಲಿ ಮಕ್ಕಳಿಗೆ ಕೊಟ್ಟು, ನಾನು ದೇವರ ಸೇವೆ ಮಾಡಲಿಕ್ಕೆ ಅಂತ ಗುಡಿಯ ಮುಂದೆ ಕಸ, ಮುಸುರಿ, ತೆಗೆಯಲು ಹೋದೆ. ನಮ್ಮೂರಲ್ಲಿ ಯಾವುದೇ ದೇವರ ಜಾತ್ರೆಗಳು ಆದರೆ ನಮ್ಮ ಕಾಲನಿಯಲ್ಲಿರಬೇಕು. ಏಕಂದರೆ ಅಲ್ಲಿ ಬಂದಿರುವಂತಹ ಕಸ, ಮುಸುರಿ, ತೆಗೆಯಬೇಕು. ಹಲಗೆ ಬಾರಿಸಬೇಕು. ಊರು ಹಿರಿಯರು ಏನು ಹೇಳುತ್ತಾರೋ ಆ ಕೆಲಸಗಳನ್ನೆಲ್ಲಾ ನಾವು ಮಾಡಲೇಬೇಕು. ಇಂತಹ ದಿನಗಳಲ್ಲಿ ನಮಗೆ ಕೂಲಿ ಯಾರೂ ಕೊಡುವುದಿಲ್ಲ. ಊಟಕ್ಕೆ ಮಾತ್ರ ಕೆಲಸ ಮಾಡಬೇಕು."

11.07.2015 "ನೋಡ್ರಿಪ್ಪಾ ಇವತ್ತು ನಾವು ನಮ್ಮ ಮನೆಯ ಕೆಲಸ ಬಿಟ್ಟು ಈ ಸಗಣಿವರಿಯು ಕೆಲಸ ಮಾಡಲೇಬೇಕು. ಆದರೆ ಈಗ ಏಳು ಗಂಟೆಗೆ ಹೋಗತೇವ. ಒಂಭತ್ತರಿಂದ ಹತ್ತ ಗಂಟೆಯವರಿಗೆ ಬರುತ್ತೀವ. ಅಲ್ಲಿ ಅವರು ನಮ್ಮನ್ನು ಸಗಣಿ ಬಳಿಲಿಕ್ಕೆ ಅಷ್ಟೇ ಹೇಳುದಿಲ್ಲ. ಅವರ ಮನೆ ಕೆಲಸ ಹೇಳುತ್ತಾರೆ.

ಅದನ್ನೆಲ್ಲಾ ನಾವು ಮಾಡುತ್ತೇವೆ. ಏಕೆಂದರೆ ನಮಗೆ ಅವರು ಕಾಳ ಕೊಡುವಾಗ ಸರಿಯಾಗಿ ಕೊಡುತ್ತಾರೆ. ಇಲ್ಲಂದರ ಅವರ ಹೇಳಿದ ಕೆಲಸ ನಾವು ಹೆಚ್ಚು ಕಡಿಮೆ ಮಾಡಿದರೆ ಕಡಿಮೆ ಕಾಳು ಕೊಡುತ್ತಾರೆ. ಸೌಕಾರ ಮನ್ಯಾಗ ಸಣ್ಣವರನ್ನು ಹಿಡಕೊಂಡು ದೊಡ್ಡವರಿಗೆ ಹೇಳಿದ ಎಲ್ಲಾ ಕೆಲಸ ನಾವು ಮಾಡಬೇಕು. ಏನು ಮಾಡುದ್ರಿ, ನಮ್ಮ ಮಕ್ಕಳು ಶಾಲಿ ಕಲೀಲಿಲ್ಲ. ಒಬ್ಬ ಗೌಂಡಿ ಕೆಲಸಕ್ಕೆ ಹೋಗತಾನ. ಇನ್ನೊಬ್ಬ ಕೂಲಿಗೆ ಹೋಗತಾನ. ನಮ್ಮ ಚಾಕರಿ ಕೆಲಸ ಮಾಡತೀನಿ. ಈ ವರ್ಷ ಒಬ್ಬ ಮಗಳ ಮದುವಿ ಮಾಡೇನಿ. ಸಾಲ ಆಗಿದೆ. ಅದಕಂತ ದೊಡ್ಡ ಮಗನ ಮಹಾರಾಷ್ಟ್ರ ಗೌಂಡಿ ಕೆಲಸಕ್ಕೆ ಕಳಿಸಿದ್ದೇನೆ. ಈಗ ಮಳೆ ಇಲ್ಲರೀ, ರೈತರ ಕೆಲಸಾನೂ ಇಲ್ಲ. ಸ್ವಸಹಾಯ ಸಂಘಕ್ಕೆ ಕಟ್ಟಕ್ಕ 10 ರೂಪಾಯಿ ಇಲ್ಲ. ಒಟ್ಟಾರೆ ಈ ಕೆಲಸ ಮಾಡಲಿಕ್ಕೆ, ನನ್ನ ಗಂಡ ಮಕ್ಕಳು ಬ್ಯಾಡ ಅಂತಾರೆ. ಅವರಂದ್ರ ಊಟಕ್ಕೆ, ಕಾಳು, ಬೇಕರೀ. ಹೊಲ ಇಲ್ಲ. ಅವರ ಕೊಡುವ ಕಾಳ ಮೇಲೆ ನಮ್ಮ ಜೀವನ ಮಾಡುತ್ತೀವಿ."

25.07.2015 "ನಾನು ಇಂದು ಬೇಗನೇ ಎದ್ದು ನನ್ನ ಮನೆಯ ಕೆಲಸ ಮುಗಿಸಿ, ಒಲೆ ಸಾರಿಸಿ, ಅಂಗಳ ಬಾಗಿಲ ಕಸ ಗುಡಿಸಿ ಬಾಗಿಲಗೆ ನೀರು ಎರಚಿ, ಚಹಾ ಮಾಡಿ ಕುಡಿದು ರೈತರ ಮನೆಗೆ ಹೋದಾಗ 7.45 ಆಗಿರಬಹುದು. ಅಲ್ಲಿ ನಾವು ಮಾಡುವ ಕೆಲಸ ದನಗಳ ಹೊರಗೆ ಕಟ್ಟುವುದು, ಚಪಾಡಿ ತೆಗೆಯುವುದು, ಸಗಣಿ ಕಲಿಸಿ ಗ್ಯಾಸ್ಗೆ ಹಾಕುವುದು. ಇವೆಲ್ಲಾ ಮುಗಿದ ನಂತರ ಪಕ್ಕಿಗೆ ಇರುವಂತ ಕಸ ತುಂಬಿ ಅಡಿವಿಗೆ ಒಗೆದು ಕೈ ತೊಳೆದು ಕೊಳ್ಳುವಷ್ಟರಲ್ಲಿ ಒಂಭತ್ತು ಗಂಟೆಯಾಗಿರುತ್ತದೆ. ಅವರು ಒಂದು ಕಪ್ ಚಹಾ ಕೊಡುತ್ತಾರೆ. ಕುಡಿದ ತಂಗಳ ರೊಟ್ಟಿ ಕೊಡುತ್ತಾರೆ. ತಗೊಂಡು ಮನಿಗೆ ಬಂದು ಅವನ್ನು ತಿಂದು ಕೂಲಿ ಕೆಲಸಕ್ಕೆ ಹೋಗುತ್ತೇವೆ. ಈಗ ಮಳೆ ಇಲ್ಲ. ಬರಗಾಲ ಬಂದಂಗ ಆಗೈತೆ. ಇಷ್ಟುದಿನ 80 ರೂ. ಕೊಡುವರ. ಈಗ 60 ರೂ. ಕೂಲಿ ಕೊಡುತ್ತಾರೆ. ಆದ್ದರಿಂದ ನಾವು ಈ ಹಳ್ಳಿಲೀ ಹೊಟ್ಟೆ ತುಂಬಿಕೊಳ್ಳುದು ಬಹಳ ಕಷ್ಟಾರ. ನೀವು ಈ ಕೆಲಸ ಬಿಡಂದ್ರ ನಾವು ಹ್ಯಾಂಗ ಬಿಡಕ ಆಗತೈತಿ. ಮೊದಲ ನಮ್ಮಗ ಹೊಲ ಇಲ್ಲ. ರೈತರ ಮೇಲೆ ನಮ್ಮ ಜೀವನ. ಬೇರೆ ಊರಿಗೆ ಹೋಗಿ ಹೊಟ್ಟೆ ತುಂಬಿಸಿಕೊಳ್ಳಕ್ಕ ಹೆಂಗ್ ಆಗೈತ್ರೀ? ಆದರೆ ಎಷ್ಟು ಕಷ್ಟ ಬಂದರೂ ನಾವು ಈ ಚಾಕರಿ ಕೆಲಸ ಬಿಡಂಗಿಲ್ಲ ನೋಡ್ರಿ."

31.07.2015 "ನಾನು ಇವತ್ತು ಸಗಣಿ ಮನಿಗೆ ಹೋಗಲಿಲ್ಲ. ಏಕೆಂದರೆ ನನ್ನ ಮಗನಿಗೆ ಆರಾಮಾ ಇರಲಿಲ್ಲ. ಆತನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾಗಿತ್ತು. ಆದರೂ ಹಣ ಇರಲಿಲ್ಲ.ಸೌಕಾರತ್ತಿರ ಕೇಳಿಲಿಕ್ಕೆ ಹೋಗಿದ್ದೆ. ಆವರು 'ಸಗಣಿಗೇಕೆ ಬಂದಿಲ್ಲಾ? ನೀನು ಬರದಿದ್ದರೆ ನಿನ್ನ ಗಂಡನನ್ನು ಕಳಿಸಬೇಕು' ಎಂದು ಗದರಿಸಿದರು. 'ಇಲ್ಲ ಸೌಕಾರರೇ ನನ್ನ ಮಗನಿಗೆ ಬಹಳ ಉಷಾರಿಲ್ಲ. 500 ರೂ. ಕೊಡಿ' ಎಂದು ಕೇಳಿದಾಗ ಅವರು 200 ರೂ. ಕೊಟ್ಟರು. ಆ ರೂಪಾಯಿಅನ್ನು ಒಯ್ದು ಮಗನಿಗೆ ಆಸ್ಪತ್ರೆಗೆ ಕರೆದುಕೊಂಡು ಹೋದೆ. ಮಧ್ಯಾಹ್ನ ಅಲ್ಲಿಂದ ಬಂದು ಸೌಕಾರ್ರ ಮನೆಗೆ ಹೋಗಿ ಸಗಣಿ ತುಂಬಿ, ಚಪಾಡಿ ಹೊತ್ತು ತುಂಬಿ, ಅಡಿವಿಗೆ ಹಾಕಿ, ಅವರ ಮನೆಯಲ್ಲಿ ಊಟ ಮಾಡಿ, ನೀಡಿಸಿಕೊಂಡು ಆರಾಮಿಲ್ಲದ ಮಗನಿಗೆ ಊಟಕ್ಕೆ ಹಾಕಿದೆನು. ಒಂದು ವೇಳೆ ಅವರು ಊಟ ಕೊಟ್ಟಿಲ್ಲ ಅಂದರೆ ನಾವು ಉಪವಾಸ ಇರಬೇಕಾಯಿತು.

ಸಾಯಂಕಾಲ ಅವರ ಹೊಲಕ್ಕೆ ಹೋಗಿ ಕಟ್ಟಿಗೆ ಮತ್ತು ಕಾಯಿಪಲ್ಯ ಇಸಿದುಕೊಂಡು ಬರುವ ಅಷ್ಟರಲ್ಲಿ ಆರು ಗಂಟೆಯಾಯಿತು. ಈ ವಾರದಲ್ಲಿ ನಾವು ಯಾವುದೇ ಕೂಲಿ ಕೆಲಸಕ್ಕೆ ಹೋಗಿಲ್ಲ. ಆದ್ದರಿಂದ ನಮಗೆ ಸಂತೆ ಮಾಡುವುದು ಬಹಳ ಕಷ್ಟವಾಗಿದೆ. ಮಳೆಗಾಲವೆಲ್ಲ ಕೂಲಿ ಇಲ್ಲ. ಆದ್ದರಿಂದ ರೈತರ ಮನೆಗಳನ್ನು ಇಣಿಕಿ ನೋಡಬೇಕಾಗುತ್ತದೆ."

11.08.2015 "ಇಂದು ನಾವು ನನ್ನ ಮನೆಯ ಕೆಲಸ ಬಿಟ್ಟು ಬೆಳಿಗ್ಗೆ ಆರು ಗಂಟೆಗೆ ಸೌಕಾರನ ಮನೆಗೆ ಹೋದೆ. ಯಾಕೆಂದರೆ ಅವರ ಮನೆಯಲ್ಲಿ ದೇವರ ಪೂಜೆ ಇತ್ತು. ಆದ್ದರಿಂದ ನನ್ನ ಮನೆಯ ಕೆಲಸ ಬಿಟ್ಟು ಅವರ ಮನೆಯ ಅಂಗಳ ಕಸ ಗುಡಿಸುವುದು, ಪಕ್ಕೆ ಸಾರಿಸುವುದು, ಮನೆಯ ಹಿಂದಿನ ಕಸ ಗುಡಿಸುವುದು, ಸಗಣಿ ತುಂಬಿ ಒಗೆಯುವುದು, ಇವು ಅವರ ಮನೆಯ ಯಾವುದಾದರೂ ಪೂಜೆ ಕಾರ್ಯಕ್ರಮ, ಹರಿದಿನಗಳಲ್ಲಿ ನಾವು ಮಾಡಬೇಕು. ಇಡೀ ದಿವಸ ನಾವು ಅವರ ಮನೆಯಲ್ಲೇ ಇರುತ್ತೇವೆ. ನಮಗೆ ಎರಡು ಹೊತ್ತು ಊಟ, ಎರಡು ಸಲ ಚಹಾ ಕೊಡುತ್ತಾರೆ. ಇದಕ್ಕೆ ಕೂಲಿ ಅಂತ ಕೊಡುವುದಿಲ್ಲ. ಇಂತಹ ಸಂದರ್ಭದಲ್ಲಿ ಮಾಡಿದ್ದಕ್ಕೆ ಏನಾದರೂ ಗುರುತು ಇರುವಂತಹ ಒಂದು ವಸ್ತು ಕೊಡುತ್ತಾರೆ. ಉದಾ:– ಪರಾಟ ಅಥವಾ ಕೊಡ, ಗಂಗಳ, ಚರಗಿ, ಅಂತ ಅಥವಾ ಒಂದು ಡ್ರಸ್ ಅರಿವಿ ಕೊಡುತ್ತಾರೆ. ಇದೇ ಪ್ರೀತಿಯಲ್ಲಿ ನಾವು ಇಷ್ಟೆಲ್ಲಾ ಕೆಲಸ ಮಾಡಬೇಕು. ಒಂದು ವೇಳೆ ಈ ಕೆಲಸ ಮಾಡದೇ ಇದ್ದರೆ ಅವರು ನಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಅವರ ಹೊಲಗಳ ಕಡೆ ನಮ್ಮನ್ನು ಹಾಸುವುದಿಲ್ಲ. ಮೇವು, ಕಟ್ಟಿಗೆ ಕೊಡುವುದಿಲ್ಲ. ಕಷ್ಟ ಬಂದಾಗ ಸಹಾಯ ಮಾಡುವುದಿಲ್ಲ. ಇಷ್ಟೆಲ್ಲಾ ನೋವು ಅನುಭವಿಸಬೇಕು."

20.08.2015 "ನಿನ್ನೆ ನಾಗರ ಪಂಚಮಿ ಇತ್ತು. ಆದ್ದರಿಂದ ನಾನು ಓಣಿಯವರು ಎಲ್ಲರೂ ಸೇರಿ ನಾಗರ ಪಂಚಮಿ ದಿವಸ ಹುತ್ತದಿಂದ ತಂದ ಮಣ್ಣು ಕಲಿಸಿ ಹುತ್ತಪನ ಮಾಡಿ ಅದಕ್ಕೆ ಹಾಲೆರೆದು ಹುಂಡಿ ಏಳು ಎಡೆ ಮಾಡಿ ಬಂದು ಮಲಗುವಷ್ಟರಲ್ಲಿ ರಾತ್ರಿ 11.00 ಗಂಟೆ ಆಗಿತ್ತು. ಆದ್ದರಿಂದ ಇವತ್ತು ಲೇಟಾಗಿ ಎದ್ದು ಮಾಲೀಕರ ಮನೆಗೆ ಹೋದೆನು. ಮಾಲೀಕರ ಮನೆಯ ಕಸ ಬಹಳ ಇತ್ತು. ದನಗಳ ಸಗಣಿ ಬಹಳ ಇತ್ತು. ಏಕೆಂದರೆ ಹಬ್ಬ ಇರುವುದರಿಂದ ನಾನು ನಿನ್ನೆ ದಿವಸ ಹೋಗಿರಲಿಲ್ಲ. ಎಲ್ಲಾ ಸಗಣಿ ಕಸ ಗುಂಪಾಗಿ ಹಾಕಿದ್ದರು. ಅದನ್ನೆಲ್ಲಾ ಅಡವಿಗೆ ಹಾಕಬೇಕಾದರೆ 6.30ರಿಂದ 9.00 ಗಂಟೆ ಬೇಕಾಯಿತು. ಇಂದು ಪಂಚಮಿ ನಂತರ 2ನೇ ದಿವಸ ಅಂತ ಒಳ್ಳೆಯ ದಿವಸ. ಇಂದು ದಿವಸ ದೊಡ್ಡಹಬ್ಬ. ಆದರೂ ನಾವು ಈ ಕೆಲಸ ಮಾಡಲೇಬೇಕು. ಎಲ್ಲಾರೂ ಹೊಸ ಅರಿವಿ ತೊಟ್ಟುಕೊಂಡು ಶೃಂಗಾರದಿಂದ ಆಟ ಆಡುವಾಗ ನಾವು ಗಲೀಜಾದ ಅರವಿತೊಟ್ಟು ಕೊಂಡಾಗ ನಮಗೆ ಅನಿಸುತ್ತದೆ. ಈ ಕೆಲಸ ನಾವು ಯಾವಾಗ ಬಿಡುತ್ತೇವೆ ಏನೂ ಅಂತಾ. ಆದರೇ ಅವರು ಕೊಡುವ ಅಡಿಗೆ ನಮಗೆ ಒಂದು ತರಾ ಅಳಿಸಿದ ಅನ್ನ, ತಂಗಳು ರೊಟ್ಟಿ, ತಂಗಳು ಪಲ್ಯ, ಸಾರು ಕೊಡುತ್ತಾರೆ. ಅದನ್ನೇ ತಂದು ಬೆಚ್ಚಗೆ ಕಾಸಿ ನಾವು ಊಟ ಮಾಡುತ್ತೇವೆ. ಮಾಡಿದ ನಂತರ ಮರುದಿನ ನಮಗೆ ಅರಿವು ಬರುತ್ತದೆ. ಹೊಟ್ಟೆ ಸರಿ ಇಲ್ಲದೇ ಉಷಾರಿಲ್ಲದೇ ಇದ್ದಾಗ 'ಹೂ ಹೌದು ನಾವು ಇಂತಹ ತಣ್ಣಿನ ಪದಾರ್ಥ ತಿನ್ನಬಾರದು' ಅಂತಾ. ಆದರೆ

ಏನು ಮಾಡುವುದು? ನಮಗೆ ಬಡತನ ಬಹಳ. ಮನೆಯಲ್ಲಿ ಕೂಲಿ ಇರುವುದಿಲ್ಲ. ಅವರು ಕೊಟ್ಟ ಊಟ ಅಮೃತ ಅಂತ ತಿಂದು ಬಿಡಬೇಕು. ಮೊನ್ನೆ ಒಂದು ಸಲ ನಮ್ಮ ಮನೆಯ ಮಗನಿಗೆ ಆರಾಮ ಇಲ್ಲದಿದ್ದಾಗ ಡಾಕ್ಟರ್ ಹೇಳಿದರು 'ಬಿಸಿ ಬಿಸಿ ಪದಾರ್ಥ ತಿನ್ನಬೇಕು' ಅಂತಾ.'ಸ್ವಚ್ಛವಾದ ಬಟ್ಟೆ ತೊಡಬೇಕು. ಶುದ್ಧವಾದ ನೀರು ಕುಡಿಯಬೇಕು' ಎಂದಾಗ ನಾನು ನೇರವಾಗಿ ಡಾಕ್ಟರಿಗೆ 'ನೋಡಿ ಸರ್ ನಾವು ಮಾಡುವ ಕೆಲಸ ಇಂತದ್ದು. ಅವರು ಕೊಟ್ಟ ತಣ್ಣನಿಯ ಪದಾರ್ಥ ತಿಂದು ನನ್ನ ಮಗನಿಗೆ ಇಂಗಾ ಆಗಿರಬಹುದು' ಎಂದಾಗ ಡಾಕ್ಟರ್ ನಮಗೆ ಬೈದು 'ಇನ್ನು ಮುಂದೆ ಇಂತಹ ಕೆಲಸ ಮಾಡಬಾರದು. ನೀವು ಅವರು ಕೊಟ್ಟ ತಣ್ಣನೆಯ ಪದಾರ್ಥ ತಿನ್ನಬಾರದು' ಎಂದು ಹೇಳಿದರು. ಆವಾಗಿನಿಂದ ಅವರು ಕೊಟ್ಟಿದ್ದು, ಮನೆಗೆ ತಂದು ಹಸುವಿಗೆ ಹಾಕುತ್ತೇವೆ. ಈ ಕೆಲಸ ಯುಗಾದಿ ಮಟ ಮಾಡಿ ಆ ಕಡೆಯಿಂದ ಮಾಡುವುದೇ ಇಲ್ಲ."

14.09.2015 "ಬೆಳಿಗ್ಗೆ 6.30ಕ್ಕೆ ನಾವು ಏಳುತ್ತೇವೆ. ನಮ್ಮ ದಿನನಿತ್ಯದ ಕೆಲಸ ಕಾರ್ಯಗಳನ್ನು ಮುಗಿಸಿಕೊಂಡು 7.40ಕ್ಕೆ ಸಗಣಿಯನ್ನು ಒಗೆಯಲು ಹೋಗುತ್ತೇವೆ. ಅಲ್ಲಿ ಕಟ್ಟಿಗೆಯನ್ನು ಮುರಿಯುವುದು, ಅಂಗಳ ಬಾಗಿಲು ಕಸ ಗುಡಿಸುವುದು, ಅಂಗಡಿಗೆ ಹೋಗುವುದು, ಗಿರಣಿಗೆ ಹೋಗುವುದು, ಕಾಳಕಡಿ ಹಸ ಮಾಡುವುದು. ಸೌಕಾರನ ಮಕ್ಕಳನ್ನು ಅಂಗನವಾಡಿ ಶಾಲೆಗೆ ಕಳಿಸುವುದು, ಬಟ್ಟೆ ತೊಳೆಯುವುದು, ನೀರು ತುಂಬುವುದು, ಶೌಚಾಲಯಕ್ಕೆ ನೀರು ಹಾಕುವುದು, ಆಳುಗಳಿಗೆ ಊಟವನ್ನು ಕೊಟ್ಟು ಬರುವುದು, ಈ ಎಲ್ಲಾ ಕೆಲಸವನ್ನು ಮುಗಿಸಿ ಬರುವುದು. 9.30ಕ್ಕೆ ಬಂದು ಮಾಲೀಕರು ಕೊಟ್ಟಿರುವ ರೊಟ್ಟಿಯನ್ನು ಕಟ್ಟಿಕೊಂಡು ಬೇರೆಯವರ ಹೊಲಕ್ಕೆ 100 ರೂ.ಗಳಿಗೆ ಕೂಲಿ ಕೆಲಸಕ್ಕೆ ಹೋಗುತ್ತೇವೆ. ಸಂಜೆ ಆರು ಗಂಟೆಗೆ ವಾಪಸ್ಸು ಮನೆಗೆ ಬರುತ್ತೇವೆ. ಮತ್ತೆ 6.30ಕ್ಕೆ ಬಿಟ್ಟು ಚಾಕರಿರವರ ಮನೆಗೆ ಹೋಗಿ ಸಗಣಿ ತೆಗೆದು ದನಗಳಿಗೆ ನೀರು ಕುಡಿಸಿ ಮೇವು ಹಾಕಿ ಮತ್ತೆ ಉಳಿದ ತಂಗಳು ರೊಟ್ಟಿ ಅಥವಾ ಅನ್ನವನ್ನು ಕೊಡುತ್ತಾರೆ. ಅದನ್ನು ತಿಂದು ಕುಡಿಯುವುದಾದರೆ ಚಹಾ ಮಾಡಿ ಕುಡಿಯುತ್ತೇವೆ. ಇಲ್ಲವಾದರೆ ಊಟವನ್ನು ಮಾಡಿಕೊಂಡು ನಾಳೆ ಯಾರ ಹೊಲಕ್ಕೆ ಕೂಲಿ ಇದೆ ಎಂದು ಚರ್ಚೆ ಮಾಡಿಕೊಂಡು ನಿದ್ದೆ ಮಾಡುತ್ತೇವೆ."

19.09.2015 "ದಿನದಂತೆ ಮತ್ತೆ ಬೆಳಿಗ್ಗೆ 6.30ಕ್ಕೆ ಎದ್ದು ನಮ್ಮ ದಿನನಿತ್ಯದ ಕೆಲಸ ಮುಗಿಸಿಕೊಂಡು ಮಾಲಿಕರ ಮನೆಗೆ ಹೋಗುವುದಕ್ಕೆ 7.30 ಸಮಯವಾಗುತ್ತದೆ. ಮಾಲಿಕರು ಹೇಳಿದ ಕೆಲಸ ಮಾಡಬೇಕು. ಬಿಟ್ಟಿ ಚಾಕರಿ ಕೆಲಸ ಮಾಡುವವರದೇ ಹೊಲದಲ್ಲಿ ಕೆಲಸಕ್ಕೆ ಹೋದರೆ 100 ರೂ. ಕೂಲಿಯನ್ನು ಕೊಡುತ್ತಾರೆ. ಬಿಟ್ಟಿ ಚಾಕರಿಗೆ ಸಂಬಂಧವಿರುವುದಿಲ್ಲ. ಈ ಎಲ್ಲಾ ಕೆಲಸವನ್ನು ಮಾಡಿಕೊಳ್ಳುತ್ತಾ ಮಕ್ಕಳ ಶಿಕ್ಷಣ ಮತ್ತು ಮಕ್ಕಳ ಮದುವೆಗಳ ಬಗ್ಗೆ ಚಿಂತೆ ಮಾಡುವುದು. ಇತರೆ ಗುಂಪುಗಳನ್ನು ಮಾಡಿರುತ್ತೇವೆ. ಅದರ ಸಾಲದ ಕಂತುಗಳನ್ನು ಕಟ್ಟುವುದು, ಈ ಎಲ್ಲಾ ಕೆಲಸಗಳ ಜೊತೆಗೆ ನಮ್ಮ ಊರಲ್ಲಿ ಕೂಲಿ ಇರಲಿಲ್ಲ ಅಂದರೆ ಬೇರೆ ಊರಿಗೆ ಕೂಲಿಗೆ ಹೋಗಲೇಬೇಕು. ಕಾರಣ ಆರ್ಥಿಕವಾಗಿ ನಾವು ಬಹಳ ಹಿಂದೆ ಇರುತ್ತೇವೆ. ನಮ್ಮ ಜೀವನದಲ್ಲಿ ನಾವು ಬಿಟ್ಟಿ ಚಾಕರಿಗೆ ಹೊಂದಿಕೊಂಡಿದ್ದೇವೆ. ಇದನ್ನು ಬಿಟ್ಟು ಬದುಕುತ್ತೇವೆ ಎಂದು ಹೇಳಬಹುದು. ಹೇಳದೇ ಇರಬಹುದು. ಕಾರಣ ಕಷ್ಟಗಳು ಹೇಳಿ ಬರುವುದಿಲ್ಲ.

ಹೇಗೆ ಬರುವುದು ಹಾಗೆ ನಾವು ತಾಳ ಹಾಕಿಕೊಂಡು ಬದುಕುತ್ತಿದ್ದೇವೆ. ಇದರಿಂದ ನಾವು ಮುಕ್ತವಾಗಬೇಕೆಂದರೆ ಸ್ವಲ್ಪ ದಿವಸ ಹೋಗಬೇಕು. ನಮ್ಮ ಮಕ್ಕಳ ಶಿಕ್ಷಣವಾಗಿ ನೌಕರಿ ಹೋಗುವವರೆಗೆ ನಮಗೆ ಈ ಭಾದೆ ತೀರುವುದಿಲ್ಲ."

22.09.2015 "6.30 ಬೆಳಿಗ್ಗೆ ಎದ್ದು ಚಹಾ ಕುಡಿಯದೇ ಹೋಗಿ ಕೂಲಿ ಕೆಲಸವನ್ನು ಕೇಳಿಕೊಂಡು ಬರುವುದು, ಬಂದು ಅಡಿಗೆಯನ್ನು ಮಾಡುವುದು, ನಂತರ ಸಗಣಿಯನ್ನು ತೆಗೆಯಲು ಹೋಗುವುದು, ಸೌಕಾರ ಯಾರನ್ನು ಕರೆದುಕೊಂಡು ಬಾ ಅಂತ ಹೇಳುತ್ತಾನೋ ಅವರನ್ನು ಕರೆದುಕೊಂಡು ಬರುವುದು, ಎತ್ತುಗಳನ್ನು ಹೊರೆಗೆ ಕಟ್ಟಲು ಹೇಳುವುದು, ನಂತರ ಸಗಣಿಯನ್ನು ಒಗೆಯುವುದು, ಕೊಟ್ಟಿಗೆಯಲ್ಲಿನ ಕಸವನ್ನು ತೆಗೆದು ಒಗೆಯುವುದು, ಕೊಟ್ಟಿಗೆಗೆ ಹೆಚ್ಚು ಕಣಿಕೆ ಹಾಕುವುದು, ಸಗಣಿಯನ್ನು ಒಗೆಯುವುದು, ಕೈ ತೊಳೆದುಕೊಂಡು ಉಪ್ಪಿಟ್ಟು ಚಹಾ ಕೊಡುತ್ತಾರೆ. ತಿಂದು ಕುಡಿಯುವುದು. ಮಾಲಿಕರ ಮಕ್ಕಳನ್ನು ಅಂಗನವಾಡಿ ಶಾಲೆಗೆ ಬಿಟ್ಟು ಬರುವುದು. ಹಿಟ್ಟು ಬೀಸಲಿಕ್ಕೆ ಜೋಳ ಸ್ವಚ್ಛ ಮಾಡುವುದು, ಹಿಟ್ಟು ಬೀಸಿಕೊಂಡು ಬರುವುದು, ಹಿಟ್ಟನ್ನು ಡಬ್ಬಿಗೆ ತುಂಬುವುದು, ಸ್ವಚ್ಛಮಾಡಿ ಇಡುವುದು, ಇದೆಲ್ಲಾ ಮಾಡಿಕೊಂಡು ಬರುವುದಕ್ಕೆ 9.30 ಸಮಯವಾಗುತ್ತದೆ. ಅವರು ಬರುವಾಗ ರೊಟ್ಟಿ, ಪಲ್ಯ, ಮಜ್ಜಿಗೆಯನ್ನು ಕೊಟ್ಟಿರುತ್ತಾರೆ. ಅದನ್ನು ತೆಗೆದುಕೊಂಡು ಬೇರೆಯವರ ಕೂಲಿ ಕೆಲಸಕ್ಕೆ 10 ಗಂಟೆಗೆ ಹೋಗುತ್ತೇವೆ. ಅವರು ರೂ. 100 ಪಗಾರವನ್ನು ಕೊಡುತ್ತಾರೆ. 6.30ಕ್ಕೆ ಮತ್ತೆ ಮಾಲಿಕನ ಮನೆಗೆ ಸಗಣಿಯನ್ನು ತೆಗೆಯಲು ಹೋಗುವುದು ಮತ್ತೆ ಮನೆಗೆ ಬಂದು ಅಡಿಯನ್ನು ಮಾಡುವುದು ಇಲ್ಲದಿದ್ದರೆ ಮಾಲೀಕರು ಕೊಟ್ಟಿರುವ ತಂಗಳ ರೊಟ್ಟಿ ಪಲ್ಯವನ್ನು ತಿನ್ನುವುದು, ಮಕ್ಕಳಿಗೆ ಹಂಚಿಕೊಡುವುದು, ಅವರ ಬಗ್ಗೆ ಚಿಂತಿಸುವುದು, ನಾಳೆಯ ಕೆಲಸ ಕಾರ್ಯಗಳ ಬಗ್ಗೆ ವಿಚಾರಿಸುವುದು, ನಾಳೆ ದಿವಸ ಕೂಲಿ ಇದೆಯೋ ಇಲ್ಲ ಎಂದು ಚರ್ಚಿಸುವುದು. ಈ ಊರಲ್ಲಿ ಇಲ್ಲವಾದರೆ ಬೇರೆ ಊರಿಗೆ ಕೂಲಿ ಕೆಲಸಕ್ಕೆ ಹೋಗುವುದು. ನಮ್ಮಲ್ಲಿ ಮಹಿಳೆಯರು ಹೆಚ್ಚಾಗಿ ದುಡಿಯುವುದು. ಗಂಡು ಮಕ್ಕಳು ಅಲ್ಪ ಸ್ವಲ್ಪ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾರೆ. ನಮ್ಮ ಸಮುದಾಯದಲ್ಲಿ ಈ ಪದ್ಧತಿ ಹೋಗಬೇಕೆಂದು ನಮಗೆ ಶಿಕ್ಷಣ ಅಂತೂ ಇಲ್ಲ. ನಮ್ಮ ಮಕ್ಕಳ ಶಿಕ್ಷಣ ಬಗ್ಗೆ ಒತ್ತು ಕೊಡುವುದು. ಇದಕ್ಕೆಲ್ಲಾ ಕಾರಣವೆಂದರೆ ನಮಗೆ ಜಮೀನುಗಳು ಇಲ್ಲ. ಮತ್ತು ನಮ್ಮ ಮಕ್ಕಳಿಗೆ ಮತ್ತು ನಮ್ಮ ಯಜಮಾನರಿಗೆ ನೌಕರಿ ಇಲ್ಲ. ಹಾಗಾಗಿ ನಮಗೆ ಬಡತನ ಕಡಿಮೆ ಆಗಬೇಕೆಂದರೆ ನಮ್ಮ ಕುಟುಂಬದ ಶಿಕ್ಷಣ ಸಂಘಟನೆ ನೌಕರಿ ಇದ್ದರೆ ಮಾತ್ರ ಈ ಭಾದೆಯಿಂದ ಹೊರಗೆ ಬರುವುದು ಎಂದು ನಮಗೆ ಈಗ ಸಂಘಟನೆಯಿಂದ ತಿಳಿದುಕೊಂಡಿರುತ್ತೇವೆ. ನಾವು ಈ ಸಮಸ್ಯೆಯಿಂದ ಹೊರಗೆ ಬರಬೇಕೆಂದರೆ ಈ ಕಾರ್ಯ ಚಟುವಟಿಕೆ ನಿರಂತರವಾಗಿ ನಡೆಯಬೇಕೆಂದು ನನ್ನ ಅನಿಸಿಕೆ."

## ಅನುಬಂಧ III

### ಬಿಟ್ಟಿ ಚಾಕರಿಯಲ್ಲಿರುವವರ 23 ಮಂದಿಯ ಚುಟುಕು ಅನುಭವಗಳು

1 ಗಂಡಸು – ವಯಸ್ಸು 48.

"ನಾವು ದಿನಾಲೂ ಬೆಳಿಗ್ಗೆ ಎದ್ದು ತಕ್ಷಣ ಚಹಾ ಕುಡಿದು ನಂತರ ಆರು ಗಂಟೆಗೆ ಸಗಣಿ ಕಸ ಮಾಡಲಿಕ್ಕೆ ರೈತರ ಮನೆಗೆ ಹೋಗುತ್ತೇವೆ. ಒಂದು ಮನಿ ಸಗಣಿ ಬಳಿದು ಬರಬೇಕಾದರೆ ಎಂಟು ಗಂಟೆ ಆಗುತ್ತದೆ. ನಂತರ ಮನೆಗೆ ಬಂದು ಅಡಗಿ ಮಾಡಿಕೊಂಡು ಊಟ ಮಾಡಿ ನಾವು ಕೂಲಿ ಕೆಲಸಕ್ಕೆ ಹೋಗತ್ತೇವರಿ. ಒಂದು ದಿನದ ಕೂಲಿ 100 ರೂ. ಕೊಡುತ್ತಾರೆ. ಅದು ಒಂದ ದಿನ ಕೂಲಿ ಇರತ್ತೈತೀ. ಒಂದ ದಿನ ಇರುದಿಲ್ಲ. ಹೀಗಾಗಿ ಜೀವನ ಬಾಳ ಕಠಿಣ ಆಗತ್ತೈತೀ. ನನ್ನ ಮಗನ ಕಾಲ ಕುಂಟ ಅದವರಿ. ಅವನಿಗೆ ಏನೂ ಕೆಲಸ ಸಿಗುದಿಲ್ಲ. ಹೀಗಾಗಿ ರೈತರ ಮನಿ ಬಿಟ್ಟಿ ಚಾಕರಿ ಮಾಡುದ ನಮಗ ಆದಾರ ಆಗೆತ್ತೀರಿ.

"ನಮಗ ಹೊಲ ಇಲ್ಲ. ಈ ಬಿಟ್ಟಿ ಚಾಕರಿ ಬಿಟ್ಟರ ನಮಗೆ ಹೊಲ್‌ದಾಗ ಹಾಯರೀ ಅಂತಾರೀ. ಬೇಲಿ ಹಾಕತ್ತೇವಿ ಅಂತಾರೀ. ಹೀಗಾಗೀ ಈ ಚಾಕರಿ ಕೆಲಸ ಮಾಡುವುದು ಮನಸ ಇಲ್ಲದಿದ್ದರೂ ಮಾಡಲೇಬೇಕು. ನನಗೆ ಇನ್ನೊಬ್ಬ ಮಗ ಅದಾನ. ಅವನ ವಯಸ್ಸು 18. ಅವನು ಕೂಲಿ ಹೋಗತ್ತಾನರೀ. ನಮಗೆ ಕೆಲಸ ಇಲ್ಲದಿದ್ದರ ನಮ್ಮ ಕುಟುಂಬದವರು ಉಪವಾಸ್ ಇರಬೇಕರಿ. ನಮಗೆ ಸರಕಾರದಿಂದ ಯಾವ ಸೌಲಭ್ಯವೂ ಇಲ್ಲ. ಹೆಣ್ಣು ಮಕ್ಕಳು ಸೈಹಿತ ಇಲ್ಲಿ ಬಿಟ್ಟಿ ಚಾಕರಿಯನ್ನು ಮಾಡತ್ತಾರ. ಬ್ಯಾರೆ ಕೆಲಸ ಮಾಡುವ ಹಂಗ ಇಲ್ಲ. ನಾವು ಅನಿವಾರ್ಯ ಸಂದರ್ಭದಲ್ಲಿ ಬಿಟ್ಟರೆ, ನಮ್ಮನ್ನು ಮನೆಗೆ ಕರಿವುದಕ್ಕೆ ಬರತ್ತಾರರೀ. ಬಹಳ ದಿನ ಈ ಚಾಕರಿ ಕೆಲಸ ಬಿಟ್ಟರ ಬೈಯತ್ತಾರರಿ. ಯಾಕಂದರೆ ನಾವು ಮಾಲಿಕರ ಹತ್ತಿರ ಅಡ್ವಾನ್ಸ ಕಾಳಕಡೀ ಕೊಡತ್ತಾರರೀ. ಅದಕ್ಕಾಗಿ ಸುಮ್ಮನೆ ಇರಬೇಕರಿ. ನಾವು ಚಾಕರಿ ಕೆಲಸ ಮಾಡುವದ್ದಕ್ಕೆ ಒಂದು ವರ್ಷಕ್ಕೆ ಒಂದು ಚೀಲ ಜೋಳ ಕೊಡತ್ತಾರ. ಗೋದಿ, ಸ್ವಲ್ಪ ಕಡಲೆ ಕಾಳು ಕೊಡುತ್ತಾರರಿ."

**2. ಹೆಂಗಸು – ವಯಸ್ಸು 35.**

"ನನ್ನನ್ನು ಸಂಪಗಾಂವಕ್ಕೆ ಗಂಡನ ಮಾಡಿ ಕೊಟ್ಟಿದ್ದರು. ನನ್ನ ಮದವಿಯಾಗಿ 20 ವರ್ಷವಾಯಿತು. ನನ್ನ ಗಂಡ ರುದ್ರಪ್ಪ ತೀರಿಕೊಂಡು ಐದು ವರ್ಷವಾಯಿತು. ನನಗೆ ಮೂರು ಜನ ಮಕ್ಕಳು. ಮೊದಲನೇ ಮಗ 18 ವರ್ಷ. ಇವನು ಕೂಲಿ ಕೆಲಸಕ್ಕೆ ಹೋಗತ್ತಾನರಿ. 2ನೇ ಮಗ, 17 ವರ್ಷ. ಇವನು 8ನೇ ತರಗತಿವರಿಗೆ ಕಲಿತು ಈಗ ಕೂಲಿ ಮಾಡುತ್ತಾವನರಿ. 3ನೇ ಮಗ 15 ವರ್ಷ. 6ನೇ ತರಗತಿ ಓದಿ ಈಗ ಆಡುಗಳನ್ನು ಕಾಯುತ್ತಾನೆ. ಬಡತನ ಬಾಳ ಇರುವ ಕಾರಣ ಮಕ್ಕಳನ್ನು ಶಾಲೆ ಕಲಿಸಲು ಆಗಲಿಲ್ಲ. ನಾನು ಬೆಳಿಗ್ಗೆ ಆರಕ್ಕೆ ಎದ್ದು ರೈತರ ಮನೆ ಹೋಗಿ ಅಂಗಳ ಬಾಗಿಲ ಕಸಾ ಹೊಡೆದು ನಂತರ ದನ ಕರಗಳ ಸೆಗಣಿ ಬಳಿದು ಬರಬೇಕಾದರೆ ಒಂಬತ್ತು ಘಂಟೆಗೆ ಬರುತ್ತೇವರಿ. ಅದಕ್ಕಾಗಿ ರೈತರು ನಮಗೆ ಒಂದು ಚೀಲ ಜೋಳ ಬಿಟ್ಟ ಬೇರೆ ಏನೂ ಕೊಡುದಿಲ್ಲ. ನಂತರ ನಾವು ಮನೆಗೆ ಬಂದು ಅಡಗಿ

ಮಾಡಿಕೊಂಡು ರೈತರ ಹೊಲಗಳಿಗೆ 10 ಘಂಟೆಗೆ ಕೂಲಿಗೆ ಹೋಗಿ ಆರು ಘಂಟೆಗಿ ವಾಪಸ ಬರುತ್ತೇವರಿ. ಅವರು ನಮಗೆ ಒಂದು ದಿನಕ್ಕೆ 100ರೂ. ಕೊಡುತ್ತಾರೆ. ನನ್ನ ಮೊದಲನೇ ಮಗ ಕಾಂಟ್ರಕ್ಟರ ಜೊತೆ ಲೈನ್‌ಮನ್ ಕೆಲಸಕ್ಕೆ ಹೋಗುತ್ತಾನೆ. ಒಂದು ದಿನಕ್ಕೆ 200ರೂ. ಕೂಲಿ. ಮುಂಜಾನೆ ಒಂಬತ್ತಕ್ಕೆ ಹೋಗಿ ರಾತ್ರಿ ಒಂಬತ್ತಕ್ಕೆ ಮನೆಗೆ ಬರುತ್ತಾನೆ. 2ನೇ ಮಗ ರೈತರ ಟಾಟಾ ಎ.ಸಿ. ಗಾಡಿ ಹೊಡಿಯುತ್ತಾನೆ. ಅವನಿಗೆ ಒಂದು ವಾರಕ್ಕೆ 500ರೂ. ಕೊಡುತ್ತಾರೆ. 3ನೇ ಮಗ ಮೂರು ಆಡುಗಳು ಅದಾವ ಅವುಗಳನ್ನು ಕಾಯುತ್ತಾನೆ. ನನ್ನ ಗಂಡನ ಮನೆಯಲ್ಲಿ ನನಗೆ ಯಾವುದೇ ಆಸ್ತಿ ಪಾಸ್ತಿ ಇಲ್ಲ. ಒಂದು ಜನತಾ ಮನೆ ಮಾತ್ರ ಅದ. ಅದು ನನ್ನ ಮಾವ ಮಾತ್ರ ಅಲ್ಲಿ ಇರುವದು. ಅವನು ಅಲ್ಲಿ ಮೈಲ ಕೂಲಿ ಕೆಲಸಕ್ಕೆ ಹೋಗುತ್ತಾರಿ. ಅವನ ಬಾಳೆಕ್ಕೆ ಅವನು. ನನ್ನ ಬಾಳೆಕ್ಕೆ ನಾನು. ಆದ್ದರಿಂದ ಆ ಊರಿಲ್ಲಿ ನನ್ನ ಮೂರು ಮಕ್ಕಳು ಕಟ್ಟಿಕೊಂಡು ಜೀವನ ಮಾಡಲಿಕ್ಕೆ ಆಗಲ್ಲ. ಆದ್ದರಿಂದ ನಾನು ನನ್ನ ತವರು ಮನೆಯಲ್ಲಿ ನನ್ನ ತಾಯಿ ಜೊತೆ ದುಡಿದುಕೊಂಡು ಜೀವನ ಸಾಗಿಸುತ್ತೇನೆ. ರೈತರ ಮನೆ ಸಗಣಿ ಬಳೆಯುದ್ದರಿಂದ ಏನೋ ಸ್ವಲ್ಪ ಕಾಳು ಕಡಿ ಹೊಟ್ಟಿಗೆ ಸಿಗತಾವರಿ. ಕೂಲಿ ಮಾಡಿದ ಹಣದಿಂದ ಸಂತೆ ಪ್ಯಾಟಿ ಆಗತೈತಿ. ಆದ್ದರಿಂದ ಈ ಕೆಲಸ ನಾನು ಮಾಡತ್ತೇನರಿ. ನನಗೆ ವಿಧವಾ ವೇತನ ಸರಕಾರದಿಂದ ಸಿಕ್ಕಿಲರಿ."

3. ಗಂಡಸು – ವಯಸ್ಸು 60.

"ನಾನು ಸಹಾ ಒಬ್ಬ ಬಿಟ್ಟೀ ಚಾಕರಿ ಮಾಡುತ್ತೇನೆ. ನಂಗ ಒಬ್ಬ ಮಗಾ ಅದಾನರೀ. ಅವನ ಹೆಸರ ನಾಗಪ್ಪ ಅಂತ. ನನ್ನ ಹೆಂಡತಿ, ಮಗಾ ಸಣ್ಣವ ಇದ್ದಾಗ ತೀರಿಕೊಂಡಳ. ಆಕಿ ಹೆಸರ ಗೌರಮ್ಮ ಅಂತರೀ. ಆಕಿ ಆರಾಮ ಇಲ್ಲದಿದ್ದಕ 25 ವರ್ಷವಾಯಿತು ತೀರಿಕೊಂಡ. ಆಕಿ ಇದ್ದಾಗೂ ನಾವು ನಾಲ್ಕು ಮನಿ ಸಗಣ ಒಗಿತ್ತಿದ್ದು ಆಕಿ ಸತ್ತ ಮ್ಯಾಲ ಈಗ ನಾವು ಎರಡು ಮನಿ ಸಗಣ ಒಗಿತೇವಿರಿ. ಈ ಸಗಣಿ ಕೆಲಸಕ್ಕೆ ನಾವು ಬೆಳಿಗ್ಗೆ ಆರು ಗಂಟೆಗೆ ಹೋಗಿ ತಿರಿಗಿ ಒಂಬತ್ತು ಗಂಟೆಗೆ ಮನೆಗೆ ಬಂದು ಅಡಿಗೆ ಮಾಡಿಕೊಂಡು ಊಟ ಮಾಡಿ ಬೇರೆ ಮಾಲಿಕರ ಕೂಲಿ ಕೆಲಸಕ್ಕೆ 10 ಗಂಟೆಗೆ ಹೋಗುತ್ತೇವೆ. ಒಂದು ದಿನಕ್ಕೆ ನಮಗೆ ಗಂಡು ಮಕ್ಕಳಿಗೆ 150 ರೂ., ಹೆಣ್ಣು ಮಕ್ಕಳಿಗೆ 100 ರೂ. ಕೂಲಿ ಕೊಡುತ್ತಾರೆ. ನಾವು ಈ ಕೂಲಿ ಕೆಲಸದಿಂದ ಸಂಜೆ ಆರಕ್ಕೆ ವಾಪಸ ಬರುತ್ತೇವೆ. ಇದು ಹಿಂಗ ನಮ್ಮ ಮನ್ಯಾಗ ಮೊದಲಿನಿಂದಲೂ ಬಂದ ಪದ್ಧತಿ. ನಮ್ಮ ಮುತ್ತಜ್ಜನ ಕಾಲದಿಂದಲೂ ಬಂದೇತ್ರಿ. ಈಗ ಅದನ ನಾವ ಬಿಡಬೇಕ ಅಂದ್ರೂ ನಮ್ಮನ್ನ ಅದು ಬಿಡುಲ್ಲಾ. ರೈತರ ಬೇಕ ಅಂದ್ರ ಸೆಗಣಿ ಒಗಿರಿ ಅಂತಾರಿ.

"ಈಗ ನಾನು ಎರಡು ಮನಿ ಸಗಣಾ ಒಗಿತ್ತೇನರಿ. ಇಬ್ಬರು ಅಣ್ಣತಮ್ಮರ ಮನಿ. ಒಬ್ಬರು ಮೂರು ದನಾ, ಒಬ್ಬರು ಎರಡು ದನಾ ಅದಾವ. ಒಬ್ಬೊಬ್ಬೊರದ ನಾಲ್ಕು ನಾಲ್ಕು ಎಕರೆ ಹೊಲಾ ಇದೆ. ನಮಗ ವರ್ಷಕ್ಕ ಒಂದ ದನಕ ಒಂದ ಚೀಲಾ ಜೋಳಾ ಕೊಡತ್ತಾರರೀ. ಅದರಾಗ ನಮ್ಮ ಬಾಳೆರೀ. ಮತ್ತ 10 ಸೇರನಷ್ಟು ಗೋದಿ ಕಡ್ಲೀನು ಕಣಕ ಒಕ್ಕಾಕ ಹೋದಾಗ ಕೊಡತ್ತಾರ. ಇವನ್ನು ಬಿಟ್ಟರ ಯಾವುದೇ ವಸ್ತು ಒಡುವೆಗಳನ್ನು ಕೊಡುವದಿಲ್ಲ. ಹಣ ಒಂದು ವೇಳೆ ಕೊಟ್ಟರೆ ಸಾಲದ ರೂಪದಲ್ಲಿ ಕೊಡುತ್ತಾರೆ. ಹೋದ ವರ್ಷ ಮಗನ ಮದವಿಗೆ 5000 ರೂ. ಸಾಲ ಅಂತ ಕೊಟ್ಟಾರಿ. ಅದನ ಮತ್ತ ವಾಪಾಸ ಕೊಡಬೇಕ.

ಇಲ್ಲಾ ದುಡದ ಮುಟ್ಟಸಬೇಕರೀ. ಬಡ್ಡೀ ಅದು ಏನೂ ತೊಗೋದಿಲ್ಲಾ. ಆದ್ರೂ ಅವರ ಹಣ ಕೊಡಲೇ ಬೇಕರಿ.

"ನಂಗು ಸರಿಯಾಗಿ ಕಿವಿ ಕೇಳುದಿಲ್ಲರಿ. ಬೆಳಗ್ಗೆ 6 ಘಂಟೆಗೆ ಎದ್ದು ಮುಖಾ ತೊಳೆದು ಸೀದಾ ಸಗಣಿ ಮನಿಗೆ ಹೋಗತೇವ. ಅಲ್ಲಿ ಸುಮಾರು ಒಂದು ತಾಸ ಕೆಲಸ ಮಾಡತ್ತೇವರೀ. ಸಗಣ ಬಳದ ಅಂಗಳ ಬಾಗಲ ಕಸ ಹೊಡದ ನೀರ ಹಾಕೀರ ನಮ್ಮ ಕೆಲಸ ಮುಗಿತ. ನಂತರ ಅವರ ಕೈಗೆ ನೀರ ಹನಿಸಿ ಚಹಾ, ಉಪ್ಪಿಟ ಕೊಡತಾರ. ಕೆಲವ ಸಲಾ ರಾತ್ರಿ ಅವರ ಮನಯಾಗಿನ ಉಳದದ್ದ ತಂಗಳ ಅಡಗಿ ಕೊಡತ್ತಾರ. ಮನಿಗೆ ಬಂದ ಅದನ ತಿಂದ ಕೆಲಸಕ ಹೋಗತಿದ್ದುರಿ. ನನ್ನ ಮಗನ ಹೆಂಡತಿ ಸಗಣೆಗೆ ಹೋಗುದಿಲ್ಲ. ನಂತರ ನಾನು ಸಗಣಿಂದ ಬಂದ ಎರಡು ಕುರಿ ಅದಾವರಿ  ಅವಕ ಮೇವ ತರಾಕ ಹೋಗುತ್ತೇನೆ."

**4.** ಹೆಂಗಸು – ವಯಸ್ಸು 45.

"ನನ್ನ ನನ್ನ ಗಂಡನ ಮನೆ ಬೈಲಹೊಂಗಲ ತಾಲೂಕ ಮರಕಟ್ಟಿ ಎಂದು ಹಳ್ಳಿ ಇರುತ್ತದೆ.  ನನ್ನ ಮದುವೆ ಆಗಿ 20 ವರ್ಷವಾಯಿತು. ನನ್ನ ಗಂಡನು ಬೇರೆಯವಳ ಜೊತೆಗೆ ಅನೈತಿಕ ಸಂಬಂಧ ಇಟ್ಟುಕೊಂಡಿದ್ದಾನೆ. ಹಾಗಾಗಿ ನನ್ನ ಗಂಡನ ಜೊತೆಗೆ ಅವಳು ಓಡಿ ಬಂದಳು. ನನಗೆ ಇಬ್ಬರು ಮಕ್ಕಳು ಆವಾಗ. ನನ್ನ ಮಕ್ಕಳ ವಯಸ್ಸು ಒಬ್ಬನಿಗೆ ಮೂರು ವರ್ಷ. ಮತ್ತೊಬ್ಬನಿಗೆ ಎರಡು ವರ್ಷವಿತ್ತು.  ಅವನು ನನ್ನ ಜೊತೆಗೆ ಜಗಳ ಮಾಡಿ ಹೊರಗೆ ಹಾಕಿದನು. ನನ್ನನ್ನು ಮತ್ತು ನನ್ನ ಮಕ್ಕಳನ್ನು ಸೇರಿಸಿ ಆವಾಗ ನಾನು ಎಲ್ಲಿ ಹೋಗಬೇಕರಿ. ತವರು ಮನೆಗೆ ಇಬ್ಬರು ಮಕ್ಕಳನ್ನು ಕರೆದುಕೊಂಡು ನನಗೆ ಆಗುವ ಕಷ್ಟ ಆಯಿತು. ನನ್ನ ಮಕ್ಕಳು ಸಣ್ಣವರು. ನಾನು ಹೊಲದ ಕೆಲಸಕ್ಕೆ ಹೋಗತ್ತೇನರಿ. ನನ್ನ ಮಕ್ಕಳಿಗೆ ನಾನು ಶಿಕ್ಷಣವನ್ನು ಕಲಿಸಲಿಕ್ಕೆಆಗಲಿಲ್ಲ.ಮಕ್ಕಳು ನನ್ನ ಮಾತನ್ನು ಕೇಳಲಿಲ್ಲ.ಆವಾಗ ಕೂಲಿ ಒಂದು ದಿನಕ್ಕೆ 50 ರೂ. ಇತ್ತು. ಅಂತಹ ಬಡತನದಲ್ಲಿ ನನ್ನ ಮಕ್ಕಳನ್ನು ಜೋಪಾನ ಮಾಡಿದೆನು. ಈಗ ನನ್ನ ಮಕ್ಕಳಿಗೆ ವಯಸ್ಸು 23 ಒಬ್ಬನಿಗೆ, ಮತ್ತೊಬ್ಬನಿಗೆ 21 ವರ್ಷ.  ನನ್ನ ಹೆಸರಿಗೆ ಪಡಿತರ ಚೀಟಿ ಇದೆ. ಸೊಲ್ಪ ಖಾಲಿ ಜಾಗೆ ಇದೆ. ಮನೆ ಇಲ್ಲ. ನನ್ನ ಎರಡು ಗಂಡು ಮಕ್ಕಳು, ನಾನು ನಮ್ಮ ಕುಟುಂಬ ನಾವು ಬೇರೆ ಬೇರೆ ಇದ್ದೇವಿ. ನಾನು ಬಿಟ್ಟಿ ಚಾಕರಿ ಮಾಡಲು ಹೋಗುತ್ತೇನ. ಕಳೆದ ಎಂಟು ವರ್ಷದಿಂದ ಮಾಲಿಕರ ಮನೆಯಲ್ಲಿ ಸೆಗಣಿ ಕೆಲಸಕ್ಕ ಹೋಗತ್ತೇನ. ಅವರ ಮನೇಲಿ ಎರಡು ಆಕಳು ಇದ್ದಾವೆ. ನಾನು ಸೆಗಣಿ ಹೋಗುವದರಿಂದ ಮಾಲಿಕರು ನಮಗೆ ವರ್ಷಕ್ಕೆ ಎರಡು ಚೀಲ ಜೋಳ, ಗೋದಿ, ಕಡ್ಲಿ ಕೊಡುತ್ತಾರೆ. ಕೂಲಿ ಮಾಡಿದ್ದು ಸಂತೆ ಮಾಡಿ ಜೀವನ ಹೊಟ್ಟೆಗೆ ಕಾಳ ಬೇಕಲರಿ. ಅದಕ್ಕೆ ನಾನು ಈ ಬಿಟ್ಟಿ ಚಾಕರಿ ಕೆಲಸಕ್ಕೆ ಹೋಗುವದರಿ. ಬೆಳಿಗ್ಗೆ ಅರು ಗಂಟೆಗೆ ಹೋಗಿ ಮೊದಲು ಅಂಗಳ ಬಾಗಿಲು ಹೊಡಿತ್ತೇವರಿ. ನಂತರ ದನಗಳ ಸೆಗಣಿ ತೆಗೆದು ಬರುವಾಗ ಸೌಕಾರತಿ ರೊಟ್ಟಿ ಅದು ಏನಾದರೂ ಇದ್ದರೆ ಕೊಡುತ್ತಾರೆ. ಚಹಾ ಅದು ಮಾಡಿದರ ಕೊಡತ್ತಾರ. ಇಲ್ಲದಿದ್ದರ ಇಲ್ಲ. ಈ ಎಲ್ಲ ಕೆಲಸ ಮುಗಿಸಿಕೊಂಡು ಬರಬೇಕಾದರ

8–9 ಗಂಟೆ ಆಗತ್ತೈತಿ. ಮನೆಗೆ ಬಂದು ಅಡಿಗೆ ಮಾಡಿಕೊಂಡು ಊಟ ಮಾಡಿಕೊಡು 10 ಗಂಟೆಗೆ ಕೂಲಿ ಕೆಲಸಕ್ಕೆ ಹೋಗತ್ತೇವೆ. ನಂತರ ಸಾಯಂಕಾಲ ಆರು ಗಂಟೆಗೆ ಬರುತ್ತೇವೆ. ಅದಕ್ಕೆ ನಮಗೆ ದಿನಕ್ಕೆ 150 ರೂ. ಪಗಾರ ಕೊಡುತ್ತಾರೆ. ನನ್ನ ಮಕ್ಕಳಿಗೆ ಮದುವೆ ವಯಸ್ಸು ಆಗಿದೆ. ನನಗೆ ಮದುವೆ ಮಾಡಲು ತಾಕತ್ತು ಇಲ್ಲ. ಹಾಗಾಗಿ ನಾನು ಮನಸ್ಸಿನಲ್ಲಿ ಕೊರುಗುತ್ತಿದ್ದೇನೆ. ನನ್ನ ಮಕ್ಕಳಲ್ಲಿ ಒಬ್ಬ ಜೀತಕ್ಕೆ ಇದ್ದಾನೆ, ಮತ್ತೊಬ್ಬ ಕೂಲಿ ಕೆಲಸಕ್ಕೆ ಹೋಗುತ್ತಾನೆ. ಈಗ ಅವರಿಗೆ ಅನುಭವ ಆಗುತ್ತಿದೆ. ಏನು ಮಾಡುವುದು. ಸರ್ಕಾರಿ ಸೌಲಭ್ಯದ ಬಗ್ಗೆ ನಮ್ಮಗೆ ಏನೂ ಗೊತ್ತಿಲ್ಲ. ನನಗೆ ಯಾರೂ ಏನೂ ಕೊಡಿಸಿಲ್ಲ. ನಾನು ಶಾಲೆ ಕಲಿತ್ತಿಲ್ಲ. ಪಂಚಾಯಿತಿ ಚುನಾವಣೆಯಲ್ಲಿ ಗಂಡಮಕ್ಕಳಿಗೆ ಚಹಾ, ಸೆರೆ ಕುಡಿಸಿ ಓಟ ಕೇಳುತ್ತಾರೆ. ಚುನಾವಣೆಯಲ್ಲಿ ಗೆದ್ದ ಬಂದ ಮೇಲೆ ನಮ್ಮನ್ನು ಮರು ಮಾತನಾಡಿಸುವುದಿಲ್ಲ. ನನಗೆ ಜೀವನ ನಡೆಸುವದು ಕಷ್ಟಕರವಾಗಿದೆ. ಇದು ಇಷ್ಟರಿ ನಮ್ಮ ಮನೆತನದ ಸಂಗತಿ."

5. ಗಂಡಸು – ವಯಸ್ಸು 45

"ನನ್ನ ಹೆಂಡತಿ ವಯಸ್ಸು 40 ಇರುತ್ತದೆ. ನನಗೆ ಮೂರು ಜನ ಮಕ್ಕಳು ಇರುತ್ತಾರೆ. ಇಬ್ಬರು ಗಂಡು ಮಕ್ಕಳು, ಒಬ್ಬಳು ಹೆಣ್ಣು ಮಗಳು ಇರುತ್ತಾರೆ. 1. ವಯಸ್ಸ 23, ಶಾಲೆ 9ನೇ ತರಗತಿ ಓದಿದ್ದಾನ. 2. ವಯಸ್ಸು 20, ಶಾಲೆ 8ನೇ ತರಗತಿ ವರಿಗ ಓದಿದ್ದಾನ. 3. ವಯಸ್ಸು 18. ಈಕೆನೂ 9ನೇ ತರಗತೀವರಿಗೆ ಹೋಗಿದಾರರಿ. ಇದರಲ್ಲಿ ಒಬ್ಬ ಆಡು ಕಾಯುತ್ತಾನೆ, ಮತ್ತೊಬ್ಬ ಕೂಲಿ ಕೆಲಸಕ್ಕ ಹೋಗತ್ತಾನರಿ. ನಮ್ಮವ ಐದು ಆಡುಗಳು ಇರುತ್ತಾವರಿ. ಜಮೀನ ಇಲ್ಲ. ಒಟ್ಟು ನಮ್ಮ ಮನೆಯಲ್ಲಿ ಐದು ಜನ ಇದ್ದವರಿ.

"ಚಾಕರಿ ಕೆಲಸಕ್ಕರಿ ಮೊದಲು ಬೆಳಿಗ್ಗೆ ಆರು ಗಂಟೆಗೆ ಎದ್ದು ದಿನನಿತ್ಯದ ಕೆಲಸವನ್ನು ಮುಗಿಸಿಕೊಂಡು ಏಳು ಗಂಟೆಗೆ ರೈತರ ಮನೆಯ ಅಂಗಳ ಹೊಡೆದು ದನಗಳ ಸೆಗಣಿ ತೆಗೆದು ಬರಬೇಕಾದರೆ ಒಂಬತ್ತು ಗಂಟೆ ಆಗುತ್ತದೆ. ನಾವು ಎರಡು ಮನೆ ಕೆಲಸ ಮಾಡುತ್ತೇವೆ. ಒಂದು ನಾನು, ಇನ್ನೊಂದು ನನ್ನ ಹೆಂಡತಿ ಚಾಕರಿಕೆಲಸ ಮಾಡುತ್ತೇವೆ. ನನ್ನ ಹೆಂಡತಿ ಒಬ್ಬರ ಮನೆಯ ಸೆಗಣಿಗೆ ನನ್ನ ಹೆಂಡತಿ ಹೋಗುತ್ತಾಳೆ. ಅವರ ಮನೆಯಲ್ಲಿ ಎರಡು ದನಗಳು ಇವೆ. ಅದಕ್ಕೆ ಅವರು ಒಂದು ಚೀಲ ಜೋಳ, ಸ್ವಲ್ಪ ಗೋದಿ, ಕಡ್ಲಿಯನ್ನು ಕೊಡುತ್ತಾರೆ. ಮೊದಲು ಅಂಗಳ ಬಾಗಿಲ ಕಸ ತೆಗೆದು ಸಾರಿಸಿ ಬರುತ್ತಾಳೆ. ನಾವು ಒಂದು ದಿನ ಸೆಗಣಿ ಬಿಟ್ಟರೆ ಮಾಲಿಕರು ಮನೆಗೆ ಕರೆಯಲು ಬರುತ್ತಾರೆ. ನಾನು ಹೋಗುವ ಮಾಲಿಕರಿಗೆ ದನಗಳು ಒಂದು ಆಕಳು ಇರುತ್ತದೆ. ಅದಕ್ಕೆ ಒಂದು ಚೀಲ ಜೋಳ ಕೊಡುತ್ತಾರೆ. ಕಡ್ಲಿ, ಗೋದಿ ಕೊಡುತ್ತಾರೆ. ಆದರೆ ನಾವು ಸೆಗಣಿ ಮನೆ ಬಿಟ್ಟು ಬದುಕಬಹುದು. ಆದರೆ ಕಾಳ ಕಡಿ ಸಿಗುವುದಿಲ್ಲ. ಕೂಲಿ ಕೆಲಸ ಮಾಡಿದ್ದು ಸಂತೆ ಪೇಟೆ ಮಾಡುತ್ತೇವೆ. ಚಾಕರಿ ಮಾಡುವದರಿಂದ ಕಾಳ ಬರುತ್ತದೆ. ಸೆಗಣಿ ಕೆಲಸ ಮುಗಿಸಿಕೊಂಡು ಒಂಬತ್ತು ಗಂಟೆ ಮನೆಗೆ ಬಂದು ಅಡಿಗೆ ಮಾಡಿಕೊಂಡು ಕೂಲಿಗೆ ಹೋಗುತ್ತೇವೆ. 9.30ರಿಂದ 3.30ಕ್ಕೆ ಹೋಗಿ ಬಂದರೆ 100 ರೂಪಾಯಿ. ಆರು ಗಂಟೆವರಿಗೆ ಹೋದರೆ 150 ರೂ. ಕೊಡುತ್ತಾರೆ. ನಾವು ಹೋಗಲಿಲ್ಲ ಅಂದರೆ ಮನೆಗೆ ಕರೆಯುವದ್ದಕ್ಕೆ ಬರುತ್ತಾರೆ.

ನಮಗೆ ಚಾಕರಿ ಕೆಲಸ ಬಿಟ್ಟರೆ ಬದುಕಲಿಕ್ಕೆ ಆಗುವುದಿಲ್ಲ. ಕಾರಣ ನಾವು ನಿಮಗೆ ಸಪೋರ್ಟ ಮಾಡುತ್ತೇವೆ. ಮಹಾನ ಗುಂಪನ್ನು ಕಟ್ಟುತ್ತೇವೆ. ನಾವು ನಮ್ಮ ಕುಟುಂಬವನ್ನು ಸರಿಪಡಿಸಿಕೊಳ್ಳಬೇಕು. ನಮ್ಮ ಊರಿಗೆ ಮೊದಲು ಒಂದು ದಿನ ನಮ್ಮವರಿಗೆ ಹೆಣ್ಣು ಕೊಡುವುದು, ತೆಗೆದುಕೊಳ್ಳುವುದು ಚಾಕರಿ ಕೆಲಸ ನೋಡಿ ಆಗುವುದಿಲ್ಲ. ಈಗ ನನಗ ಲಕ್ವಾ ಆಗಿದ್ದು ಇನ್ನು ಮಗಳ ಮದವಿ, ಮಗನ ಮದವಿ ಇಲ್ಲಾ. ಹೆಂಡತಿ ಒಬ್ಬಾಕಿ ದುಡಿಯಾಕಿ ಏನ ಮುಂದಿನ ಜೀವನ ಅಂತ ನೆನಸಿಕೊಂಡರ ಭಯಾ ಆಗತೈತಿ."

6. ಗಂಡಸು – ವಯಸ್ಸು 42. ಹೆಂಡತಿ ವಯಸ್ಸು 30. ಮಗಳು 11 ವರ್ಷ, 5ನೇ ತರಗತಿ ಓದುತ್ತಿದ್ದಾಳೆ. ಮಗ ಎರಡು ವರ್ಷ.

"ನಾನು ಸಹ ಬಾಳ ಬಡವನಿದ್ದೇನೆ. ನಾನು ಒಂದು ಮನಿ ಸಗಣಾ ಬಳಿತ್ತಿದ್ದೇನೆ. ನಮ್ಮ ಯಜಮಾನರದ್ದು ಒಂದು ಆಕಳ, ಒಂದು ಎಮ್ಮೆ, ಎರಡು ಕರುಗಳು ಅದಾವರೀ. ಒಂದೂವರೇ ಚೀಲ ಜೋಳ ಕೊಡತ್ತಾರ. ಕಡ್ಲಿ, ತೊಗರಿ, ಗೋದಿ ಕೊಡತ್ತಾರರೀ.

"ಬೆಳಗ್ಗೆ ಆರು ಘಂಟೆಗೆ ಎದ್ದು ಸಗಣಿ ಒಗದ ಅವರ ಅಂಗಳ ಬಾಗಲ ಕಸ ಹೊಡದ ನಂತರ ಕೈಗೆ ನೀರ ಹನಸತ್ತಾರ. ಕೈ ತೊಳಕೊಂಡ ಚಾ ಕೊಡತ್ತಾರ. ಒಮ್ಮೊಮ್ಮೆ ಉಪ್ಪಿಟ್ಟ ಅದು ಕೊಡತಾರ. ಕೆಲ ಸಲ ಅವರ ಮನ್ಯಾಗ ತಂಗಳ ಅಡಗಿ ಅದು ಬಾಳ ಉಳದಿರ ಅದನ್ನು ಕೊಡತ್ತಾರ. ಅದನ ತಗೊಂಡ ಏಳು ಘಂಟೆ ವಾಪಾಸು ಮನಿಗೆ ಬಂದ ಅದನ ತಿಂದ, 10 ಸ್ವಂತ ಆಡಗಳು ಅದಾವ, ಐದು ಪಾಲಿನು ಆಡ ಅದಾವರಿ. ಅವನ ಹೊಡಕೊಂಡ ಮೇಯಸಾಕ ಹೋಗತ್ತೇನ. ಆಮ್ಯಾಲ ಬರೋದ ಸಂಜಿಕನರೀ. ನನ್ನ ಹೆಂಡತಿ ಮಗಾ ಸಣ್ಣವ ಇದ್ದದಕ ಸಗಣಿ ಮನಿಗೆ ಹೋಗುದಿಲ್ಲ. ಕೂಲಿನೂ ಹೋಗುದಿಲ್ಲ. ಹೀಗಾಗಿ ಉಣ್ಣಾಕ ಜೋಳಾ ಆಗತ್ತಾವ. ಆದ್ರ ಹರಕತಿಗೆ ದುಡ್ಡ ನಮಗ ಇಲ್ಲ. ಕೆಲವ ಸಲಾ ಜೋಳ ಮಾರತ್ತೇವ. ಬಾಳ ಖರ್ಚ ಬಂದರ ಆಡ ಮಾರೀನ ಜೀವನ ಮಾಡಬೇಕರೀ. ಹಿಂಗಾಗಿ ಸಗಣ ಬಳಿಯುದು ಬಿಡಬೇಕ ಅಂತ ಅನಸಿದ್ರೂ ಬಿಡಾಕ ಹಾದಿ ಇಲ್ಲ. ಒಂದ ದಿನಾ ಅದು ಬಿಟ್ಟರ ಕರಿಯಾಕ ಬರುತ್ತಾರ. ಮನಿಯೊಳಗ ಏನಾದ್ರೂ ಚಲೋ ಕೆಟ್ಟ ಇದ್ರ ಅಷ್ಟ ಬಿಡುದ ಇಲ್ಲ ಅಂದ್ರ ಹೋಗಲೇಬೇಕ. ಬಿಟ್ಟರ ಕರಿಯಾಕ ಮನಿಗೆ ಬರತ್ತಾರ. ಮತ್ತ ಅವರ ಮನಿಯ್ಯಾಗ ಏನಾದ್ರ ಆದ್ರ ನಾವ ಅಲ್ಲೇ ಇರಬೇಕ. ಕಟ್ಟಿಗೆ ಒಡೀಬೇಕು. ಮೇವ ತರಬೇಕು. ಹಿತ್ತಲ ಹಸ ಮಾಡಬೇಕು. ಹಲಗಿ ಬಾರಸಾಕು ನಾವ ಹೋಗಬೇಕು. ಅವರ ಕಾರ್ಯಕ್ರಮ ಮುಗದ ಮ್ಯಾಲ ಊಟಕ ಕೊಡತ್ತಾರ. ಉಳದ್ದದ ಅಡಗಿ ಕೊಡತ್ತಾರ. ಚಲೋ ಕಾರ್ಯಕ್ರಮ ಇದ್ದರ ಅರವಿ ತರತ್ತಾರ. ಸತ್ತದ್ದ ಅದು ಇದ್ದರ ಗುರತಾ ಅಂತ ಹಳೀ ಪಾತ್ರೆಗಳನ್ನಕೊಡತ್ತಾರ.ಇಷ್ಟಯಲ್ಲ ರೈತರ ಬೇಕಂದ್ರ ಮಾಡಲೇಬೇಕರಿ."

**7. ಗಂಡಸು – ವಯಸ್ಸು 46. ಹೆಂಡತಿ – ವಯಸ್ಸು 36.**

"ನಮ್ಮ ಮನ್ಯಾಗ ಬಾಳ ಬಡತನ ಐತಿರಿ. ಮೊದಲು ನಾನು 10 ವರ್ಷದಿಂದ ಊರಗ ದುಡಿದಿದ್ದೇನು. ಮೊದಲು ನಾನು ಎರಡು ಮನೆ ಸಗಣಿ ಒಗೆತ್ತಿನಿ. ನನ್ನ ಹೆಂಡತೀನು ಎರಡು ಮನಿ

ಸೆಗಣಿ ಬಳಿತ್ತಾಳರಿ. ನಾನು ಜೀತದ ಮನಿಯ್ಯಾಗ ಒಗಿತ್ತೇನರಿ. ಆಕೆ ಬ್ಯಾರೆದಾವರ ಸೆಗಣಿ ಬಳೆದ ನಂತರ ಕೆಲಸಕ್ಕ ಹೋಗತ್ತಾಳರಿ. ಮಗಳ ಮದುವಿಗಾಗಿ ಸಾಲ ಮಾಡಿದರಿ. ಅದನ್ನು ತೀರಸಾಕ ಅಂತ ಈಗ ಊರ ಬಿಟ್ಟ ಸಂಪಗಾಂವದಾಗ ಜೀತಕ್ಕ ಹೋಗಿದ್ದೇನರಿ. 36,000 ರೂ.ಒಂದು ವರ್ಷಕ್ಕೆ ಕೊಡತ್ತಾರ. ಈಗ ಇಲ್ಲಿ ಇದ್ದದ ಮನಿ ಸಾಲದ ಸಲುವಾಗಿ ಬ್ಯಾರೆಯವರಿಗೆ ಬಾಡಿಗೆ ಕೊಟ್ಟಿದ್ದೆನು. ಸಾಲ ಮಾಡಿ ಮಗಳ ಮದುವೆ ದೂರದ ಸಂಬಂಧ ಹುಡಕಿ ಹಿರಿಯ ಒಬ್ಬಳೇ ಮಗಳ ಅಂತ ಅವಳನ್ನು ನಾನು ಜೀತ ಇದ್ದ ಒಳ್ಳೆ ಮನೆಯೊಳಗೆ ಮದುವೆ ಮಾಡಿಕೊಟ್ಟೆನಿರೀ. ಆದ್ರ ಆಕಿ ಬಾಳೇನೂ ಈಗ ಚಲೋ ಇಲ್ಲರಿ. ಅವನು ಸರಿ ಇಲ್ಲ. ಅರಪೆದ್ದಿ ಅದಾನರಿ. ಮನ್ಯಾಗ ಯಾವದೂ ಕೆಲಸ ಮಾಡಲ್ಲ. ಹೊರಗ ದುಡಿಯಾಕ್ಕ ಹೋಗಲ್ಲ. ಅವನ ಈಗ ಆಕಿನ ಸಾಕೊಲ್ಲ ಅಂತ ಮಗಳು ಈಗ ಇರುಲ್ಲ ಎಂದು ಅದುವ ಅದಾಳರಿ. ಸ್ವಲ್ಪ ಕಾಲ ಹರಿದಿದ್ರ ಈಗ ಚಲೊ ಐತಿ.ಅದರಾಗ ಮಗಳ ಬಾಳ ಹಂಗ ಆತರಿ. ಏನ ಮಾಡುವದ ಅಂತ ಗೊತ್ತ ಆಗದ. ದಿನಾ ದುಡಕೊಂತ ಹೋಗತ್ತೇವರಿ."

**8. ಗಂಡಸು – ವಯಸ್ಸು 30,ಹೆಂಡತಿ ವಯಸ್ಸು 21, ತಂದೆ ವಯಸ್ಸು 60.**

"ನಮ್ಮದು ತೀರಾ ಬಡತನದ ಕುಟುಂಬ. ನಾ ಸಣ್ಣವ ಇದ್ದಾಗನ ನನ್ನ ತಾಯಿ ತೀರಿಕೊಂಡಳುರೀ. ಆವಾಗಿಂದ ನಮ್ಮ ಅಪ್ಪ ಇದನ ಮಾಡಕೊಂತನ ನನ್ನ ಸಾಕಿ ದೊಡ್ಡವಂನ ಮಾಡಿದಾನರೀ. ಈಗ ನನ್ನ ಮದವಿ ಆಗಿ ಒಂದ ವರ್ಷ ಆತರಿ. ನಾನು ಒಬ್ಬರ ಸಗಣಿ ಒಗಿತ್ತೇನರಿ. ದಿನಾ ಎದ್ದ, ಮುಖಾ ಅಷ್ಟ ತೊಳಕೊಂಡ, ಸಿದಾ ಸಗಣಿ ಮನಿಗೆ ಹೋಗಿ ಅಲ್ಲಿ ಸಗಣಾ ಬಳದ ಕಸಾ ಹೊಡದ, ನಂತರ ಅವರು ಕೈಗೆ ನೀರ ಹನಸತ್ತಾರ. ನಂತರ ಅವರ ಚಾ ಉಪ್ಪಿಟ್ಟ ಕೊಡತ್ತಾರ. ಅದನ ತಿಂದ ನಂತರ ಅವರ ಮನ್ಯಾಗ ತನ್ನಿಅಡಗಿ ಉಳದಿರ ಕೊಡತ್ತಾರ. ಅದನ ತಂದ ತಿಂದ ಯಾವದರ ಕೂಲಿ ಹೋಗತ್ತೇವ. ಕೂಲಿ ಗಂಡಸರಿಗೆ 150 ಹೆಂಗಸರಿಗೆ 100 ರೂ. ಕೊಡತ್ತಾರ.

"ನಮ್ಮ ಸೌಕಾರ ಮನ್ಯಾಗ ಏನಾರ ಕಾರ್ಯ ಇದ್ದರ, ನಾವ ಅವರ ಎಲ್ಲಾ ಚಾಕರಿ ಮಾಡಬೇಕರೀ. ಹಿತ್ತಲಾ ಸ್ವಚ್ಚ ಮಾಡಬೇಕ. ಕಟ್ಟಿಗಿ ಒಡಿಬೇಕು. ಓಣೀಯಾಗಿನ ಮಂದಿ ಕರಕೊಂಡ ಹೋಗಿ ಅವರಿಗೆ ಖರ್ಚ ಮಾಡಿಸಿ ಸೆರೆ ಕುಡಸಿ ಕರಕೊಂಡ ಹೋಗಿ ಕಟ್ಟಿಗಿ ಒಡದ ಬರಬೇಕರೀ.ಅವರ ದನಕರಗಳಿಗೆ ನೀರ, ಹುಲ್ಲ ವ್ಯವಸ್ಥೆ ಮಾಡಬೇಕರಿ. ಅಲ್ಲದ ಅವರ ಮದವ್ಯಾಗ ಜನಾ ಉಟ ಮಾಡಿದ ಎಲಿ ತಗಿಬೇಕ. ಮುಸರಿ ಹೊಡದ ಹಸಾ ಮಾಡಬೇಕರಿ. ಕೆಲಸಲ ಅವರಿಗೆ ಚಪ್ಪಲ ತಂದ ಕೊಡಬೇಕ. ಇಷ್ಟ ಎಲ್ಲ ಮಾಡಿದಾಗ ಸಂಜೀಕ ಕರದ ಊಟಕ ಕೊಡತ್ತಾರರೀ. ಮತ್ತ ಕುಡಿಯಾಕ ಸೆರೆ ಕೊಡತ್ತಾರ. ಉಳದ ಅಡಗಿ ಕರದ ನೀಡತ್ತಾರರೀ. ಒಂದ ಡ್ರಸ ಅರವಿ ತರತ್ತಾರ. ಇಲ್ಲ ಒಂದ ಕೊಡ / ಬಿಂದಗಿ ಗುರತಾ ಅಂತ ಕೊಡತ್ತಾರ. ಮತ್ತ ಅವರ ಮನ್ಯಾಗ ಸತ್ತಾಗು ಇಷ್ಟ ಚಾಕರಿ ಮಾಡಬೇಕರಿ. ಅವರ ಚಲೋ ಕೆಟ್ಟಕ್ಕೆಲ್ಲಾ ನಾವ ಹಲಗಿ ಬಾರಸಬೇಕರಿ. ನಮಗ ಬಾರಸಾಕ ಬರದ್ದಿದ್ದರೂ ಬೇರೆಯವರಿಗೆ ಆಳ ಕೊಟ್ಟ ಕಳಸಬೇಕರಿ. ಅವರಿಗೆ ಸಾರಾಯಿ ಕುಡಿಯಾಕ ಅಂತ ಸ್ವಲ್ಪ ಹಣ ಕೊಡತ್ತಾರ. ಅವರ ದನಕರ ಸತ್ತರ ಅವನ ತಂದ

ನಾವ ಒಗೀಬೇಕು. ಮೊದಲ ಅದನ್ನ ಕೊಯಿದು, ಚರ್ಮಾ ತಗದ, ಈಗ ಅದನ ಮಾಡುದಿಲ್ಲ. ಅವರವರ ಹೊಲದಾಗ ಚಲ್ಲಿ ಬರುತ್ತೇವರೀ. ನಮಗ ಒಂದು ಚೀಲ ಜೋಳ ಉಣ್ಣಾಕ, ಒಂದು ಬುಟ್ಟಿ ಕಡ್ಲೀ, ಒಂದು ಬುಟ್ಟಿ ಗೋದಿ ಮತ್ತ ಹುರಳಿ ಕೊಡತ್ತಾರ. ಇಷ್ಟೆಲ್ಲ ಮಾಡಿ ಒಂದ್ಯಾರಡ ದಿನಾ ಬಿಟ್ರ ಮನಿಮಠಾ ಕರಯಾಕ ಬರತ್ತಾರ. ಸೊಕ್ಕ ಬಾಳ ಬಂದೇತಿ. ಈಗ ಅದಕ ಬರುಲ್ಲ ತಗೋ ಅಂತಾರಿ. ಅದಕ್ಕ ನಮ್ಮ ಮಂದಿನೂ ಸಪೋಟ ಮಾಡತ್ತಾರರಿ. ನಮಗೂ ಹೊಲ ಅದು ಇಲ್ಲ. ಇದ್ದೀರ ನಾವು ಯಾವುದಕ್ಕೂ ಅಂಜತ್ತಿರಕ್ಕಿಲ್ಲ. ಇಲ್ಲ ಹೊಲದಾಗ ಹಾಯರೀ ಅಂತ ಅಂಜಕಿ ಹಾಕತಾರರೀ. ಹಿಂಗಾಗಿ ನಮ್ಮ ತಾತನ ಕಾಲದಿಂದಲೂ ಇದನ ಮಾಡಕೊಂತ ಬಂದಾರ. ಅನಿವಾರ್ಯವಾಗಿ ನಾವು ಇದನ ಮಾಡಕೊಂತ ಹೋಗತೇವ. ಮನಿಗೋಳ ಅಷ್ಟ ಬಿಟ್ಟರ ಸರಕಾರಿ ಸೌಲಭ್ಯಗಳು ನಮಗ ಮರೀಚಿಕೆಯಾಗಿವೆ.

**9. ಗಂಡಸು – ವಯಸ್ಸು 54.**

"ನನ್ನ ಸಾಲಿ ಆವಾಗ 7ನೇ ತರಗತಿ ಒದಿದೇನರಿ. ನನ್ನ ತಂದೆಗೆ ನಾ ಒಬ್ಬ ಗಂಡ ಮಗ. ನನ್ನ ಅಕ್ಕ ತಂಗೇರ ಎರಡು ಜನರು. ಅವರದು ಮದವಿ ಆಗೇತಿ. ನಾನು ಒಂದ ಮನಿ ಸಗಣಾ ಒಗಿತೇನರೀ. ಮಾಲಿಕರ ಹೆಸರ ಯಂಕಪ್ಪಾ ಫಕೀರಪ್ಪ ಕುರಬರ. ಕಳೆದ ಆರು ವರ್ಷದಿಂದ ಅವರ ಮನಿಯ ಸೆಗಣಿಯನ್ನ ತಗಿತ್ತೇವ. ಸಗಣಿ ತಗೆದನ್ನು ಬಿಟ್ಟರೇ ಬೇರೆ ಕೆಲಸವನ್ನು ಏನೂ ಮಾಡುದಿಲ್ಲಾ. ಬೆಳಗ್ಗೆ ಆರರಿಂದ ಎಂಟು ಘಂಟೆಯ ವರೆಗೂ ಸೆಗಣಿ ತೆಗೆದು ಬರುವಾಗ ತಂಗಳ ಅಡಗಿ ಕೊಡತ್ತಾರ. ರೊಟ್ಟಿ, ಅನ್ನ, ಕಾಯಿಪಲ್ಲೆ. ಮನಿಗೆ ಬಂದು ಊಟ ಮಾಡುತ್ತೇವೆ. ನಮ್ಮ ಮಾಲಿಕರು ನಾಲ್ಕು ಎಮ್ಮೆಗಳು ಇರುತ್ತವೆ. ಅದಕ್ಕೆ ಅವರು ಎರಡು ಚೀಲ ಜೋಳ, ಅರ್ಧ ಚೀಲ ಗೋದಿ, ಎರಡು ಸಿವಡಬಳ್ಳೊಳ್ಳಿ ಕೊಡುತ್ತಾರೆ. ನನಗೆ ಎರಡು ಗಂಡು ಮಕ್ಕಳು, ಒಂದು ಹೆಣ್ಣು ಮಗಳು ಇರುತ್ತಾರೆ. ನನ್ನ ಮಕ್ಕಳ ಶಿಕ್ಷಣ – ಮೊದಲನೇ ಮಗನ ಹೆಸರು ತುಕಾರಾಮ 5ನೇ ತರಗತಿ ಕಲಿತ್ತಿದ್ದಾನೆ, 2ನೇ ಮಗಳು ಕಮಲವ್ವ ಇವಳು ಎಸ್.ಎಸ್.ಎಲ್.ಸಿ. ಕಲಿತಿರುತ್ತಾಳೆ. ಇವಳದು ಮದವಿ ಆಗಿದೆ. ಅವಳಿಗೆ ಒಂದು ಮಗು ಆಗಿದೆ. 3ನೇ ಮಗಾ ಅರ್ಜುನ. ಇವನು ಇನ್ನೂ ಚಿಕ್ಕವನು. 3ನೇ ಕಲಿತ್ತಿರುತ್ತಾನೆ. ಇವನದು ಮದವಿ ಅಗಿರುದಿಲ್ಲ. ಇವನು ಡ್ರೈವಿಂಗ ಮಾಡುತ್ತಿದ್ದಾನೆ. ಈ ವರ್ಷ ಅವನ ಮದವಿ ಮಾಡಬೇಕ ಅಂತಾ ಅನಕೊಡಿದ್ದೇನೆ. ಆಗುತ್ತೂ, ಇಲ್ಲೂ ನೋಡಬೇಕರಿ. ಚಾಕರಿ ಮಾಡಬೇಕ ಅಂತ ಏನ ಇಲ್ಲ. ಆದ್ರ ಮಾಡದ್ದಿದ್ದರ ನಮ್ಮ ಬಾಳೆ ನಡಸುದ ಕಠಿಣ ಐತಿರಿ. ಅದಕ ಮಾಡತ್ತೇರಿ.

**10. ಗಂಡಸು – ವಯಸ್ಸು 36, ಹೆಂಡತಿ ವಯಸ್ಸು 30**

"ನನಗ ಮೂರು ಮಕ್ಕಳು. ಮೊದಲನೇ ಮಗಾ ಆರು ವರ್ಷ, 1ನೇ ತರಗತಿ. 2ನೆದಾವ ಪರಸುರಾಮನಾಲ್ಕು ವರ್ಷ, ಬಾಲವಾಡಿ. 3ನೇ ಮಗಳುಎರಡು ವರ್ಷ. ನಾನು ಒಂದ ಮನಿ ಸಗಣಾ ಬಳಿತ್ತೇನ. ಒಂದ ಅರ್ಧ ತಾಸ ಕೆಲಸರೀ. ಎದ್ದ ಮಖಾ ತೊಳಕೊಂಡ ಹೋಗಿ ಸಗಣ ಒಗದ ಕಸಾ ಹೊಡದ ನಂತರ ಅವರ ಚಾ, ಉಪ್ಪಿಟ ಕೊಡತ್ತಾರ. ಅದನ ತಿಂದ ತಂಗಳದ ಎರಡು ರೊಟ್ಟೀ ಕೊಡತಾರ.

ಇಸಕೊಂಡ ಮನಿಗೆ ಬಂದ ಹತ್ತಿದ ಕೂಲಿಗೆ ಹೋಗತ್ತೇವ. ಒಂದೊಂದ ದಿನ ಇರತ್ತಾವ. ಒಂದೊಂದ ದಿನ ಇರುದಿಲ್ಲ. ದಿನಕೂಲಿ 150 ರೂ. ಕೊಡತ್ತಾರ. ನನ್ನ ಹೆಂಡತಿಗೆ ಮೂರು ಸಿಜೇರಿಯನ ಆಗಿ ಹೆರಗಿ ಆಗಿದಾವ. ಅದಕ್ಕಾಗಿ ಆಕಿ ಸಗಣಿ ಮನಿಗೆ ಹೋಗುದಿಲ್ಲ.

"ಮತ್ತ ನಮಗೂ ಸಾಲ ಆಗೆತ್ತೀರಿ. ಸಾಲ ಕೊಟ್ಟ ಮೇಲೆ ಹೆಂಗ ಬಿಡಕ್ಕಾಗತತ್ತರಿ.ನಾವ ಸಗಣಾ ಒಗಿಬೇಕ. ಹರಕತ್ತಿಗೆ ಸಾಲ, ಕಾಳ, ಕಡಿ ಕೊಡತ್ತಾರ. ಅದನ್ನ ಬಿಟ್ಟ ವರ್ಷಕ್ಕ ಒಂದಚೀಲ ಜೋಳ, ಮತ್ತ ಸ್ವಲ್ಪ ಗೋದಿ, ಕಡ್ಲಿ, ಹುಳ್ಳಿ ಕೊಡತ್ತಾರ. ಅವ ಉಟಕ್ಕ ಆಗತ್ತಾವ. ನಾನು ನನ್ನ ಅಣ್ಣ ಕೂಡಿ ಅದೆವ. ನಮ್ಮ ಅಣ್ಣ ಆಡ ಮೇಯಸಾಕ ಹೋಗತ್ತಾನ. ನನ್ನ ಮಗಗ ಸರಿಯಾಗಿ ಮಾತಾಡಕ ಬರೂಲ್ಲಾ. ಅದನ್ನಈಗ ಸಣ್ಣ ವಯಸ್ಸಿನ್ಯಾಗ ತೋರಸಬೇಕ ಅಂತ ಅದಕ್ಕ ನಮ್ಮ ಕಡೆ ರೊಕ್ಕ ಇಲ್ಲದಿದ್ದಕ ಸುಮ್ಮನ ಅದೆವರಿ.ಪಂಚಾಯತಿಯಿಂದ ಮನಿ ಬಿಟ್ಟರ ಬ್ಯಾರೆ ಏನ ಸೌಲಭ್ಯಗಳು ಇಲ್ಲ. ನಮ್ಮ ಜನರಾಗ ಹೊಂದಾಣಿಕೆ ಇಲ್ಲ. ಸರಿಯಾದ ಹಿರೇರು ಇಲ್ಲ.ಹಿಂಗಾಗಿ ನಮಗ ಏನ ಆದ್ರೂ ಯಾರೂ ಕೇಳುವ ಪರಿಸ್ಥಿತಿ ಇಲ್ಲ. ಅದಕ ಹಿಂದಿಂದ ಬಂದದ್ದ ಬಿಡುವಾಂಗಿಲ್ಲ. ಮನಸ್ಸ ಇಲ್ಲದಿರೂ ಮಾಡಕೊಂತ ಹೋಗತೇವರಿ. ಉಳದಂಗ ಎಲ್ಲರೂ ಮಾಡೂವಂಗ ಚಾಕರಿ ಮಾಡತ್ತೇವರಿ. ನಂಗ ಹಲಗಿ ಬಾರಸಾಕ ಬರುಲ್ಲ. ಅದಕ್ಕ ಹಂತಾದ ಏನಾರ ಬಂದರ ಆಳ ಕೊಟ್ಟ ಕಳಸತ್ತೇವ."

**11. ಗಂಡಸು – ವಯಸ್ಸು 38, ಹೆಂಡತಿ ವಯಸ್ಸು 29**

"ನನಗೆ ಇಬ್ಬರು ಮಕ್ಕಳು ಇದ್ದಾರೆ. ಮೊದಲನೇ ಮಗಳ ವಯಸ್ಸು 17. ಇವಳು ಶಾಲೆಗೆ ಹೋಗುತ್ತಾಳೆ. 10ನೇ ತರಗತಿ. ಎರಡನೇ ಮಗಳ ವಯಸ್ಸು 15. ಇವಳು 9ನೇ ತರಗತಿ ಓದುತಿದ್ದಾಳೆ. ನಮ್ಮ ಬಗ್ಗೆ ಹೇಳಬೇಕೆಂದರೆ ನಾವು ಗಂಡ ಹೆಂಡತಿ ಇಬ್ಬರೂ ಕೂಲಿ ಕೆಲಸಕ್ಕೆ ಹೋಗುತ್ತೇವೆ. ರೈತರ ಮನೆಯ ಸೆಗಣಿ ಬಳಿಯುತ್ತೇವರಿ. ಮೊದಲು ಎದ್ದು ಚಹಾ ಕುಡಿದು ರೈತರ ಮನೆಗೆ ಸೆಗಣಿ ಬಳಿಯುವದಕ್ಕೆ ಹೋಗುತ್ತೇವೆ. ನಾನು ಒಂದು ಮನೆಯ ಸೆಗಣಿ ಬಳಿಯುತ್ತೇನೆ. ನನ್ನ ಹೆಂಡತಿ ಇನ್ನೊಂದು ಮನೆಗೆ ಬಳಿಯುತ್ತಾಳೆರಿ. ಈ ಕೆಲಸಮಾಡಿಕೊಡು ಬಂದು ಕೂಲಿ ಕೆಲಸಕ್ಕೆ ಹೋಗತೇವರಿ. ಕೂಲಿಯನ್ನು ಒಂದು ದಿನಕ್ಕೆ 100 ರೂ.ಕೊಡುತ್ತಾರೆ.ಅದು ಒಮ್ಮೆ ಕೂಲಿ ಸಿಗತ್ತೈತ್ತಿ. ಒಮ್ಮೆ ಸಿಗುವುದ್ದಿಲ್ಲ. ಹೀಗಾಗಿ ನಾವು ಬಡತನದ್ದಾಗ ಅದೇವರಿ. ರೈತರು ನಾವು ಚಾಕರಿ ಕೆಲಸ ಮಾಡುವದ್ದಕ್ಕೆ ಒಂದು ಚೀಲ ಜೋಳ ಕೊಡುತ್ತಾರೆ. ಅದು ವರ್ಷಕ್ಕೆ ಮಾತ್ರ. ಹಬ್ಬ ಹರಿದಿನಗಳಲ್ಲಿ ರೈತರ ಕಟ್ಟಿಗೆ ವಡಿಯಲಿಕ್ಕೆ ಹೋಗಬೇಕರಿ. ಸತ್ತಾಗ ಹಲಿಗಿ ಬಾರಿಸಬೇಕು ಮತ್ತು ಸೆಗಣಿ ಒಗಿಯಬೇಕು. ದಾನದ ಬುಟ್ಟಿ ಹಿಡಿದುಕೊಂಡು ಹೋಗಬೇಕು.ಅವರ ದನಕರಗಳಿಗೆ ನೀರು ಮೇವು ಎಲ್ಲವನ್ನು ನಾವೇ ಮಾಡಬೇಕು. ಕಡಿಕ ಅವರು ದಿನ ಮಾಡುವಾಗ ಒಂದು ಗುರತಾ ಏನಾದರೂ ಕೊಡತ್ತಾರ. ಮತ್ತು ಊಟಕ ಕೊಡತ್ತಾರ.

"ನಮಗೆ ಹಬ್ಬ ಹರಿದಿನ ಇದ್ದಾಗ ಸ್ವಲ್ಪ ಅಡುಗೆ ಕೊಡುತ್ತಾರೆರಿ. ಹೀಗಾಗಿ ನಾವು ಈ ಚಾಕರಿ ಕೆಲಸ ಮಾಡಿಕೊಂತ ಬಂದೇವರಿ. ಮೊದಲು ನಮ್ಮ ಅಪ್ಪ ಚಾಕರಿ ಕೆಲಸ ಮಾಡಿಕೊಂತ ಬಂದಿದ್ದಾನರಿ.

ಈಗ ಅನಿವಾರ್ಯವಾಗಿ ನಾವು ಈ ಕೆಲಸ ಮಾಡಲೇಬೇಕು. ಇದನ್ನ ಬಿಟ್ಟರ ಬ್ಯಾರೆ ಏನೂ ಇಲ್ಲರಿ. ಹೀಗಾಗಿ ಅದಕ್ಕ ಈ ಕೆಲಸ ಮಾಡಲೇಬೆಕು. ಬಿಡಬೇಕಾದರೆ ನಮಗೆ ಬಡತನ ಐತರಿ. ಹಿಂಗ ಐತರಿ ನಮ್ಮ ಜೀವನ. ಅದಕ್ಕಾಗಿ ನಾವು ಬಿಟ್ಟಿ ಚಾಕರಿ ಮಾಡಲೇ ಬೇಕಾಗೈತಿರಿ. ಸುಮಾರು 30 ವರ್ಷ ಜೀತವನ್ನು ಮಾಡಿಕೊಂಡು ಬಂದಿದ್ದೇನರಿ. ಈಗ ಅದರಿಂದ ಸ್ವಲ್ಪ ಹೊರಗೆ ಬಂದಿದ್ದೇನೆ. ಹೀಗಾಗಿ ನಮ್ಮ ಜೀವನ ಅಂದ ನರಕ ಇದ್ದಾಂಗ ಐತ್ರಿ, ಅಷ್ಟರಿ.

**12. ಗಂಡಸು – ವಯಸ್ಸು 28. ಓದು 3ನೇ ಕ್ಲಾಸ್**

"ಆಕಳ ಫಾರ್ಮನಲ್ಲಿ ಕೆಲಸ –9ಆಕಳು. ನಾನು ಒಬ್ಬನೇ ಕೆಲಸ ಮಾಡಬೇಕು. ಬೆಳಿಗ್ಗೆ ಏಳುವರೆಯಿಂದ 12ರ ವರೆಗೆ, ಸಂಜೆ 4ರಿಂದ 7.30 ವರೆಗೆ ಕೆಲಸಕ್ಕೆ ಹೋಗುತ್ತೇನೆ.

ನಾವು ಮೂರು ಮಕ್ಕಳು. ದೊಡ್ಡವನು ಕಮತ ಮಾಡುತ್ತಾನೆ. ವರ್ಷಕ್ಕೆ 33 ಸಾವಿರ ರೂ. ಊಟ, ಬಟ್ಟೆ ಕೊಡುತ್ತಾರೆ. ಎರಡನೆಯವನು ಸೆಂಟ್ರಿಂಗ ಕೆಲಸ. ತಂದೆ ತಾಯಿ ತೀರಿಕೊಂಡಿದ್ದಾರೆ. ಇವರು ಕೂಲಿ ಹೋಗುತ್ತಿದ್ದರು. ನಮ್ಮ ತಂದೆ ಬ್ಯಾಂಕಿನ ಸಾಲ ಮಾಡಿ ಆಡು ತಂದರು. ಆಗ ನಾನು ಆಡು ಕಾಯಲು ಹೋಗುತ್ತಿದ್ದೆ. ನಮ್ಮ ತಾಯಿ ಚಿಕ್ಕವಳಿದ್ದಾಗ ತೀರಿಕೊಂಡಳು. ನಮ್ಮ ಅಣ್ಣನಿಗೆ ತಿಳಿವಳಿಕೆ ಇತ್ತು. ಆಗ ಒಬ್ಬರ ಮನೆಯಲ್ಲಿ ದನ ಕಾಯುವ ಕೆಲಸಕ್ಕೆ ನಮ್ಮ ತಂದೆ ಕೆಲಸಕ್ಕೆ ಇಟ್ಟರು. 10 ವರ್ಷ ವರಿಗೆ ನಮ್ಮ ಅಣ್ಣ ಅವರ ಮನೆಯಲ್ಲಿ ಜೀತ ಮಾಡಿದರು. ಊಟ ಕೊಟ್ಟು ವರ್ಷಕ್ಕೆ 3000 ರೂ. ಕೊಡುತ್ತಿದ್ದರು. ನಂತರ ನಮ್ಮ ಅಣ್ಣ ದೊಡ್ಡವನಾದ ಮೇಲೆ ಉಳಿಮೆ ಕೆಲಸಕ್ಕೆ ತೊಡಗಿಸಿದ್ದರು. ಕೊನೆಗೆ ಜೀತ ಬಿಡುವ ವರ್ಷ 8500 ರೂ. ಕೊಟ್ಟರು. ನಂತರ ಈಗ ಒಂದು ವರ್ಷದಿಂದ ಇನ್ನೊಬ್ಬರ ಮನೆಯಲ್ಲಿ ಕಮತ ಮಾಡುತ್ತಿದ್ದಾನೆ. ವರ್ಷಕ್ಕೆ 33,000 ರೂ. ಮತ್ತು ಊಟ ಕೊಡುತ್ತಾರೆ. ಮುಂಜಾನೆ 7.30 ಘಂಟೆಗೆ ಹೋಗಿ ರಾತ್ರಿ 8.30ಕ್ಕೆ ಬರುತ್ತಾರೆ. ಉಳಿಮೆ ಕೆಲಸ ಮಾಡುತ್ತಾರೆ. ಹೀಗೆ ನನ್ನ ಅಣ್ಣ ಕಮತದ ಮನೆಯಲ್ಲಿ ಕೆಲಸ ಮಾಡುತ್ತಾನೆ. ಮುಂಗಡ ಹಣ ಇಲ್ಲ. ಯುಗಾದಿಯಿಂದ ಯುಗಾದಿಗೆ ಕರಾರು ಇದೆ. ಹಾಗೇ ನಾನು ಈಗ ಒಬ್ಬ ಗೌಡ್ರ ಮನೆಯಲ್ಲಿ ಆಕಳ ಫಾರ್ಮನಲ್ಲಿ ಕೆಲಸ ಮಾಡುತ್ತಿದ್ದೇನೆ.

"30 ಸಾವಿರ ರೂಪಾಯಿ ವರ್ಷಕ್ಕೆ ಕೊಡುತ್ತಾರೆ. ಒಂದು ಚೀಲ ಜೋಳ ಕೊಡುತ್ತಾರೆ. ಎರಡು ಊಟ, ಎರಡು ನಾಷ್ಟ ಕೊಡುತ್ತಾರೆ. ಮಧ್ಯಾಹ್ನ ಎರಡು ಘಂಟೆಗೆ ಮತ್ತು ರಾತ್ರಿ 8.30ಯಿಂದ ಒಂಬತ್ತು ಘಂಟೆಗೆ ಊಟ ಕೊಡುತ್ತಾರೆ. ನಾಷ್ಟ ಮುಂಜಾನೆ ಒಂಬತ್ತಕ್ಕೆ ಮತ್ತು ಸಂಜೆ ನಾಲ್ಕಕ್ಕೆ ಕೊಡುತ್ತಾರೆ. 35 ಸಾವಿರ ರೂ.ಸಾಲ ಮಾಲಿಕರಲ್ಲಿ ಮಾಡಿದ್ದೇನೆ. ಸಾಲದ ಹಣವನ್ನು ದುಡಿದ ಜೀತದ ಪಗಾರನಲ್ಲಿ ವಜಾ ಮಾಡು ಅಂದರೆ ಮಾಡುತ್ತಾರೆ. ಇಲ್ಲ ಅಂದರೆ ಮಾಡುವದಿಲ್ಲ. ಆಕಳ ಶೆಡಿನಲ್ಲಿ ಬೆಳಿಗ್ಗೆ ನನ್ನ ಹೆಂಡತಿ ಶೆಡಿಗೆ ಬಂದಿರುತ್ತಾಳೆ. ಅವರು ಅಂಗಳ ಕಸ ಹಿಡಿಯುವ ಕೆಲಸ ಮಾಡುತ್ತಾರೆ. ನಾನು ಇಲ್ಲದ ವೇಳೆಯಲ್ಲಿ ಶಗಣಿ ಕಸ ಮಾಡುತ್ತಾರೆ. ಅವರಿಗೆ ವರ್ಷಕ್ಕೆರಡು ಚೀಲ ಜೋಳ ಕೊಡುತ್ತಾರೆ. ಹೀಗೆ ನಾನು ನನ್ನ

ಹೆಂಡತಿ ಕೆಲಸ ಮಾಡುತ್ತೇವೆ. ಕೆಲಸ ಮಾಡುವ ಹೊತ್ತಿನಲ್ಲಿ ನಾನು ಕೆಲಸಕ್ಕೆ ಹೋಗದ ದಿನವನ್ನು ಉಳಿದಿನ ಎಂದು ಲೆಕ್ಕ ಮಾಡುತ್ತಾರೆ."

**13. ಗಂಡಸು**

"ಎರಡು ಮಕ್ಕಳು. ಬೆಳಿಗ್ಗೆ ಶಗಣಿ ಕಸ ಮಾಡಬೇಕು. ನಮ್ಮ ತಂದೆ ಮತ್ತು ನನ್ನ ಹೆಂಡತಿ ಶಗಣಿ ಕಸ ಮಾಡುತ್ತಾರೆ. ನಾನು ಸಹ ಮಾಡುತ್ತೇನೆ. ದನದ ಮೇಲೆ ಕೂಲಿ ಕೊಡುತ್ತಾರೆ. ಒಂದು ಇದ್ದರೆ ಒಂದು ಚೀಲ ಜೋಳ, ಎರಡು ದನ ಇದ್ದರೆ ಎರಡು ಚೀಲ ಜೋಳ ಕೊಡುತ್ತಾರೆ. ಬೆಳಿಗ್ಗೆ 6.30ರಿಂದ ಏಳು ಘಂಟೆ ಹೋಗುತ್ತೇವೆ. ಒಬ್ಬ ಮಾಲಿಕನ ಮನೆಯಲ್ಲಿ ಒಂದು ಘಂಟೆ ಕೆಲಸ ಮಾಡುತ್ತೇವೆ. ಈಗ ಶಗಣಿ ಕಸ ಮಾಡಿ ಬಂದು ಬೇರೆಯವರ ಕೂಲಿ ಹೋಗುತ್ತೇವೆ. ಸಾಮಾನ್ಯವಾಗಿ ಕೂಲಿ ಹೆಣ್ಣು ಮಕ್ಕಳಿಗೆ 100 ರೂ., ಗಂಡು ಮಕ್ಕಳಿಗೆ 150 ರೂ. ಕೊಡುತ್ತಾರೆ. ಗುತ್ತಿಗೆ ಮಾಡಿದರೆ 150ರಿಂದ 200 ಸಿಗುತ್ತದೆ. ಶಗಣಿ ಕಸ ಮಾಡಿ ಬಂದು ನಂತರ ಒಂದರಿಂದ 1.30 ಗಂಟೆ ಬಿಟ್ಟು ಹೋದರೆ ರೊಟ್ಟಿ ಕೊಡುತ್ತಾರೆ. ನಾಲ್ಕು ಮನೆಯಿಂದ ಎಂಟು ರೊಟ್ಟಿ ಮತ್ತು ಪಲ್ಯ ಕೊಡುತ್ತಾರೆ ಅಥವಾ ನಾವು ಅವರ ಮನೆಗೆ ಹೋಗಿ ತೆಗೆದುಕೊಂಡು ಬರಬೇಕು. ಈ ಶೆಗಣಿ ಕಸ ಮಾಡುವ ಕೆಲಸ ನಮ್ಮ ಅಜ್ಜ ಮುತ್ತಜ್ಜರಿಂದ ಬೆಳೆದು ಬಂದ ಕೆಲಸ.

"ನಮಗೆ ಹೆಣ್ಣು ಕೊಡುವಾಗ ಹೆಣ್ಣು ಕೊಡುವ ಬೀಗರು 'ನಿಮಗೆ ಒಕ್ಕಲು ಎಷ್ಟು ಇವೆ?' ಎಂದು ಕೇಳುತ್ತಾರೆ. ಹೆಚ್ಚು ಒಕ್ಕಲು ಇದ್ದರೆ ಖುಷಿಯಿಂದ ಹೆಣ್ಣು ಕೊಡುತ್ತಾರೆ. ಇನ್ನು ಕೆಲ ಊರಿನ ಬೀಗರು ಸಗಣಿ ಕಸ ಮಾಡುವವರು ಎಂದರೆ ಹೆಣ್ಣು ಕೊಡದೆ ಹೋಗುತ್ತಾರೆ. ಇನ್ನು ಕೆಲವರು 'ನಿಮಗೆ ನಮ್ಮ ಮಕ್ಕಳನ್ನು ಮದುವೆ ಮಾಡಿಕೊಟ್ಟರೆ ಶಗಣಿ ಕೆಲಸಕ್ಕೆ ಕಳಿಸಿ ಕೊಡುವಿರಿ' ಎಂದು ಹೆಣ್ಣು ಕೊಡುವದಿಲ್ಲ.

"ಈ ನಾಲ್ಕು ಜನ ಮಾಲಿಕರ ಮನೆಯ ಶಗಣಿ ಕಸ ನಮ್ಮ ಪೂರ್ವಜರ ಕಾಲದಿಂದ ಮಾಡಿಕೊಂಡು ಬಂದಿದ್ದೇವೆ. ಈ ಕೆಲಸ ನಮ್ಮ ಹೊಟ್ಟೆ ಪಾಡಿಗಾಗಿ ಬಹಳ ಅವಶ್ಯವಿದೆ. ನಾಳೆ ನಾವು ಬೇರೆ ಆದರೆ ನನ್ನ ತಮ್ಮನಿಗೆ ಎರಡು ಒಕ್ಕಲು, ನನಗೆ ಎರಡು ಒಕ್ಕಲು ಬರುತ್ತವೆ. ಆದರೆ ಈ ಮಾಹಿತಿ ನೀಡುವಾಗ ನನ್ನ ಹೊಟ್ಟೆ ಪಾಲಿನ ಕೆಲಸ ನಿಂತು ಹೋದೀತು. ರೈತರು ನಮಗೆ ತೊಂದರೆ ಕೊಟ್ಟಾರು ಎಂಬ ಭಯ ನನಗಿದೆ. ಯಾಕೆಂದರೆ ನಾವು ಎಲ್ಲದಕ್ಕೂ ನಮ್ಮ ಮಾಲಿಕರನ್ನೇ ನಂಬಿಕೊಂಡಿದ್ದೇವೆ. ನಿಮಗೆ ಮಾಹಿತಿ ನೀಡಿದರೆ ನಮ್ಮ ಮಾಲಿಕರಿಗೆ ತೊಂದರೆ ಕೊಡುತ್ತಾರೆ ಎಂಬ ಭಯ ನನಗೆ ಇದೆ. ಅದಕ್ಕೆ ನಮಗೆ ತೊಂದರೆ ಆಗದಂಗ ಮಾಡಿರಿ."

**14. ಗಂಡಸು – ವಯಸ್ಸು 33.**

"ನನ್ನ ಹೆಂಡತಿ ವಯಸ್ಸು 28. ಮಕ್ಕಳು ಇಬ್ಬರು. ನನ್ನ ತಾಯಿ, ನಾವು ಮೂರು ಜನ ಅಣ್ಣ ತಮ್ಮಂದಿರು. ಅಣ್ಣನ ವಯಸ್ಸು 26. ನನ್ನ ತಮ್ಮನ ವಯಸ್ಸು 18. ನನ್ನ ಅಣ್ಣ ಕಮತಕ್ಕೆ ಹೋಗುತ್ತಾರೆ.

"ಅಣ್ಣನಿಗೆ ವರ್ಷಕ್ಕೆ ಊಟ, ಬಟ್ಟೆ ಮತ್ತು 33 ಸಾವಿರ. ತಮ್ಮ ಸೆಂಟ್ರಿಂಗ್ ಕೆಲಸ ಮಾಡಿ ನಮ್ಮ ಅತ್ತೆ ಊರಿನಲ್ಲಿ ಇದ್ದಾರೆ. ನಾನು ಬೆಳಿಗ್ಗೆ ಆರುವರೆಯಿಂದ ಏಳು ಗಂಟೆಗೆ ಮಾಲಿಕರ ಮನೆಗೆ ಹೋಗುತ್ತೇನೆ. ಕಳೆದ ಎರಡು ವರ್ಷದಿಂದ ಇದ್ದೇನೆ. ನಾನು ಕಮತಕ್ಕೆ ಸುರು ಮಾಡಿದ್ದಾಗ 10 ವರ್ಷ ನನ್ನ ವಯಸ್ಸು. ಗೌಡರು ವರ್ಷಕ್ಕೆ ಒಂದು ಸಾವಿರ ರೂಪಾಯಿ ಕೊಡುತ್ತಿದ್ದರು. ಅವರ ಮನೆಯಲ್ಲಿ ಏಳು ವರ್ಷ ಕಮತ ಮಾಡಿದೆ. ನಮ್ಮ ತಾಯಿಗೆ ಆರಾಮ ಇಲ್ಲದ ಇದ್ದ ಕಾರಣ ದುಡ್ಡಿಗಾಗಿ ನಮ್ಮ ತಂದೆ ತಾಯಿ ಒಬ್ಬ ಮಾಲಿಕರ ಮನೆಯಲ್ಲಿ ಜೀತಕ್ಕೆಇಟ್ಟರು. ನಂತರ ಇನ್ನೊಬ್ಬರ ಮನೆಯಲ್ಲಿ ಎರಡು ವರ್ಷ 8500 ವರ್ಷಕ್ಕೆ ಮತ್ತು ಮುಂಗಡ ಹಣ ಎರಡು ವರ್ಷಕ್ಕೆ 17000 ಸಾವಿರ ದುಡ್ಡು ಪಡೆದು ಮದುವೆ ಮಾಡಿಕೊಂಡೆನು. ನಂತರ ಈಗಿರುವ ಮನೆಗೆ ಬಂದು ಜೀತ ಉಳಿದೆ. ಅವರ ಹತ್ತಿರ 33 ಸಾವಿರ ಮುಂಗಡ ಹಣ ಪಡೆದೆ. ಈಗ 15000 ಸಾವಿರ ಮುಂಗಡ ಉಳಿದಿದೆ. ನಾವು ಕೆಲಸಕ್ಕೆ ಹೋಗಲು ತಪ್ಪಿಸಿದರೆ ಅದನ್ನು ಉಳಿದಿನ ಎಂದು ಹಿಡಿಯುತ್ತಾರೆ. ಆಗಾಗ ಹಣ ಬೇಕಾದರೆ ಸ್ವಲ್ಪ ಸ್ವಲ್ಪ ಕೊಡುತ್ತಾರೆ. ನಂತರ ಸಾಲಕ್ಕೆ ಲೆಕ್ಕ ಹಾಕುತ್ತಾರೆ. ಈಗ ನನ್ನ ಹೆಂಡತಿ ಕೂಲಿಗೆ ಹೋಗುತ್ತಾರೆ. ನನ್ನ ಮಕ್ಕಳನ್ನು ನನ್ನ ತಂದೆ ನೋಡಿಕೊಳ್ಳುತ್ತಾರೆ.

"ನನಗೆ ಒಂದು ಒಕ್ಕಲು ಇದೆ. ಈ ಒಕ್ಕಲ ಮನೆಯ ಚಾಕರಿ ದಿನಾಲು ನನ್ನ ಹೆಂಡತಿ ಮತ್ತು ನನ್ನ ತಂದೆ ಇಬ್ಬರು ಹೋಗುತ್ತಾರೆ. ನನ್ನ ಒಕ್ಕಲ ಮನೆಯವರು ಒಂದು ಚೀಲ ಜೋಳ ಕೊಡುತ್ತಾರೆ ಒಂದು ವರ್ಷಕ್ಕೆ. ಹೀಗೆ ನನ್ನ ಜೀತ ಮತ್ತು ಬಿಟ್ಟಿ ಚಾಕರಿ ಕೆಲಸ ನಡೆದಿದೆ."

**15. ಗಂಡಸು – ವಯಸ್ಸು 45.**

"ನನ್ನ ಹೆಂಡತಿ ವಯಸ್ಸು 35. ಮಕ್ಕಳು ಇಬ್ಬರು. ದೊಡ್ಡವನು ಕಿತ್ತೂರಿನಲ್ಲಿ ಕೆಲಸಕ್ಕೆ ಹೋಗುತ್ತಾನೆ. ಎರಡನೆಯವನು ಊರಿನಲ್ಲಿ ಇರುತ್ತಾನೆ. ಅಲ್ಲಿ ಕೂಲಿ ಹೋಗುತ್ತಾನೆ. ನನ್ನ ತಂದೆ ತಾಯಿ ತೀರಿಕೊಂಡಿದ್ದಾರೆ. ಒಬ್ಬರ ಮನೆಯಲ್ಲಿ ಕೆಲಸಕ್ಕೆ ಸೇರಿಕೊಂಡೆ. ನಾನು 5ನೇ ತರಗತಿ ಶಾಲೆ ಕಲಿತ್ತಿದ್ದೇನೆ. ಕೆಲಸಕ್ಕೆ ಸೇರಿಕೊಂಡಾಗ 15 ವರ್ಷ. ವಾರಕ್ಕೆ 50 ಕೊಡುತ್ತಿದ್ದರು. ಇದು ನನ್ನ ಮದುವೆ ತನಕ ವಾರದ ಪಗಾರಿನಂತೆ ಕೆಲಸ ಮಾಡಿದೆ. ನಂತರ ಮದುವೆಗಾಗಿ 20 ಸಾವಿರ ರೂ. ಮುಂಗಡ ಪಡೆದೆ. ಆಗ ನನ್ನ ವಯಸ್ಸು 20. ಒಂದು ವರ್ಷಕ್ಕೆ ಐದು ಸಾವಿರ ರೂ.ದಂತೆ ಕರಾರು ಆಯಿತು. ನಾಲ್ಕು ವರ್ಷದ ಮುಂಗಡ 20 ಸಾವಿರ ರೂ. ಪಡೆದೆ.

"ಈಗ ಸದ್ಯ ಒಬ್ಬರ ಮನೆಯಲ್ಲಿ ಕಮತಕ್ಕೆ ಇದ್ದೇನೆ. ವರ್ಷಕ್ಕೆ 34 ಸಾವಿರ ರುಪಾಯಿ, ಎರಡು ಚೀಲ ಜೋಳ. ಅವರಿಗೆ ಐದು ಸಾವಿರ ಸಾಲ ಕೊಡುವುದು ಇದೆ. ಬೆಳಿಗ್ಗೆ ಆರು ಗಂಟೆಯಿಂದ ರಾತ್ರಿ ಎಂಟರ ವರಿಗೆ ಕೆಲಸ. ರಾತ್ರಿ ನೀರು ಬಿಡುವುದಕ್ಕೆ ಹೋಗುತ್ತೇನೆ. ಸುಗ್ಗಿ ವೇಳೆಯಲ್ಲಿಕೆಲಸಕ್ಕೆ ಹೋಗುತ್ತಾರೆ. ನನ್ನ ಹೆಂಡತಿ ಕೂಲಿ ಹೊಗುತ್ತಾಳೆ. ದಿನಕ್ಕೆ 100 ರೂಪಾಯಿ ಕೊಡುತ್ತಾರೆ.

"ನಾನು ಯಾರ ಮನೆಯ ಶಗಣಿ ಕಸ ಮಾಡುವದಿಲ್ಲ. ನಮ್ಮ ಒಕ್ಕಲು ರೈತರ ಮನೆಯಲ್ಲಿ ಮದುವೆ ಮುಂಜಿ ಇದ್ದರೆ ಕಟ್ಟಿಗೆ ಒಡೆಯುವುದು, ಶಗಣಿ ಕಸ ಮಾಡುವುದು ಮಾಡುತ್ತೇವೆ. ಹೀಗೆ ನನ್ನ ಜೀತದಅನುಭವ."

**16. ಹೆಂಗಸು – ವಯಸ್ಸು 51.**

"ನನಗೆ ಮೂರು ಜನ ಮಕ್ಕಳು. ಇಬ್ಬರು ಹೆಣ್ಣು ಮಕ್ಕಳು. ಇಬ್ಬರಿದು ಮದುವೆ ಆಗಿ ಗಂಡನ ಮನೆಗೆ ಹೋಗಿದ್ದಾರೆ. ಈಗ ಮಗ ಇದ್ದಾನೆ. 9ನೇ ತರಗತಿ ಓದಿ ಬಿಟ್ಟಿದ್ದಾನೆ. ನನ್ನ ಮಾವ, ನನ್ನ ಅತ್ತೆ, ನನ್ನ ಗಂಡನಮ್ಮ ಮುಖ್ಯ ಉದ್ಯೋಗ ಕೂಲಿ. ಒಂದು ದಿನಕ್ಕೆ ಗಂಡ ಮಕ್ಕಳಿಗೆ 150 ರೂಪಾಯಿ ಹೆಣ್ಣ ಮಕ್ಕಳಿಗೆ 100 ರೂ. ಕೂಲಿ ಇದೆ. ನಮಗೆ ಭೂಮಿ ಇಲ್ಲ. ನನ್ನ ಮಗನು ಕೂಲಿ ಕೆಲಸಕ್ಕೆ ಹೋಗುತ್ತಾನೆ.

"ನಮಗೆ ಮೂರು ಮಾಲಿಕರ ಒಕ್ಕಲು ಇದೆ. ನಾವು ಈಗ ರೈತರ ಶಗಣಿ ಕಸ ಮಾಡುವುದಿಲ್ಲ.ನನ್ನ ಅತ್ತೆ ಮತ್ತು ಮಾವ ತಮ್ಮಪ್ಪ ಎಂಬ ಮಾಲಿಕರ ಮನೆ ಶಗಣಿ ಕಸ ಮಾಡಿದ್ದರು. ನನ್ನನ್ನು ಸೊಸೆ ಆಗಿ ಇಂಗಳಗಿ ಗ್ರಾಮದಿಂದ ಮಾಡಿಕೊಂಡು ಬರುವಾಗ ನನ್ನ ಶಗಣಿ ಕಸ ಮಾಡಲು ಕಳಿಸುವುದಿಲ್ಲ ಎಂದು ನಮ್ಮ ತಂದೆ ತಾಯಿಗೆ ಕರಾರು ಮಾಡಿ ಮದುವೆ ಮಾಡಿಕೊಂಡು ಬಂದಿದ್ದಾರೆ. ಅದಕ್ಕಾಗಿ ನಾನು ಶಗಣಿ ಕಸ ಮಾಡುವುದ್ದಕ್ಕೆ ಹೋಗಿಲ್ಲ. ಆದರೆ ನನ್ನ ಅತ್ತೆ ಮಾವ ಈ ಕೆಲಸ ಮಾಡುತ್ತಿದ್ದರು. ಅವರು ತೀರಿದ ಮೇಲೆ ನಾನು ಈ ಚಾಕರಿ ಕೆಲಸ ಮಾಡಿದ್ದೇನೆ. ಈಗ ನಾನು ಗ್ರಾ.ಪಂ. ಮೆಂಬರ ಇದ್ದೇನೆ. ಗ್ರಾಮ ಪಂಚಾಯತಿಗೆ ಹೋಗಿ ಈಗ 5–6 ತಿಂಗಳ ಆಯಿತು. ನನಗೆ ಅಷ್ಟೊಂದು ತಿಳಿಯುವುದಿಲ್ಲ. ಶಾಲೆ ಕಲಿತ್ತಿದ್ದರೆ ಒಳ್ಳೆಯದು ಆಗುತ್ತದೆ."

**17. ಗಂಡಸು – ವಯಸ್ಸು 62.**

"ನನ್ನ ಹೆಂಡತಿ ವಯಸ್ಸು 58. ನನಗೆ ಮೂರು ಜನ ಮಕ್ಕಳು: 1. ವಯಸ್ಸು 42. ಈತನ ಹೆಂಡತಿ ವಯಸ್ಸು 35. ಇಬ್ಬರೂ ಕೂಲಿ ಕೆಲಸ ಮಾಡುತ್ತಾರೆ. 2. ವಯಸ್ಸು 38. ಈತನ ಹೆಂಡತಿ ವಯಸ್ಸು 28. ಇವರು ಕೂಡಾ ಕೂಲಿ ಕೆಲಸಕ್ಕೆ ಹೋಗುತ್ತಾರೆ. 3. ವಯಸ್ಸು 32. ಈತನ ಹೆಂಡತಿ ವಯಸ್ಸು 28. ಇವರು ಕೂಡಾ ಕೂಲಿ ಕೆಲಸಕ್ಕೆ ಹೋಗುತ್ತಾರೆ. ನನ್ನ ಈ ಮೂರು ಜನ ಮಕ್ಕಳು ಮತ್ತು ಸೊಸೆಯರು ಶಾಲೆ ಕಲಿತ್ತಿಲ್ಲ.

"ನನಗೆ ಆರು ಒಕ್ಕಲುಗಳು ಇವೆ. ನಾನು ಒಂದು ಮನೆ ಶಗಣಿ ಕಸಮಾಡುತ್ತೇನೆ. ಬೆಳಿಗ್ಗೆ 6.30 ಗಂಟೆಯಿಂದ ಎಂಟು ಗಂಟೆ ವರೆಗೆ ಕೆಲಸ ಮಾಡುತ್ತೇನೆ. ನನ್ನ ಸೊಸೆಯರು ನಾನು ಕೆಲಸಕ್ಕೆ ಹೋಗದೇ ಇದ್ದಾಗ ಅವರು ಹೋಗುತ್ತಾರೆ. ನಮಗೆ ಈ ಬಿಟ್ಟಿ ಚಾಕರಿ ಕೆಲಸಕ್ಕೆ ವರ್ಷಕ್ಕೆ ಎರಡು ಚೀಲ ಜೋಳ, ಗೋದಿ, 10 ಸೇರು ಕಡಲೆ, ಎರಡು ಸೇರು ಕಾಯಿಪಲ್ಯ ಕಾಳು ಕೊಡುತ್ತಾರೆ. ಅವರ ಹೊಲದಲ್ಲಿ ಇದ್ದ ಕಾಯಿಪಲ್ಯ ಏನಾದರೂ ಇದ್ದರೆ ತೆಗೆದುಕೊಂಡು ಬರುತ್ತೇವೆ.

ನನ್ನ ತಂದೆ ಮತ್ತು ತಾಯಿಗಳು ಈ ಶಗಣಿ ಕಸ ಮಾಡಿಕೊಂಡು ಬಂದಿರುತ್ತಾರೆ. ಒಕ್ಕಲುಗಳಮನೆ ಶಗಣಿ ಕಸ ಇವತ್ತು ಬೆಳಿಗ್ಗೆ ಮುಗಿಸಿಕೊಂಡು ಬಂದಿದ್ದೇನೆ. 11ರಿಂದ 12 ಗಂಟೆಗೆ ಹೋದರೆ ರೊಟ್ಟಿ ಕೊಡುತ್ತಾರೆ ಮತ್ತು ಹಬ್ಬಗಳಲ್ಲಿ ಹಬ್ಬದ ಊಟ ಕೊಡುತ್ತಾರೆ.

**18. ಗಂಡಸು – ವಯಸ್ಸು 65.**

"ಶಾಲೆಗೆ ಹೋಗಿಲ್ಲ. ನನ್ನ ಹೆಂಡತಿಗೆ ವಯಸ್ಸು 50. ಅವಳು ಕೂಡಾ ಶಾಲೆ ಕಲಿತಿರುದ್ದಿಲ್ಲ. ನನಗೆ ಇಬ್ಬರು ಮಕ್ಕಳು. ಮೊದಲನೇ ಮಗನ ವಯಸ್ಸು 45. ಅವನು ಕೂಡಾ ಶಾಲೆ ಕಲಿತಿರುವುದ್ದಿಲ್ಲ. ಈತನ ಹೆಂಡತಿಗೆ 30 ವಯಸ್ಸು. ಇವಳು ಶಾಲೆ ಕಲಿತಿರುವುದ್ದಿಲ್ಲ. ನನ್ನ ಮೊದಲನೇ ಮಗ ಮತ್ತು ಸೊಸೆ ಇಬ್ಬರೂ ಕೂಲಿ ಕೆಲಸಕ್ಕೆ ಬೆಳಿಗ್ಗೆ 10 ಗಂಟೆಗೆ ಹೋಗಿ ಸಂಜೆ ಆರು ಗಂಟೆಗೆ ಬರುತ್ತಾರೆ. ಅದಕ್ಕೆ ಅವನಿಗೆ ಒಂದು ದಿನಕ್ಕೆ 150 ರೂ. ಕೂಲಿ ಕೊಡುತ್ತಾರೆ. ಈತನ ಹೆಂಡತಿಗೆ ಒಂದು ದಿನಕ್ಕೆ 100 ರೂ. ಕೂಲಿ ಕೊಡುತ್ತಾರೆ. ಇವರಿಗೆ ಮೂರು ಜನ ಮಕ್ಕಳು. ಮೊದಲನೇ ಮಗನಿಗೆ 29 ವರ್ಷ. ಈತನು 10ನೇ ತರಗತಿ ಕಲಿತಿದ್ದಾನೆ. ಈಗ ಕೂಲಿ ಕೆಲಸಕ್ಕೆ ಹೋಗತ್ತಾನರಿ. ಈತನಿಗೂ ಕೂಡಾ ಒಂದು ದಿನಕ್ಕೆ 150 ರೂ. ಕೊಡುತ್ತಾರೆ. ಎರಡನೇ ಮಗನಿಗೆ 23 ವರ್ಷ. ಈತನು 9ನೇ ತರಗತಿ ಕಲಿತಿರುತ್ತಾನೆ. ಈತನೂ ಕೂಡಾ ಕೂಲಿಗೆ ಹೋಗುತ್ತಾನೆ. ಈತನಿಗೂ ಕೂಡಾ ಒಂದು ದಿನಕ್ಕೆ 150 ರೂ. ಕೊಡುತ್ತಾರೆ. ಮೂರನೇ ಮಗನ ವಯಸ್ಸು 21 ವರ್ಷ. ಈತನು 7ನೇ ತರಗತಿ ಕಲಿತ್ತಿದ್ದಾನೆ. ಇವನು ಕೂಲಿಗೆ ಹೋಗತ್ತಾನೆ. ಈತನಿಗೆ 150 ರೂ. ಕೊಡುತ್ತಾರೆ.

"ನನ್ನ ಎರಡನೇ ಮಗನ ವಯಸ್ಸು 40. ಈತನು ಶಾಲೆ ಹೋಗಿಲ್ಲ. ಈತನ ಹೆಂಡತಿ ವಯಸ್ಸು 30 ವರ್ಷ. ಇವಳು ಕೂಡಾ ಶಾಲೆ ಕಲಿತ್ತಿಲ್ಲ. ಇಬ್ಬರು ಕೂಲಿ ಕೆಲಸಕ್ಕೆ ಹೋಗುತ್ತಾರೆ. ಕೂಲಿಗೆ ಬೆಳಿಗ್ಗೆ 10 ಗಂಟೆಗೆ ಹೋಗಿ ಸಂಜೆ 6ಕ್ಕೆ ಬರುತ್ತಾರೆ. ಒಂದು ದಿನಕ್ಕೆ ಗಂಡ ಮಕ್ಕಳಿಗೆ 150 ರೂ. ಮತ್ತು ಹೆಣ್ಣು ಮಕ್ಕಳಿಗೆ 100 ರೂ. ಕೊಡುತ್ತಾರೆ.

"ಇವರಿಗೆ ಮೂರು ಜನ ಮಕ್ಕಳು ಇದ್ದಾರೆ. ಮೊದಲನೇ ಮಗ ಸೋಮನಿಂಗ. ವಯಸ್ಸು 19. ಶಾಲೆ ಕಲಿತ್ತಿಲ್ಲ. ಇವನು ಕೂಲಿಗೆ ಹೋಗುತ್ತಾನೆ. ಒಂದು ದಿನಕ್ಕೆ 150 ರೂ. ಕೊಡುತ್ತಾರೆ. ಕೂಲಿಗೆ ಬೆಳಿಗ್ಗೆ 10 ಗಂಟೆಗೆ ಹೋಗಿ ಸಂಜೆ ಆರಕ್ಕೆ ಬರುತ್ತಾರೆ. ಎರಡನೇ ಮಗ ಶ್ರೀಕಾಂತನ ವಯಸ್ಸು 17. ಶಾಲೆ ಕಲಿತ್ತಿಲ್ಲ. ತಂದೆ ಜೊತೆ ಮಗನೂ ಕೂಡಾ ಕುರಿ ಕಾಯಲು ಖಾನಾಪೂರ ತಾಲೂಕ ಶಿಂದೊಳ್ಳಿ ಗ್ರಾಮದಲ್ಲಿ ಜೀತಕ್ಕೆ ಇರುತ್ತಾರೆ. ಆದರೆ ಮಗನಿಗೆ ಒಂದು ವರ್ಷಕ್ಕೆ 15 ಸಾವಿರ ರೂ. ಊಟ ಮತ್ತು ವಸತಿ ಕೊಡುತ್ತಾರೆ. ಇನ್ನೊಬ್ಬ ಮೂರನೇ ಮಗಳು ಸುನಿತಾಳ ವಯಸ್ಸು 14. ಇವಳು 9ನೇ ತರಗತಿಗೆ ಹೋಗುತ್ತಾಳೆ. ತಾಯಿ ಜೊತೆ ಚಿವಟಗುಂಡಿಯಲ್ಲಿ ಇರುವುವರು ಸೋಮನಿಂಗ ಮತ್ತು ಸುನಿತಾ ಈ ಇಬ್ಬರು ಮಕ್ಕಳನ್ನು ಕರಿದುಕೊಂಡು ಕೂಲಿ ಮಾಡಿ ಜೀವನ ನಡೆಸುತ್ತಾಳೆ. ನಮಗೆ ಏನೂ ಆಸ್ತಿ ಪಾಸ್ತಿ ಇರುವುದಿಲ್ಲ. ನಾವು ಎಲ್ಲರೂ ಕೂಲಿ ಮಾಡಿ ನಮ್ಮ ಉಪ ಜೀವನ ನಡೆಸುತ್ತೇವೆ.

"ಈ ಮೇಲೆ ಹೇಳಿದ ನನ್ನ ಮಕ್ಕಳು ಮತ್ತು ಸೊಸೆಯಂದಿರು ಯಾರೂ ಬಿಟ್ಟಿ ಚಾಕರಿ ಕೆಲಸಕ್ಕೆ ಹೋಗುವುದಿಲ್ಲ. ನಾನು ಮತ್ತು ನನ್ನ ಹೆಂಡತಿ ಇಬ್ಬರು ಬಿಟ್ಟಿ ಚಾಕರಿ ಕೆಲಸಕ್ಕೆ ಬೆಳಿಗೆ ಆರು ಗಂಟೆಗೆ ಎದ್ದು ಮುಖ ತೊಳೆದುಕೊಂಡು ಮಾಲಿಕರ ಮನೆಗೆ ಹೋಗಿ ಮೊದಲು ಅವರ ಅಂಗಳ ಬಾಗಿಲ ಕಸ ಗುಡಿಸಿ ನಂತರ ದನದ ಮನೆಗೆ ಹೋಗಿ ನಾಲ್ಕು ದನಗಳ ಸೆಗಣಿ ನನ್ನ ಹೆಂಡತಿ ತುಂಬಿಕೊಡುತ್ತಾಳೆ. ನಾನು ಅದನ್ನು ಒಯ್ದು ಅಡಿವಿಗೆ ಹಾಕಿ ಬರುತ್ತೇನೆ."

**19. ಹೆಂಗಸು – ವಯಸ್ಸು 60.**

"ನನ್ನ ನಾನು ಶಾಲೆಯನ್ನು ಕಲಿತಿಲ್ಲ. ನನ್ನ ಗಂಡ ತೀರಿಕೊಂಡಿದ್ದಾನೆ. ಆತನು ತೀರಿಕೊಂಡು 27 ವರ್ಷವಾಯಿತು. ನನ್ನ ಹೆಸರಿನಲ್ಲಿ ಒಂದು ಜನತಾ ಪ್ಲಾಟ ಇದೆ. ಜಮೀನ ಇಲ್ಲ. ನನಗೆ ಆರು ಜನ ಮಕ್ಕಳು. ಅದರಲ್ಲಿ ಮೂರು ಜನ ಗಂಡು ಮಕ್ಕಳು. ಮೂರು ಜನ ಹೆಣ್ಣುಮಕ್ಕಳು ಇರುತ್ತಾರೆ. ಹೆಣ್ಣು ಮಕ್ಕಳ ಮದುವೆ ಮಾಡಿ ಕೊಟ್ಟಿದ್ದೇನೆ. ಅವರ ಹೆಸರು: ನನಗೆ ತಿಂಗಳ ಪಗಾರ ಬರುತ್ತದೆ. ಮೂರು ಜನ ಗಂಡು ಮಕ್ಕಳು ಮದುವೆಯಾಗಿ ಐದು ವರ್ಷವಾಯಿತು. ಅವರ ಕುಟುಂಬಗಳು ಬೇರೆ ಆಗಿವೆ. ನಾನು ಒಬ್ಬಳೇ ಬೇರೆ ಇದ್ದೇನೆ. ನಾನು ಒಬ್ಬರ ಮನೆಯ ಸೆಗಣಿಗೆ ಹೋಗತ್ತೇನರಿ.ಅವರ ಮನೆಯಲ್ಲಿ ಎರಡು ಎಮ್ಮಿ, ಒಂದು ಆಕಳು ಇದೆ. ನಾನು ಬೆಳಿಗ್ಗೆ ಏಳು ಗಂಟೆಗೆ ಹೋಗಿ ಗೌಡ್ರ ಅಂಗಳ ಬಾಗಿಲ ಹೊಡೆದು ನಂತರ ದನಗಳ ಸೆಗಣಿ ತೆಗಿದು ಮನೆಗೆ ಬರಬೇಕಾದರೆ ಒಂಬತ್ತು ಗಂಟೆ ಆಗತ್ತಿತು. ಗೌಡ್ರು ನಮಗೆ ವರ್ಷಕ್ಕೆ ಎರಡು ಚೀಲ ಜೋಳ, ಕಡ್ಲಿ, ಗೋದಿ ಕೊಡುತ್ತಾರೆ. ಸೆಗಣಿ ಹೋಗಿ ಬಂದು ನಂತರ ಅಡಿಗಿ ಮಾಡಿಕೊಂಡು 10 ಗಂಟೆಗೆ ಕೂಲಿ ಕೆಲಸಕ್ಕೆ ಹೋಗುತ್ತೇನೆ. ಸಾಯಂಕಾಲ ಆರು ಗಂಟೆಗೆ ವಾಪಾಸ ಬರುತ್ತೇನೆ. ಬೆಳಿಗ್ಗೆ ಐದು ಗಂಟೆಗೆ ಎದ್ದು ನಮ್ಮ ಮನೆಯ ಅಂಗಳ ಬಾಗಿಲ ಸ್ವಚ್ಚ ಮಾಡಿ ಮುಖ ತೊಳಿಕೊಂಡು ಚಾಹಾ ಕುಡಿದು ಸೆಗಣಿ ಹೋಗುತ್ತೇವೆ. ನಾವು ನಮ್ಮ ಅಡಚಣಗೆ ನಾವು ಈ ಕೆಲಸ ಮಾಡುತ್ತೇವೆ. ಈ ಚಾಕರಿ ಕೆಲಸ ಬಿಟ್ಟರೆ ನಮಗೆ ಏನೂ ತೊಂದರೆ ಇಲ್ಲ. ಆದರೆ ಸತ್ತಾಗ ಕೆಟ್ಟಾಗ ಒಂದು ಅಥವ ಎರಡು ದಿನ ಹೋಗತ್ತೇವ. ಆವಾಗ ಅವರು ಸೆಗಣಿಯನ್ನು ತೆಗೆಯಬೇಕು. ಮನೆಯವರಿಗೆ ಕರಿಯಲಿಕ್ಕೆ ಬರುತ್ತಾರೆ. ಇಲ್ಲದಿದ್ದರೆ ನಾವೇ ಹೋಗಿ ಸೆಗಣಿ ತೆಗಿಯಬೇಕು.

**20. ಗಂಡಸು – 44 ವರ್ಷ.**

"ಶಾಲೆ ಕಲಿತಿರುವುದಿಲ್ಲ. ನನ್ನ ಹೆಂಡತಿಗೆ ವಯಸ್ಸು 40 ವರ್ಷ. ಅವಳೂ ಕೂಡಾ ಶಾಲೆ ಕಲಿತಿರುವುದಿಲ್ಲ. ನನಗೆ ಇಬ್ಬರು ಮಕ್ಕಳಿದ್ದಾರೆ. ಮೊದಲನೆಯವಳು ಮಗಳು 7ನೇ ತರಗತಿಯಲ್ಲಿ ಓದುತ್ತಿದ್ದಾಳೆ. ಎರಡನೆಯವನು ಮಗ 6ನೇ ತರಗತಿಯಲ್ಲಿ ಓದುತ್ತಿದ್ದಾನೆ. ಆದರೆ ಇವನಿಗೆ ಮಾತನಾಡಲು ಬರುವುದಿಲ್ಲ. ನನ್ನ ತಾಯಿಯ ಹೆಸರು ಕರೆವ್ವ ಭೀಮಪ್ಪ ಹರಿಜನ. ಇವರಿಗೆ 70 ವರ್ಷ. ನಾನು ಬೆಳಗ್ಗೆ ಆರು ಗಂಟೆಯಿಂದ ಒಂಬತ್ತು ಗಂಟೆಯವರೆಗೆ ಇಬ್ಬರ ಮನೆಗಳಲ್ಲಿ ಬಿಟ್ಟಿ ಚಾಕರಿ ಮಾಡಿಕೊಂಡು ಮಾಲಿಕರ ಅಂಗಳ ಬಾಗಿಲ ಕಸ ಗುಡಿಸುವುದು ಮತ್ತು ಸಗಣಿ ತುಂಬಿ ತಿಪ್ಪೆಗೆ ಹಾಕುವುದು. ನನಗೆ ಒಬ್ಬರು

ವರ್ಷಕ್ಕೆ ಒಂದು ಚೀಲ ಜೋಳ, ಗೋದಿ ಮತ್ತು ಸ್ವಲ್ಪ ಕಡಲೆಯನ್ನು ಕೊಡುತ್ತಾರೆ. ಇನ್ನೊಬ್ಬರು ವರ್ಷಕ್ಕೆ ಎರಡು ಚೀಲ ಜೋಳ ಕೊಡುತ್ತಾರೆ. ಇದರ ಜೊತೆ ತಿಂಡಿಯೇನಾದರೂ ಉಳಿದರೆ 11 ಗಂಟೆಗೆ ಮನೆಗೆ ಕರೆದು ಕೊಡುತ್ತಾರೆ. ಬಿಟ್ಟಿ ಚಾಕರಿಯನ್ನು ನಮ್ಮ ತಂದೆ-ತಾಯಿಯವರು ಮಾಡುತ್ತಿದ್ದರಿಂದ, ನಮ್ಮ ತಂದೆಯವರು ತೀರಿಹೋಗಿದ್ದಾರೆ ಮತ್ತು ತಾಯಿಗೆ ವಯಸ್ಸಾಗಿರುವುದರಿಂದ ಆ ಕೆಲಸವನ್ನು ನಾನು ಮುಂದುವರೆಸಿಕೊಂಡು ಬಂದಿದ್ದೇನೆ. ನಾನು ಈ ಕೆಲಸವನ್ನು ಬಿಡಬೇಕೆಂದರೂ ನಮ್ಮ ತಾಯಿಯವರು ಇದು ವಂಶ ಪಾರಂಪರ್ಯದಿಂದ ಬಂದಿರುವುದರಿಂದ ಈ ಕೆಲಸವನ್ನು ಬಿಡಬಾರದೆಂದು ಒತ್ತಾಯ ಮಾಡುತ್ತಿದ್ದಾರೆ. ನನಗೆ ಹುಷಾರಿಲ್ಲದಿದ್ದರೆ ಮಾಲಿಕರೇ ಈ ಕೆಲಸವನ್ನು ಮಾಡಿಕೊಳ್ಳುತ್ತಾರೆ.ಅವರ ಮನೆಯ ಕೆಲಸಗಳನ್ನು ಮುಗಿಸಿದ ನಂತರ ನಾನು ಕೂಲಿ ಕೆಲಸಕ್ಕೆ ಹೋಗುತ್ತೇನೆ. ನನಗೆ ದಿನಗೂಲಿ 200 ರೂಪಾಯಿ ಸಿಗುತ್ತಿದೆ. ಆದರೆ ನನಗೆ ಕೂಲಿ ಯಾವಾಗಲೂ ಸಿಗುವುದಿಲ್ಲವಾದ್ದರಿಂದ ಬಿಟ್ಟಿ ಚಾಕರಿಯಿಂದ ನಮ್ಮ ಜೀವನ ಸ್ವಲ್ಪ ಮಟ್ಟಿಗೆ ಸುಧಾರಿಸುತ್ತಿದೆ. ಅವರು ಕೊಟ್ಟಂತಹ ಪದಾರ್ಥಗಳಿಂದ ಊಟಕ್ಕೆ ಸಹಾಯವಾಗುತ್ತಿದೆ. ಕೂಲಿಯಿಂದ ಬಂದಿರುವುದು ಇತರೇ ಖರ್ಚುಗಳಿಗೆ ಸರಿ ಹೋಗುತ್ತಿದೆ. ನನ್ನ ಹೆಂಡತಿ ಮತ್ತು ನನಗೆ ಜಗಳವಾಗಿ ಅವಳು ನನ್ನಿಂದ ಬೇರೆ ಇದ್ದಾಳೆ. ಮಕ್ಕಳು ಎರಡೂ ಕಡೆ ಇರುತ್ತವೆ. ನನ್ನ ಹೆಂಡತಿ ಜೀವಿಕ ಸಂಘಟನೆಯ ಸ್ವ ಸಹಾಯ ಗುಂಪಿನದಲ್ಲಿ ಪ್ರತಿನಿಧಿಯಾಗಿದ್ದರೆ. ನನಗೆ ಬಿಟ್ಟಿ ಚಾಕರಿ ಮಾಡಿ ಸಾಕಾಗಿದೆ. ನನಗೆ ಬೇರೆ ಯಾವುದೇ ವರಮಾನವಿಲ್ಲದಿರುವುದರಿಂದ ಮತ್ತು ಸರ್ಕಾರದಿಂದ ಮನೆಯನ್ನು ಬಿಟ್ಟು ಬೇರೆ ಸೌಲಭ್ಯ ಸಿಕ್ಕಿಲ್ಲದೇ ಇರುವುದರಿಂದ ಮತ್ತು ತಾಯಿಯ ಒತ್ತಡದಿಂದ ನನಗೆ ಈ ಕೆಲಸವನ್ನು ಬಿಡಲು ಸಾಧ್ಯವಾಗುತ್ತಿಲ್ಲ."

**21. ಹೆಂಗಸು – 60 ವರ್ಷ.**

"ನನಗೆ ಇಬ್ಬರು ಗಂಡು ಮಕ್ಕಳಿದ್ದಾರೆ. ಮೊದಲನೆಯವನಿಗೆ 38 ವರ್ಷವಾಗಿದೆ. ಇವರು ಮತ್ತು ಇವರ ಹೆಂಡತಿ ಇಬ್ಬರೂ ಬಿಟ್ಟಿ ಚಾಕರಿ ಮಾಡುತ್ತಿದ್ದಾರೆ. ಇವರಿಗೆ ಒಂದು ಗಂಡು ಮತ್ತು ಒಂದು ಹೆಣ್ಣು ಇಬ್ಬರು ಮಕ್ಕಳಿದ್ದಾರೆ. ಎರಡನೆಯವನು ತೀರಿಹೋಗಿದ್ದಾರೆ. ಇವರಿಗೆ ಮದುವೆಯಾಗಿದ್ದು ಒಂದು ಗಂಡು ಮಗುವಿದೆ. ನನ್ನ ದೊಡ್ಡ ಮಗ ಮತ್ತು ಸೊಸೆ ಸವಿತ ಇಬ್ಬರೂ ನಾಲ್ಕು ಮನೆಗಳಲ್ಲಿ ಬಿಟ್ಟಿ ಚಾಕರಿ ಮಾಡುತ್ತಿದ್ದಾರೆ. ಇವರು ಬೆಳಗ್ಗೆ ಆರು ಗಂಟೆಯಿಂದ ಒಂಬತ್ತು ಗಂಟೆಯವರೆಗೂ ಇಬ್ಬರೂ ಸೇರಿ ನಾಲ್ಕೂ ಮನೆಗಳ ಅಂಗಳ ಬಾಗಿಲ ಗುಡಿಸುವುದು, ಸಗಣಿ ತೆಗೆದು ತಿಪ್ಪೆಗೆ ಎಸೆಯುವುದು, ಸಗಣಿಯನ್ನು ಕಲೆಸಿ ಗೋಬರ್ ಗ್ಯಾಸ್‌ಗೆ ಹಾಕುವುದು ಮತ್ತು ಕಟ್ಟಿಗೆ ಹೊಡೆಯುವುದು, ಮನೆಯ ದವಸ-ಧಾನ್ಯಗಳನ್ನು ಸ್ವಚ್ಛಗೊಳಿಸುವುದು ಮುಂತಾದ ಕೆಲಸ ಮಾಡುತ್ತಿದ್ದಾರೆ.ಒಬ್ಬರ ಮನೆಯಲ್ಲಿ ಒಂದು ಆಕಳು ಮತ್ತು ಎರಡು ಎತ್ತು ಇವೆ. ಇವರು ವರ್ಷಕ್ಕೆ ಎರಡು ಚೀಲ ಜೋಳ ಕೊಡುತ್ತಾರೆ. ಇನ್ನೊಬ್ಬರ ಮನೆಯಲ್ಲಿ ಒಂದು ಆಕಳು ಮತ್ತು ಎರಡು ಎಮ್ಮೆ ಇವೆ. ಇವರು ವರ್ಷಕ್ಕೆ ಎರಡು ಚೀಲ ಜೋಳ ಕೊಡುತ್ತಾರೆ. ಮೂರನೆಯವರ ಮನೆಯಲ್ಲಿ ಎರಡು ಎಮ್ಮೆ ಇವೆ. ಇವರು ವರ್ಷಕ್ಕೆ ಎರಡು ಚೀಲ ಜೋಳ ಕೊಡುತ್ತಾರೆ. ನಾಲ್ಕನೇ ಮನೆಯಲ್ಲಿ ಒಂದು ಎಮ್ಮೆ ಇದೆ. ಇವರು ವರ್ಷಕ್ಕೆ ಒಂದು ಚೀಲ ಜೋಳ ಕೊಡುತ್ತಾರೆ. ಇದರ

ಜೊತೆ ಸ್ವಲ್ಪ ಗೋದಿ ಮತ್ತು ಕಾಳುಗಳನ್ನೂ ಕೊಡುತ್ತಾರೆ. ಇವರ ಮನೆಗಳ ಕೆಲಸ ಮುಗಿದ ನಂತರ ದಿನಗೂಲಿ ಕೆಲಸಕ್ಕೆ ಹೋಗುತ್ತಾರೆ. ಅವರಿಗೆ ಬಿಟ್ಟಿ ಚಾಕರಿ ಕೆಲಸ ಮಾಡಲು ಬೇಸರವಾಗುತ್ತದೆ. ಆದರೆ ನಮಗೆ ಜಮೀನು ಇಲ್ಲದಿರುವುದು ಮತ್ತು ನಿರಂತರವಾಗಿ ಕೂಲಿ ದೊರೆಯುವುದಿಲ್ಲವಾದ್ದರಿಂದ ಬಿಟ್ಟಿ ಚಾಕರಿಯಿಂದ ಸಿಗುವ ದವಸ-ಧಾನ್ಯಗಳಿಂದ ಜೀವನ ನಡೆಸಬಹುದಾದ್ದರಿಂದ ಈ ಕೆಲಸವನ್ನು ಬಿಡಲು ಸಾಧ್ಯವಾಗುತ್ತಿಲ್ಲ."

**22. ಗಂಡಸು – ವಯಸ್ಸು 35 ವರ್ಷ.**

"ಶಾಲೆಗೆ ಹೋಗಿಲ್ಲ. ಕೂಲಿ ಕೆಲಸ ಮಾಡುತ್ತಿದ್ದೇನೆ. ನನ್ನ ಹೆಂಡತಿ ನನಗೆ ಒಬ್ಬ ಮಗನಿದ್ದು ಅಂಗನವಾಡಿಗೆ ಹೋಗುತ್ತಿದ್ದಾನೆ. ನನ್ನ ತಾಯಿಯವರು ಬಿಟ್ಟಿ ಚಾಕರಿ ಮಾಡುತ್ತಾ ಬಂದಿದ್ದಾರೆ. ಇವರಿಗೆ 62 ವರ್ಷ. ನನ್ನ ತಂದೆ ತೀರಿಕೊಂಡು 27 ವರ್ಷವಾಯಿತು. ನನ್ನ ಅಕ್ಕನರವರನ್ನು ಸಂಪಗಾಂವ ಗ್ರಾಮಕ್ಕೆ ಮದುವೆ ಮಾಡಿಕೊಟ್ಟಿದ್ದು ಇವರ ಗಂಡನೂ ತೀರಿಕೊಂಡು ಏಳು ವರ್ಷವಾಯಿತು. ಇವಳೂ ಕೂಡಾ ಚಿವುಟಗುಂಡಿಯಲ್ಲಿಯೇ ಇದ್ದು ಮೂರು ಮನೆ ಬಿಟ್ಟಿ ಚಾಕರಿ ಕೆಲಸ ಮಾಡುತ್ತಿದ್ದಾಳೆ.ನಮ್ಮ ಮನೆಯಲ್ಲಿ ನನ್ನ ಹೆಂಡತಿ ಮತ್ತು ನನ್ನ ತಾಯಿ ಇಬ್ಬರೂ ಸೇರಿ ಇಬ್ಬರ ಮನೆಯನಲ್ಲಿ ಬಿಟ್ಟಿ ಚಾಕರಿ ಮಾಡುತ್ತಿದ್ದಾರೆ.ಇವರು ಮುಂಜಾನೆ ಏಳು ಗಂಟೆಯಿಂದ ಒಂಬತ್ತು ಗಂಟೆಯವರೆಗೆ ಬಿಟ್ಟಿ ಚಾಕರಿ ಮಾಡುತ್ತಿದ್ದಾರೆ. ಮಾಲೀಕರ ಮನೆಯಲ್ಲಿ ಐದು ದನಗಳು ಇರುತ್ತವೆ. ಇಬ್ಬರೂ ಒಂದು ವರ್ಷಕ್ಕೆ ಎರಡು ಜೋಳ, ಸ್ವಲ್ಪ ಕಡಲೆ ಮತ್ತು ಗೋದಿಯನ್ನು ಕೊಡುತ್ತಾರೆ. ಇದರ ಜೊತೆಗೆ ರಾತ್ರಿ ಉಳಿದ ತಂಗಳ ಊಟವನ್ನು ಅವರು ಮನೆಗೆ ಬರುವಾಗ ಕೊಟ್ಟು ಕಳುಹಿಸುತ್ತಿದ್ದರು. ನಮ್ಮ ಮನೆತನದಲ್ಲಿ ತಲೆ ತಲಾಂತರದಿಂದ ಈ ಬಿಟ್ಟಿ ಚಾಕರಿ ಮಾಡುವುದು ನಮಗೆ ತಪ್ಪಿಲ್ಲ."

**23. ಗಂಡಸು –ವಯಸ್ಸು 44.**

"ವಿವಾಹವಾಗಿದೆ. ಹೆಂಡತಿ, ನನಗೆ ಎರಡು ಗಂಡು ಮತ್ತು ಒಂದು ಹೆಣ್ಣು ಒಟ್ಟು ಮೂರು ಜನ ಮಕ್ಕಳಿದ್ದಾರೆ. ಮೊದಲನೆಯವನವಯಸ್ಸು 20 ವರ್ಷವಾಗಿದ್ದು 9ನೇ ತರಗತಿಯವರೆಗೆ ಓದಿದ್ದಾನೆ. ಇವನು ಕೂಲಿ ಕೆಲಸ ಮಾಡುತ್ತಿದ್ದಾನೆ. ಎರಡನೆಯವನ ವಯಸ್ಸು 18 ವರ್ಷ. ಇವನು ಮೇಕೆಗಳನ್ನು ಕಾಯಲು ಜೀತಕ್ಕಿದ್ದಾನೆ. ಮೂರನೆಯವಳು ಮೂರನೇ ತರಗತಿಯಲ್ಲಿ ಓದುತ್ತಿದ್ದಾಳೆ. ನಮಗೆ ಕಚ್ಚಾ ಮನೆ ಮತ್ತು 10 ಕುರಿಗಳು ಇವೆ. ನಾನು ಖಾನಾಪುರ ತಾಲ್ಲೂಕು ಶಿಂದೊಳ್ಳಿ ಗ್ರಾಮದಲ್ಲಿ ಎರಡು ವರ್ಷದಿಂದ ಜೀತ ಮಾಡುತ್ತಿದ್ದೇನೆ. ನನ್ನ ಹೆಂಡತಿ ಕೂಲಿ ಮಾಡುತ್ತಿದ್ದಾರೆ. ನನ್ನ ಹೆಂಡತಿ ಬೆಳ್ಳಗ್ಗೆ ಒಂಬತ್ತು ಗಂಟೆಯಿಂದ ಸಂಜೆ ಆರು ಗಂಟೆಯವರೆಗೆ ಕೆಲಸ ಮಾಡುತ್ತಾರೆ. ದಿನಕ್ಕೆ 100 ರೂಪಾಯಿ ಕೂಲಿ ಸಿಗುತ್ತದೆ.

# ಅನುಬಂಧ IV

**ಜೀತ ಪದ್ಧತಿ (ರದ್ದತಿ) ಅಧಿನಿಯಮ, 1976**

[1976ರ 19]

[1976ನೇ ಫೆಬ್ರವರಿ 9]

(1985ರ ಕಾನೂನು ನಂ.73ರಿಂದ ತಿದ್ದುಪಡಿಗೊಂಡಂತೆ)

ಜನತೆಯ ದುರ್ಬಲ ವರ್ಗಗಳ ಆರ್ಥಿಕ ಮತ್ತು ದೈಹಿಕ ಶೋಷಣೆಯನ್ನು ನಿವಾರಿಸುವ ದೃಷ್ಟಿಯಿಂದ ಜೀತ ಪದ್ಧತಿರದ್ದತಿಗೆ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಅನುಷಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿಮಾಡಿದ ಅಧಿನಿಯಮ.ಭಾರತ ಗಣರಾಜ್ಯದ ಇಪ್ಪತ್ತೇಳನೇ ವರ್ಷದಲ್ಲಿ ಸಂಸತ್ತಿನಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದು.–

**ಅಧ್ಯಾಯ – I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ –** (1) ಈ ಅಧಿನಿಯಮವನ್ನು ಜೀತ ಪದ್ಧತಿ (ರದ್ದತಿ) ಅಧಿನಿಯಮ, 1976 ಎಂದು ಕರೆಯಬಹುದು.

(2) ಇದು ಇಡೀ ಭಾತರಕ್ಕೆ ಅನ್ವಯಿಸುತ್ತದೆ.

(3) ಇದು 1975ರ ಅಕ್ಟೋಬರ್ 25ನೇ ದಿನಾಂಕದಂದು ಜಾರಿಗೆ ಬಂದಿದೆಯೆಂದು ಭಾವಿಸತಕ್ಕುದು.

**2. ಪರಿಭಾಷೆಗಳು** – ಈ ಅಧಿನಿಯಮದಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ, (ಎ) "ಮುಂಗಡ" ಎಂದರೆ, (ಇದರಲ್ಲಿ ಇನ್ನು ಮುಂದೆ ಸಾಲಿಗನೆಂದು ಕರೆಯಲಾಗುವ) ಒಬ್ಬ ವ್ಯಕ್ತಿಯು (ಇದರಲ್ಲಿಇನ್ನು ಮುಂದೆ ಸಾಲಗಾರನೆಂದು ಕರೆಯಲಾಗುವ) ಇನ್ನೊಬ್ಬ ವ್ಯಕ್ತಿಗೆ ನಗದು ರೂಪದಲ್ಲಿ ವಸ್ತು ರೂಪದಲ್ಲಿ ಅಥವಾಭಾಗಶಃ ವಸ್ತು ರೂಪದಲ್ಲಿ ಕೊಟ್ಟ ಮುಂಗಡವೆಂದು ಅರ್ಥ :

(ಬಿ) "ಒಪ್ಪಂದ" ಎಂದರೆ, ಸಾಲಗಾರ ಮತ್ತು ಸಾಲಿಗನ ನಡುವಿನ (ಲಿಖಿತ ಅಥವಾ ಬಾಯಿ ಮಾತಿನ ಅಥವಾಭಾಗಶಃ ಲಿಖಿತ ಮತ್ತು ಭಾಗಶಃ ಬಾಯಿ ಮಾತಿನ) ಒಪ್ಪಂದವೆಂದು ಅರ್ಥ ಮತ್ತು ಅದು ಸಂಬಂಧಪಟ್ಟಪ್ರದೇಶದಲ್ಲಿರುವ ಯಾವುದೇ ಪ್ರಚಲಿತ ಸಾಮಾಜಿಕ ಪದ್ಧತಿಯ ಮೇರೆಗೆ ಅಸ್ತಿತ್ವದಲ್ಲಿದೆಯೆಂದು ಪೂರ್ವಭಾವನೆಮಾಡಲಾಗಿರುವ ಬಲಾತ್ಕಾರದ ದುಡಿಮೆಗೆ ಅವಕಾಶ ಕಲ್ಪಿಸುವ ಒಪ್ಪಂದವನ್ನೂ ಒಳಗೊಳ್ಳುತ್ತದೆ.

**ವಿವರಣೆ** – ಸಾಲಗಾರ ಮತ್ತು ಸಾಲಿಗನ ನಡುವಿನ ಒಪ್ಪಂದದ ಅಸ್ತಿತ್ವವನ್ನು ಸಾಮಾನ್ಯವಾಗಿ ಸಾಮಾಜಿಕ ಪದ್ಧತಿಯಮೇರೆಗೆ, ಬಲಾತ್ಕಾರದ ದುಡಿಮೆಯ ಕೆಳಕಂಡ ಪ್ರಕಾರಗಳಿಗೆ ಸಂಬಂಧಿಸಿದಂತೆ, ಪೂರ್ವಭಾವನೆ ಮಾಡಲಾಗುತ್ತದೆ.ಎಂದರೆ :–

ಆದಿಯಾಮಾರ್, ಬಾರಾಮಾಸಿಯ, ಬಸಹಯಾ, ಬೇಥೂ, ಭಗೇಲಾ, ಚೆರೂಮಾರ್, ಗಾರುಗಲ್ಲು, ಹಾಲಿ,ಹಾರಿ ಹಾರವಯಿ, ಹೊಲ್ಯ, ಜಾನಾ, ಜೀತ, ಕಾಮಿಯ, ಖಿಂದಿತ್–ಮುಂಡಿತ್, ಕುತಿಯ, ಲಖೇರಿ,ಮುಂಝಿ, ಮೇಟ್, ಮುನೀಷ್ ಪದ್ಧತಿ, ನಿತ್–ಮಜೂರ್, ಪಲೇರು, ಪಡಿಯಾಲ್, ಪನ್ನಯಿಲಾಲ್,ಸಾಗಡಿ, ಸಂಜಾವತ್, ಸೇವಕ, ಸೇವಕಿಯಾ, ಸೆರಿ, ವೆಟ್ಟಿ;

(ಸಿ) ಮಾತೃ ಪ್ರಧಾನ ಸಮಾಜಕ್ಕೆ ಸೇರಿದ ಒಬ್ಬ ವ್ಯಕ್ತಿಯ ಸಂಬಂಧದಲ್ಲಿ "ಪೂರ್ವಜ" ಅಥವಾ "ವಂಶಜ"ಎಂದರೆ ಅಂಥ ಸಮಾಜದಲ್ಲಿ ಜಾರಿಯಲ್ಲಿರುವ ಉತ್ತರಾಧಿಕಾರದ ವಿಧಿಗನುಸಾರವಾಗಿ ಅಂಥ ಪದಕ್ಕೆ ಸಂವಾದಿಯಾದವ್ಯಕ್ತಿ;

(ಡಿ) "ಜೀತ–ಸಾಲ" ಎಂದರೆ, ಜೀತಗಾರಿಕೆ ಪದ್ಧತಿಯ ಮೇರೆಗೆ ಅಥವಾ ಅದಕ್ಕನುಸಾರವಾಗಿ ಜೀತದಾಳು ಪಡೆದಅಥವಾ ಪಡೆದನೆಂದು ಪೂರ್ವಭಾವನೆ ಮಾಡಲಾದ ಮುಂಗಡ:

(ಇ) "ಜೀತಗಾರಿಕೆ" ಎಂದರೆ ಜೀತಗಾರಿಕೆ ಪದ್ಧತಿಯ ಮೇರೆಗೆ ಮಾಡುವ ಯಾವುದೇ ದುಡಿಮೆ ಅಥವಾ ಸೇವೆ;

(ಎಫ್) "ಜೀತದಾಳು" ಎಂದರೆ ಒಂದು ಜೀತ–ಸಾಲವನ್ನು ಮಾಡುವ ಅಥವಾ ಮಾಡಿರುವ ಅಥವಾ ಮಾಡಿರುವನೆಂದು ಪೂರ್ವಭಾವನೆ ಮಾಡಲಾದ ಒಬ್ಬ ದುಡಿಮೆಗಾರ;

(ಜಿ) "ಜೀತ ಪದ್ಧತಿ" ಎಂದರೆ, ಯಾವ ಪದ್ಧತಿಯ ಮೇರೆಗೆ ಒಬ್ಬ ಸಾಲಗಾರನು, ಕೆಳಕಂಡವುಗಳಿಗಾಗಿ

ಸಾಲಿಗನೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತಾನೋ, ಮಾಡಿಕೊಂಡಿರುವನೋ ಅಥವಾ ಮಾಡಿಕೊಂಡಿರುವನೆಂದು

ಪೂರ್ವಭಾವನೆ ಮಾಡಲಾಗಿದೆಯೋ ಆ ಬಲಾತ್ಕಾರದ ಅಥವಾ ಭಾಗಶಃ ಬಲಾತ್ಕಾರದ ದುಡಿಮೆಯ ಪದ್ಧತಿ :–

(i) ತಾನು ಅಥವಾ ತನ್ನ ಪಾರಂಪರಿಕ ಪೂರ್ವಜರಲ್ಲಿ ಅಥವಾ ವಂಶಜರಲ್ಲಿ ಯಾರಾದರೂ ತೆಗೆದುಕೊಂಡಿರುವ ಮುಂಗಡದ (ಅಂತಹ ಮುಂಗಡದ ಬಗ್ಗೆ ಯಾವುದೇ ದಸ್ತಾವೇಜಿನ ಸಾಕ್ಷ್ಯವಿರಲಿ,

ಇಲ್ಲದಿರಲಿ) ಪ್ರತಿಫಲಕ್ಕಾಗಿ ಮತ್ತು ಅಂತಹ ಮುಂಗಡದ ಮೇಲೆ ಬಾಕಿಯಿರುವ ಬಡ್ಡಿಯೇನಾದರೂ ಇದ್ದರೆ ಅದರ ಪ್ರತಿಫಲಕ್ಕಾಗಿ ಅಥವಾ

(ii) ಯಾವುದೇ ರೂಢಿಗತ ಅಥವಾ ಸಾಮಾಜಿಕ ಬಾಧ್ಯತೆಗೆ ಅನುಸಾರವಾಗಿ; ಅಥವಾ

(iii) ಉತ್ತರಾಧಿಕಾರದಿಂದ ತನಗೆ ಪ್ರಾಪ್ತವಾದ ಯಾವುದೇ ಬಾಧ್ಯತೆಗೆ ಅನುಸಾರವಾಗಿ; ಅಥವಾ

(iv) ತಾನು ಅಥವಾ ತನ್ನ ಪಾರಂಪರಿಕ ಪೂರ್ವಜರಲ್ಲಿ ಅಥವಾ ವಂಶಜರಲ್ಲಿ ಯಾರಾದರೂ ಪಡೆದಿದ್ದ ಯಾವುದೇ ಆರ್ಥಿಕ ಪ್ರತಿಫಲಕ್ಕಾಗಿ; ಅಥವಾ

(v) ತಾನು ಯಾವುದೇ ನಿರ್ದಿಷ್ಟ ಜಾತಿ ಅಥವಾ ಪಂಗಡದಲ್ಲಿ ಹುಟ್ಟಿದ ಕಾರಣದಿಂದಾಗಿ–

– ಅವನು

(1) ತಾನಾಗಿ ಅಥವಾ ತನ್ನ ಕುಟುಂಬದ ಯಾವನೇ ವ್ಯಕ್ತಿಯ ಅಥವಾ ತನ್ನನ್ನು ಅವಲಂಬಿಸಿರುವ ಯಾವನೇವ್ಯಕ್ತಿಯ ಮೂಲಕ ಸಾಲಿಗನಿಗೆ, ಅಥವಾ ಸಾಲಿಗನ ಪ್ರಯೋಜನಕ್ಕಾಗಿ ಒಂದು ನಿರ್ದಿಷ್ಟ ಅವಧಿಗಾಗಿ ಅಥವಾ ಅನಿರ್ದಿಷ್ಟಅವಧಿಗಾಗಿ ಮಜೂರಿಯಿಲ್ಲದೆಯೆ ಅಥವಾ ನಾಮಮಾತ್ರ ಮಜೂರಿಗಾಗಿ ದುಡಿಮೆ ಅಥವಾ ಸೇವೆ ಸಲ್ಲಿಸಬೇಕಾಗುವುದು,ಅಥವಾ

(2) ಒಂದು ನಿರ್ದಿಷ್ಟ ಅವಧಿಗಾಗಿ ಅಥವಾ ಅನಿರ್ದಿಷ್ಟ ಅವಧಿಗಾಗಿ ಉದ್ಯೋಗ ಸ್ವಾತಂತ್ರ್ಯವನ್ನು ಅಥವಾಜೀವನೋಪಾಯದ ಇತರ ಮಾರ್ಗಗಳನ್ನು ಕಳೆದುಕೊಳ್ಳುವುದು, ಅಥವಾ

(3) ಭಾರತದ ರಾಜ್ಯ ಕ್ಷೇತ್ರದಾದ್ಯಂತ ಸ್ವತಂತ್ರವಾಗಿ ಸಂಚರಿಸಲು ಇರುವ ಅಧಿಕಾರವನ್ನು ಕಳೆದುಕೊಳ್ಳುವುದು ಅಥವಾ

(4) ತನ್ನ ಯಾವುದೇ ಸ್ವತ್ತನ್ನು ಅಥವಾ ತನ್ನ ದುಡಿಮೆಯ ಅಥವಾ ತನ್ನ ಕುಟುಂಬದ ವ್ಯಕ್ತಿಯ ಅಥವಾ ತನ್ನನ್ನುಅವಲಂಬಿಸಿರುವ ಯಾವನೇ ವ್ಯಕ್ತಿಯ ದುಡಿಮೆಯಿಂದ ಗಳಿಸಿದ ಯಾವುದೇ ಉತ್ಪಾದನೆಯನ್ನು ವಿನಿಯೋಗಿಸಲು ಅಥವಾಮಾರುಕಟ್ಟೆ ಮೌಲ್ಯದಲ್ಲಿ ಮಾರಾಟ ಮಾಡಲು ಇರುವ ಅಧಿಕಾರವನ್ನು ಕಳೆದುಕೊಳ್ಳುವುದು.

ಮತ್ತು ಯಾವುದರ ಮೇರೆಗೆ ಸಾಲಗಾರನ ಒಬ್ಬ ಜಾಮೀನುದಾರನು, ಸಾಲಗಾರನು ಋಣವನ್ನು ತೀರಿಸಲು ತಪ್ಪಿದಸಂದರ್ಭದಲ್ಲಿ ಸಾಲಗಾರನ ಪರವಾಗಿ ತಾನು ಜೀತವನ್ನು ಮಾಡುವುದಾಗಿ ಸಾಲಿಗನೊಂದಿಗೆ ಒಂದು ಒಪ್ಪಂದವನ್ನುಮಾಡಿಕೊಳ್ಳುವನೋ ಅಥವಾ ಮಾಡಿಕೊಂಡಿರುವನೋ ಅಥವಾ ಮಾಡಿಕೊಂಡಿರುವನೆಂದು

ಪೂರ್ವಭಾವನೆಮಾಡಲಾಗಿದೆಯೋ ಆ ಬಲಾತ್ಕಾರದ ಅಥವಾ ಭಾಗಶಃ ಬಲಾತ್ಕಾರದ ದುಡಿಮೆಯ ಪದ್ಧತಿಯನ್ನು ಇದು ಒಳಗೊಳ್ಳುತ್ತದೆ.

**1ವಿವರಣೆ** :[ಸಂಶಯಗಳ ನಿರ್ವಹಣೆಗಾಗಿ, ಈ ಮೂಲಕ ಘೋಷಿಸಲಾಗಿರುವುದೇನೆಂದರೆ ಯಾವುದೇ ಬಲಾತ್ಕಾರದಅಥವಾ ಭಾಗಶಃ ಬಲಾತ್ಕಾರದ ದುಡಿಮೆಯ ಪದ್ಧತಿಯು – ಅದರಡಿ ಯಾವುದೇ ಕಾರ್ಮಿಕನು1ಈ ವಿವರಣೆಯನ್ನು 1985ರ ಅಧಿನಿಯಮ ಸಂಖ್ಯೆ 73, ಪ್ರಕರಣ 2ರಿಂದ ಸೇರಿಸಲಾಗಿದೆ.

ಗುತ್ತಿಗೆ ಕಾರ್ಮಿಕತೆ (ನಿಯಂತ್ರಣ ಮತ್ತು ನಿರ್ಮೂಲನೆ) ಕಾನೂನು, 1970 (1970ರ 37) ಅದರ ಪ್ರಕರಣ 2 ಉಪಪ್ರಕರಣ (1) ವಾಕ್ಯ (ದಲ್ಲಿ ವ್ಯಾಖ್ಯಾನಿಸಿದಂತೆ ಗುತ್ತಿಗೆ ಕಾರ್ಮಿಕನಾಗಿದ್ದು, ಅಥವಾ ಅಂತಾರಾಜ್ಯ ವಲಸೆ ಕಾರ್ಮಿಕರ(ಕೆಲಸದ ಮತ್ತು ಸೇವೆಯ ಷರತ್ತುಗಳ ನಿಯಂತ್ರಣ) ಕಾನೂನು, 1979 1979ರ 3) ಅದರ ಪ್ರಕರಣ 2 ಉಪಪ್ರಕರಣ (1) ವಾಕ್ಯ(ಇ)ಯಲ್ಲಿ ವ್ಯಾಖ್ಯಾನಿಸಿದಂತೆ ಅಂತಾರಾಜ್ಯ ವಲಸೆ ಕಾರ್ಮಿಕನಾಗಿದ್ದು, ಈ ವಾಕ್ಯದಉಪವಾಕ್ಯ(1)ರಲ್ಲಿ ಉಲ್ಲೇಖಿಸಿದ ರೀತಿಯ ಸಂದರ್ಭಗಳಲ್ಲಿ ದುಡಿಮೆ ಅಥವಾ ಸೇವೆಯನ್ನು ಸಲ್ಲಿಸಲುನಿರ್ಬಂಧಿತನಾಗಿದ್ದರೆ ಅಥವಾ ಉಪವಾಕ್ಯ (2) ರಿಂದ (4) ರಲ್ಲಿ ಉಲ್ಲೇಖಿಸಿದ ಎಲ್ಲಾ ಅಥವಾ ಯಾವುದೇ ನ್ಯೂನತೆಗಳಿಗೆಒಳತುಪಡಿಸಿದರೆ, ಈ ವಾಕ್ಯದ ಅರ್ಥದೊಳಗೆ "ಜೀತ ಪದ್ಧತಿ" ಎನಿಸುವುದು]

(ಹೆಚ್) ಒಬ್ಬ ವ್ಯಕ್ತಿಗೆ ಸಂಬಂಧಿಸಿದಂತೆ "ಕುಟುಂಬ" ಎಂಬುದು ಅಂತಹ ವ್ಯಕ್ತಿಯ ಪೂರ್ವಜ ಅಥವಾ ವಂಶಜನನ್ನುಒಳಗೊಳ್ಳುತ್ತದೆ;

(ಐ) ಯಾವುದೇ ದುಡಿಮೆಗೆ ಸಂಬಂಧಿಸಿದಂತೆ "ನಾಮಮಾತ್ರ ಮಜೂರಿ" ಎಂದರೆ–

(ಎ) ಅದೇ ಅಥವಾ ಅಂತದೇ ದುಡಿಮೆಯ ಸಂಬಂಧದಲ್ಲಿ ಸರ್ಕಾರವು ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ವಿಧಿಯ ಮೇರೆಗೆ ಗೊತ್ತುಪಡಿಸಿದ ಕನಿಷ್ಠ ಮಜೂರಿಗಿಂತ ಕಡಿಮೆಯಿರುವ ಮಜೂರಿ, ಮತ್ತು

(ಬಿ) ಯಾವುದೇ ದುಡಿಮೆಯ ಪ್ರಕಾರಕ್ಕೆ ಸಂಬಂಧಿಸಿದಂತೆ ಅಂತಹ ಕನಿಷ್ಠ ಮಜೂರಿಯನ್ನು ಗೊತ್ತುಪಡಿಸದಿರುವಲ್ಲಿ, ಅದೇ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ದುಡಿಮೆದಾರರಿಗೆ ಅದೇ ಅಥವಾ ಅಂಥದೇದುಡಿಮೆಗಾಗಿ ಸಾಮಾನ್ಯವಾಗಿ ಸಂದಾಯ ಮಾಡುತ್ತಿರುವ ಮಜೂರಿಗಿಂತಲೂ ಕಡಮೆಯಿರುವ ಮಜೂರಿ;

(ಜೆ) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳಿಂದ ನಿಯಮಿಸಲಾದುದು.

**3. ಅಧಿನಿಯಮವು ಅಧ್ಯಾರೋಹಿ ಪರಿಣಾಮವುಳ್ಳದಾಗಿರತಕ್ಕುದು** – ಈ ಅಧಿನಿಯಮದ ಉಪಬಂಧಗಳು, ಈಅಧಿನಿಯಮವಲ್ಲದ ಇತರ ಯಾವುದೇ ಅಧಿನಿಯಮದಲ್ಲಿ ಅಥವಾ ಈ ಅಧಿನಿಯನಮವಲ್ಲದ ಇತರ ಯಾವುದೇಅಧಿನಿಯಮದ ಕಾರಣದಿಂದಾಗಿ ಪರಿಣಾಮಕಾರಿಯಾಗಿರುವ ಯಾವುದೇ ಲಿಖಿತದಲ್ಲಿ, ಅವುಗಳಿಗೆ ಅಸಂಗತವಾಗಿ ಏನೇಇದ್ದರೂ ಪರಿಣಾಮಕಾರಿಯಾಗಿರತಕ್ಕುದು.

## ಅಧ್ಯಾಯ II

## ಜೀತ ಪದ್ಧತಿಯ ರದ್ದತಿ

**4. ಜೀತ ಪದ್ಧತಿಯ ರದ್ದತಿ** :(1) ಈ ಅಧಿನಿಯಮದ ಪ್ರಾರಂಭದಂದು ಜೀತ ಪದ್ಧತಿಯ ರದ್ದತಿಯಾಗತಕ್ಕುದುಮತ್ತು ಪ್ರತಿಯೊಬ್ಬ ಜೀತದಾಳೂ ಅಂತಹ ಪ್ರಾರಂಭದಂದು, ಯಾವುದೇ ಜೀತವನ್ನು ಮಾಡುವ ಯಾವುದೇಬಾಧ್ಯತೆಯಿಂದ ಮುಕ್ತನಾಗತಕ್ಕುದು ಮತ್ತು ವಿಮೋಚಿತನಾಗತಕ್ಕುದು.

(2) ಈ ಅಧಿನಿಯಮವು ಪ್ರಾರಂಭವಾದ ಅನಂತರ, ಯಾವ ವ್ಯಕ್ತಿಯೂ–

(ಎ) ಜೀತ ಪದ್ಧತಿಯ ಮೇರೆಗೆ ಅಥವಾ ಅದಕ್ಕೆ ಅನುಸಾರವಾಗಿ ಯಾವುದೇ ಮುಂಗಡ ಸಂದಾಯವನ್ನುಮಾಡತಕ್ಕುದಲ್ಲ; ಅಥವಾ

(ಬಿ) ಯಾವುದೇ ಜೀತವನ್ನು ಅಥವಾ ಇತರ ಪ್ರಕಾರದ ಬಲಾತ್ಕಾರದ ದುಡಿಮೆಯನ್ನು ಮಾಡಬೇಕೆಂದು ಯಾವನೇ ವ್ಯಕ್ತಿಯನ್ನು ಒತ್ತಾಯಿಸತಕ್ಕುದಲ್ಲ.

**5. ಒಪ್ಪಂದ, ರೂಢಿ, ಇತ್ಯಾದಿಗಳು ಶೂನ್ಯವಾಗುತ್ತವೆ.** – ಈ ಅಧಿನಿಯಮವು ಪ್ರಾರಂಭವಾದಂದು (ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುನ್ನ ಅಥವಾ ಅದರ ಅನಂತರ ಮಾಡಿಕೊಂಡ ಅಥವಾ ನಿರ್ವಹಿಸಲಾದ)ಯಾವುದರ ಕಾರಣದಿಂದ ಯಾವನೇ ವ್ಯಕ್ತಿ, ಅಥವಾ ಅವನ ಕುಟುಂಬದ ಯಾವನೇ ವ್ಯಕ್ತಿ ಅಥವಾ ಅವನ ಅವಲಂಬಿತನುಜೀತದಾಳಿನಂತೆ ಯಾವುದೇ ಕೆಲಸ ಮಾಡಲು ಅಥವಾ ಯಾವುದೇ ಸೇವೆಯನ್ನು ಸಲ್ಲಿಸಲು ಅಗತ್ಯಪಡಿಸಲಾಗಿದೆಯೋ ಆಯಾವುದೇ ರೂಢಿ, ಅಥವಾ ಸಂಪ್ರದಾಯ, ಅಥವಾ ಯಾವುದೇ ಕರಾರು, ಒಪ್ಪಂದ, ಅಥವಾ ಇತರ ಲಿಖಿತವುಶೂನ್ಯವಾಗತಕ್ಕುದು ಮತ್ತು ಜಾರಿಗೆ ಬರತಕ್ಕುದಲ್ಲ.

## ಅಧ್ಯಾಯ III

## ಜೀತಋಣವನ್ನು ವಾಪಸು ಮಾಡಬೇಕಾದ ಹೊಣೆಗಾರಿಕೆಯ ಅಳಿವು

**6. ಜೀತಋಣವನ್ನು ವಾಪಸು ಮಾಡಬೇಕಾದ ಹೊಣೆಗಾರಿಕೆಯು ಅಳಿದು ಹೋಗತಕ್ಕದು. –**

(1) ಈ ಅಧಿನಿಯಮದ ಪ್ರಾರಂಭದಂದು, ಯಾವುದೇ ಜೀತಋಣವನ್ನು ಅಥವಾ ಅಂತಹ ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ ಅಂತಹ ಜೀತಋಣದಲ್ಲಿ ತೀರಿಸದೆ ಉಳಿದ ಭಾಗವನ್ನು ವಾಪಸು ಮಾಡಲು ಜೀತದಾಳಿಗೆ ಇರುವಪ್ರತಿಯೊಂದು ಬಾಧ್ಯತೆಯೂ ಅಳಿದು ಹೋಗಿದೆಯೆಂದು ಭಾವಿಸತಕ್ಕುದು.

(2) ಈ ಅಧಿನಿಯಮದ ಪ್ರಾರಂಭದ ಅನಂತರ, ಯಾವುದೇ ಜೀತಋಣ ಅಥವಾ ಅದರ ಯಾವುದೇ ಭಾಗದವಸೂಲಿಗಾಗಿ ಯಾವುದೇ ಸಿವಿಲ್ ನ್ಯಾಯಾಲಯದಲ್ಲಿ ಅಥವಾ ಯಾವುದೇ ಇತರ ಪ್ರಾಧಿಕಾರದ ಮುಂದೆ ಯಾವುದೇದಾವೆಗೆ ಅಥವಾ ಇತರ ವ್ಯವಹರಣೆಗೆ ಅವಕಾಶವಿರತಕ್ಕುದಲ್ಲ.

(3) ಜೀತಋಣದ ವಸೂಲಿಗಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಮಾಡಿದ ಮತ್ತು ಅಂತಹ ಪ್ರಾರಂಭಕ್ಕೆ ಮೊದಲು ಪೂರ್ಣವಾಗಿ ಸಮಾಧಾನವಾಗದಿದ್ದ ಪ್ರತಿಯೊಂದು ಡಿಕ್ರಿ ಅಥವಾ ಆದೇಶವನ್ನು, ಅಂತಹಪ್ರಾರಂಭದ ಅನಂತರ, ಪೂರ್ಣವಾಗಿ ಸಮಾಧಾನವಾಗಿದೆಯೆಂಬುದಾಗಿ ಭಾವಿಸತಕ್ಕುದು.

(4) ಯಾವುದೇ ಜೀತಋಣದ ವಸೂಲಿಗಾಗಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಮಾಡಿದ ಪ್ರತಿಯೊಂದುಜಪ್ತಿಯೂ, ಅಧಿನಿಯಮವು ಪ್ರಾರಂಭವಾದ ಕೂಡಲೆ ತೆರವಾಗತಕ್ಕುದು ಮತ್ತು ಅಂತಹ ಜಪ್ತಿಗೆ ಅನುಸಾರವಾಗಿಜೀತದಾಳಿನ ಯಾವುದೇ ಚರಸ್ವತ್ತನ್ನು ಅಭಿಗ್ರಹಣ ಮಾಡಿರುವಲ್ಲಿ ಮತ್ತು ಅವನ ಅಭಿರಕ್ಷೆಯಿಂದ ತೆಗೆದುಕೊಂಡಿರುವಲ್ಲಿಮತ್ತು ಮಾರಾಟ ಮಾಡುವ ಮುನ್ನ ಅದನ್ನು ಯಾವುದೇ ನ್ಯಾಯಾಲಯ ಅಥವಾ ಇತರ ಪ್ರಾಧಿಕಾರದ ಅಭಿರಕ್ಷೆಯಲ್ಲಿಇಟ್ಟಿರುವಲ್ಲಿ, ಅಂತಹ ಚರಸ್ವತ್ತಿನ ಸ್ವಾಧೀನವನ್ನು ಈ ಅಧಿನಿಯಮದ ಪ್ರಾರಂಭದ ಅನಂತರ ಸಾಧ್ಯವಿರುವಷ್ಟು ಬೇಗನೆ,ಜೀತದಾಳಿಗೆ ವಾಪಸು ಮಾಡತಕ್ಕುದು.

(5) ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮೊದಲು, ಜೀತದಾಳಿಗೆ ಅಥವಾ ಅವನ ಕುಟುಂಬದ ಒಬ್ಬವ್ಯಕ್ತಿಗೆ ಅಥವಾ ಇತರ ಅವಲಂಬಿತನಿಗೆ ಸೇರಿದ ಯಾವುದೇ ಸ್ವತ್ತಿನ ಸ್ವಾಧೀನವನ್ನು ಯಾವುದೇ ಜೀತ ಋಣದವಸೂಲಿಗಾಗಿ ಯಾವನೇ ಪ್ರಾರಂಭವಾದ ಅನಂತರ ಸಾಧ್ಯವಿರುವಷ್ಟು ಬೇಗನೆ ಯಾರಿಂದ ಅದನ್ನು ಅಭಿಗ್ರಹಣಮಾಡಲಾಗಿತ್ತೋ ಆ ವ್ಯಕ್ತಿಗೆ ಸ್ವತ್ತಿನ ಸ್ವಾಧೀನವನ್ನು ವಾಪಸು ಮಾಡತಕ್ಕುದು.

(6) (4)ನೇ ಅಥವಾ (5)ನೇ ಉಪಪ್ರಕರಣದಲ್ಲಿ ನಿರ್ದೇಶಿತವಾದ ಯಾವುದೇ ಸ್ವತ್ತಿನ ಸ್ವಾಧಿನವನ್ನು ಈ ಅಧಿನಿಯಮವು ಪ್ರಾರಂಭವಾದ ಮೂವತ್ತು ದಿನಗಳೊಳಗೆ ವಾಪಸು ಮಾಡದಿದ್ದರೆ, ಬಾಧಿತನಾದ ವ್ಯಕ್ತಿಯುನಿಯಮಿಸಬಹುದಾದಂತಹ ಕಾಲದೊಳಗೆ, ಅಂತಹ ಸ್ವತ್ತಿನ ಸ್ವಾಧೀನದ ವಾಪಸಾತಿಗಾಗಿ ನಿಯಮಿಸಲಾದ ಪ್ರಾಧಿಕಾರಕ್ಕೆಅರ್ಜಿ ಸಲ್ಲಿಸಬಹುದು ಮತ್ತು ಆ ನಿಯಮಿಸಲಾದ ಪ್ರಾಧಿಕಾರವು, ಸಾಲಿಗನಿಗೆ

ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶಕೊಟ್ಟ ಅನಂತರ, ಸಂಬಂಧಪಟ್ಟ ಸ್ವತ್ತನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತಹ ಕಾಲದೊಳಗೆ ಅರ್ಜಿದಾರನಿಗೆವಾಪಸು ಮಾಡಬೇಕೆಂದು ಸಾಲಿಗನಿಗೆ ನಿರ್ದೇಶಿಸಬಹುದು.

(7) ನಿಯಮಿಸಲಾದ ಯಾವುದೇ ಪ್ರಾಧಿಕಾರವು (6)ನೇ ಉಪಪ್ರಕರಣದ ಮೇರೆಗೆ ಮಾಡಿದ ಆದೇಶವನ್ನು,ಸಿವಿಲ್ ನ್ಯಾಯಾಲಯವು ಮಾಡಿದ ಆದೇಶವೆಂಬುದಾಗಿ ಭಾವಿಸತಕ್ಕುದು ಮತ್ತು ಸಾಲಿಗನು ಸ್ವಯಿಚ್ಛೆಯಿಂದ ವಾಸಿಸುವಅಥವಾ ವ್ಯವಹಾರವನ್ನು ನಡೆಸುವ ಅಥವಾ ಲಾಭಕ್ಕಾಗಿ ಖುದ್ದಾಗಿ ಕೆಲಸ ಮಾಡುವ ಸ್ಥಳೀಯ ಪರಿಮಿತಿಗಳ ಮೇಲೆಅತ್ಯಂತ ಕಡಮೆ ಮೌಲ್ಯಾಧಾರಿತ ಅಧಿಕಾರ ವ್ಯಾಪ್ತಿಯನ್ನುಳ್ಳ ನ್ಯಾಯಾಲಯವು ಅದನ್ನು ಜಾರಿಗೆ ತರಬಹುದು.

(8) ಜೀತಋಣದ ವಸೂಲಿಗಾಗಿ ಡಿಕ್ರಿ ಅಥವಾ ಆದೇಶವನ್ನು ಜಾರಿಗೊಳಸುವಲ್ಲಿ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಜಪ್ತಿಯಾದ ಸ್ವತ್ತನ್ನು ಮಾರಾಟ ಮಾಡಿದ್ದಲ್ಲಿ ಅಂತಹ ಮಾರಾಟವು ಈ ಅಧಿನಿಯಮದ ಯಾವುದೇಉಪಬಂಧದಿಂದ ಬಾಧಿತವಾಗತಕ್ಕುದಲ್ಲವೆಂದು ಸಂದೇಹಗಳ ನಿವಾರಣೆಗಾಗಿ ಈ ಮೂಲಕ ಘೋಷಿಸಲಾಗಿದೆ.

ಪರಂತು, ಜೀತದಾಳು ಅಥವಾ ಈ ಬಗ್ಗೆ ಅವನಿಂದ ಪ್ರಾಧಿಕೃತನಾದ ಒಬ್ಬ ಅಭಿಕರ್ತನು ಈ ಅಧಿನಿಯವುಪ್ರಾರಂಭವಾದ ಐದು ವರ್ಷಗಳ ಒಳಗೆ ಯಾವುದೇ ಕಾಲದಲ್ಲಿ, ಮಾರಾಟದ ಇಸ್ತಿಹಾರಿನಲ್ಲಿ ನಿರ್ದಿಷ್ಟಪಡಿಸಿದ ಯಾವಮೊಬಲಗಿನ ವಸೂಲಿಗಾಗಿ ಮಾರಾಟ ಮಾಡಬೇಕೆಂದು ಆದೇಶಿಸಲಾಗಿತ್ತೋ ಅಂಥ ಮೊಬಲಗನ್ನು, ಡಿಕ್ರಿದಾರನು ಆಇಸ್ತಿಹಾರಿನ ದಿನಾಂಕದ ತರುವಾಯ ಪಡೆದಿರಬಹುದಾದ ಯಾವುದೇ ಮೊಬಲಗನ್ನು, ಹಾಗೂ ಮಧ್ಯಕಾಲೀನ ಲಾಭವನ್ನುಅದರಿಂದ ವಜಾ ಮಾಡಿ ಉಳಿದುದನ್ನು, ಡಿಕ್ರಿದಾರನಿಗೆ ಸಂದಾಯ ಮಾಡಲು ನ್ಯಾಯಾಲಯದಲ್ಲಿ ಜಮೆ ಮಾಡಿ, ಮಾರಾಟವನ್ನು ತಳ್ಳಿ ಹಾಕಲು ಅರ್ಜಿ ಸಲ್ಲಿಸಬಹುದು.

(9) ಜೀತದಾಳಿಗೆ ಕೊಟ್ಟ ಯಾವುದೇ ಮುಂಗಡದ ವಸೂಲಿಯ ಬಗೆಗಿನ ದಾವೆ ಅಥವಾ ವ್ಯವಹರಣೆಯನ್ನುಒಳಗೊಂಡು ಜೀತ ಪದ್ಧತಿಯ ಮೇರೆಗಿನ ಯಾವುದೇ ಬಾಧ್ಯತೆಯನ್ನು ಜಾರಿಗೊಳಿಸುವಂತೆ ಮಾಡಲು ಹೂಡಿದ ಯಾವುದೇದಾವೆ ಅಥವಾ ವ್ಯವಹರಣೆಯು ಈ ಅಧಿನಿಯಮದ ಪ್ರಾರಂಭದಂದು ಇತ್ಯರ್ಥವಾಗದೆ ಉಳಿದಿರುವಲ್ಲಿ, ಅಂತಹ ದಾವೆ

ಅಥವಾ ಇತರ ವ್ಯವಹರಣೆಯು ಈ ಅಧಿನಿಯಮವು ಪ್ರಾರಂಭವಾದ ಕೂಡಲೇ ವಜಾ ಆಗತಕ್ಕುದು. (10) ಈ ಅಧಿನಿಯಮವು ಪ್ರಾರಂಭವಾಗುವಂದು, ತೀರ್ಪಿನ ಮೊದಲು ಅಥವಾ ಅನಂತರ, ಸಿವಿಲ್

ಕಾರಾಗೃಹದಲ್ಲಿ ತಡೆಹಿಡಿದಿರಿಸಲಾಗಿರುವ ಪ್ರತಿಯೊಬ್ಬ ಜೀತದಾಳನ್ನೂ ಕೂಡಲೇ, ಅದರಿಂದ ಬಿಡುಗಡೆ ಮಾಡತಕ್ಕುದು.

**7. ಜೀತದಾಳಿನ ಸ್ವತ್ತನ್ನು ಅಡಮಾನ, ಇತ್ಯಾದಿಗಳಿಂದ ಮುಕ್ತವಾಗಿಸತಕ್ಕುದು –**

(1) ಈ ಅಧಿನಿಯಮವು ಪ್ರಾರಂಭವಾಗುವ ನಿಕಟಪೂರ್ವದಲ್ಲಿ ಯಾವುದೇ ಜೀತಋಣದ ಸಂಬಂಧದಲ್ಲಿಯಾವುದೇ ಅಡಮಾನ, ಋಣಭಾರ, ಧಾರಣಾಧಿಕಾರ ಅಥವಾ ಇತರ ಪೂರ್ವಾಧಿಗಳಿಗೆ ಒಳಪಟ್ಟಿದ್ದು ಜೀತದಾಳಿಗೆಸೇರಿರುವ ಎಲ್ಲ ಸವತ್ತು, ಅದು ಜೀತಋಣಕ್ಕೆ ಸಂಬಂಧಿಸಿರುವಷ್ಟರ ಮಟ್ಟಿಗೆ, ಅಂತಹ ಅಡಮಾನ, ಋಣಭಾರ,ಧಾರಣಾಧಿಕಾರ ಅಥವಾ ಇತರ ಪೂರ್ವಾಧಿಗಳಿಂದ ಮುಕ್ತವಾಗಿರತಕ್ಕದು ಮತ್ತು ವಿಮೋಚಿವಾಗಿರತಕ್ಕುದು ಮತ್ತು ಅಂತಹಯಾವುದೇ ಸ್ವತ್ತು ಈ ಅಧಿನಿಯಮವು ಪ್ರಾರಂಭವಾಗುವ ನಿಕಟಪೂರ್ವದಲ್ಲಿ, ಅಡಮಾನದಾರನ ಅಥವಾ ಋಣಭಾರ, ಧಾರಣಾಧಿಕಾರ ಅಥವಾ ಪೂರ್ವಾಧಿಯನ್ನು ಹೊಂದಿರುವವನ ಸ್ವಾಧೀನದಲ್ಲಿರುವಲ್ಲಿ, ಅಂತಹ ಸ್ವತ್ತಿನ ಸ್ವಾಧೀನವನ್ನು(ಅದು ಯಾವುದೇ ಇತರ ಋಣಭಾರಕ್ಕೆ ಒಳಟ್ಟಿದ್ದ ಹೊರತು) ಈ ಅಧಿನಿಯಮವು ಪ್ರಾರಂಭವಾದ ಕೂಡಲೇ ಜೀತದಾಳಿಗೆವಾಪಸು ಮಾಡತಕ್ಕುದು.

(2) (1)ನೇ ಉಪಪ್ರಕರಣದಲ್ಲಿ ನಿರ್ದೇಶಿಸಿದ ಯಾವುದೇ ಸ್ವತ್ತಿನ ಸ್ವಾಧೀನವನ್ನು ಜೀತದಾಳಿಗೆ ವಾಪಸು ಕೊಡುವಲ್ಲಿ ಏನಾದರೂ ವಿಳಂಬವಾಗಿದ್ದರೆ, ಅಂತಹ ಜೀತದಾಳು, ಈ ಅಧಿನಿಯಮವು ಪ್ರಾರಂಭದ ದಿನಾಂಕದಂದುಮತ್ತು ಆ ದಿನಾಂಕದಿಂದ ಅಡಮಾನದಾರನಿಂದ ಅಥವಾ ಧಾರಣಾಧಿಕಾರ, ಋಣಭಾರ, ಅಥವಾ ಪೂರ್ವಾಧಿಯನ್ನುಹೊಂದಿರುವವನಿಂದ ಅಂಥ ಸ್ವತ್ತು ಇರುವ ಸ್ಥಳೀಯ ಪರಿಮಿತಿಗಳ ಮೇಲೆ ಅತ್ಯಂತ ಕಡಮೆ ಮೌಲ್ಯಾಧಾರಿತ ಅಧಿಕಾರವ್ಯಾಪ್ತಿಯನ್ನುಳ್ಳ ಸಿವಿಲ್ ನ್ಯಾಯಾಲಯವು ನಿರ್ದಿಷ್ಟಪಡಿಸಬಹುದಾದಂತಹ ಮಧ್ಯಕಾಲೀನ ಲಾಭಗಳನ್ನು ವಸೂಲು ಮಾಡಿಕೊಳ್ಳಲು ಹಕ್ಕುಳ್ಳವನಾಗಿರತಕ್ಕುದು.

**8. ಮುಕ್ತನಾದ ಜೀತದಾಳನ್ನು ಹೊಲ, ಮನೆ ಇತ್ಯಾದಿಯಿಂದ ಹೊರದೂಡತಕ್ಕದಲ್ಲ –**

(1) ಈ ಅಧಿನಿಯಮದ ಮೇರೆಗೆ ಯಾವುದೇ ಜೀತವನ್ನು ಮಾಡಬೇಕಾದ ಬಾಧ್ಯತೆಯಿಂದ ಮುಕ್ತನಾದ ಮತ್ತುವಿಮೋಚಿತನಾದ ಯಾವ ವ್ಯಕ್ತಿಯನ್ನೂ, ಜೀತದ ಪ್ರತಿಫಲದ ಭಾಗವಾಗಿ ಈ ಅಧಿನಿಯಮದ ಪ್ರಾರಂಭಕ್ಕೆನಿಕಟಪೂರ್ವದಲ್ಲಿ ಅವನ ಅಧಿಭೋಗದಲ್ಲಿದ್ದ ಯಾವುದೇ ಹೊಲ–ಮನೆ ಅಥವಾ ಇತರ ನಿವಾಸದ ಆವರಣಗಳಿಂದಅವನನ್ನು ಹೊರದೂಡತಕ್ಕುದಲ್ಲ.

(2) ಈ ಅಧಿನಿಯಮವು ಪ್ರಾರಂಭವಾದ ಅನಂತರ, ಅಂಥ ಯಾವನೇ ವ್ಯಕ್ತಿಯನ್ನು ಸಾಲಿಗನು (1)ನೇ ಉಪಪ್ರಕರಣದಲ್ಲಿ ನಿರ್ದೇಶಿಸಿರುವ ಯಾವುದೇ ಹೊಲ–ಮನೆ ಅಥವಾ ಇತರ ನಿವಾಸದ ಆವರಣಗಳಿಂದಹೊರದೂಡಿದರೆ, ಅಂಥ ಹೊಲ–ಮನೆ ಅಥವಾ ನಿವಾಸದ ಆವರಣವು ಇರುವ

ಉಪವಿಭಾಗದ ಆಡಳಿತವನ್ನುಹೊಂದಿರುವ ಕಾರ್ಯಾಂಗ ದಂಡಾಧಿಕಾರಿಯು, ಕಾರ್ಯಸಾಧ್ಯವಾದಷ್ಟು ಬೇಗನೆ, ಅಂತಹ ಹೊಲ-ಮನೆ ಅಥವಾ ಇತರನಿವಾಸದ ಆವರಣದ ಸ್ವಾಧೀನವನ್ನು ಜೀತದಾಳಿಗೆ ವಾಪಸು ಕೊಡಿಸತಕ್ಕುದು.

**9. ಅಳಿದು ಹೋದ ಋಣದ ಬಗ್ಗೆ ಸಾಲಿಗನು ಹಣವನ್ನು ಸ್ವೀಕರಿಸತಕ್ಕುದಲ್ಲ –**

(1) ಈ ಅಧಿನಿಯಮದ ಉಪಬಂಧಗಳ ಮೂಲಕ ಅಳಿದುಹೋದ ಅಥವಾ ಅಳಿದುಹೋಗಿದೆಯೆಂದು ಭಾವಿಸಲಾದ ಅಥವಾ ಪೂರ್ಣವಾಗಿ ಸಮಾಧಾನವಾಗಿದೆ ಎಂದು ಭಾವಿಸಲಾದ ಯಾವುದೇ ಜೀತಋಣಕ್ಕಾಗಿ ಯಾವಸಾಲಿಗನೂ ಯಾವುದೇ ಸಂದಾಯವನ್ನು ಸ್ವೀಕರಿಸತಕ್ಕುದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವನೇ ವ್ಯಕ್ತಿಯು ಮೂರು ವರ್ಷಗಳವರೆಗಿನ ಕಾರಾವಾಸದ ದಂಡನೆಯಿಂದ ಮತ್ತು ಜುಲ್ಮಾನೆಯಿಂದಲೂ ದಂಡನೀಯನಾಗತಕ್ಕುದು.
(3)(2)ನೇ ಉಪಪ್ರಕರಣದ ಮೇರೆಗೆ ಯಾವನೇ ವ್ಯಕ್ತಿಯನ್ನು ಅಪರಾಧಿಯೆಂದು ನಿರ್ಣಯಿಸುವ ನ್ಯಾಯಾಲಯವು, ಆಉಪಪ್ರಕರಣದ ಮೇರೆಗೆ ವಿಧಿಸಬಹುದಾದ ದಂಡಗಳ ಜೊತೆಗೆ, (1)ನೇ ಉಪಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿಪಡೆದುಕೊಂಡಿದ್ದ ಮೊಬಲಗನ್ನು ಜೀತದಾಳಿಗೆ ವಾಪಸು ಮಾಡುವ ಸಲುವಾಗಿ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತಹಅವಧಿಯೊಳಗೆ ನ್ಯಾಯಾಲಯದಲ್ಲಿ ಜಮೆ ಮಾಡಬೇಕೆಂದು ಆ ವ್ಯಕ್ತಿಗೆ ನಿರ್ದೇಶಿಸಬಹುದು.

## ಅಧ್ಯಾಯ IV

## ಕಾರ್ಯಗತಗೊಳಿಸುವ ಪ್ರಾಧಿಕಾರಗಳು

**10. ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸಲು ನಿರ್ದಿಷ್ಟಪಡಿಸಬಹುದಾದ ಪ್ರಾಧಿಕಾರಗಳು–** ಈ ಅಧಿನಿಯಮದ ಉಪಬಂಧಗಳನ್ನು ಯುಕ್ತ ರೀತಿಯಲ್ಲಿ ಜಾರಿಗೊಳಿಸಲಾಗುತ್ತಿದೆಯೆಂಬುದನ್ನು ಖಾತ್ರಿ ಮಾಡಿಕೊಳ್ಳುವಸಲುವಾಗಿ ಅವಶ್ಯಕವಾಗಬಹುದಾದಂತಹ ಶಕ್ತಿಗಳನ್ನು ರಾಜ್ಯ ಸರ್ಕಾರವು ಜಿಲ್ಲಾ ದಂಡಾಧಿಕಾರಿಗೆ ಪ್ರದಾನ ಮಾಡಬಹುದುಮತ್ತು ಅಂತಹ ಕರ್ತವ್ಯಗಳನ್ನು ಅವನಿಗೆ ವಿಧಿಸಬಹುದು ಮತ್ತು ಹಾಗೆ ಪ್ರದಾನ ಮಾಡಿದ ಎಲ್ಲ ಅಥವಾ ಯಾವುವೇ ಶಕ್ತಿಗಳನ್ನು ಚಲಾಯಿಸಲು ಮತ್ತು ವಿಧಿಸಲಾದ ಎಲ್ಲ ಅಥವಾ ಯಾವುದೇ ಕರ್ತವ್ಯಗಳನ್ನು ನಿರ್ವಹಿಸಲು ತನಗೆಅಧೀನನಾದ ಅಧಿಕಾರಿಯನ್ನು ಮತ್ತು ಹಾಗೆ ನಿರ್ದಿಷ್ಟಪಡಿಸಿದ ಅಧಿಕಾರಿಯು ಅಂಥ ಶಕ್ತಿಗಳನ್ನು ಅಥವಾ ಕರ್ತವ್ಯಗಳನ್ನುಚಲಾಯಿಸಬೇಕಾದ ಅಥವಾ ನಿರ್ವಹಿಸಬೇಕಾದ ಸ್ಥಳೀಯ ಪರಿಮಿತಿಗಳನ್ನು ಜಿಲ್ಲಾ ದಂಡಾಧಿಕಾರಿಯುನಿರ್ದಿಷ್ಟಪಡಿಸಬಹುದು.

**11. ಸಾಲ ಸೌಲಭ್ಯ ಖಾತ್ರಿ ಮಾಡಿಕೊಡುವ ಬಗ್ಗೆ ಜಿಲ್ಲಾ ದಂಡಾಧಿಕಾರಿಯ ಮತ್ತು ಇತರ ಅಧಿಕಾರಿಗಳ ಕರ್ತವ್ಯ**– 10ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಪ್ರಾಧಿಕೃತಗೊಳಿಸಿದ ಈ ಅಧಿನಿಯಮವು ಮತ್ತು ಆ ಪ್ರಕರಣದಮೇರೆಗೆ ಜಿಲ್ಲಾ ದಂಡಾಧಿಕಾರಿಯು ನಿರ್ದಿಷ್ಟಪಡಿಸಿದ ಅಧಿಕಾರಿಯು, ಕಾರ್ಯಸಾಧ್ಯವಾದಷ್ಟು ಮಟ್ಟಿಗೆ ವಿಮೋಚಿತನಾದಜೀತದಾಳು ಮುಂದೆ ಯಾವುದೇ ಜೀತಋಣದ ಬಗ್ಗೆ ಕರಾರು ಮಾಡಿಕೊಳ್ಳುವ ಯಾವುದೇ ಪ್ರಸಂಗ ಅಥವಾ ಕಾರಣಉಂಟಾಗದ ಹಾಗೆ ಅವನ ಆರ್ಥಿಕ ಹಿತಾಸಕ್ತಿಗಳನ್ನು ಭದ್ರಪಡಿಸುವ ಮತ್ತು ಸಂರಕ್ಷಿಸುವ ಮೂಲಕ ಅವನ ಕಲ್ಯಾಣವನ್ನುಸಾಧಿಸಲು ಪ್ರಯತ್ನಿಸತಕ್ಕುದು.

**12. ಜಿಲ್ಲಾ ದಂಡಾಧಿಕಾರಿಯ ಮತ್ತು ಅವನಿಂದ ಪ್ರಾಧಿಕೃತರಾದ ಅಧಿಕಾರಿಗಳ ಕರ್ತವ್ಯ** – ಜಿಲ್ಲಾ ದಂಡಾಧಿಕಾರಿಯ ಮತ್ತು ಅವನು 10ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಅಧಿಕಾರಿಯ ಸ್ಥಳೀಯ ಪರಿಮಿತಿಯೊಳಗೆವಾಸಿಸುವ ಯಾವನೇ ವ್ಯಕ್ತಿಯು ಅಥವಾ ಅವನ ಪರವಾಗಿ ಯಾರಾದರೂ ಯಾವುದೇ ಜೀತಗಾರಿಕೆ ಪದ್ಧತಿಯನ್ನು ಅಥವಾಯಾವುದೇ ಇತರ ಪ್ರಕಾರದ ಬಲಾತ್ಕಾರದ ದುಡಿಮೆಯನ್ನು ಈ ಅಧಿನಿಯಮದ ಪ್ರಾರಂಭದ ಅನಂತರ,ಆಚರಿಸುತ್ತಿದ್ದಾನೆಯೇ ಎಂಬುದನ್ನು ವಿಚಾರಿಸುವುದು ಅಂಥ ಪ್ರತಿಯೊಬ್ಬ ಜಿಲ್ಲಾ ದಂಡಾಧಿಕಾರಿಯ ಮತ್ತು ಅವನುನಿರ್ದಿಷ್ಟಪಡಿಸಿದ ಪ್ರತಿಯೊಬ್ಬ ಅಧಿಕಾರಿಯ ಕರ್ತವ್ಯವಾಗಿರತಕ್ಕುದು ಮತ್ತು ಅಂತಹ ವಿಚಾರಣೆಯ ಪರಿಣಾಮವಾಗಿ ಯಾವನೇ ವ್ಯಕ್ತಿಯು ಜೀತ ಪದ್ಧತಿಯನ್ನು ಅಥವಾ ಬಲಾತ್ಕಾರದ ದುಡಿಮೆಯ ಇತರ ಯಾವುದೇ ಪದ್ಧತಿಯನ್ನುಆಚರಿಸುತ್ತಿರುವುದು ಕಂಡು ಬಂದರೆ, ಅವನು ಕೂಡಲೇ ಅಂತಹ ಬಲಾತ್ಕಾರದ ದುಡಿಮೆಯ ಆಚರಣೆಯನ್ನು ನಿರ್ಮೂಲನೆಮಾಡಲು ಅವಶ್ಯಕವಾಗಬಹುದಾದಂಥ ಕ್ರಮವನ್ನು ಕೈಕೊಳ್ಳತಕ್ಕುದು.

## ಅಧ್ಯಾಯ V
## ಜಾಗೃತಾ ಸಮಿತಿಗಳು

**13. ಜಾಗೃತಾ ಸಮಿತಿಗಳು –**

(1) ಪ್ರತಿಯೊಂದು ರಾಜ್ಯ ಸರ್ಕಾರವು, ಸರ್ಕಾರಿ ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ, ಪ್ರತಿಯೊಂದುಜಿಲ್ಲೆಯಲ್ಲಿ ಮತ್ತು ಪ್ರತಿಯೊಂದು ಉಪವಿಭಾಗದಲ್ಲಿ ತಾನು ಸೂಕ್ತವೆಂದು ಆಲೋಚಿಸಬಹುದಾದ ಸಂಖ್ಯೆಯ ಜಾಗೃತಾಸಮಿತಿಗಳನ್ನು ರಚಿಸತಕ್ಕುದು.

(2) ಜಿಲ್ಲೆಗಾಗಿ ರಚಿಸಲಾದ ಪ್ರತಿಯೊಂದು ಜಾಗೃತಾ ಸಮಿತಿಯಲ್ಲಿ ಈ ಕೆಳಕಂಡ ಸದಸ್ಯರು ಇರತಕ್ಕುದು, ಎಂದರೆ:

(ಎ) ಜಿಲ್ಲಾ ದಂಡಾಧಿಕಾರಿಯು, ಅಥವಾ ಅವನು ನಾಮನಿರ್ದೇಶ ಮಾಡುವ ಒಬ್ಬ ವ್ಯಕ್ತಿ; ಅವನು ಅಧ್ಯಕ್ಷನಾಗಿರತಕ್ಕುದು.

(ಬಿ) ಅನುಸೂಚಿತ ಜಾತಿಗಳಿಗೆ ಅಥವಾ ಅನುಸೂಚಿತ ತಂಡಗಳಿಗೆ ಸೇರಿದ ಮತ್ತು ಆ ಜಿಲ್ಲೆಯಲ್ಲಿ ವಾಸಿಸುತ್ತಿರುವ ಹಾಗೂ ಜಿಲ್ಲಾ ದಂಡಾಧಿಕಾರಿಯು ನಾಮ ನಿರ್ದೇಶ ಮಾಡಬೇಕಾದ ಮೂವರು ವ್ಯಕ್ತಿಗಳು;

(ಸಿ) ಜಿಲ್ಲೆಯಲ್ಲಿ ವಾಸಿಸುತ್ತಿರುವ ಹಾಗೂ ಜಿಲ್ಲಾ ದಂಡಾಧಿಕಾರಿಯು ನಾಮ ನಿರ್ದೇಶ ಮಾಡಬೇಕಾದ ಇಬ್ಬರು ಸಮಾಜ ಸೇವಕರು;

(ಡಿ) ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ಜಿಲ್ಲೆಯಲ್ಲಿನ ಸರ್ಕಾರೀ ಅಥವಾ ಸರ್ಕಾರೇತರ ಅಭಿಕರಣಗಳನ್ನುಪ್ರತಿನಿಧಿಸಲು ರಾಜ್ಯ ಸರ್ಕಾರವು ನಾಮ ನಿರ್ದೇಶ ಮಾಡಬೇಕಾದ ಮೂವರಿಗೆ ಮೀರದ ವ್ಯಕ್ತಿಗಳು;

(ಇ) ಜಿಲ್ಲೆಯಲ್ಲಿನ ಆರ್ಥಿಕ ಮತ್ತು ಲೇವಾದೇವಿ ಸಂಸ್ಥೆಗಳನ್ನು ಪ್ರತಿನಿಧಿಸಲು ಲ್ಲಾ ದಂಡಾಧಿಕಾರಿಯು ನಾಮನಿರ್ದೇಶ ಮಾಡಬೇಕಾದ ಒಬ್ಬ ವ್ಯಕ್ತಿ.

(3) ಉಪವಿಭಾಗಕ್ಕಾಗಿ ರಚಿಸಿದ ಪ್ರತಿಯೊಂದು ಜಾಗೃತಾ ಸಮಿತಿಯಲ್ಲಿ ಈ ಕೆಳಕಂಡ ಸದಸ್ಯರು ಇರತಕ್ಕುದು,ಎಂದರೆ –

(ಎ) ಉಪವಿಭಾಗದ ದಂಡಾಧಿಕಾರಿ ಅಥವಾ ಅವನು ನಾಮನಿರ್ದೇಶ ಮಾಡುವ ಒಬ್ಬ ವ್ಯಕ್ತಿ; ಅವನು ಅಧ್ಯಕ್ಷನಾಗಿರತಕ್ಕುದು;

(ಬಿ) ಅನುಸೂಚಿತ ಜಾತಿಗಳಿಗೆ ಮತ್ತು ಅನುಸೂಚಿತ ತಂಡಗಳಿಗೆ ಸೇರಿದ ಮತ್ತು ಆ ಉಪವಿಭಾಗದಲ್ಲಿ ವಾಸಿಸುತ್ತಿರುವ ಹಾಗೂ ಆ ಉಪವಿಭಾಗದ ದಂಡಾಧಿಕಾರಿಯು ನಾಮನಿರ್ದೇಶ ಮಾಡಬೇಕಾದ ಮೂವರು ವ್ಯಕ್ತಿಗಳು;

(ಸಿ) ಉಪವಿಭಾಗದಲ್ಲಿ ವಾಸಿಸುತ್ತಿರುವ ಹಾಗೂ ಉಪವಿಭಾಗದ ದಂಡಾಧಿಕಾರಿ ನಾಮ ನಿರ್ದೇಶ ಮಾಡಬೇಕಾದ ಇಬ್ಬರು ಸಮಾಜ ಸೇವಕರು;

(ಡಿ) ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ, ಉಪವಿಭಾಗದಲ್ಲಿನ ಸರ್ಕಾರೀ ಅಥವಾ ಸರ್ಕಾರೇತರ ಅಭಿಕರಣಗಳನ್ನು ಪ್ರತಿನಿಧಿಸಲು, ಜಿಲ್ಲಾ ದಂಡಾಧಿಕಾರಿ ನಾಮ ನಿರ್ದೇಶ ಮಾಡಬೇಕಾದ, ಮೂವರಿಗೆ ಮೀರದ ವ್ಯಕ್ತಿಗಳು;

(ಇ) ಉಪ ವಿಭಾಗದಲ್ಲಿನ ಆರ್ಥಿಕ ಮತ್ತು ಲೇವಾದೇವಿ ಸಂಸ್ಥೆಗಳನ್ನು ಪ್ರತಿನಿಧಿಸಲು ಉಪ ವಿಭಾಗದ ದಂಡಾಧಿಕಾರಿ ನಾಮನಿರ್ದೇಶ ಮಾಡಬೇಕಾದ ಒಬ್ಬ ವ್ಯಕ್ತಿ;

(ಎಫ್) 10ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಮತ್ತು ಉಪವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿರುವಒಬ್ಬ ಅಧಿಕಾರಿ.

(4) ಪ್ರತಿಯೊಂದು ಜಾಗೃತಾ ಸಮಿತಿಯೂ ತನ್ನ ಕಾರ್ಯ ವಿಧಾನವನ್ನು ತಾನೇ ನಿಮಯಿಸಿಕೊಳ್ಳತಕ್ಕುದು ಮತ್ತುಅವಶ್ಯಕವಾಗಬಹುದಾದಂಥ ಸಿಬ್ಬಂದಿ ನೆರವನ್ನು,

(ಎ) ಜಿಲ್ಲೆಗಾಗಿ ರಚಿಸಿದ ಜಾಗೃತಾ ಸಮಿತಿಯ ಸಂದರ್ಭದಲ್ಲಿ ಜಿಲ್ಲಾ ದಂಡಾಧಿಕಾರಿಯು;

(ಬಿ) ಉಪವಿಭಾಗಕ್ಕಾಗಿ ರಚಿಸಿದ ಜಾಗೃತಾ ಸಮಿತಿಯ ಸಂದರ್ಭದಲ್ಲಿ ಉಪವಿಭಾಗದ ದಂಡಾಧಿಕಾರಿಯು,ಒದಗಿಸತಕ್ಕುದು.

(5) ಜಾಗೃತಾ ಸಮಿತಿಯ ಯಾವ ವ್ಯವಹರಣೆಯೂ ಜಾಗೃತಾ ಸಮಿತಿಯ ರಚನೆಯಲ್ಲಿ ಅಥವಾ ಅದರ ನಡವಳಿಕೆಗಳಲ್ಲಿನ ಯಾವುದೇ ದೋಷಮಾತ್ರದ ಕಾರಣದಿಂದಾಗಿ ವಿಧಿಬಾಹಿರವಾಗತಕ್ಕುದಲ್ಲ.

**14. ಜಾಗೃತಾ ಸಮಿತಿಗಳ ಪ್ರಕಾರ್ಯಗಳು –**

(1) ಪ್ರತಿಯೊಂದು ಜಾಗೃತಾ ಸಮಿತಿಯ ಪ್ರಕಾರ್ಯಗಳು ಈ ಕೆಳಗಿನಂತಿರತಕ್ಕುದು –

(ಎ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ ಉಪಬಂಧಗಳನ್ನುಸೂಕ್ತ ರೀತಿಯಲ್ಲಿ ಕಾರ್ಯಗತಗೊಳಿಸಲಾಗಿದೆಯೆಂಬುದನ್ನು ಖಾತ್ರಿ ಮಾಡಿಕೊಳ್ಳಲು ಮಾಡಿದ ಪ್ರಯತ್ನಗಳ ಬಗ್ಗೆ ಮತ್ತುಕೈಕೊಂಡ ಕ್ರಮದ ಬಗ್ಗೆ ಜಿಲ್ಲಾ ದಂಡಾಧಿಕಾರಿಗೆ ಅಥವಾ ಅವನಿಂದ ಪ್ರಾಧಿಕೃತನಾದ ಯಾವನೇ ಅಧಿಕಾರಿಗೆ ಸಲಹೆಕೊಡುವುದು;

(ಬಿ) ವಿಮೋಚಿತರಾದ ಜೀತದಾಳುಗಳ ಆರ್ಥಿಕ ಮತ್ತು ಸಾಮಾಜಿಕ ಪುನರ್ವಸತಿಗಾಗಿ ಅವಕಾಶ ಕಲ್ಪಿಸುವುದು;

(ಸಿ) ವಿಚೋಚಿತ ಜೀತದಾಳುಗಳಿಗೆ ಸಾಕಷ್ಟು ಸಾಲ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ ಗ್ರಾಮೀಣ ಬ್ಯಾಂಕುಗಳ ಮತ್ತು ಸಹಕಾರಿ ಸಂಘಗಳ ಪ್ರಕಾರ್ಯಗಳನ್ನು ಸಂಯೋಜಿಸುವುದು;

(ಡಿ) ಈ ಅಧಿನಿಯಮದ ಮೇರೆಗೆ ಗಮನಕ್ಕೆ ತೆಗೆದುಕೊಂಡಿರುವ ಅಪರಾಧಗಳ ಸಂಖ್ಯೆಯ ಮೇಲೆ ನಿಗಾಇಡುವುದು;

(ಇ) ಈ ಅಧಿನಿಯಮದ ಮೇರೆಗೆ ಗಮನಕ್ಕೆ ತೆಗೆದುಕೊಳ್ಳಬೇಕಾದ ಅಪರಾಧ ಯಾವುದಾದರೂ ಇದೆಯೇಎಂಬುದರ ಬಗ್ಗೆ ಸಮೀಕ್ಷೆ ಮಾಡುವುದು;

(ಎಫ್) ವಿಮೋಚಿತನಾದ ಜೀತದಾಳಿನ ಅಥವಾ ಅವನ ಕುಟುಂಬದ ಯಾವನೇ ವ್ಯಕ್ತಿಯ ಅಥವಾ ಅವನಮೇಲೆ ಅವಲಂಬಿತನಾದ ಯಾವನೇ ಇತರ ವ್ಯಕ್ತಿಯ ವಿರುದ್ಧ ಯಾವುದೇ ಜೀತದ ಯಾವುದೇ ಪೂರ್ತಿ ಸಾಲವನ್ನುಅಥವಾ ಅದರ ಯಾವುದೇ ಭಾಗವನ್ನು ಅಥವಾ ಜೀತಸಾಲವೆಂದು ಅಂಥ ವ್ಯಕ್ತಿಯು

ಕ್ಲೇಮು ಮಾಡಿದ ಇತರ ಯಾವುದೇಸಾಲವನ್ನು ವಸೂಲು ಮಾಡಲು ಹೂಡಿದ ಯಾವುದೇ ದಾವೆಯಲ್ಲಿ ಅವನ ಪರವಾಗಿ ಪ್ರತಿವಾದಿಸುವುದು.

(2) ವಿಮೋಚಿತ ಜೀತದಾಳಿನ ವಿರುದ್ಧ ಹೂಡಿದ ದಾವೆಯಲ್ಲಿ ಅವನ ಪರವಾಗಿ ಪ್ರತಿವಾದಿಸಲು ಜಾಗೃತಸಮಿತಿಯು ತನ್ನ ಸದಸ್ಯರಲ್ಲಿ ಒಬ್ಬರಿಗೆ ಪ್ರಾಧಿಕಾರವನ್ನು ಕೊಡಬಹುದು ಮತ್ತು ಹಾಗೆ ಪ್ರಾಧಿಕಾರವನ್ನು ಹೊಂದಿದಸದಸ್ಯನನ್ನು ಅಂತಹ ದಾವೆಯ ಉದ್ದೇಶಕ್ಕಾಗಿ ವಿಮೋಚಿತ ಜೀತದಾಳಿನ ಅಧಿಕೃತ ಪ್ರಾಧಿಕರ್ತನೆಂದು ಭಾವಿಸತಕ್ಕುದು.

**15. ರುಜುವಾತಿನ ಭಾರ** – ಜೀತದಾಳು ಅಥವಾ ಜಾಗೃತ ಸಮಿತಿಯು ಯಾವುದೇ ಸಾಲವನ್ನು ಜೀತಸಾಲವೆಂದುಕ್ಲೇಮು ಮಾಡಿದಾಗ ಅಂತಹ ಸಾಲವು ಜೀತಸಾಲವಲ್ಲವೆಂದು ರುಜುವಾತು ಮಾಡುವ ಭಾರವು ಸಾಲಿಗನ ಮೇಲೆಇರತಕ್ಕುದು.

## ಅಧ್ಯಾಯ VI

## ಅಪರಾಧಗಳು ಮತ್ತು ಅಪರಾಧ ವಿಚಾರಣೆಯ ಪ್ರಕ್ರಿಯೆ

**16. ಜೀತದ ಆಚರಣೆಗಾಗಿ ದಂಡನೆ–** ಈ ಅಧಿನಿಯಮವು ಪ್ರಾರಂಭವಾದ ಅನಂತರ ಜೀತಗಾರಿಕೆಯನ್ನು ಮಾಡಲು ಯಾವನೇ ವ್ಯಕ್ತಿಯು ಯಾರನ್ನಾದರೂ ಒತ್ತಾಯಪಡಿಸಿದರೆ ಅವನು ಮೂರು ವರ್ಷಗಳವರೆಗಿನ ಅವಧಿಯಕಾರಾವಾಸದಿಂದ ಮತ್ತು ಎರಡು ಸಾವಿರ ರೂಪಾಯಿಗಳ ವರೆಗಿನ ಜುಲ್ಮಾನೆಯಿಂದ ಸಹ ದಂಡನೀಯನಾಗತಕ್ಕದು.

**17. ಜೀತಸಾಲವನ್ನು ಕೊಡುವುದಕ್ಕಾಗಿ ದಂಡನೆ–** ಈ ಅಧಿನಿಯಮವು ಪ್ರಾರಂಭವಾದ ಅನಂತರ ಯಾವನೇವ್ಯಕ್ತಿಯು ಜೀತಸಾಲವನ್ನು ಕೊಟ್ಟರೆ ಅವನು ಮೂರು ವರ್ಷಗಳ ವರೆಗಿನ ಅವಧಿಯ ಕಾರಾವಾಸದಿಂದ ಮತ್ತು ಎರಡುಸಾವಿರ ರೂಪಾಯಿಗಳ ವರೆಗಿನ ಜುಲ್ಮಾನೆಯಿಂದ ಸಹ ದಂಡನೀಯನಾಗತಕ್ಕದು.

**18. ಜೀತಪದ್ಧತಿಯ ಮೇರೆಗೆ ಜೀತವನ್ನು ಒತ್ತಾಯದಿಂದ ಪಡೆಯುವುದಕ್ಕೆ ದಂಡನೆ–** ಈ ಅಧಿನಿಯಮವು ಪ್ರಾರಂಭವಾದ ಅನಂತರ ಯಾವನೇ ವ್ಯಕ್ತಿಯು ಯಾವುದೇ ರೂಢಿ, ಸಂಪ್ರದಾಯ, ಕರಾರು, ಒಪ್ಪಂದ ಅಥವಾ ಅವನಕುಟುಂಬದ ಯಾವನೇ ಸದಸ್ಯನನ್ನೂ ಅಥವಾ ಅವನನ್ನು ಅವಲಂಬಿಸಿರುವ ಯಾವನೇ ವ್ಯಕ್ತಿಯನ್ನು ಜೀತಪದ್ಧತಿಯ ಪ್ರಕಾರಯಾವುದೇ ಸೇವೆಯನ್ನು ಸಲ್ಲಿಸಲು ಅಗತ್ಯಪಡಿಸಿದರೆ, ಅವನು ಮೂರು ವರ್ಷಗಳ ವರೆಗಿನ ಅವಧಿಯ ಕಾರಾವಾಸದಿಂದಮತ್ತು ಎರಡು ಸಾವಿರ ರೂಪಾಯಿಗಳ ವರೆಗಿನ ಜುಲ್ಮಾನೆಯಿಂದ ಸಹ ದಂಡನೀಯನಾಗತಕ್ಕದು; ಮತ್ತು ಜುಲ್ಮಾನೆಯುವಸೂಲಾದರೆ ಜೀತದಾಳಿನಿಂದ

ಒತ್ತಾಯಪೂರ್ವಕವಾಗಿ ಪಡೆದ ಜೀತದ ಪ್ರತಿಯೊಂದು ದಿವಸಕ್ಕೆ ಐದು ರೂಪಾಯಿಗಳ ದರದಂತೆ ಹಣವನ್ನು ಅವನಿಗೆ ಅದರಿಂದ ಸಂದಾಯ ಮಾಡತಕ್ಕುದು.

**19. ಜೀತದಾಳುಗಳಿಗೆ ಸ್ವತ್ತಿನ ಸ್ವಾಧೀನವನ್ನು ವಾಪಸು ಮಾಡುವಲ್ಲಿ ಲೋಪ ಮಾಡಿದ್ದಕ್ಕಾಗಿ ಅಥವಾ ತಪ್ಪಿದ್ದಕ್ಕಾಗಿ ದಂಡನೆ** – ಈ ಅಧಿನಿಯಮದ ಮೇರೆಗೆ ಯಾವನೇ ಜೀತದಾಳಿಗೆ ಸ್ವತ್ತಿನ ಸ್ವಾಧೀನವನ್ನು ವಾಪಸುಮಾಡುವುದು ಅಗತ್ಯವಿದ್ದು, ಯಾರಾದರೂ ಈ ಅಧಿನಿಯಮವು ಪ್ರಾರಂಭವಾದಂದಿನಿಂದ ಮೂವತ್ತು ದಿನಗಳಅವಧಿಯೊಳಗೆ ಹಾಗೆ ವಾಪಸು ಮಾಡುವಲ್ಲಿ ಲೋಪ ಮಾಡಿದರೆ ಅಥವಾ ತಪ್ಪಿದರೆ, ಅವನು ಒಂದು ವರ್ಷದ ವರೆಗಿನಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳ ವರೆಗಿನ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂದಂಡನೀಯನಾಗತಕ್ಕುದು; ಮತ್ತು ಜುಲ್ಮಾನೆಯು ವಸೂಲಾದರೆ ಜೀತದಾಳಿಗೆ ಸ್ವತ್ತಿನ ಸ್ವಾಧೀನವನ್ನು ವಾಪಸು ಮಾಡದಿದ್ದಪ್ರತಿಯೊಂದು ದಿವಸಕ್ಕೆ ಐದು ರೂಪಾಯಿಗಳ ದರದಂತೆ ಅವನಿಗೆ ಹಣವನ್ನು ಸಂದಾಯ ಮಾಡತಕ್ಕುದು.

**20. ದುಷ್ಪ್ರೇರಣೆಯು ಅಪರಾಧವಾಗಿರತಕ್ಕುದು** – ಈ ಅಧಿನಿಯಮದ ಮೇರೆಗೆ ದಂಡನೀಯವಾದ ಯಾವುದೇಅಪರಾಧವನ್ನು ಮಾಡುವಂತೆ ದುಷ್ಪ್ರೇರಿಸುವ ಯಾವನೇ ವ್ಯಕ್ತಿಯು, ದುಷ್ಪ್ರೇರಿತ ಅಪರಾಧವು ಘಟಿಸಿರಲಿ ಇಲ್ಲದಿರಲಿ,ದುಷ್ಪ್ರೇರಿತ ಅಪರಾಧಕ್ಕಾಗಿ ಉಪಬಂಧಿಸಿದ ದಂಡನೆಯಿಂದ ದಂಡನೀಯನಾಗತಕ್ಕುದು.

ವಿವರಣೆ – ಈ ಅಧಿನಿಯಮದ ಉದ್ದೇಶಕ್ಕಾಗಿ, "ದುಷ್ಪ್ರೇರಣೆ" ಎಂಬುದಕ್ಕೆ ಭಾರತ ದಂಡಸಂಹಿತೆಯ (1860ರ45ರ)ಲ್ಲಿ ಅದಕ್ಕೆ ಕೊಟ್ಟ ಅರ್ಥವೇ ಇರತಕ್ಕುದು.

**21. ಕಾರ್ಯಾಂಗ ದಂಡಾಧಿಕಾರಿಯು ವಿಚಾರಣೆ ಮಾಡಬಹುದಾದ ಅಪರಾಧಗಳು** – (1) ಈ ಅಧಿನಿಯಮದಮೇರೆಗಿನ ಅಪರಾಧಗಳ ವಿಚಾರಣೆಗಾಗಿ ಕಾರ್ಯಾಂಗ ದಂಡಾಧಿಕಾರಿಗೆ ಮೊದಲನೇ ವರ್ಗದ ಅಥವಾ ಎರಡನೇ ವರ್ಗದನ್ಯಾಯಿಕ ದಂಡಾಧಿಕಾರಿಯ ಶಕ್ತಿಗಳನ್ನು ರಾಜ್ಯ ಸರ್ಕಾರವು ಕೊಡಬಹುದು. ಮತ್ತು ಹಾಗೆ ಶಕ್ತಿಗಳನ್ನು ಕೊಟ್ಟ ಕಾರಣದಿಂದಹಾಗೆ ಶಕ್ತಿಗಳನ್ನು ಪಡೆದ ಕಾರ್ಯಾಂಗ ದಂಡಾಧಿಕಾರಿಯನ್ನು ದಂಡ ಪ್ರಕ್ರಿಯಾ ಸಂಹಿತೆ 1973ರ (1974ರ 2)ಉದ್ದೇಶಕ್ಕಾಗಿ ಸಂದರ್ಭಾನುಸಾರ, ಮೊದಲನೇ ಅಥವಾ ಎರಡನೇ ವರ್ಗದ ನ್ಯಾಯಿಕ ದಂಡಾಧಿಕಾರಿಯೆಂದು ಭಾವಿಸತಕ್ಕುದು.

(2) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ದಂಡಾಧಿಕಾರಿಯು ಸಂಕ್ಷಿಪ್ತವಾಗಿ ವಿಚಾರಣೆ ಮಾಡಬಹುದು.

**22. ಅಪರಾಧಗಳ ಸಂಜ್ಞೇಯತೆ** – ಈ ಅಧಿನಿಯಮದ ಮೇರೆಗಿನ ಪ್ರತಿಯೊಂದು ಅಪರಾಧವು ಸಂಜ್ಞೇಯವುಮತ್ತು ಜಾಮೀನೀಯವು ಆಗಿರತಕ್ಕುದು.

**23. ಕಂಪೆನಿಗಳಿಂದ ಅಪರಾಧಗಳು** – ಈ ಅಧಿನಿಯಮದ ಮೇರೆಗೆ ಕಂಪೆನಿಯು ಅಪರಾಧವನ್ನು ಮಾಡಿರುವಲ್ಲಿ,ಅಪರಾಧವು ನಡೆದ ಕಾಲದಲ್ಲಿ ಕಂಪೆನಿಯ ಆಡಳಿತವನ್ನು ಹೊಂದಿದ್ದ ಮತ್ತು ಆ ಕಂಪೆನಿಯ ವ್ಯವಹಾರವನ್ನು ನಡೆಸುವಬಗ್ಗೆ ಕಂಪೆನಿಗೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಹಾಗೂ ಕಂಪೆನಿಯು ಅಪರಾಧದ ಬಗ್ಗೆ ತಪ್ಪುಗಾರರೆಂದುಭಾವಿಸತಕ್ಕುದು ಮತ್ತು ತದನುಸಾರವಾಗಿ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಮೇರೆಗೆ ಯಾವುದೇ ಅಪರಾಧವನ್ನುಕಂಪೆನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾವನೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಇಲ್ಲವೇ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಅವನಯಾವುದೇ ನಿರ್ಲಕ್ಷತೆಯಿಂದಾಗಿ ನಡೆಯಿತೆಂದು ರುಜುವಾತಾದಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿಅಥವಾ ಇತರ ಅಧಿಕಾರಿಯು ಆ ಅಪರಾಧದ ಬಗ್ಗೆ ತಪ್ಪುಗಾರರೆಂದು ಭಾವಿಸತಕ್ಕುದು ಮತ್ತು ತದನುಸಾರವಾಗಿವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕುದು.

**ವಿವರಣೆ** :– ಈ ಪ್ರಕರಣದ ಉದ್ದೇಶಗಳಿಗಾಗಿ –

(ಕ) "ಕಂಪನಿ" ಎಂದರೆ ಯಾವುದೇ ನಿಗಮ, ನಿಕಾಯ ಮತ್ತು ಅದು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಸ್ಥೆಯನ್ನು ಒಳಗೊಳ್ಳುತ್ತದೆ; ಮತ್ತು (ಖ) ಫರ್ಮಿಗೆ ಸಂಬಂಧಿಸಿದ ಹಾಗೆ "ನಿರ್ದೇಶಕ" ಎಂದರೆ ಫರ್ಮಿನ ಪಾಲುಗಾರ.

## ಅಧ್ಯಾಯ VII

## ಸಂಕೀರ್ಣ

**24. ಸದ್ಭಾವನೆಯಿಂದ ಮಾಡಿದ ಕಾರ್ಯದ ಬಗ್ಗೆ ರಕ್ಷಣೆ** – ಈ ಅಧಿನಿಯಮದ ಮೇರೆಗೆ ಸದ್ಭಾವನೆಯಿಂದಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯದ ಬಗ್ಗೆ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರವಿಧಿಕ ವ್ಯವಹರಣೆಯನ್ನು ಯಾವುದೇ ರಾಜ್ಯ ಸರ್ಕಾರ ಅಥವಾ ರಾಜ್ಯ ಸರ್ಕಾರದ ಯಾವನೇ ಅಧಿಕಾರಿಯ ಅಥವಾಜಾಗೃತಾ ಸಮಿತಿಯ ಯಾವನೇ ಸದಸ್ಯನ ವಿರುದ್ಧ ಹೂಡಲು ಅವಕಾಶವಿರತಕ್ಕುದಲ್ಲ.

**25. ಸಿವಿಲ್ ನ್ಯಾಯಾಲಯಗಳ ಅಧಿಕಾರ ವ್ಯಾಪ್ತಿಗೆ ಪ್ರತಿಬಂಧ** – ಈ ಅಧಿನಿಯಮದ ಯಾವುದೇ ಉಪಬಂಧವುಅನ್ವಯಿಸುವ ಯಾವುದೇ ವಿಷಯದ ಸಂಬಂಧದಲ್ಲಿ ಯಾವುದೇ ಸಿವಿಲ್ ನ್ಯಾಯಾಲಯವು ಅಧಿಕಾರ ವ್ಯಾಪ್ತಿಯನ್ನುಹೊಂದಿರತಕ್ಕುದಲ್ಲ ಮತ್ತು ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ

ಮಾಡಿದ ಅಥವಾ ಮಾಡಲುಉದ್ದೇಶಿಸಿದ ಯಾವುದೇ ಕಾರ್ಯದ ಸಂಬಂಧದಲ್ಲಿ ಯಾವುದೇ ಸಿವಿಲ್ ನ್ಯಾಯಾಲವು ಯಾವುದೇ ನಿರ್ಬಂಧಾಜ್ಞೆಯನ್ನುಕೊಡತಕ್ಕುದಲ್ಲ.

**26. ನಿಯಮ ರಚನಾಶಕ್ತಿ –**

(1) ಕೇಂದ್ರ ಸರ್ಕಾರವು, ಸರ್ಕಾರಿ ರಾಜಪತ್ರದಲ್ಲಿ ಅಧಿಸೂಚನೆ ಕೊಡುವುದರ ಮೂಲಕ, ಈ ಅಧಿನಿಯಮದಉಪಬಂಧಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಈ ಮೊದಲು ಹೇಳಿದ ಶಕ್ತಿಗೆ ಬಾಧೆ ಬಾರದಂತೆ ಅಂತಹ ನಿಯಮಗಳು ಈ ಕೆಳಗಿನಎಲ್ಲ ಅಥವಾ ಯಾವುದೇ ವಿಷಯಗಳ ಬಗ್ಗೆ ಉಪಬಂಧಿಸಬಹುದು, ಎಂದರೆ –

(ಎ) 6ನೇ ಪ್ರಕರಣದ (4)ನೇ ಅಥವಾ (5)ನೇ ಉಪಪ್ರಕರಣದಲ್ಲಿ ನಿರ್ದೇಶಿತವಾದ ಸ್ವತ್ತನ್ನು ವಾಪಸು

ಕೊಡುವ ಬಗ್ಗೆ ಆ ಪ್ರಕರಣದ (6)ನೇ ಉಪಪ್ರಕರಣಕ್ಕೆ ಅನುಸಾರವಾಗಿ ಯಾವ ಪ್ರಾಧಿಕಾರಕ್ಕೆ ಅರ್ಜಿಯನ್ನುಸಲ್ಲಿಸಬೇಕಾಗಿದೆಯೋ ಆ ಪ್ರಾಧಿಕಾರ;

(ಬಿ) ನೇಮಿಸಲಾದ ಪ್ರಾಧಿಕಾರಕ್ಕೆ 6ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ಸ್ವತ್ತಿನ ಸ್ವಾಧೀನವನ್ನುವಾಪಸು ಕೊಡಿಸುವುದಕ್ಕಾಗಿ ಅರ್ಜಿಯನ್ನು ಯಾವ ಕಾಲದೊಳಗಾಗಿ ಸಲ್ಲಿಸಬೇಕಾಗಿದೆಯೋ ಆ ಕಾಲ.

(ಸಿ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಲಾದ ಯಾವುದೇ ನಿಯಮದ ಉಪಬಂಧಗಳನ್ನುಕಾರ್ಯಗತಗೊಳಿಸುವುದರ ಬಗ್ಗೆ ಖಾತ್ರಿ ಮಾಡಿಕೊಳ್ಳಲು 14ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಮೇರೆಗೆ ಜಾಗೃತಾ ಸಮಿತಿಯು ಕೈಕೊಳ್ಳಬೇಕಾದ ಕ್ರಮಗಳು

(ಡಿ) ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ

(3) ಈ ಅಧಿನಿಯಮದ ಮೇರೆಗೆ ಕೇಂದ್ರ ಸರ್ಕಾರವು ರಚಿಸಿದ ಪ್ರತಿಯೊಂದು ನಿಯಮವನ್ನು ಅದು ರಚಿತವಾದ ತರುವಾಯ ಆದಷ್ಟು ಬೇಗನೆ, ಸಂಸತ್ತಿನ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗಮೂವತ್ತು ದಿವಸಗಳ ಅವಧಿಯವರೆಗೆ ಇಡತಕ್ಕುದು ಮತ್ತು ಆ ಅವಧಿಯು ಒಂದು ಅಥವಾ ಒಂದರ ಮೇಲೊಂದರಂತೆಬರುವ ಎರಡು ಅಥವಾ ಅದಕ್ಕೂ ಹೆಚ್ಚು ಅಧಿವೇಶನಗಳನ್ನು ಒಳಗೊಳ್ಳಬಹುದು ಮತ್ತು ಮೇಲೆ ಹೇಳಿದ ಅಧಿವೇಶನದಅಥವಾ ಒಂದಾದರೊಂದರ ಮೇಲೆ ಬರುವ ಅಧಿವೇಶನಗಳ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮೊದಲು ಆನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನುರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ ಆ ತರುವಾಯ ಆ ನಿಯಮವು ಸಂದರ್ಭಾನುಸಾರ ಹಾಗೆ

ಮಾರ್ಪಾಟುಹೊಂದಿದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕುದು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆತತ್ಪೂರ್ವದಲ್ಲಿ ಮಾಡಲಾದ ಯಾವುದೇ ಕಾರ್ಯದ ವಿಧಿ ಮಾನ್ಯತೆಗೆ ಬಾಧಕವನ್ನುಂಟು ಮಾಡತಕ್ಕುದಲ್ಲ.

**27. ನಿರಸನ ಮತ್ತು ಉಳಿಸುವಿಕೆ –**

(1) ಜೀತ ಪದ್ಧತಿ (ರದ್ದತಿ) ಅಧ್ಯಾದೇಶ 1975 (1975ರ 17) ಈ ಮೂಲಕ ನಿರಸಿತವಾಗಿದೆ.

(2) ಅಂತಹ ನಿರಸನವಿದ್ದರೂ, ಈ ಅಧ್ಯಾದೇಶದ ಮೇರೆಗೆ ಮಾಡಿದ ಯಾವುದೇ ಕಾರ್ಯ, ಕೈಕೊಂಡ ಯಾವುದೇಕ್ರಮ (ಪ್ರಕಟಿಸಲಾದ ಯಾವುದೇ ಅಧಿಸೂಚನೆ, ಮಾಡಲಾದ ಯಾವುದೇ ನಿರ್ದೇಶನ ಅಥವಾ ನಾಮ ನಿರ್ದೇಶನ,ಕೊಡಲಾದ ಯಾವುದೇ ಶಕ್ತಿ ವಿಧಿಸಲಾದ ಯಾವುದೇ ಕರ್ತವ್ಯ, ಅಥವಾ ನಿರ್ದಿಷ್ಟಪಡಿಸಲಾದ ಯಾವನೇ ಅಧಿಕಾರಿ –ಇವನ್ನೆಲ್ಲ ಒಳಗೊಂಡಂತೆ) ಈ ಅಧಿನಿಯಮದ ಸಂವಾದೀ ಉಪಬಂಧಗಳ ಮೇರೆಗೆ ಮಾಡಿದುದೆಂಬಂತೆ ಅಥವಾಕೈಕೊಂಡುದೆಂಬಂತೆ ಭಾವಿಸತಕ್ಕುದು.

**ಜೀತಪದ್ಧತಿ (ರದ್ದತಿ) ನಿಯಮಗಳು, 1976**

**ವಿಷಯಾನುಕ್ರಮಣಿಕೆ**



**(16–11–1978 ದಿನಾಂಕದ ಜಿ.ಎಸ್.ಆರ್. ನಂ.1455 ಮತ್ತು 12–3–1983ರ ಎಸ್.ಒ.ನಂ. 1755ರಂತೆ ತಿದ್ದುಪಡಿಗೊಂಡಂತೆ)**

**ಜೀತ ಪದ್ಧತಿ (ರದ್ದತಿ) ನಿಯಮಗಳು 19761**

ಜಿ.ಎಸ್.ಆರ್.99(ಇ) – ಜೀತ ಪದ್ಧತಿ (ರದ್ದತಿ) ಅಧಿನಿಯಮ, 1976 (1976ರ 19)ರ 26ನೇ ಪ್ರಕರಣದ(2)ನೇ ಉಪಪ್ರಕರಣದೊಡನೆ ಓದಿಕೊಂಡ (1)ನೇ ಉಪಪ್ರಕರಣದ ಮೂಲಕ ಕೊಡಲಾದ

ಶಕ್ತಿಗಳನ್ನು ಚಲಾಯಿಸಿ,ಕೇಂದ್ರ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ. ಎಂದರೆ –

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ :–** (1) ಈ ನಿಯಮಗಳನ್ನು ಜೀತಪದ್ಧತಿ (ರದ್ದತಿ) ನಿಯಮಗಳು, 1976ಎಂದು ಕರೆಯತಕ್ಕುದು.

(2) ಇವು ಸರಕಾರೀ ರಾಜಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕುದು.

**2. ಪರಿಭಾಷೆ :–** ಈ ನಿಯಮಗಳಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ–

(ಎ) 'ಅಧಿನಿಯಮ' ಎಂದರೆ ಜೀತ ಪದ್ಧತಿ (ರದ್ದತಿ) ಅಧಿನಿಯಮ. 1976 (1976ರ 19) :

(ಬಿ) 'ಜಿಲ್ಲಾ ಜಾಗೃತಾ ಸಮಿತಿ' ಎಂದರೆ 13ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಜಿಲ್ಲೆಗಾಗಿ ರಚಿಸಲಾದ ಜಾಗೃತಾ ಸಮಿತಿ :

(ಸಿ) 'ಪ್ರಕರಣ' ಎಂದರೆ ಆ ಅಧಿನಿಯಮದ ಒಂದು ಪ್ರಕರಣ ;

(ಡಿ) 'ಉಪವಿಭಾಗ ಜಾಗೃತಾ ಸಮಿತಿ' ಎಂದರೆ 13ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಉಪವಿಭಾಗಕ್ಕಾಗಿ ರಚಿಸಲಾದ ಜಾಗೃತಾ ಸಮಿತಿ.

**3. ಜಿಲ್ಲಾ ಜಾಗೃತಾ ಸಮಿತಿಯ ಸದಸ್ಯರ ಪದಾವಧಿ ಮತ್ತು ಅವರು ಸ್ಥಾನವನ್ನು ತೆರವು ಮಾಡುವುದು –** 2[(1)13ನೇ ಪ್ರಕರಣದ (ಬಿ), (ಸಿ), (ಡಿ) ಮತ್ತು (ಇ) ಖಂಡಗಳ ಮೇರೆಗೆ ನಾಮನಿರ್ದೇಶನ ಹೊಂದಿದ ಜಿಲ್ಲಾ ಜಾಗೃತಾಸಮಿತಿಯ ಪ್ರತಿಯೊಬ್ಬ ಸದಸ್ಯನೂ ಸರಕಾರಿ ರಾಜಪತ್ರದಲ್ಲಿ ಅವನ ನಾಮ ನಿರ್ದೇಶನವನ್ನು ಅಧಿಸೂಚಿಸಿದ ದಿನಾಂಕದಿಂದಎರಡು ವರ್ಷಗಳ ಅವಧಿಯವರೆಗೆ ಅಧಿಕಾರದಲ್ಲಿತಕ್ಕುದು ಮತ್ತು ಸದರೀ ಅವಧಿಯು ಮುಕ್ತಾಯವಾದ ಅನಂತರ ತನ್ನಉತ್ತರಾಧಿಕಾರಿಯ ನಾಮನಿರ್ದೇಶನವಾಗುವವರೆಗೆ ಅವನು ಅಧಿಕಾರದಲ್ಲಿ ಮುಂದುವರಿಯತಕ್ಕುದು ಮತ್ತು ಪುನರ್ನಾಮ ನಿರ್ದೇಶನಕ್ಕೆ ಸಹ ಅವನು ಅರ್ಹನಾಗಿರತಕ್ಕುದು].

(2)(1)ನೇ ಉಪನಿಯಮದಲ್ಲಿ ನಿರ್ದೇಶಿತನಾದ ಪ್ರತಿಯೊಬ್ಬ ಸದಸ್ಯನು

(ಎ) **1**ತನ್ನನ್ನು ನಾಮ ನಿರ್ದೇಶನ ಮಾಡಿದ ಪ್ರಾಧಿಕಾರಿಗೆ 30 ದಿನಗಳ ಒಳಗಾಗಿ ಬರಹ ಮೂಲಕವಾಗಿನೋಟೀಸನ್ನು ಕೊಟ್ಟು ತನ್ನ ಪದಕ್ಕೆ ರಾಜೀನಾಮೆ ಕೊಡಬಹುದು ಮತ್ತು ಅಂಥ ರಾಜೀನಾಮೆಯು ಸ್ವೀಕೃತವಾದ ಅನಂತರಅಥವಾ ನೋಟೀಸು ಕೊಟ್ಟ 30 ದಿನದ ಅನಂತರ ಯಾವುದು ಮೊದಲು ಸಂಭವಿಸುತ್ತೋ ಅದರ ಪ್ರಕಾರ, ಅವನು ತನ್ನಪದವನ್ನು ತೆರವು ಮಾಡಿದ್ದಾನೆಂದು ಭಾವಿಸತಕ್ಕುದು;

[1. ಭಾರತ ಸರ್ಕಾರದ ವಿಶೇಷ ರಾಜಪತ್ರ, ಭಾಗ II, ಪ್ರಕರಣ 3(i) ದಿನಾಂಕ 28-2-1976 ಪುಟ 491-93.

2. ಉಪ ನಿಯಮ (1)ನ್ನು ಎಸ್.ಒ.ನಂ.1755 ದಿನಾಂಕ 12-3-1983ರಂತೆ 2-4-1983ರಿಂದ ಕಾರ್ಯಗತಗೊಳ್ಳುವ ಹಾಗೆ ಬದಲಿಸಿದೆ.

3. ವಾಕ್ಯ (ಎ)ಯನ್ನು ಜಿ.ಎಸ್.ಆರ್.ನಂ.1455 ದಿನಾಂಕ 16-11-1978ರಂತೆ 2-12-1978ರಿಂದ ಕಾರ್ಯಗತಗೊಳ್ಳುವ ಹಾಗೆ ಬದಲಿಸಿದೆ.]

(ಬಿ) (i) ಜಿಲ್ಲಾ ಜಾಗೃತಾ ಸಮಿತಿಯ ಒಂದಾದ ಮೇಲೊಂದು ನಡೆಯುವ ಮೂರು ಸಭೆಗಳಿಗೆ ಸಮಿತಿಯಅಧ್ಯಕ್ಷನಿಂದ ತನ್ನ ಗೈರು ಹಾಜರಿಯ ಬಗ್ಗೆ ಅನುಮತಿಯನ್ನು ಪಡೆಯದೆ ಹಾಜರಾಗಲು ತಪ್ಪಿದರೆ, ಅವನು ತನ್ನ ಪದವನ್ನುತೆರವು ಮಾಡಿದ್ದನೆಂದು ಭಾವಿಸತಕ್ಕುದು;

ಪರಂತು ಅವನ ನಾಮನಿರ್ದೇಶನ ಮಾಡಿದ ಪ್ರಾಧಿಕಾರಕ್ಕೆ, ಅಂಥ ಸದಸ್ಯನು ಸಮಿತಿಯ ಒಂದಾದ ಮೇಲೊಂದುನಡೆಯುವ ಮೂರು ಸಭೆಗಳಿಗೆ ಹಾಜರಿರಲು ಸಾಕಷ್ಟು ಕಾರಣಗಳಿಂದ ಅಡ್ಡಿಯುಂಟಾಯಿತೆಂದು ಸಮಾಧಾನವಾದರೆ, ಆಪ್ರಾಧಿಕಾರವು ಅವನಿಗೆ ಸದಸ್ಯತ್ವವನ್ನು ಪುನಃ ಕೊಡಬಹುದು.

(ii) ಕೆಳಕಂಡ ಯಾವುವೇ ಅನರ್ಹತೆಗಳಿಗೆ ಅವನು ಒಳಗಾದರೆ ಅವನು ತನ್ನ ಪದವನ್ನು ತೆರವು ಮಾಡಿದ್ದಾನೆಂದುಭಾವಿಸತಕ್ಕುದು;

(1) ಅವನು ದಿವಾಳಿಯೆಂದು ನ್ಯಾಯಾಲಯದಿಂದ ನಿರ್ಣಯಿಸಲ್ಪಟ್ಟಿದ್ದರೆ;

(2) ಸಕ್ಷಮ ನ್ಯಾಯಾಲಯದಿಂದ ಅವನು ಸ್ವಸ್ಥಚಿತ್ತನೆಂದು ಘೋಷಿಸಲ್ಪಟ್ಟಿದ್ದರೆ;

(3) ಅವನ ನಾಮ ನಿರ್ದೇಶನವನ್ನು ಮಾಡಿದ ಅಪರಾಧಿಯೆಂದು ನಿರ್ಣೀತನಾಗಿದ್ದರೆ;

(ಸಿ) ಅಂಥ ಸದಸ್ಯನನ್ನು ನಾಮನಿರ್ದೇಶನ ಮಾಡಿದ ಪ್ರಾಧಿಕಾರವು, ಯಾವ ಹಿತಾಸಕ್ತಿಯನ್ನು ಪ್ರತಿನಿಧಿಸಲುಅವನನ್ನು ನಾಮನಿರ್ದೇಶನ ಮಾಡಲಾಗಿತ್ತೋ ಅಂಥ ಹಿತಾಸಕ್ತಿಯನ್ನು ಅವನು ಪ್ರತಿನಿಧಿಸುವುದು ಕೊನೆಗೊಂಡಿದೆಯೆಂದುಅಭಿಪ್ರಾಯಪಟ್ಟರೆ, ಅವನನ್ನು ಪದದಿಂದ ತೆಗೆದುಹಾಕಬಹುದು;ಪರಂತು, ಹಾಗೆ ತೆಗೆದುಹಾಕುವುದನ್ನು ವಿರೋಧಿಸಿ ಕಾರಣವನ್ನು ತೋರಿಸುವುದಕ್ಕೆ ಅವನಿಗೆ ಸೂಕ್ತ ಅವಕಾಶವನ್ನುಕೊಟ್ಟ ಹೊರತು, ಈ ಖಂಡದ ಮೇರೆಗೆ ಸದಸ್ಯನನ್ನು ಪದದಿಂದ ತೆಗೆದುಹಾಕತಕ್ಕುದಲ್ಲ.

**4. ಉಪವಿಭಾಗ ಜಾಗೃತಾ ಸಮಿತಿಗಳ ಸದಸ್ಯರ ಪದಾವಧಿ ಮತ್ತು ಅವರು ಸ್ಥಾನವನ್ನು ತೆರವು ಮಾಡುವುದು–**

1[(1)13ನೇ ಪ್ರಕರಣದ (3)ನೇ ಪ್ರಕರಣದ (ಬಿ) (ಸಿ), (ಡಿ) ಮತ್ತು (ಇ) ಖಂಡಗಳ ಮೇರೆಗೆ ನಾಮನಿರ್ದೇಶನಹೊಂದಿದ ಉಪವಿಭಾಗ ಜಾಗೃತಾ ಸಮಿತಿಯ ಪ್ರತಿಯೊಬ್ಬ ಸದಸ್ಯನು ಸರಕಾರೀ ರಾಜಪತ್ರದಲ್ಲಿ ಅವನನಾಮನಿರ್ದೇಶನವನ್ನು ಅಧಿಸೂಚಿಸಿದ ದಿನಾಂಕದಿಂದ ಎರಡು ವರ್ಷಗಳ ಮುಕ್ತಾಯದ ಅನಂತರ ತನ್ನ ಉತ್ತರಾಧಿಕಾರಿಯನಾಮನಿರ್ದೇಶನವಾಗುವವರೆಗೆ ಅವನು ಅಧಿಕಾರದಲ್ಲಿ ಮುಂದುವರಿಯತಕ್ಕುದು ಮತ್ತು ಪುನರ್ನಾಮ ನಿರ್ದೇಶನಕ್ಕೆ ಸಹಅವನು ಅರ್ಹನಾಗಿರತಕ್ಕುದು.

(2) (1)ನೇ ಉಪನಿಯಮದಲ್ಲಿ ನಿರ್ದೇಶಿತನಾದ ಪ್ರತಿಯೊಬ್ಬ ಸದಸ್ಯನೂ –

(ಎ) 2ತನ್ನನ್ನು ನಾಮನಿರ್ದೇಶನ ಮಾಡಿದ ಪ್ರಾಧಿಕಾರಿಗೆ 30 ದಿನಗಳ ಒಳಗಾಗಿ ಬರಹ ಮೂಲಕವಾಗಿ ನೋಟೀಸನ್ನು ಕೊಟ್ಟು ತನ್ನ ಪದಕ್ಕೆ ರಾಜೀನಾಮೆ ಕೊಡಬಹುದು ಮತ್ತು ಅಂಥ ರಾಜೀನಾಮೆಯು ಸ್ವೀಕೃತವಾದ ಅನಂತರ, ಅವನು ತನ್ನ ಪದವನ್ನು ತೆರವು ಮಾಡಿದ್ದಾನೆಂದು ಭಾವಿಸತಕ್ಕುದು;

(ಬಿ) (i) ಉಪವಿಭಾಗ ಜಾಗೃತಾ ಸಮಿತಿಯ ಒಂದಾದ ಮೇಲೊಂದರಂತೆ ನಡೆಯುವ ಮೂರು ಸಭೆಗಳಿಗೆ ಆಸಮಿತಿಯ ಅಧ್ಯಕ್ಷನಿಂದ ಗೈರುಹಾಜರಿಯ ಬಗ್ಗೆ ಅನುಮತಿಯನ್ನು ಪಡೆಯದೆ ಒಂದೇ ಸಮನೆ ಹಾಜರಾಗಲು ತಪ್ಪಿದರೆ,ಅವನು ತನ್ನ ಪದವನ್ನು ತೆರವು ಮಾಡಿದ್ದಾನೆಂದು ಭಾವಿಸತಕ್ಕುದು;

ಪರಂತು, ಅವನ ನಾಮನಿರ್ದೇಶನ ಮಾಡಿದ ಪ್ರಾಧಿಕಾರಕ್ಕೆ, ಅಂಥ ಸದಸ್ಯನು ಸಮಿತಿಯ ಒಂದಾದ ಮೇಲೊಂದರಂತೆನಡೆಯುವ ಮೂರು ಸಭೆಗಳಿಗೆ ಹಾಜರಿರಲು ಸಾಕಷ್ಟು ಕಾರಣಗಳಿಂದ ಅಡ್ಡಿಯುಂಟಾಯಿತೆಂದು ಸಮಾಧಾನವಾದರೆ, ಆಪ್ರಾಧಿಕಾರಿಯು ಅವನಿಗೆ ಸದಸ್ಯತ್ವವನ್ನು ಪುನಃ ಕೊಡಬಹುದು.

(ii) ಕೆಳಕಂಡ ಯಾವುದೇ ಅನರ್ಹತೆಗಳಿಗೆ ಅವನು ಒಳಗಾದರೆ ಅವನು ತನ್ನ ಪದವನ್ನು ತೆರವು ಮಾಡಿದ್ದಾನೆಂದು ಭಾವಿಸತಕ್ಕುದು :–

(1) ಅವನು ದಿವಾಳಿಯೆಂದು ನ್ಯಾಯಾಲಯದಿಂದ ನಿರ್ಣಯಿಸಲ್ಪಟ್ಟಿದ್ದರೆ;

[1. ಉಪ ನಿಯಮ (1)ನ್ನು ಎಸ್.ಒ.ನಂ.1755 ದಿನಾಂಕ 12–3–1983ರಂತೆ 2–4–1983ರಿಂದ ಕಾರ್ಯಗತಗೊಳ್ಳುವ ಹಾಗೆ ಬದಲಿಸಿದೆ.

2. ವಾಕ್ಯ (ಎ)ಯನ್ನು ಜಿ.ಎಸ್.ಆರ್.ನಂ.1455 ದಿನಾಂಕ 16–11–1978ರಂತೆ 2–12–1978ರಿಂದ ಕಾರ್ಯಗತಗೊಳ್ಳುವ ಹಾಗೆ ಬದಲಿಸಿದೆ.]

(2) ಸಕ್ಷಮ ನ್ಯಾಯಾಲಯದಿಂದ ಅವನು ಅಸ್ವಸ್ಥಚಿತ್ತನೆಂದು ಘೋಷಿಸಲ್ಪಟ್ಟಿದ್ದರೆ;

(3) ಅವನ ನಾಮನಿರ್ದೇಶನವನ್ನು ಮಾಡಿದ ಪ್ರಾಧಿಕಾರದ ಅಭಿಪ್ರಾಯದಲ್ಲಿ ನೈತಿಕ ಪತನವನ್ನು ಒಳಗೊಳ್ಳುವ ಅಪರಾಧಕ್ಕಾಗಿ ಅವನು ಅಪರಾಧಿಯೆಂದು ನಿರ್ಣೀತನಾಗಿದ್ದರೆ;

(ಸಿ) ಅಂಥ ಸದಸ್ಯನನ್ನು ನಾಮ ನಿರ್ದೇಶನ ಮಾಡಿದ ಪ್ರಾಧಿಕಾರವು,ಯಾವ ಹಿತಾಸಕ್ತಿಯನ್ನು ಅವನು ಪ್ರತಿನಿಧಿಸುವುದು ಕೊನೆಗೊಂಡಿದೆಯೆಂದು ಅಭಿಪ್ರಾಯಪಟ್ಟರೆ, ಅದು ಅವನನ್ನುಪದದಿಂದ ತೆಗೆದುಹಾಕಬಹುದು;

ಪರಂತು ಹಾಗೆ ತೆಗೆದು ಹಾಕುವುದನ್ನು ವಿರೋಧಿಸಿ ಕಾರಣವನ್ನು ತೋರಿಸುವುದಕ್ಕೆ ಅವನಿಗೆ ಸೂಕ್ತ ಅವಕಾಶವನ್ನುಕೊಟ್ಟ ಹೊರತು, ಈ ಖಂಡದ ಮೇರೆಗೆ ಸದಸ್ಯನನ್ನು ಪದದಿಂದ ತೆಗೆದುಹಾಕತಕ್ಕುದಲ್ಲ.

(3) ಆಕಸ್ಮಿಕವಾಗಿ ತೆರವಾಗಿರುವ ಪದವನ್ನು ಭರ್ತಿ ಮಾಡಲು ನಾಮನಿರ್ದೇಶಿತನಾದ ಸದಸ್ಯನು, ತನ್ನ ಹಿಂದಿನ ಸದಸ್ಯನ ಉಳಿದಿದ್ದ ಅವಧಿಯವರೆಗೆ ಪದದಲ್ಲಿರತಕ್ಕುದು.

**5. 6ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ನಿಯಮಿಸಲಾದ ಪ್ರಾಧಿಕಾರ** – 6ನೇ ಪ್ರಕರಣದ (6)ನೇಉಪಪ್ರಕರಣದ ಮೇರೆಗೆ ಆ ಪ್ರಕರಣದ (4)ನೇ ಅಥವಾ (5) ನೇ ಉಪಪ್ರಕರಣದಲ್ಲಿ ನಿರ್ದೇಶಿಸಲಾದ ಯಾವುದೇಸ್ವತ್ತಿನ ಸ್ವಾಧೀನವನ್ನು ವಾಪಸು ಕೊಡಿಸುವುದಕ್ಕಾಗಿ ಇರುವ ಅರ್ಜಿಯನ್ನು ಮೊದಲನೆಯ ಅಥವಾ ಎರಡನೆಯ ವರ್ಗದನ್ಯಾಯಿಕ ದಂಡಾಧಿಕಾರಿಗಿರುವ ಶಕ್ತಿಗಳನ್ನು 21ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ವಹಿಸಲಾಗಿರುವ ಮತ್ತುಅರ್ಜಿಯನ್ನು ಸಲ್ಲಿಸುವ ಕಾಲದಲ್ಲಿ ಸದರೀ ಸ್ವತ್ತು ಯಾರ ಅಧಿಕಾರ ವ್ಯಾಪ್ತಿಯ ಸ್ಥಳೀಯ ಪರಿಮಿತಿಯೊಳಗೆ ಇರುತ್ತದೋಅಥವಾ ಇದೆಯೆಂದು ನಂಬಲು ಅರ್ಜಿದಾರನಿಗೆ ಕಾರಣವಿರುತ್ತದೋ, ಅಂಥ ಕಾರ್ಯಾಂಗ ದಂಡಾಧಿಕಾರಿಗೆ ಸಲ್ಲಿಸತಕ್ಕುದು.

ಪರಂತು, (1)ನೇ ಉಪನಿಯಮದಲ್ಲಿ ನಿರ್ದೇಶಿಸಲಾದ ಸ್ವತ್ತನ್ನು ವಾಪಸು ಕೊಡಿಸುವುದಕ್ಕಾಗಿರುವ ಅರ್ಜಿಯನ್ನುಸ್ವೀಕರಿಸಲು ಅಧಿಕಾರ ವ್ಯಾಪ್ತಿಯುಳ್ಳ ಇಬ್ಬರು ಕಾರ್ಯಾಂಗ ದಂಡಾಧಿಕಾರಿ ಎಂದರೆ 21ನೇ ಪ್ರಕರಣದ 1ನೇ ಪ್ರಕರಣದಮೇರೆಗೆ ಮೊದಲನೇ ವರ್ಗದ ನ್ಯಾಯಿಕ ದಂಡಾಧಿಕಾರಿಯ ಶಕ್ತಿಗಳನ್ನು ಹೊಂದಿರುವ ಒಬ್ಬ ಕಾರ್ಯಾಂಗದಂಡಾಧಿಕಾರಿಯು ಮತ್ತು ಎರಡನೆಯ ವರ್ಗದ ನ್ಯಾಯಿಕ ದಂಡಾಧಿಕಾರಿಯ ಶಕ್ತಿಗಳನ್ನು ಹೊಂದಿರುವ ಮತ್ತೊಬ್ಬಕಾರ್ಯಾಂಗ ದಂಡಾಧಿಕಾರಿಯು ಇದ್ದರೆ, ಎರಡನೇ ವರ್ಗದ ನ್ಯಾಯಿಕ ಮ್ಯಾಜಿಸ್ಟ್ರೇಟನ ಶಕ್ತಿಗಳನ್ನು ಹೊಂದಿರುವಕಾರ್ಯಾಂಗ ದಂಡಾಧಿಕಾರಿಗೆ ಅರ್ಜಿಯನ್ನು ಸಲ್ಲಿಸತಕ್ಕುದು.

**6. 6ನೇ ಪ್ರಕರಣದ (6)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸಲ್ಲಿಸಬೇಕಾದ ಅವಧಿ** – 6ನೇ ಪ್ರಕರಣದ(6)ನೇ ಉಪಪ್ರಕರಣದ ಮೇರೆಗೆ ಆ ಪ್ರಕರಣದ (4)ನೇ ಅಥವಾ (5)ನೇ ಉಪಪ್ರಕರಣದಲ್ಲಿ

ನಿರ್ದೇಶಿಸಲಾದ ಯಾವುದೇಸ್ವತ್ತಿನ ಸ್ವಾಧೀನವನ್ನು ವಾಪಸು ಕೊಡಿಸುವುದಕ್ಕಾಗಿ ಈ ನಿಯಮಗಳು ಜಾರಿಗೆ ಬಂದ ತೊಂಬತ್ತು ದಿನಗಳಅವಧಿಯೊಳಗಾಗಿ ಅರ್ಜಿಯನ್ನು ಸಲ್ಲಿಸತಕ್ಕುದು.

7. **ಈ ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಖಾತ್ರಿಪಡಿಸಿಕೊಳ್ಳುವುದಕ್ಕಾಗಿ ಜಿಲ್ಲಾ ಜಾಗೃತಾ ಸಮಿತಿಗಳು ಇಡಬೇಕಾದ ದಾಖಲೆಗಳು:–** ಈ ಅಧಿನಿಯಮವನ್ನುಮತ್ತು ನಿಯಮಗಳನ್ನು ಕಾರ್ಯಗತಗೊಳಿಸುವುದನ್ನು ಖಾತ್ರಪಡಿಸಿಗೊಳ್ಳುವುದಕ್ಕಾಗಿ ಪ್ರತಿಯೊಂದು ಜಿಲ್ಲಾ ಜಾಗೃತಾಸಮಿತಿಯು ತನ್ನ ಅಧಿಕಾರವ್ಯಾಪ್ತಿಯ ಸ್ಥಳೀಯ ಪರಿಮಿತಿಯೊಳಗೆ ಜೀತ ಪದ್ಧತಿಯಿಂದ ವಿಮೋಚಿತರಾದವರ ಬಗ್ಗೆ ಈಕೆಳಕಂಡ ರಿಜಿಸ್ಟರುಗಳನ್ನು ಇಡತಕ್ಕುದು: ಎಂದರೆ:–

(ಎ) ಮುಕ್ತರಾದ ಜೀತದಾಳುಗಳ ಹೆಸರುಗಳು ಮತ್ತು ವಿಳಾಸಗಳನ್ನೊಳಗೊಂಡ ರಿಜಿಸ್ಟರು;

(ಬಿ) ಮುಕ್ತನಾದ ಪ್ರತಿಯೊಬ್ಬ ಜೀತದಾಳಿನ ವೃತ್ತಿ, ಕಸುಬು ಮತ್ತು ಆದಾಯಕ್ಕೆ ಸಂಬಂಧಿಸಿದ ಅಂಕಿ ಅಂಶಗಳನ್ನೊಳಗೊಂಡ ರಿಜಿಸ್ಟರು;

(ಸಿ) ಮುಕ್ತರಾದ ಜೀತದಾಳುಗಳು ಪಡೆಯುತ್ತಿರುವ ಪ್ರಯೋಜನಗಳು ಎಂದರೆ ಭೂಮಿಯ ರೂಪದಲ್ಲಿ, ಬೇಸಾಯಕ್ಕೆ ಬಳಸಿದ ವಸ್ತುಗಳು, ಕುಶಲ ಕೈಗಾರಿಕೆ ಮತ್ತು ತತ್ಸಂಬಂಧಿ ವೃತ್ತಿಗಳಲ್ಲಿ ತರಬೇತಿ, ಪರಸ್ಪರ ವ್ಯತ್ಯಾಸವಿರುವಬಡ್ಡಿದರದಲ್ಲಿ ಸಾಲಗಳು ಅಥವಾ ನಗರ ಅಥವಾ ನಗರೇತರ ಪ್ರದೇಶಗಳಲ್ಲಿ ಉದ್ಯೋಗ ಈ ವಿವರಗಳನ್ನೊಳಗೊಂಡರಿಜಿಸ್ಟರು.

(ಡಿ) 6ನೇ ಪ್ರಕರಣದ (6)ನೇ ಉಪಪ್ರಕರಣ, 8ನೇ ಪ್ರಕರಣದ (2)ನೇ ಉಪಪ್ರಕರಣ, 9ನೇ ಪ್ರಕರಣದ

(2)ನೇ ಉಪಪ್ರಕರಣ, 16ನೇ ಪ್ರಕರಣ, 17ನೇ ಪ್ರಕರಣ, 18ನೇ ಪ್ರಕರಣ, 19ನೇ ಮತ್ತು 20ನೇ ಪ್ರಕರಣಗಳಮೇರೆಗಿನ ಮೊಕದ್ದಮೆಗಳ ವಿವರಗಳನ್ನೊಳಗೊಂಡ ರಿಜಿಸ್ಟರು.

**ಡಿ. ಬಂದೋಪಾಧ್ಯಾಯ,**

**ಜಂಟಿ ಕಾರ್ಯದರ್ಶಿ**

**ಕರ್ನಾಟಕ ಪಂಚಾಯತ್‌ರಾಜ್ (3ನೇ ತಿದ್ದುಪಡಿ) ವಿಧೇಯಕ, 2000 (2000ದ ವಿಧಾನ ಸಭೆಯ ವಿಧೇಯಕ ಸಂಖ್ಯೆ 33)**

**ಕರ್ನಾಟಕ ವಿಧಾನ ಸಭೆ – ಹನ್ನೊಂದನೇ ವಿಧಾನ ಸಭೆ (ಎರಡನೇ ಅಧಿವೇಶನ)**

**ಕರ್ನಾಟಕ ಪಂಚಾಯತ್ ರಾಜ್ (3ನೇ ತಿದ್ದುಪಡಿ) ವಿಧೇಯಕ, 2000**

**(2000ದ ವಿಧಾನ ಸಭೆಯ ವಿಧೇಯಕ ಸಂಖ್ಯೆ 33)**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು(1993ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆಅಧಿನಿಯಮಿತವಾಗಲಿ, ಎಂದರೆ :-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ** :(1) ಈ ಅಧಿನಿಯಮವನ್ನು ಕರ್ನಾಟಕ ಪಂಚಾಯತ್ ರಾಜ್ (ಮೂರನೇತಿದ್ದುಪಡಿ) ಅಧಿನಿಯಮ, 2000 ಎಂದು ಕರೆಯತಕ್ಕದ್ದು.

(2) ಇದು ಕೂಡಲೇ ಜಾರಿಗೆ ಬರತಕ್ಕದ್ದು.

**2. 58ಎ ಹೊಸ ಪ್ರಕರಣದ ಸೇರ್ಪಡೆ** :ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರಕರ್ನಾಟಕ ಅಧಿನಿಯಮ 14) 58ನೇ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ :-

"58ಎ. ಜೀತಪದ್ಧತಿ ಸಂಬಂಧದಲ್ಲಿ ವರದಿ ಸಲ್ಲಿಸುವುದು ಗ್ರಾಮ ಪಂಚಾಯಿತಿಯ ಕರ್ತವ್ಯವಾಗಿರತಕ್ಕದ್ದು. ಜೀತಪದ್ಧತಿ (ರದ್ದತಿ) ಅಧಿನಿಯಮ, 1976ರ (1976ರ ಕೇಂದ್ರ ಅಧಿನಿಯಮ 19) ಅಡಿಯಲ್ಲಿ ನಿರ್ಮೂಲನಗೊಂಡಜೀತಪದ್ಧತಿಯು ಪಂಚಾಯಿತಿ ಪ್ರದೇಶದಲ್ಲಿ ಪ್ರವರ್ತನಗೊಂಡ ಯಾವುದೇ ಪ್ರಕರಣದ ಬಗ್ಗೆ, ನಿಯಮಿಸಬಹುದಾದಂತೆಅಂಥ ನಮೂನೆಯಲ್ಲಿ ಮತ್ತು ಅಂಥ ಅಂತರದ ಅವಧಿಗಳಲ್ಲಿ ಡೆಪ್ಯೂಟಿ ಕಮೀಷನರಿಗೆ ಅಥವಾ ಈ ಸಂಬಂಧದಲ್ಲಿಸರ್ಕಾರವು ನಿರ್ದಿಷ್ಟಪಡಿಸಿದ ಯಾವುದೇ ಇತರ ಪ್ರಾಧಿಕಾರಕ್ಕೆ ವರದಿ ಸಲ್ಲಿಸುವುದು ಗ್ರಾಮಪಂಚಾಯಿತಿಗೆ

ಕಡ್ಡಾಯವಾಗಿರತಕ್ಕದ್ದು, ಹೀಗೆ ಮಾಡಲು ತಪ್ಪಿದರೆ, 268ನೇ ಪ್ರಕರಣದ ಅಡಿಯಲ್ಲಿ ಅದಕ್ಕೆ ವಿಧಿಸಲಾದ ಕರ್ತವ್ಯಗಳನೆರವೇರಿಕೆಯಲ್ಲಿ ಆದ ತಪ್ಪು ಎಂದು ಅರ್ಥೈಸತಕ್ಕದ್ದು".

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಪ್ರತಿಯೊಂದು ಗ್ರಾಮ ಪಂಚಾಯಿತಿಯು, ಪಂಚಾಯಿತಿ ಪ್ರದೇಶದಲ್ಲಿಯ ಯಾವುದೇ ಜೀತಪದ್ಧತಿಯ ಪ್ರಕರಣವನ್ನು,ಡೆಪ್ಯೂಟಿ ಕಮೀಷನರಿಗೆ ಅಥವಾ ಈ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಿದ ಅಂಥ ಇತರ ಪ್ರಾಧಿಕಾರಕ್ಕೆ ವರದಿ ಮಾಡುವುದನ್ನುಕಡ್ಡಾಯಗೊಳಿಸುವುದಕ್ಕಾಗಿ ಮತ್ತು ಜೀತಪದ್ಧತಿಯ ಪ್ರಕರಣವನ್ನು ವರದಿ ಮಾಡುವಲ್ಲಿ ಉಂಟಾದ ಯಾವುದೇವಿಫಲತೆಯನ್ನು, ಗ್ರಾಮ ಪಂಚಾಯಿತಿಯ ಕರ್ತವ್ಯಗಳ ನೆರವೇರಿಕೆಯಲ್ಲಿ ಆದ ತಪ್ಪು ಎಂದು ಪರಿಗಣಿಸುವುದಕ್ಕಾಗಿ ಹಾಗೂಈ ವಿಫಲತೆಯು ಗ್ರಾಮ ಪಂಚಾಯಿತಿಯ ವಿಸರ್ಜನೆಯಲ್ಲಿ ಪರಿಣಮಿಸುವಂತೆ ಮಾಡುವುದಕ್ಕಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ಕ್ಕೆ ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

**ಆರ್ಥಿಕ ಜ್ಞಾಪನ**

ಪ್ರಸ್ತಾವಿತ ಕ್ರಮದಿಂದಾಗಿ ಯಾವ ಹೆಚ್ಚಿನ ವೆಚ್ಚವೂ ಉಂಟಾಗುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಜ್ಞಾಪನ ಪತ್ರ**

ಖಂಡ 2: ವಿಧೇಯಕದ ಖಂಡ 3ರ ಮೂಲಕ ಸೇರಿಸಲಾಗುವ 58ಎ ಪ್ರಕರಣವು, ಪಂಚಾಯತ್ ಪ್ರದೇಶದಲ್ಲಿಜೀತಪದ್ಧತಿಯು ಪ್ರವರ್ತನಗೊಂಡ ಪ್ರಕರಣದ ಬಗ್ಗೆ ಗ್ರಾಮ ಪಂಚಾಯಿತಿಯು, ಯಾವ ನಮೂನೆಯಲ್ಲಿ ಮತ್ತು ಯಾವಅಂತರದ ಅವಧಿಗಳಲ್ಲಿ ಡೆಪ್ಯೂಟಿ ಕಮೀಷನರರಿಗೆ ಅಥವಾ ಸರ್ಕಾರವು ನಿರ್ದಿಷ್ಟಪಡಿಸಿದ ಯಾವುದೇ ಪ್ರಾಧಿಕಾರಕ್ಕೆವರದಿಯನ್ನು ಸಲ್ಲಿಸತಕ್ಕದ್ದೆಂಬ ಬಗ್ಗೆ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಎಂ. ವೈ. ಘೋರ್ಪಡೆ**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು.

**ಯೂಕೂಬ್ ಷರೀಫ್**, ಕಾರ್ಯದರ್ಶಿ—

ಅನುಬಂಧ V

## ಅಂತಾರಾಷ್ಟ್ರೀಯ ಒಡಂಬಡಿಕೆಗಳು ಮತ್ತು ರಾಷ್ಟ್ರೀಯ ಕಾನೂನುಗಳು

### I. ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ

### I.1 29 ಬಲಾತ್ಕಾರದ ದುಡಿಮೆಯ ಒಡಂಬಡಿಕೆ, 1930

**ಅನುಚ್ಛೇದ 2:**

"1. ಈ ಒಡಂಬಡಿಕೆಯಲ್ಲಿ 'ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆ' ಅಂದರೆ ಯಾವುದೇ ದಂಡ ಹೇರುವ ಬೆದರಿಕೆಯ ಮೇರೆಗೆ ಯಾವುದೇ ವ್ಯಕ್ತಿಯಿಂದ ಮತ್ತು ಆತನ ಸ್ವ ಇಚ್ಛೆ ಇಲ್ಲದೆ ಪಡೆದ ಎಲ್ಲಾ ಕೆಲಸ ಅಥವಾ ಸೇವೆ.

"2. ಆದರೂ ಈ ಒಡಂಬಡಿಕೆಯ ಅರ್ಥವ್ಯಾಪ್ತಿಯಲ್ಲಿ 'ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆ' ಪದಗಳು..." " ಸೈನಿಕ ಸೇವೆ ಸಲ್ಲಿಸಲು, ಸಾಮಾನ್ಯ ನಾಗರಿಕ ಕರ್ತವ್ಯಗಳನ್ನು ಈಡೇರಿಸಲು, ನ್ಯಾಯಾಲಯದಲ್ಲಿ ಸಿಕ್ಕಿದ ಶಿಕ್ಷೆಯ ಪರಿಣಾಮವಾಗಿ, ಯುದ್ಧ ಅಥವಾ ಬೆಂಕಿ ಅನಾಹುತ, ನೆರೆ, ಬರಗಾಲ, ಭೂಕಂಪ, ತೀರ್ವತರವಾದ ಸಾಂಕ್ರಾಮಿಕ ರೋಗ, ಪ್ರಾಣಿ ಸಾಂಕ್ರಾಮಿಕ ರೋಗ, ಪ್ರಾಣಿ, ಕೀಟ ಅಥವಾ ಬೆಳೆಗಳ ಪೀಡೆಗಳ ಹಾವಳಿಗಳು ಮುಂತಾದ ವಿಪತ್ತುಗಳ ತುರ್ತು ಪರಿಸ್ಥಿತಿಗಳ ಸಂದರ್ಭಗಳಲ್ಲಿ ಮತ್ತು ಚಿಕ್ಕ ಪುಟ್ಟ ಸಮುದಾಯ ಸೇವೆಗಳಿಗೆ ನೀಡಿದ ಕೆಲಸ ಅಥವಾ ಸೇವೆಗಳನ್ನು ಒಳಗೊಂಡಿರುವುದಿಲ್ಲ.

### I.2 105 ಬಲಾತ್ಕಾರದ ದುಡಿಮೆ ರದ್ದತಿಯ ಒಡಂಬಡಿಕೆ 1957

**ಪೀಠಿಕೆ:** "ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಸರ್ವಸಾಮಾನ್ಯ ಸಮ್ಮೇಳನವು ಕಡ್ಡಾಯದ ಅಥವಾ ಬಲಾತ್ಕಾರದ ದುಡಿಮೆಯು ಗುಲಾಮಿತನಕ್ಕೆ ಸದೃಶವಾದ ಪರಿಸ್ಥಿತಿಗಳಾಗಿ ಬೆಳೆಯುವುದನ್ನು ತಡೆಗಟ್ಟಲು ಅವಶ್ಯಕವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳಬೇಕೆಂದು ಆಗ್ರಹಿಸುತ್ತದೆ ಮತ್ತು ಸಾಲ ಜೀತ ಹಾಗೂ ಬೇರೆ0ಯುವರಿಗೆ ಅಡಿಯಾಳಾಗಿ ಸೇವೆ ಸಲ್ಲಸುವುದನ್ನು ಸಂಪೂರ್ಣವಾಗಿ ರದ್ದುಗೊಳಿಸಲು ಆಗ್ರಹಿಸುತ್ತದೆ...."

**ಅನುಚ್ಛೇದ 1:**

"ಈ ಒಡಂಬಡಿಕೆಯನ್ನು ರುಜುಮಾಡಿದ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಪ್ರತಿಯೊಬ್ಬ ಸದಸ್ಯರು –

(a) ರಾಜಕೀಯ ಒತ್ತಡದ ಸಾಧನವಾಗಿ ಅಥವಾ ಶಿಕ್ಷಣದ ಸಾಧನವಾಗಿ ಅಥವಾ ಸ್ಥಾಪಿತ ರಾಜಕೀಯ, ಸಾಮಾಜಿಕ ಅಥವಾ ಆರ್ಥಿಕ ವ್ಯವಸ್ಥೆಗೆ ತದ್ವಿರುದ್ಧವಾದ ರಾಜಕೀಯ ವಿಚಾರಗಳನ್ನು ಅಥವಾ

ಸೈದ್ಧಾಂತಿಕ ವಿಚಾರಗಳನ್ನು ಒಪ್ಪಿಕೊಳ್ಳುವುದನ್ನು ಅಥವಾ ವ್ಯಕ್ತಪಡಿಸುವುದನ್ನು ಶಿಕ್ಷಿಸುವ ಸಾಧನವಾಗಿ;

(b) ಆರ್ಥಿಕ ಅಭಿವೃದ್ಧಿಗೆ ದುಡಿಮೆಯನ್ನು ಸಜ್ಜುಗೊಳಿಸುವ ಮತ್ತು ಬಳಸುವ ವಿಧಾನವಾಗಿ;

(c) ದುಡಿಮೆಗಾರರನ್ನು ಹತೋಟಿಯಲ್ಲಿಡುವ ಸಾಧನವಾಗಿ;

(d) ಮುಷ್ಕರಗಳಲ್ಲಿ ಭಾಗವಹಿಸಿದವರಿಗೆ ಶಿಕ್ಷೆಯಾಗಿ;

(e) ಜನಾಂಗೀಯವಾಗಿ, ಸಾಮಾಜಿಕವಾಗಿ, ರಾಷ್ಟ್ರೀಯವಾಗಿ ಅಥವಾ ಧಾರ್ಮಿಕವಾಗಿ ಪಕ್ಷಪಾತ ಮಾಡುವ ಸಾಧನವಾಗಿ ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆಯನ್ನು ನಿಗ್ರಹಿಸಲು ಮತ್ತು ಅದರ ಯಾವುದೇ ರೂಪವನ್ನು ಬಳಸದಿರಲು ವಾಗ್ದಾನ ಮಾಡುತ್ತಾರೆ."

**I.3 ಕೆಲಸದ ಮೂಲಭೂತ ತತ್ವಗಳು ಮತ್ತು ಹಕ್ಕುಗಳ ಕುರಿತು ಘೋಷಣೆ, ಜೂನ್ 1998:**

"ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯು... 2. ಘೋಷಿಸುವುದೇನೆಂದರೆ ಎಲ್ಲಾ ಸದಸ್ಯರು ಈ ಒಡಂಬಡಿಕೆಯನ್ನು ರುಜುಪಡಿಸದಿದ್ದರೂ ಅವರು ಈ ಸಂಘಟನೆಯಲ್ಲಿ ಸದಸ್ಯರಾಗಿದ್ದಾರೆ ಎಂಬ ಒಂದು ಕಾರಣದಿಂದಲೇ ಈ ಒಡಂಬಡಿಕೆಯ ವಿಷಯವಾದ ಮೂಲಭೂತ ಹಕ್ಕುಗಳ ಕುರಿತಾದ ತತ್ವಗಳನ್ನು ಪ್ರಾಮಾಣಿಕತೆಯಿಂದ ಮತ್ತು (ಸಂಘಟನೆಯ) ಸಂವಿಧಾನಕ್ಕೆ ತಕ್ಕುದಾಗಿ ಗೌರವಿಸುವ, ಉತ್ತೇಜಿಸುವ ಮತ್ತು ಕಾರ್ಯರೂಪಕ್ಕೆ ತರುವ ನಿರ್ಬಂಧ ಅವರ ಮೇಲೆ ಇದೆ. (ಆ ತತ್ವಗಳು) ಯಾವುವೆಂದರೆ –

(a) ಸಂಘಟನಾ ಸ್ವಾತಂತ್ರ್ಯ ಮತ್ತು ಒಟ್ಟಾಗಿ ಚೌಕಾಶಿ ಮಾಡುವ ಹಕ್ಕಿಗೆ ಪರಿಣಾಮಕಾರಿ ರೀತಿಯಲ್ಲಿ ಒಪ್ಪಿಗೆ ನೀಡುವುದು;

(b) ಎಲ್ಲಾ ತರಹದ ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆಗಳ ನಿರ್ಮೂಲನೆ ಮಾಡುವುದು;

(c) ಬಾಲಕಾರ್ಮಿಕತೆಯನ್ನು ಪರಿಣಾಮಕಾರಿಯಾಗಿ ರದ್ದು ಮಾಡುವುದು; ಮತ್ತು

(d) ಉದ್ಯೋಗ ಮತ್ತು ವೃತ್ತಿಗಳಲ್ಲಿ ತೋರಿಸುವ ಭೇದ ಭಾವವನ್ನು ಪರಿಣಾಮಕಾರಿಯಾಗಿ ನಿರ್ಮೂಲನೆ ಮಾಡುವುದು."

**I.4 182 ಅತ್ಯಂತ ಕೆಟ್ಟ ರೀತಿಯ ಬಾಲಕಾರ್ಮಿಕತೆಯ ಕುರಿತು ಒಡಂಬಡಿಕೆ, 1999**

**ಅನುಚ್ಛೇದ 3:**

ಈ ಒಡಂಬಡಿಕೆಯ ಅರ್ಥವ್ಯಾಪ್ತಿಯಲ್ಲಿ ಅತ್ಯಂತ ಕೆಟ್ಟ ರೀತಿಯ ಬಾಲಕಾರ್ಮಿಕತೆ ಈ ಕೆಳಗಿನವುಗಳನ್ನು ಒಳಗೊಂಡಿರುತ್ತದೆ:

(a) ಮಕ್ಕಳ ಮಾರಾಟ ಹಾಗೂ ವ್ಯಾಪಾರ, ಸಾಲ ಜೀತ ಹಾಗೂ ಬೇರೆಯವರಿಗೆ ಅಡಿಯಾಳಾಗಿ ಸಲ್ಲಿಸುವ ಸೇವೆ ಮತ್ತು ಸಶಸ್ತ್ರ ಘರ್ಷಣೆಯ (ಯುದ್ಧದ) ಸಂದರ್ಭದಲ್ಲಿ ಮಕ್ಕಳನ್ನು ಬಲಾತ್ಕಾರದಿಂದ ಅಥವಾ ಕಡ್ಡಾಯದಿಂದ ಸೇನೆಗೆ ಸೇರಿಸುವುದನ್ನೂ ಒಳಗೊಂಡ ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆಯಂತಹ ಎಲ್ಲಾ ತರಹದ ಗುಲಾಮಿತನ ಅಥವಾ ಗುಲಾಮಿತನವನ್ನು ಹೋಲುವ ಕಾರ್ಯಾಚರಣೆಗಳು;

(b) ವೇಶ್ಯವಾಟಿಕೆಗೆ, ಲಂಪಟ ಸಾಹಿತ್ಯ/ಪುಸ್ತಕಗಳನ್ನು ತಯಾರಿಸಲು ಅಥವಾ ಅಶ್ಲೀಲ ಪ್ರದರ್ಶನಗಳಲ್ಲಿ ಒಂದು ಮಗುವನ್ನು ಬಳಸುವುದು, ಪಡೆಯುವುದು ಅಥವಾ ಒಪ್ಪಿಸುವುದು;

(c) ಕಾನೂನು ವಿರೋಧಿ ಕಾರ್ಯಗಳಲ್ಲಿ, ಅವುಗಳಲ್ಲಿ ವಿಶಿಷ್ಟವಾಗಿ ಅಂತಾರಾಷ್ಟ್ರೀಯ ಒಪ್ಪಂದಗಳಲ್ಲಿ ವ್ಯಾಖ್ಯಾನಿಸಿದಂತಹ ಮಾದಕ ವಸ್ತುಗಳ ತಯಾರಿಕೆ ಮತ್ತು ವ್ಯಾಪಾರಗಳಲ್ಲಿ ಒಂದು ಮಗುವನ್ನು ಬಳಸುವುದು, ಪಡೆಯುವುದು ಅಥವಾ ಒಪ್ಪಿಸುವುದು;

(d) ಕೆಲಸದ ಸ್ವರೂಪ ಮತ್ತು ಅದನ್ನು ಕಾರ್ಯಗತಗೊಳಿಸುವಾಗ ಇರುವ ಪರಿಸ್ಥಿತಿಗಳಿಂದ ಮಕ್ಕಳ ಆರೋಗ್ಯ, ರಕ್ಷಣೆ ಮತ್ತು ಶೀಲಕ್ಕೆ ಹಾನಿ ತರುವ ಸಾಧ್ಯತೆ ಇದ್ದರೆ ಅಂತಹ ಕೆಲಸ."

**II. ವಿಶ್ವ ಸಂಸ್ಥೆಯ ಒಡಂಬಡಿಕೆಗಳು**

**II.1 ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆ, 1948**

**ಅನುಚ್ಛೇದ 4:**

"ಗುಲಾಮಗಿರಿ ಅಥವಾ ದಾಸ್ಯದಲ್ಲಿ ಯಾರನ್ನೂ ಹಿಡಿದಿಡಬಾರದು; ಪ್ರತಿಯೊಂದು ಸ್ವರೂಪದ ಗುಲಾಮ ಪದ್ಧತಿ ಮತ್ತು ಗುಲಾಮರ ಮಾರಾಟ ನಿಷೇಧಿಸಲ್ಪಟ್ಟಿದೆ."

**ಅನುಚ್ಛೇದ 23:**

"(1) ಪ್ರತಿಯೊಬ್ಬರಿಗೂ ಕೆಲಸದ ಹಕ್ಕು, ಒಂದು ಉದ್ಯೋಗವನ್ನು ಸ್ವತಂತ್ರವಾಗಿ ಆಯ್ಕೆ ಮಾಡುವ ಹಕ್ಕು, ನ್ಯಾಯಯುತವಾದ ಮತ್ತು ಅನುಕೂಲಕರ ಕೆಲಸದ ಪರಿಸ್ಥಿತಿಗಳನ್ನು ಹೊಂದುವ ಹಕ್ಕು ಮತ್ತು ನಿರುದ್ಯೋಗದ ಸಂದರ್ಭದಲ್ಲಿ ರಕ್ಷಣೆಯ ಹಕ್ಕುಗಳು ಇವೆ. ...

(3) ಕೆಲಸ ಮಾಡುವ ಪ್ರತಿಯೊಬ್ಬರಿಗೂ ತನ್ನ ಹಾಗೂ ತನ್ನ ಕುಟುಂಬದ ಮಾನವ ಘನತೆಗೆ ತಕ್ಕುದಾದ ಜೀವನವನ್ನು ಒದಗಿಸುವಂತಹ ನ್ಯಾಯಯುತವಾದ ಮತ್ತು ಅನುಕೂಲಕರ ಮಜೂರಿಯನ್ನು ಪಡೆಯುವ ಮತ್ತು ಅವಶ್ಯಕತೆ ಇದ್ದರೆ ಇತರ ಸಾಮಾಜಿಕ ರಕ್ಷಣೆಗಳನ್ನು ಪೂರಕವಾಗಿ ಪಡೆಯುವ ಹಕ್ಕು ಇದೆ."

**ಅನುಚ್ಛೇದ 24:**

"ಪ್ರತಿಯೊಬ್ಬರಿಗೂ ವಿಶ್ರಾಂತಿ ಮತ್ತು ವಿರಾಮದ ಹಕ್ಕು ಇದೆ. ಅದು ಕೆಲಸದ ಕಾಲಾವಧಿಗೆ ಸಮಂಜಸವಾದ ಮಿತಿಯನ್ನೂ ನಿಯತಕಾಲಿಕವಾಗಿ ವೇತನ ಸಮೇತ ರಜಾದಿನಗಳನ್ನೂ ಒಳಗೊಂಡಂತಿರಬೇಕು."

**ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಕುರಿತು ಅಂತಾರಾಷ್ಟ್ರೀಯ ಒಡಂಬಡಿಕೆ** (ಜಾರಿಗೆ ಬಂದಿರುವುದು 23 ಮಾರ್ಚ್ 1976ರಂದು)

**ಅನುಚ್ಛೇದ 8:**

"1. ಗುಲಾಮಗಿರಿಯಲ್ಲಿ ಯಾರನ್ನೂ ಹಿಡಿದಿಡಬಾರದು; ಪ್ರತಿಯೊಂದು ಸ್ವರೂಪದ ಗುಲಾಮಗಿರಿ ಮತ್ತು ಗುಲಾಮರ ವ್ಯಾಪಾರ ನಿಷೇಧಿಸಲ್ಪಟ್ಟಿದೆ.

2. ದಾಸ್ಯದಲ್ಲಿ ಯಾರನ್ನೂ ಹಿಡಿದಿಡಬಾರದು.

3. (a) ಯಾರೂ ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆಯನ್ನು ಸಲ್ಲಿಸುವಂತಿರಬಾರದು;

(b) 3(ಅ) ಪ್ಯಾರಾವು ಅಪರಾಧವೊಂದಕ್ಕೆ ಕಠಿಣ ಕೆಲಸದೊಂದಿಗೆ ಜೈಲುವಾಸದ ಶಿಕ್ಷೆ ವಿಧಿಸಬಹುದಾದ ದೇಶಗಳಲ್ಲಿ ಅರ್ಹ ನ್ಯಾಯಾಲಯವೊಂದು ವಿಧಿಸಿದ ಅಂತಹ ಶಿಕ್ಷೆಯನ್ನು ಕಾರ್ಯಗತಗೊಳಿಸಲು ಮಾಡುವ ಕೆಲಸವನ್ನು ಪ್ರತಿಬಂಧಿಸುವುದಿಲ್ಲ;

(c) ಈ ಪ್ಯಾರಾದ ಅರ್ಥವ್ಯಾಪ್ತಿಯಲ್ಲಿ 'ಬಲಾತ್ಕಾರದ ಅಥವಾ ಕಡ್ಡಾಯದ ದುಡಿಮೆಯು' ಈ ಕೆಳಗಿನವುಗಳನ್ನು ಒಳಗೊಂಡಿರುವುದಿಲ್ಲ:

(i) (ಆ) ಪ್ಯಾರಾದಲ್ಲಿ ಉಲ್ಲೇಖಿಸಲಾದ ಕೆಲಸ ಬಿಟ್ಟು ನ್ಯಾಯಾಲಯವೊಂದರ ನ್ಯಾಯಸಮ್ಮತ ಆದೇಶವೊಂದರ ಪರಿಣಾಮವಾಗಿ ಸೆರೆವಾಸದಲ್ಲಿದ್ದ ಅಥವಾ ಅಂತಹ ಸೆರೆವಾಸದಿಂದ ಷರತ್ತಿನ ಮೇಲೆ ಬಿಡುಗಡೆಯಾದ ಸಮಯದಲ್ಲಿ ಒಬ್ಬ ವ್ಯಕ್ತಿಗೆ ವಿಧಿಸಬಹುದಾದ ಯಾವುದೇ ಕೆಲಸ ಅಥವಾ ಸೇವೆ;

(ii) ಸೈನಿಕ ಸೇವೆಯಡಿ ಸಲ್ಲಿಸುವ ಸೇವೆ ಮತ್ತು ಅಂತಃಕರಣದ ನಿಮಿತ್ತ ಸೈನಿಕ ಸೇವೆಯನ್ನು ಒಪ್ಪದಿರುವುದನ್ನು ಮಾನ್ಯ ಮಾಡಿರುವ ದೇಶಗಳಲ್ಲಿ, ಅಂತಃಕರಣದ ನಿಮಿತ್ತ ಸೈನಿಕ ಸೇವೆಯನ್ನು ಒಪ್ಪದಿರುವವರಿಗೆ ಕಾನೂನಿನಲ್ಲಿ ವಿಧಿಸಬಹುದಾದ ರಾಷ್ಟ್ರೀಯ ಸೇವೆ;

(iii) ಒಂದು ಸಮುದಾಯದ ಜೀವನ ಅಥವಾ ಕ್ಷೇಮವನ್ನು ನಾಶಗೊಳಿಸುವಂತಿದ್ದ ತುರ್ತು ಪರಿಸ್ಥಿತಿ ಅಥವಾ ಆಪತ್ತಿನ ಸಂದರ್ಭದಲ್ಲಿ ಪಡೆದ ಯಾವುದೇ ಸೇವೆ;

(iv) ಸಾಮಾನ್ಯ ನಾಗರಿಕ ಕರ್ತವ್ಯಗಳನ್ನು ಪಾಲಿಸಲು ಸಲ್ಲಿಸಿದ ಯಾವುದೇ ಸೇವೆ."

**II.2 ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಕುರಿತು ಅಂತಾರಾಷ್ಟ್ರೀಯ ಒಡಂಬಡಿಕೆ** (ಜಾರಿಗೆ ಬಂದಿರುವುದು 3 ಜನವರಿ 1976ರಂದು)

**ಅನುಚ್ಛೇದ 7:**

"ಈ ಒಡಂಬಡಿಕೆಯನ್ನು ರುಜುಪಡಿಸಿದ ರಾಷ್ಟ್ರಗಳು ಪ್ರತಿಯೊಬ್ಬರಿಗೂ ನ್ಯಾಯಯುತ ಮತ್ತು ಅನುಕೂಲಕರ ಕೆಲಸದ ಪರಿಸ್ಥಿತಿಗಳನ್ನು ಅನುಭವಿಸುವ ಹಕ್ಕನ್ನು ಒಪ್ಪಿಕೊಳ್ಳಬೇಕು. ಆ ಹಕ್ಕು ಪ್ರತ್ಯೇಕವಾಗಿ ಈ ಕೆಳಗಿನವುಗಳನ್ನು ಭದ್ರಪಡಿಸಬೇಕು:

(a) ಎಲ್ಲಾ ಕಾರ್ಮಿಕರಿಗೆ ಕನಿಷ್ಠವಾಗಿ ಈ ಕೆಲಗಿನವುಗಳನ್ನು ಒಳಗೊಂಡಿರುವ ಮಜೂರಿ:

(i) ನ್ಯಾಯಸಮ್ಮತ ಕೂಲಿ ಮತ್ತು ಸಮಬೆಲೆಯ ಕೆಲಸಕ್ಕೆ ಯಾವುದೇ ತಾರತಮ್ಯವಿಲ್ಲದೆ ಸಮಮಜೂರಿ, ಪ್ರತ್ಯೇಕವಾಗಿ ಮಹಿಳೆಯರಿಗೆ ಸಮಕೆಲಸಕ್ಕೆ ಸಮವೇತನದೊಂದಿಗೆ ಪುರುಷರು ಅನುಭವಿಸುವ ಕೆಲಸದ ಪರಿಸ್ಥಿತಿಗಳಿಗಿಂತ ಕೆಳಮಟ್ಟದ್ದಲ್ಲದ ಕೆಲಸದ ಪರಿಸ್ಥಿತಿಗಳನ್ನು ಖಾತ್ರಿಗೊಳಿಸುವುದು;

(ii) ಈ ಒಡಂಬಡಿಕೆಗೆ ಅನುಸಾರವಾಗಿ ಅವರಿಗೂ ಅವರ ಕುಟುಂಬಗಳಿಗೂ ಯೋಗ್ಯ ಜೀವನ;

(b) ಸುರಕ್ಷಿತ ಮತ್ತು ಆರೋಗ್ಯಕರ ಕೆಲಸದ ಪರಿಸ್ಥಿತಿಗಳು;

(c) ವಿಶ್ರಾಂತಿ, ವಿರಾಮ ಮತ್ತು ಸಮಂಜಸವಾದ ಕೆಲಸದ ಕಾಲಾವಧಿಯ ಮಿತಿ ಹಾಗೂ ನಿಯತಕಾಲಿಕವಾಗಿ ವೇತನ ಸಮೇತ ರಜಾದಿನಗಳು, ಜೊತೆಗೆ ಸಾರ್ವಜನಿಕ ರಜಾದಿನಗಳಂದೂ ಮಜೂರಿ."

**III. ಭಾರತೀಯ ಕಾನೂನು ಚೌಕಟ್ಟು**

**III. 1 ಭಾರತೀಯಸಂವಿಧಾನ**

**ಅನುಚ್ಛೇದ 21:** ಜೀವನ ಮತ್ತು ಸ್ವಾತಂತ್ರ್ಯದ ಹಕ್ಕನ್ನು ಖಾತ್ರಿಗೊಳಿಸುತ್ತದೆ. ಮುಕ್ತ ಚಲನೆ0ಯ ಹಕ್ಕು, ತಾನು ಬಯಸಿದ ಸಮಯದಲ್ಲಿ ಊಟಮಾಡುವ, ಮಲಗುವ ಮತ್ತು ಕೆಲಸಮಾಡುವ ಹಕ್ಕು, ಅಮಾನವೀಯ ಹಾಗೂ ಅವಮಾನಕರವಾಗಿ ನೋಡಿಕೊಳ್ಳುವ ನಡವಳಿಕೆಯಿಂದ ಮುಕ್ತವಾಗಿರುವ ಹಕ್ಕು, ವ್ಯಕ್ತಿ ಸಮಗ್ರತೆ ಹಾಗೂ ಘನತೆಯ ಹಕ್ಕು, ರಕ್ಷಣೆಯನ್ನು ಒದಗಿಸುವ ಕಾರ್ಮಿಕ ಕಾನೂನಿನ ಫಲಗಳನ್ನು

ಅನುಭವಿಸುವ ಹಕ್ಕು ಮತ್ತು ಶೀಘ್ರ ನ್ಯಾಯ ಪಡೆಯುವ ಹಕ್ಕು ಇವೆಲ್ಲಾ ಸ್ವಾತಂತ್ರ್ಯದ ಹಕ್ಕನ್ನು ಒಳಗೊಂಡಿವೆ ಎಂದು ಸರ್ವೋಚ್ಚ ನ್ಯಾಯಾಲಯವು ಅರ್ಥೈಸಿದೆ.

**ಅನುಚ್ಛೇದ 23**: ಎಲ್ಲಾ ತರಹದ ಬಲಾತ್ಕಾರದ ದುಡಿಮೆಯನ್ನು ನಿಷೇಧಿಸುತ್ತದೆ. ಅದರ ಪ್ರಕಾರ, "ಮನುಷ್ಯರ ವ್ಯಾಪಾರ, *ಬೇಗಾರ್* ಮತ್ತು ಅದೇ ತರಹದ ಇತರೆ ಬಲಾತ್ಕಾರದ ದುಡಿಮೆಯ ಸ್ವರೂಪಗಳನ್ನು ನಿಷೇಧಿಸಲಾಗಿದೆ ಹಾಗೂ ಈ ನಿಷೇಧದ ಯಾವುದೇ ಉಲ್ಲಂಘನೆಯು ಕಾನೂನಾತ್ಮಕವಾಗಿ ಶಿಕ್ಷಿಸಲ್ಪಡುವ ಅಪರಾಧವಾಗುವುದು."

***ಬೇಗಾರ್*** ಎಂದರೆ "ಒಬ್ಬ ವ್ಯಕ್ತಿಯು ಯಾವುದೇ ಸಂಭಾವನೆ ಇಲ್ಲದೆ ಕೆಲಸ ಮಾಡುವ ನಿರ್ಬಂಧವಿರುವ ಬಲಾತ್ಕಾರದ ದುಡಿಮೆಯ ಸ್ವರೂಪ." (ಸುಪ್ರೀಂ ಕೋರ್ಟ್ 1982: ಪ್ಯಾರಾ14 – 86).

**ಅನುಚ್ಛೇದ 24**: 14 ವರ್ಷಗಳಿಗಿಂತ ಕಡಿಮೆ ಇರುವ ಮಕ್ಕಳನ್ನು ಅಪಾಯಕಾರಿ ವೃತ್ತಿಗಳಲ್ಲಿ ದುಡಿಸುವುದನ್ನು ನಿಷೇಧಿಸುತ್ತದೆ.

**ಅನುಚ್ಛೇದ 37 (e)**: ತಮ್ಮ ವಯಸ್ಸಿಗೆ ಒಪ್ಪದ ಕಸುಬುಗಳಿಗೆ ಸೇರುವುದನ್ನು ತಡೆಹಿಡಿಯುವ ಕರ್ತವ್ಯ ಪ್ರಭುತ್ವದ್ದು.

**ಅನುಚ್ಛೇದ 39 (f)**:ಶೋಷಣೆಯಾಗದಂತೆ ಮತ್ತು ಶೀಲಕ್ಕೆ ಕುಂದು ಬರುವಂತಿರುವ ಹಾಗೂ ಜೀವನದ ಅಗತ್ಯಗಳು ಪೂರೈಕೆಯಾಗದ ಪರಿಸ್ಥಿತಿಗಳಲ್ಲಿ ಬಿಟ್ಟುಬಿಡದಂತೆ ಮಕ್ಕಳಿಗೆ ರಕ್ಷಣೆ ಒದಗಿಸಬೇಕು.

### III. 2 ಭಾರತೀಯ ದಂಡ ಸಂಹಿತೆ

**ಪರಿಚ್ಛೇದ 374**. "ಯಾವುದೇ ವ್ಯಕ್ತಿಯ ಇಚ್ಛೆಯ ವಿರುದ್ಧ ಆತನನ್ನು ದುಡಿಸಲು ಕಾನೂನುಬಾಹಿರವಾಗಿ ಬಲಾತ್ಕಾರ ಮಾಡುವ ಯಾರಿಗೂ ಒಂದು ವರ್ಷ ತನಕದ ಎರಡೂ ಬಗೆಯ ಜೈಲುವಾಸದಲ್ಲಿ ಒಂದು ರೀತಿಯ ಜೈಲುವಾಸ ಅಥವಾ ದಂಡ ಅಥವಾ ಜೈಲುವಾಸ ಮತ್ತು ದಂಡ ವಿಧಿಸುವ ಶಿಕ್ಷೆಯನ್ನು ವಿಧಿಸಬಹುದು."

### III. 3 ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳಿಂದ ಕೆಲವು ಉದ್ಧೃತ ಭಾಗಗಳು

#### III.3.1 People's Union for Democratic Rights and Others v. Union of India and Others (AIR 1982 SC 1473 in Writ Petition No. 8143 of 1981)

ಈ ತೀರ್ಪು ಲಕ್ಷಿಸುವುದೇನೆಂದರೆ ಭಾರತೀಯ ಸಂವಿಧಾನದ ಅನುಚ್ಛೇದ 23 ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯು ಅನುಚ್ಛೇದ 4ಕ್ಕಿಂತ ಹೆಚ್ಚಿನ ಅರ್ಥವ್ಯಾಪ್ತಿಯನ್ನು ಹೊಂದಿದೆ. ಏಕೆಂದರೆ ಮನುಷ್ಯರ ವ್ಯಾಪಾರ, *'ಬೇಗಾರ್'* ಮತ್ತು ಅದೇ ರೀತಿಯ ಬೇರೆ ಬಲತ್ಕಾರದ ದುಡಿಮೆಗಳನ್ನು ಅದು

ನಿಷೇಧಿಸುತ್ತದೆ ಮತ್ತು ಮನುಷ್ಯರ ವ್ಯಾಪಾರದ ಅರ್ಥವ್ಯಾಪ್ತಿ ಗುಲಾಮರ ವ್ಯಾಪಾರದ ಅರ್ಥಕ್ಕಿಂತ ಹೆಚ್ಚಿದೆ. ಬಲಾತ್ಕಾರದ ದುಡಿಮೆಯ ಯಾವುದೇ ಸ್ವರೂಪವನ್ನು ಅನುಚ್ಛೇದ 23 ಸಹಿಸುವುದಿಲ್ಲ. ಏಕೆಂದರೆ ಅದು ಮಾನವ ಘನತೆಯ ಉಲ್ಲಂಘನೆ ಮತ್ತು ಮೂಲಭೂತ ಮಾನವೀಯ ಮೌಲ್ಯಗಳಿಗೆ ವಿರುದ್ಧವಾಗಿದೆ. *'ಬೇಗಾರ್'* ಅಂದರೆ ಮಜೂರಿ ಕೊಡದೆ ಒಬ್ಬ ವ್ಯಕ್ತಿಯ ಮೇಲಿನ ಬಲಾತ್ಕಾರದಿಂದ ಪಡೆದ ಕೆಲಸ ಅಥವಾ ಸೇವೆ ಅಥವಾ ಪುಕ್ಕಟೆ ದುಡಿಮೆ. (ಪ್ಯಾರಾ ನಂ. 14).

ಆ ತೀರ್ಪು ಈ ತರಹದ ಘೋಷಣೆ ನೀಡಿದೆ: "ಕನಿಷ್ಠ ವೇತನಕ್ಕಿಂತ ಕಡಿಮೆಯಾದ ಮಜೂರಿಯನ್ನು ಪಡೆದು ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ದುಡಿಮೆ ಅಥವಾ ಸೇವೆಯನ್ನು ಸಲ್ಲಿಸುತ್ತಿದ್ದರೆ ಆತನು ತನಗೆ ಕಾನೂನಿನಡಿಯಲ್ಲಿ ಸಿಗಬೇಕಾದ್ದಕ್ಕಿಂತ ಕಡಿಮೆ ವೇತನ ಕೊಟ್ಟರೂ ಆ ಕೆಲಸ ಮಾಡುವಂತೆ ಆತನನ್ನು ದಬ್ಬುತ್ತಿರುವ ಕೆಲವು ಒತ್ತಡಗಳ ಬಲಾತ್ಕಾರದ ಮೇಲೆ ವರ್ತಿಸುತ್ತಿದ್ದಾನೆ ಎಂದು ಪೂರ್ವಭಾವನೆ ಮಾಡಿಕೊಳ್ಳಬಹುದು." (ಪ್ಯಾರಾ ನಂ.15).

ಆ ತೀರ್ಪು ಬಲಾತ್ಕಾರದ ಅರ್ಥವನ್ನು ಇನ್ನೂ ಸ್ಪಷ್ಟಪಡಿಸುತ್ತದೆ. ಕೇವಲ ದೈಹಿಕ ಬಲಾತ್ಕಾರ ಅಥವಾ ಕಾನೂನಿನ ಒಂದು ನಿರ್ಬಂಧದಿಂದ ಹೇರಲಾದ ಬಲಾತ್ಕಾರವಲ್ಲದೇ ಹಲವಾರು ಬೇರೆ ರೀತಿಗಳಲ್ಲಿ ಬಲಾತ್ಕಾರದ ದುಡಿಮೆಯು ಉದ್ಭವಿಸಬಹುದು. ಅದು ಹಸಿವು, ಬಡತನ, ಕೊರತೆ, ದಾರಿದ್ರ್ಯದಂತಹ ಆರ್ಥಿಕ ಪರಿಸ್ಥಿತಿಗಳ ಒತ್ತಡ ಮತ್ತು ಪರ್ಯಾಯಗಳಲ್ಲಿ ಆಯ್ಕೆ ಇರದ ಹಾಗೆ ಹಾಗೂ ಒಂದು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಆತನನ್ನು ನಿರ್ಬಂಧಿಸುವ ಯಾವುದೇ ಸಂಗತಿಗಳನ್ನು ಒಳಗೊಂಡಿರುತ್ತದೆ (ಪ್ಯಾರಾ ನಂ.15). ಆ ತೀರ್ಪು ಘೋಷಿಸುವುದೇನೆಂದರೆ, "ಕನಿಷ್ಠ ವೇತನಕ್ಕಿಂತ ಕಡಿಮೆಯಾದ ಮಜೂರಿಯನ್ನು ಪಡೆದು ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ದುಡಿಮೆ ಅಥವಾ ಸೇವೆಯನ್ನು ಸಲ್ಲಿಸುತ್ತಿದ್ದರೆ, ಆ ವ್ಯಕ್ತಿಯು ಸಲ್ಲಿಸುವ ದುಡಿಮೆ ಅಥವಾ ಸೇವೆಯು ಸ್ಪಷ್ಟವಾಗಿ 'ಬಲಾತ್ಕಾರದ ದುಡಿಮೆ' ಎಂಬ ಪದಗಳ ಆಶಯ ಮತ್ತು ವ್ಯಾಪ್ತಿಯೊಳಗೆ ಬರುತ್ತದೆ" (ಪ್ಯಾರಾ ನಂ.15).

### III. 3.2 Bhandua Mukti Morcha v. Union of India and Others (AIR 1984. SC 161 in Writ Petition No. 2135 of 1982)

ಆ ತೀರ್ಪು ಲಕ್ಷಿಸುವುದೇನೆಂದರೆ, "ಸಂವಿಧಾನದ ಅನುಚ್ಛೇದ 23ನ್ನು ಕಾರ್ಯಾಚರಣೆಗೆ ತರಲು ಜೀತ ಪದ್ಧತಿ ರದ್ದತಿ ಅಧಿನಿಯಮ, 1976ರನ್ನು ಜಾರಿಗೆ ತರಲಾಗಿತ್ತು. ದಶಕಗಳಿಂದ ಭಾರತೀಯ ಸಾಮಾಜಿಕ ಕ್ಷೇತ್ರದಲ್ಲಿ ಅವಮಾನಕರವಾದ ಕಳಂಕವಾಗಿರುವ ಮತ್ತು ಸ್ವಾತಂತ್ರ್ಯ ಪಡೆದ ಮೇಲೂ ರಾಷ್ಟ್ರೀಯ ಜೀವನವನ್ನು ವಿಕಾರಗೊಳಿಸುತ್ತಿರುವ ಜೀತಪದ್ಧತಿಯನ್ನು ಪ್ರತಿಭಟಿಸುವ ಉದ್ದೇಶ ಆ ಅಧಿನಿಯಮಕ್ಕಿತ್ತು (ಪ್ಯಾರಾ ನಂ.21). ಆ ತೀರ್ಪು ಮುಂದೆ ಈ ರೀತಿ ಘೋಷಿಸುತ್ತದೆ: "ಯಾವಾಗಲಾದರೂ ಒಬ್ಬ ಕಾರ್ಮಿಕನಿಂದ ಬಲಾತ್ಕಾರದ ದುಡಿಮೆ ಸಲ್ಲಿಸುವಂತೆ ಮಾಡಲಾಗಿದೆ ಎಂದು

ತೋರಿಸಿಕೊಟ್ಟರೆ ಆತನು ಮುಂಗಡ ಅಥವಾ ಇನ್ನಿತರ ಆರ್ಥಿಕ ಸೌಲಭ್ಯ ಪಡೆದಿದ್ದರಿಂದಲೇ ಆತನಿಗೆ ಬಲಾತ್ಕಾರದ ದುಡಿಮೆಯ ನಿರ್ಬಂಧವಿದೆ ಮತ್ತು ಆದ್ದರಿಂದಲೇ ಆತನು ಜೀತದಾಳು ಎಂದು ನ್ಯಾಯಾಲಯವು ಪೂರ್ವಭಾವನೆ ಮಾಡಿಕೊಳ್ಳುತ್ತದೆ. ಈ ಪೂರ್ವಭಾವನೆಯನ್ನು ಯಜಮಾನನು ಅಥವಾ ರಾಜ್ಯ ಸರ್ಕಾರವು ಒಂದು ನಿರ್ಧಾರ ಮಾಡಿಕೊಂಡು ಅಲ್ಲಗಳೆಯಬಹುದು. ಆದರೆ ಈ ತಿಳುವಳಿಕೆಯನ್ನು ಅಲ್ಲಗಳೆಯಲು ತೃಪ್ತಿಕರ ಪುರಾವೆಗಳನ್ನು ಒದಗಿಸುವ ತನಕ ನ್ಯಾಯಾಲಯವು ಆ ಕಾರ್ಮಿಕನು ಅಧಿನಿಯಮದಲ್ಲಿಯ ಅವಕಾಶಗಳ ಪ್ರಯೋಜನವನ್ನು ಪಡೆಯಲು ಅರ್ಹನಾಗಿರುವ ಜೀತದಾಳುವೆಂದೇ ತಿಳಿದು ಮುಂದುವರಿಯಬೇಕು" (ಪ್ಯಾರಾ ನಂ.24).

**III.3.3** ಸರ್ವೋಚ್ಚ ನ್ಯಾಯಾಲಯವು **"Neeraja Choudhary v. State of M.P (3 SCC 1984 in Writ Petition (Cri) No. 1263 of 1982"** ತೀರ್ಪಿನಲ್ಲಿ ಪಟ್ಟಿದ್ದ ಅಭಿಪ್ರಾಯವೇನೆಂದರೆ, "ಮಜೂರಿ ಇಲ್ಲದೇ ಅಥವಾ ಕೇವಲ ನಾಮಮಾತ್ರ ಮಜೂರಿ ಪಡೆದು ಯಾವುದೇ ಕೆಲಸಗಾರನ ಮೇಲೆ ದುಡಿಮೆ ಸಲ್ಲಿಸುವ ಬಲಾತ್ಕಾರವಿದ್ದರೆ ಆತನನ್ನು ಜೀತದಾಳಾಗಿ ಪೂರ್ವಭಾವನೆ ಮಾಡಲಾಗುತ್ತದೆ. ಆತನ ಯಜಮಾನ ಅಥವಾ ರಾಜ್ಯ ಸರ್ಕಾರವು ಆ ತಿಳುವಳಿಕೆಯನ್ನು ಅನ್ಯಥಾ ರುಜುವಾತುಪಡಿಸಬಹುದು."

ಈ ಎಲ್ಲಾ ತೀರ್ಪುಗಳು ಬಲಾತ್ಕಾರದ ದುಡಿಮೆ ಏನೆಂದು ಸ್ಪಷ್ಟಪಡಿಸಿವೆ. ಕನಿಷ್ಠ ವೇತನಕ್ಕಿಂತ ಕಡಿಮೆ ಕೂಲಿಗೆ ಸಲ್ಲಿಸುವ ದುಡಿಮೆಯೂ ಬಲಾತ್ಕಾರದ ದುಡಿಮೆ ಮತ್ತು ಜೀತದ ಅರ್ಥವ್ಯಾಪ್ತಿಗೆ ಬರುವ ರೀತಿಯಲ್ಲಿ ಅವು ಬಲಾತ್ಕಾರದ ದುಡಿಮೆ ಮತ್ತು ಜೀತದ ಅರ್ಥವನ್ನು ವಿಸ್ತರಿಸಿವೆ. ಅಧಿನಿಯಮಗಳಲ್ಲಿರುವ ಜೀತದಾಳು ಮತ್ತು ಜೀತ ಪದ್ಧತಿಗಳ ವ್ಯಾಖ್ಯಾನದಲ್ಲಿ ಇರುವ ದ್ವಂದ್ವಾರ್ಥಗಳನ್ನು ಅವು ತೆಗೆದಿವೆ. ಅಧಿನಿಯಮದ ಪ್ರಕಾರ "ಜೀತದಾಳು ಎಂದರೆ ಒಂದು ಜೀತಸಾಲ ಮಾಡುವ ಅಥವಾ ಮಾಡಿರುವ ಅಥವಾ ಮಾಡಿರುವನೆಂದು ಪೂರ್ವಭಾವನೆ ಮಾಡಲಾದ ಒಬ್ಬ ದುಡಿಮೆಗಾರ." [(S.2.(ಜಿ)] ಜೀತ ಪದ್ಧತಿಯ ವ್ಯಾಖ್ಯಾನದ ಪ್ರಕಾರ ಜೀತ ಸಾಲ ಒಬ್ಬ ವ್ಯಕ್ತಿಯು ಜೀತದ ಬಂಧನದಲ್ಲಿ ಒಳಗಾಗಲಿಕ್ಕೆ ಇರಬಹುದಾದ ಐದು ಕಾರಣಗಳಲ್ಲಿ ಕೇವಲ ಒಂದು ರೀತಿಯ ಕಾರಣವಾಗಿದೆ. ಅಷ್ಟೇ ಅಲ್ಲದೇ ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳು ಸ್ಪಷ್ಟಪಡಿಸಿರುವುದೇನೆಂದರೆ ಒಬ್ಬ ದುಡಿಮೆಗಾರನು ಸಾಲ ಅಥವಾ ಮುಂಗಡ ಪಡೆದಿರದಿದ್ದರೂ ಆತನು ಬಲಾತ್ಕಾರದ ದುಡಿಮೆ ಸಲ್ಲಿಸುತ್ತಿದ್ದರೆ ಅವನು ಜೀತದಾಳುವಾಗಿದ್ದಾನೆ.

**III.4 ಗ್ರಾಮೀಣ ದುಡಿಮೆ ಕುರಿತು ರಾಷ್ಟ್ರೀಯ ಆಯೋಗದ ವರದಿ: ಸಂಪುಟಗಳು I ಮತ್ತು II (ಭಾರತ ಸರ್ಕಾರ, ಕಾರ್ಮಿಕ ಇಲಾಖೆ, ನವ ದೆಹಲಿ, 1991):**

ಈ ವರದಿಯು ಅಧಿನಿಯಮದಲ್ಲಿಯ ವ್ಯಾಖ್ಯಾನದಲ್ಲಿರುವ ದ್ವಂದ್ವಾರ್ಥಗಳನ್ನು ತೆಗೆಯುವ ರೀತಿಯಲ್ಲಿ ಅಧಿನಿಯಮವನ್ನು ತಿದ್ದುಪಡಿಗೊಳಿಸಬೇಕು ಎಂದು ಶಿಫಾರಸು ಮಾಡಿದೆ. ಸಾಲವು ಜೀತದ

ಅರ್ಥವ್ಯಾಪ್ತಿಯಲ್ಲಿ ಕಡ್ಡಾಯವಾಗಿ ಇರಬೇಕೆಂಬುದನ್ನು ತೆಗೆದು ಹಾಕಿ ಸೂಕ್ತ ತಿದ್ದುಪಡಿ ಮತ್ತು 1985ರಲ್ಲಿ ತಿದ್ದುಪಡಿ ಮಾಡಿ ಸೇರಿಸಲಾದ ವಿವರಣೆ ವಾಕ್ಯದಲ್ಲಿ ಯಾವುದೇ ಕಾನೂನಿನ ವ್ಯಾಖ್ಯಾನದೊಳಗೆ ಬರುವ ಕೆಲಸಗಾರರನ್ನೂ ಸೇರಿಸಬೇಕು ಎಂಬುವು ಆ ಶಿಫಾರಸುಗಳಲ್ಲಿ ಮುಖ್ಯವೆನಿಸುವುವು.

**III.5 ಜೀತದ ಕುರಿತು ಕೇಂದ್ರೀಯ ಸಮಿತಿಯ ವರದಿ (ಅಧ್ಯಕ್ಷರಾಗಿದ್ದ ಎ.ಕೆ. ಚಕ್ರವರ್ತಿಯವರು 11–08–1994ರಲ್ಲಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ್ದರು):**

ಸಮಿತಿಯು ಮಾಡಿದ ಶಿಪಾರಸು ಏನೆಂದರೆ ಜೀತಸಾಲ ತೀರಿಸಲು ನೀಡಿದ ದುಡಿಮೆಯಲ್ಲದೇ ಬಲಾತ್ಕಾರದ ದುಡಿಮೆಯ ಯಾವುದೇ ಸನ್ನಿವೇಶವನ್ನೂ ಜೀತವೆಂತಲೇ ಪರಿಗಣಿಸಬೇಕು ಮತ್ತು ಅಧಿನಿಯಮವನ್ನು ಸೂಕ್ತವಾಗಿ ತಿದ್ದುಪಡಿಗೊಳಿಸಬೇಕು. ಆದರೆ ಆ ಸಮಿತಿಯು ಲಕ್ಷಿಸಿದ್ದು ಏನೆಂದರೆ ಅಧಿನಿಯಮದಲ್ಲಿ ಸ್ಪಷ್ಟಪಡಿಸಲಾದ ಜೀತ ಬಂಧನದ ಪರಿಸ್ಥಿತಿಗಳು ಇಲ್ಲದಿದ್ದರೆ ಕನಿಷ್ಠ ವೇತನ ಪಡೆಯದಿದ್ದ ಮಾತ್ರಕ್ಕೆ ಒಬ್ಬನ ದುಡಿಮೆಯು ಜೀತವೆನಿಸುವುದಿಲ್ಲ. ಸಮಿತಿಯು ಇನ್ನೂ ಸ್ಪಷ್ಟಪಡಿಸಿದ್ದೇನೆಂದರೆ ಜೀತ ಅಧಿನಿಯಮವು ಜೀತದ ಕನಿಷ್ಠಾವಧಿಯನ್ನು ಗೊತ್ತುಪಡಿಸುವುದಿಲ್ಲ ಮತ್ತು ಒಬ್ಬ ಜೀತದಾಳು ಚಲನಾಸ್ವಾತಂತ್ರ್ಯ ಮತ್ತು ತನ್ನ ದುಡಿಮೆಯ ಫಲವನ್ನು ಸ್ವಾಧೀನ ಪಡಿಸುವ ಸ್ವಾತಂತ್ರ್ಯವನ್ನು ಕಳೆದುಕೊಳ್ಳದಿದ್ದರೂ ಅವನು ಜೀತದಾಳುವೇ ಆಗಿದ್ದಾನೆ. ಸಮಿತಿಯ ವರದಿಯ ಮೂರನೇ ಅಧ್ಯಾಯದಲ್ಲಿರುವ **ಶಿಫಾರಸ್ಸುಗಳ ಸಾರಾಂಶ** (ಸಾರಾಂಶದಲ್ಲಿಯ 3.3 to 3.5 ನಂ.ಗಳು ವರದಿಯ ಎರಡನೇ ಅಧ್ಯಾಯದಿಂದ ಉದ್ಧೃತಗೊಂಡಿವೆ):

1. ಜೀತವನ್ನು ಗುರುತಿಸುವಲ್ಲಿ ಸಾಲಗಾರ –ಸಾಲಿಗ ಸಂಬಂಧವು ಒಂದು ಬಹುಮುಖ್ಯ ಅಂಶವಾಗಿದ್ದರೂ, ಬಲಾತ್ಕಾರದ ದುಡಿಮೆಯ ಅಂಶಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಬೇಕು. ಮತ್ತು ಬಲಾತ್ಕಾರವನ್ನು ಕೇವಲ ದೈಹಿಕ ಬಲಾತ್ಕಾರಕ್ಕೆ ಸೀಮಿತಗೊಳಿಸದೆ ಆರ್ಥಿಕ ಪರಿಸ್ಥಿತಿಗಳ ಒತ್ತಡಗಳಿಂದ, ಹಣದ ಅವಶ್ಯಕತೆಯಿರುವ ವ್ಯಕ್ತಿಗೆ ಬೇರೆ ಮಾರ್ಗಗಳಿಲ್ಲದೆ, ಕಾನೂನು ಬಾಹಿರ ರೀತಿ0ಯಲ್ಲಿ ತನ್ನ ದುಡಿಮೆ ಅಥವಾ ಸೇವೆಯನ್ನು ಬೇರೊಬ್ಬನಿಗೆ ಸಲ್ಲಿಸುವಂತೆ ಒತ್ತಾಯಿಸುವ ಬಲಾತ್ಕಾರವನ್ನು ಬಲಾತ್ಕಾರವೆಂದು ತಿಳಿದುಕೊಳ್ಳಬೇಕು. (ನೋಡಿ – ಸಮಿತಿ ವರದಿ 3.2 & 3.8–3.11).

2. ಜೀತ ಮತ್ತು ಜೀತಪದ್ಧತಿ ಕುರಿತ ವ್ಯಾಖ್ಯಾನಗಳನ್ನು ಉದಾರವಾಗಿಯೇ ಅರ್ಥೈಸಬೇಕು. ಅದಕ್ಕೋಸ್ಕರ ಬಲಾತ್ಕಾರದ ದುಡಿಮೆಯ ಅಂಶವನ್ನು 1976ರ ಜೀತಪದ್ಧತಿ ರದ್ಧತಿ ಅಧಿನಿ0ಯಮದ ಪರಿಚ್ಛೇದಗಳಾದ 2, 6 ಉಪಪರಿಚ್ಛೇಧ (1) ಮತ್ತು (6), 7, 8, 9, 16 ಮತ್ತು 18ರ ಸೂಕ್ತ ವಾಕ್ಯ ಭಾಗಗಳಲ್ಲಿ ನಮೂದಿಸಬೇಕು (3.3).

3. ಈ ಕೆಳಗಿನ ಆಡಳಿತಾತ್ಮಕ ಮಾಪನಗಳನ್ನು ಅಳವಡಿಸುವುದರ ಮೂಲಕ ಕಾನೂನಿನಲ್ಲಿರುವ ಜೀತಪದ್ಧತಿ ಕುರಿತ ವ್ಯಾಖ್ಯಾನದಲ್ಲಿಯ ಅಂಶಗಳನ್ನು ಉದಾರವಾಗಿಯೇ ಬಳಸಬಹುದು:(3.4)

3.1 ಜೀತದಾಳುವಿನ ಸಾಲ ಮನ್ನ ಆಗಿದ್ದರೂ, ಅಂಥ ಜೀತದಾಳುವನ್ನು ಗುರುತಿಸಿ, ಬಿಡುಗಡೆ ಮಾಡಿ ಅವನಿಗೆ ಪುನರ್ವಸತಿ ಸೌಕರ್ಯ ಕಲ್ಪಿಸಬೇಕು (3.4).

3.2 ಒಪ್ಪಂದದ ಪೇಪರಿನಲ್ಲಿ ಬಲಾತ್ಕಾರದ ಅಂಶವನ್ನು ಮರೆಮಾಡಿದರೂ, ಯಾವುದೇ ಕೂಲಿಯಿಲ್ಲದೆ ಅಥವಾ ನ್ಯಾಯಯುತ ಮಜೂರಿ ಇಲ್ಲದೆ, ಜನ್ಮ, ಜಾತಿ, ಪದ್ಧತಿಗಳ ಕಾರಣವಾಗಿ ಬಲಾತ್ಕಾರದಿಂದ ದುಡಿಯುತ್ತಿರುವವನನ್ನು ಜೀತಗಾರನೆಂದೇ ಪರಿಗಣಿಸಬೇಕು (3.4).

3.3 ಜೀತದಾಳು ಈಗ ಜೀತವನ್ನು ಬಿಟ್ಟಿದ್ದರೂ, ಅರ್ಜಿ ಹಾಕುವಾಗ ಜೀತದಾಳು ಆಗಿದ್ದರೆ, ಅವನನ್ನು ಗುರುತಿಸಿ, ಬಿಡುಗಡೆ ಮಾಡಿ ಅವನಿಗೆ ಪುನರ್ವಸತಿ ಕಲ್ಪಿಸಬೇಕು. [2.23(ii)].

3.4 ಒಂದು ವರ್ಷಕ್ಕಿಂತ ಕಡಿಮೆ ಕೆಲಸ ಮಾಡುತ್ತಿರುವ ಜೀತದಾಳುವನ್ನು ಜೀತದಾಳುವೆಂದೇ ಪರಿಗಣಿಸಬೇಕು. ಕಾನೂನಿನಲ್ಲಿ ಜೀತಪದ್ಧತಿಗೆ ಕನಿಷ್ಠ ಕಾಲಾವಧಿಯನ್ನು ನಮೂದಿಸಿಲ್ಲ [2.23(iii)].

3.5 ಜೀತ ಸಾಲಮಾಡಿ, ಸಾಲ ತೀರುವವರೆಗೆ ಜೀತ ಮಾಡಬೇಕೆಂದು ನಿರ್ಬಂಧವಿರುವ ಜೀತದಾಳುವಿನ ಚಲನಾ ಸ್ವಾತಂತ್ರ್ಯಕ್ಕೆ ಧಕ್ಕೆ, ತನ್ನ ದುಡಿಮೆಯ ಫಲವನ್ನು ಮಾರುವ ಸ್ವಾತಂತ್ರ್ಯಕ್ಕೆ ಧಕ್ಕೆ ಆಗದಿದ್ದರೂ ಆ ಸಾಲವನ್ನು ಜೀತ ಸಾಲವಲ್ಲವೆಂದು ತೋರಿಸುವ ಹೊಣೆ 15ನೇ ಪರಿಚ್ಛೇಧದ ಪ್ರಕಾರ ಯಜಮಾನನ ಮೇಲಿದೆ [2.23(iv)].

4. 1986ರ ಬಾಲಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಅಧಿನಿಯುಮದ ಅಂಶಗಳನ್ನು 1976ರ ಜೀತಪದ್ಧತಿ ರದ್ದತಿ ಅಧಿನಿಯಮದ ಬೇರೆ ಬೇರೆ ಪರಿಚ್ಛೇದಗಳಿಗೆ ಅನ್ವಯಿಸಿ, ಬಾಲಕಾರ್ಮಿಕರನ್ನು ಜೀತಪದ್ಧತಿ ಕಾನೂನಿನಡಿಯಲ್ಲಿ ಅರ್ಥೈಸುವಂತೆ 1976 ಜೀತಪದ್ಧತಿ ರದ್ದತಿ ಅಧಿನಿಯಮದ ಪರಿಚ್ಛೇದ 2ರ ವಿವರಣೆಯ ಅರ್ಥವನ್ನು ವಿಸ್ತಾರಗೊಳಿಸಬೇಕು (3.5).

5. ಜೀತದಾಳುಗಳನ್ನು ಗುರುತಿಸಿ, ಬಿಡುಗಡೆಗೊಳಿಸಿ, ಅವರ ಪುನರ್ವಸತಿಗಾಗಿ ಜಿಲ್ಲಾಧಿಕಾರಿಗಳು ತಮ್ಮ ಅಧೀನದಲ್ಲಿರುವ ಅಧಿಕಾರಿಗಳಿಗೆ ಸೂಕ್ತವಾದ ಅಧಿಕಾರವನ್ನು ಕೊಟ್ಟು, ಅವರನ್ನು ನಿಯೋಜಿಸಬೇಕು (3.12).

## ಅನುಬಂಧ VI

**ಜೀತ ಹೆಚ್ಚಿಗೆ ಕಾಣುವ ಕ್ಷೇತ್ರಗಳು, ಸಮುದಾಯಗಳು ಮತ್ತು ಪ್ರದೇಶಗಳು ಹಾಗೂ ಜೀತದ ವ್ಯಾಪಿ, ಜೀತ ನಿರ್ಮೂಲನೆಯಲ್ಲಿ ಕರ್ನಾಟಕದ ಪಾತ್ರ ಮತ್ತು ಅದಕ್ಕೆ ತೆಗೆದುಕೊಳ್ಳಬೇಕಾದ ಕ್ರಮಗಳು [ಆಧಾರ: ಕರ್ನಾಟಕ ಜೀತದಾಳುಗಳ ಪುನರ್ವಸತಿ: ಒಂದು ಕ್ರಿಯಾಯೋಜನೆ 2008].**

ಕರ್ನಾಟಕದಲ್ಲಿ ವ್ಯವಸಾಯ ಕ್ಷೇತ್ರದಲ್ಲಿ ಈಗಲೂ ಅತಿ ಹೆಚ್ಚಿನ ಜೀತದ ಪ್ರಮಾಣ ಕಂಡು ಬರುತ್ತದೆ. ಇಟ್ಟಿಗೆ ಕಾರ್ಖಾನೆ, ಬಂಡೆ ಹೊಡೆಯುವುದು, ತೋಟಗಾರಿಕೆ, ರೇಷ್ಮೆ, ಕಾಫಿ ಎಸ್ಟೇಟುಗಳಲ್ಲಿಯ ಕೆಲಸ, ಮನೆಗೆಲಸ, ಹೊಟೇಲು ಮತ್ತು ಗ್ಯಾರೇಜುಗಳು ಜೀತವಿರುವ ಇನ್ನಿತರ ಕ್ಷೇತ್ರಗಳಾಗಿವೆ. ಕಾನೂನಿನ ಪ್ರಕಾರ ಕಂಪೆನಿ ಮತ್ತು ಫ್ಯಾಕ್ಟರಿಗಳಲ್ಲೂ ಜೀತವಿರಬಹುದು. ಬೇರೆ ರಾಜ್ಯಗಳಲ್ಲಿ ಇನ್ನೂ ಇತರ ಕ್ಷೇತ್ರಗಳಲ್ಲಿ ಜೀತವನ್ನು ಕಾಣಬಹುದು. ಅವು ಯಾವುವೆಂದರೆ: ಬೀಡಿ ಕಟ್ಟುವುದು, ಕಾರ್ಪೆಟು ಹೊಲಿಯುವುದು, ಹತ್ತಿ ಕೈಮಗ್ಗಗಳು, ವಿದ್ಯುತ್ ಚಾಲಿತ ಮಗ್ಗಗಳು, ಮೀನುಗಾರಿಕೆ, ಅಕ್ಕಿ ಗಿರಣಿಗಳು, ಚಾ ಎಸ್ಟೇಟುಗಳಲ್ಲಿಯ ಕೆಲಸ, ಕೃತಕ ವಜ್ರ ತಯಾರಿಕೆ, ಗ್ಲಾಸ್ ತಯಾರಿಕೆ, ಕಂಚು ಕೆಲಸ, ಪಟಾಕಿ ತಯಾರಿ, ಬೆಂಕಿ ಪೊಟ್ಟಣ ತಯಾರಿ, ಸ್ಲೇಟು, ಮಾರ್ಬಲ್ ಉತ್ಪಾದನೆ, ಕಟ್ಟಡ ಕೆಲಸ, ಇತರ ಅಸಂಘಟಿತ ಕ್ಷೇತ್ರದ ಕೆಲಸಗಳು ಇತ್ಯಾದಿ. ಇತ್ತೀಚೆಗಿನ ವರ್ಷಗಳಲ್ಲಿ ವಲಸೆ ಕಾರ್ಮಿಕರಲ್ಲಿ ಹೆಚ್ಚಿನವರು ಜೀತಕ್ಕೆ ಒಳಗೊಳ್ಳುವ ಸಂದರ್ಭಗಳನ್ನು ಕಣುತ್ತೇವೆ.

ಕರ್ನಾಟಕದಲ್ಲಿ ಶೇಕಡಾ 80ರಿಂದ 95ರಷ್ಟು ಜೀತದಾಳುಗಳು ಅನುಸೂಚಿತ ಜಾತಿಗಳಿಗೆ ಸೇರಿದವರಾಗಿರುತ್ತಾರೆ. ಅನುಸೂಚಿತ ಜನಾಂಗ ಮತ್ತು ಹಿಂದುಳಿದ ಜಾತಿಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಜೀತದಾಳುಗಳಿದ್ದಾರೆ. ಬಲಿಷ್ಠ ಜಾತಿಗಳಲ್ಲಿ ಅತ್ಯಲ್ಪ ಕಡಿಮೆ ಪ್ರಮಾಣದಲ್ಲಿ ಜೀತದಾಳುಗಳಿರುವುದು ಕಂಡುಬರುತ್ತದೆ. ದೊಡ್ಡ ಪ್ರಮಾಣದಲ್ಲಿ ಅನುಸೂಚಿತ ಜನಾಂಗದವರು ಇದ್ದ ಪ್ರದೇಶಗಳಲ್ಲಿ ಜೀತದಾಳುಗಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿ ಜೀತದಾಳುಗಳಿರುತ್ತಾರೆ.

ಕರ್ನಾಟಕದಲ್ಲೆಲ್ಲಾ ಜೀತವಿದೆಯೇ? ವಸ್ತುನಿಷ್ಠ ಸಮೀಕ್ಷೆ ಮತ್ತು ಅಧ್ಯಯನಗಳಿಂದಲೇ ಇದಕ್ಕೆ ಉತ್ತರವನ್ನು ಒದಗಿಸಬೇಕಾಗುತ್ತದೆ. ಜೀತವು ಬೇರೆ ಬೇರೆ ಜಿಲ್ಲೆಗಳಲ್ಲಿ ಅಥವಾ ತಾಲೂಕುಗಳಲ್ಲಿ ಬೇರೆ ಬೇರೆ ಪ್ರಮಾಣಗಳಲ್ಲಿ ಇರಬಹುದು. ಕರಾವಳಿಯ ಜಿಲ್ಲೆ ಮತ್ತು ತಾಲೂಕುಗಳಲ್ಲಿ ಜೀತದ ಪ್ರಮಾಣವು ಬಹಳಷ್ಟು ಕಡಿಮೆ ಇದ್ದು ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಜೀತ ಪ್ರಮಾಣ ಜಾಸ್ತಿ ಇರುವ ಸಾಧ್ಯತೆ ಇದೆ. ಏಕೆಂದರೆ ದಕ್ಷಿಣ ಕರ್ನಾಟಕದ ಜಿಲ್ಲೆಗಳಿಗಿಂತ ಉತ್ತರ ಕರ್ನಾಟಕದ ಜಿಲ್ಲೆಗಳು ಈಗಲೂ ಅರ್ಥಿಕವಾಗಿ ಹಿಂದುಳಿದಿವೆ. ಇಷ್ಟರವರೆಗೆ ಸರ್ಕಾರವು ಕಾನೂನಿನಡಿ ಕೈಗೊಂಡ ಕ್ರಮಗಳ ಅಡಿಯಲ್ಲಿ ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲೇ ಹೆಚ್ಚಿನ ಸಂಖ್ಯೆಯಲ್ಲಿ ಜೀತದಾಳುಗಳನ್ನು ಗುರುತಿಸಲಾಗಿದೆ. ಅದಕ್ಕೆ ಹೋಲಿಸಿದರೆ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಗುರುತಿಸಿದ ಜೀತದಾಳುಗಳ ಪ್ರಮಾಣ ಅತ್ಯಲ್ಪವೆಂತಲೇ ಹೇಳಬಹುದು. ಇದರಿಂದ ದಕ್ಷಿಣ

ಕರ್ನಾಟಕದಲ್ಲಿ ಜೀತದಾಳುಗಳ ಸಂಖ್ಯೆ ಹೆಚ್ಚು ಮತ್ತು ಉತ್ತರ ಕರ್ನಾಟಕದಲ್ಲಿ ಕಡಿಮೆ ಎಂದು ತೀರ್ಮಾನಿಸುವುದು ಸರಿಯಲ್ಲ ಎಂದೆನಿಸುತ್ತದೆ. ಉತ್ತರ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಅತಿ ಕಡಿಮೆ ಜೀತದಾಳುಗಳನ್ನು ಇಷ್ಟರ ವರೆಗೆ ಗುರುತಿಸಲಾಗಿದ್ದು ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಇದುವರೆಗೂ ಒಬ್ಬನೇ ಒಬ್ಬ ಜೀತದಾಳುವನ್ನು ಗುರುತಿಸಲಾಗಿಲ್ಲ. ಆದ್ದರಿಂದಲೇ ಧಾರವಾಡ ಜಿಲ್ಲೆಯಲ್ಲಿ ಜೀತದ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡುವ ಪ್ರಸ್ತಾಪ ಮಾಡಲಾಗಿದೆ.

ಭಾರತೀಯ ರಾಷ್ಟ್ರೀಯ ಸ್ಯಾಂಪಲ್ ಸರ್ವೆ ಸಂಘಟನೆಯು 1992ರಲ್ಲಿ ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ಕೃಷಿಕೂಲಿಗಳಲ್ಲಿ ಶೇಕಡಾ 6 ಮಂದಿ ಜೀತದಾಳುಗಳಾಗಿರುತ್ತಾರೆ ಎಂದು ಅಂದಾಜು ಮಾಡಲಾಗಿತ್ತು. 2001ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆ 52,850,562 ಇತ್ತು. ಅವರಲ್ಲಿ ಒಟ್ಟು ಕಾರ್ಮಿಕರ ಸಂಖ್ಯೆ 23,534,791 (ಒಟ್ಟು ಜನಸಂಖ್ಯೆಯ 44.5 ಶೇ.) ಆಗಿತ್ತು. ಒಟ್ಟು ಕಾರ್ಮಿಕರಲ್ಲಿ ಕೃಷಿಕೂಲಿಯಾಳುಗಳು 6,226,942 (ಒಟ್ಟು ಕಾರ್ಮಿಕರ 26.5 ಶೇ.) ಆಗಿದ್ದರು. ಒಟ್ಟು ಕೂಲಿಯಾಳುಗಳ ಶೇ. 6 ಅಂದರೆ 3,73,617 ಮಂದಿ ಜೀತದಾಳುಗಳಾಗುತ್ತಾರೆ! ಇನ್ನಿತರ ಕ್ಷೇತ್ರಗಳಲ್ಲಿಯ ಜೀತದಾಳುಗಳನ್ನು ಸೇರಿಸಿದರೆ ಕರ್ನಾಟಕದಲ್ಲಿ ಜೀತದಾಳುಗಳ ಒಟ್ಟು ಸಂಖ್ಯೆ ಐದು ಲಕ್ಷದಷ್ಟಿರಬಹುದು. ಒಂದು ದಶಕದಲ್ಲಿ ಜನಸಂಖ್ಯೆಯಲ್ಲಿ ಆಗಿರುವ ಹೆಚ್ಚಳವನ್ನು ಪರಿಗಣಿಸಿದರೆ ಈಗಿನ ಜೀತದಾಳುಗಳ ಒಟ್ಟು ಸಂಖ್ಯೆಯನ್ನು ಆರು ಲಕ್ಷವೆಂದು ಅಂದಾಜು ಮಾಡಬಹುದು. ಜೊತೆಗೆ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳ ಪ್ರಕ್ರಿಯೆಗಳು ಕೂಡಾ ಕೃಷಿ ಕೂಲಿಯಾಳು ಮತ್ತಿತರ ಅಸಂಘಟಿತ ವಲಯದ ಕಾರ್ಮಿಕರ ಜೀವನವನ್ನು ಹೆಚ್ಚೆಚ್ಚು ದುಸ್ತರಗೊಳಿಸುತ್ತಿದ್ದು ಅವರಲ್ಲಿಯ ಹಲವಾರು ಮಂದಿ ಹೊಸ ರೀತಿಯ ಜೀತಸಂಬಂಧಗಳಿಗೆ ಸಿಲುಕಿ ಹಾಕಿಕೊಳ್ಳುವ ಸಂಭವ ಹೆಚ್ಚುತ್ತಿದೆ ಎಂದು ತಿಳಿದುಕೊಳ್ಳಬಹುದು. ಮನೆಗೆಲಸ ಮತ್ತು ವೇಶ್ಯಾವಾಟಿಕೆಗೋಸ್ಕರ ನಡೆಯುವ ಮಹಿಳೆ ಹಾಗೂ ಮಕ್ಕಳ ವ್ಯಾಪಾರಗಳು ಇತ್ತೀಚೆಗೆ ಬೆಳೆಯುತ್ತಿರುವ ಜೀತದ ಹೊಸ ರೂಪಗಳೆನಿಸುತ್ತವೆ. ಈಗೀಗ ಹೆಚ್ಚುತ್ತಿರುವ ಅಂತಾರಾಜ್ಯ ವಲಸೆ ಕಾರ್ಮಿಕರಲ್ಲಿ ಹಲವಾರು ಮಂದಿ ಜೀತದಾಳುಗಳಾಗಿ ದುಡಿಯುತ್ತಿರುವುದನ್ನೂ ಹಲವಾರು ದಿನ ಪತ್ರಿಕೆಗಳು ಬಯಲಿಗೆಳೆಯುತ್ತಿವೆ.

**ಜೀತ ಪದ್ಧತಿಯನ್ನು ಹೋಗಲಾಡಿಸುವಲ್ಲಿ ಕರ್ನಾಟಕ ರಾಜ್ಯ ವಹಿಸುತ್ತಿದ್ದ ಪ್ರಮುಖ ಪಾತ್ರ ಮತ್ತು ಅದರಲ್ಲಿಯ ಕೆಲವು ಲೋಪದೋಷಗಳು:**

ಜೀತ ಪದ್ಧತಿ ನಿರ್ಮೂಲನೆ ಕಾಯ್ದೆಯನ್ನು 1976ರಲ್ಲಿ ಜಾರಿಗೊಳಿಸಿದಾಗ ಕೆಲವೊಂದು ರಾಜ್ಯಗಳು ಮಾತ್ರ ಮುತುವರ್ಜಿಯಿಂದ ಅದನ್ನು ಅನುಷ್ಠಾನಕ್ಕೆ ತಂದಿವೆ. 1993ರ ತನಕ ಒಟ್ಟು 27 ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಕೇವಲ 12 ರಾಜ್ಯಗಳು (ಆಂಧ್ರ ಪ್ರದೇಶ, ಬಿಹಾರ, ಕರ್ನಾಟಕ, ಮಧ್ಯ ಪ್ರದೇಶ, ಒಡಿಶಾ, ರಾಜಸ್ಥಾನ, ತಮಿಳು ನಾಡು, ಮಹಾರಾಷ್ಟ್ರ, ಉತ್ತರ ಪ್ರದೇಶ, ಕೇರಳ, ಹರ್ಯಾಣ ಮತ್ತು ಗುಜರಾತ್) ಮಾತ್ರ ಕಾನೂನಿನಡಿ ಸ್ವಲ್ಪ ಮಟ್ಟಿಗೆ ಕ್ರಮ ಜರುಗಿಸಿವೆ. 1993ರೊಳಗೆ ಇಡೀ ದೇಶದಲ್ಲಿ

2,51,069 ಜೀತದಾಳುಗಳನ್ನು ಗುರುತಿಸಿ ಬಿಡುಗಡೆಗೊಳಿಸಲಾಗಿತ್ತು. ಅವರಲ್ಲಿ 2,24,074 ಜೀತದಾಳುಗಳಿಗೆ ಪುನರ್ವಸತಿ ಸೌಲಭ್ಯವನ್ನೂ ಕಲ್ಪಿಸಿಕೊಡಲಾಗಿತ್ತು. ಇಡೀ ದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಜೀತದಾಳುಗಳನ್ನು ಗುರುತಿಸಿ, ಬಿಡುಗಡೆ ಮಾಡಿ, ಪುನವರ್ಸತಿಗೊಳಿಸಲಾಗಿತ್ತು. ಕರ್ನಾಟಕವು 1993ರೊಳಗೆ 62,708 ಜೀತದಾಳುಗಳನ್ನು ಗುರುತಿಸಿ ಬಿಡುಗಡೆಗೊಳಿಸಿತ್ತು. ಇದು ಇಡೀ ದೇಶದಲ್ಲಿ ಗುರುತಿಸಿ ಬಿಡುಗಡೆಗೊಳಿಸಿದ ಜೀತದಾಳುಗಳ ಸಂಖ್ಯೆಯ ಕಾಲು ಭಾಗದಷ್ಟು! ಕರ್ನಾಟಕವು ಈ ಸ್ಥಾನವನ್ನು 1997ರ ತನಕ ಕಾಪಾಡಿಕೊಂಡು ಬಂತು. ಇದರರ್ಥ ಕರ್ನಾಟಕದಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಜೀತದಾಳುಗಳಿದ್ದಾರೆಂದಲ್ಲ. ಬದಲು ಕರ್ನಾಟಕ ರಾಜ್ಯ ಮಾತ್ರ ಬೇರೆ ರಾಜ್ಯಗಳಿಗಿಂತ ಕಾನೂನನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಪ್ರಯತ್ನಿಸಿದೆ ಎಂದು ಹೇಳಬಹುದು.

ಇದು ಒಟ್ಟರೆಯಾಗಿ ಮತ್ತು ಬೇರೆ ರಾಜ್ಯಗಳಿಗೆ ಹೋಲಿಸಿದರೆ ದೊಡ್ಡ ಸಾಧನೆ ಎನಿಸಿದರೂ ಆ ಸಾಧನೆಯಲ್ಲಿ ಹಲವಾರು ಲೋಪದೋಷಗಳನ್ನು ನಾವು ಕಾಣಬಹುದು. ಮೊದಲನೇ ಕುಂದು ಕೊರತೆ ಏನೆಂದರೆ ಕರ್ನಾಟಕದಲ್ಲಿ ಗುರುತಿಸಿದ ಜೀತದಾಳುಗಳನ್ನು ಒಟ್ಟಿಗೆ ಪುನರ್ವಸತಿಗೊಳಿಸದಿರುವುದು. ಅವರನ್ನು ಹಂತಹಂತವಾಗಿ 2000ರ ತನಕವೂ ಪುನರ್ವಸತಿಗೊಳಿಸಲಾಗಿತ್ತು! ಎರಡನೇ ಬಹುದೊಡ್ಡ ಲೋಪವೇನೆಂದರೆ 1980ರ ನಂತರ ರಾಜ್ಯದಲ್ಲಿ ಹೊಸದಾಗಿ ಜೀತದಾಳುಗಳನ್ನು ಗುರುತಿಸಲಿಕ್ಕೆ ಯಾವುದೇ ಕ್ರಮ ಕೈಗೊಂಡಿಲ್ಲವೆಂದರೂ ತಪ್ಪಾಗಲಾರದು. ಒಂದು ವೇಳೆ ಜೀತದಾಳುಗಳನ್ನು ಗುರುತಿಸಿ, ಬಿಡುಗಡೆಗೊಳಿಸಿ, ಪುನರ್ವಸತಿಗೊಳಿಸಿದ್ದೇ ಆದರೆ ಅದು ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಮತ್ತು ಅದೂ ಕೇವಲ ಎರಡು ಮೂರು ತಾಲೂಕುಗಳಲ್ಲಿ ಅಷ್ಟೇ. ಉದಾಹರಣೆಗಾಗಿ 1996ರಲ್ಲಿ ಬಂಗಾರಪೇಟೆಯಲ್ಲಿ 11 ಮತ್ತು ಗೌರಿಬಿದನೂರಿನಲ್ಲಿ 8 ಮತ್ತು 1997ರಲ್ಲಿ ಮಧುಗಿರಿಯಲ್ಲಿ 11. ಇದನ್ನು ಬಿಟ್ಟರೆ 1980ರ ನಂತರ ಬೇರೆಲ್ಲೂ ಜೀತದಾಳುಗಳನ್ನು ಹೊಸದಾಗಿ ಗುರುತಿಸಿಲ್ಲ.

ಮೂರನೇ ಲೋಪದೋಷವನ್ನು ಹೀಗೆ ವಿವರಿಸಬಹುದು. ಒಟ್ಟಾರೆಯಾಗಿ ನೋಡುವಾಗ ಕರ್ನಾಟಕವು ಆರಂಭದಲ್ಲಿ ದೇಶದಲ್ಲೇ ದೊಡ್ಡ ಪ್ರಮಾಣದಲ್ಲಿ ಜೀತದಾಳುಗಳನ್ನು ಗುರುತಿಸಿದ್ದರೂ ಗುರುತಿಸಿದ ಜೀತದಾಳುಗಳ ಜಿಲ್ಲಾವಾರು ಹರಡಿರುವಿಕೆಯನ್ನು ತುಲನೆ ಮಾಡಿದಾಗ ಆ ಲೋಪದೋಷ ಎದ್ದು ಕಾಣುತ್ತದೆ. ಆಗಿನ ಒಟ್ಟು 19 ಜಿಲ್ಲೆಗಳಲ್ಲಿ ಹಿಂದುಳಿದ ಪ್ರದೇಶವಾದ ಉತ್ತರ ಕರ್ನಾಟಕದ ಆಗಿನ 8 ಜಿಲ್ಲೆ (ಬೀದರ, ಗುಲ್ಬರ್ಗ, ರಾಯಚೂರು, ಬಳ್ಳಾರಿ, ಬಿಜಾಪುರ, ಬೆಳಗಾವಿ, ಧಾರವಾಡ, ಉತ್ತರ ಕನ್ನಡ) ಗಳಲ್ಲಿ ಗುರುತಿಸಿದ ಜೀತದಾಳುಗಳ ಸಂಖ್ಯೆ ಕೇವಲ 1264! ಈಗಿನ ಗದಗ ಮತ್ತು ಹಾವೇರಿ ಜಿಲ್ಲೆಗಳನ್ನೊಳಗೊಂಡಿದ್ದ ಆಗಿನ ಧಾರಾವಾಡ ಜಿಲ್ಲೆಯಲ್ಲಿ ಒಬ್ಬನೇ ಒಬ್ಬ ಜೀತದಾಳುವನ್ನು ಪತ್ತೆ ಹಚ್ಚಿರಲಿಲ್ಲ. ಆದರೆ ಸ್ವಲ್ಪ ಹೆಚ್ಚಿಗೆ ಮುಂದುವರಿದಿರುವ ಕರ್ನಾಟಕದ ದಕ್ಷಿಣ ಭಾಗದ ಆಗಿನ 11 ಜಿಲ್ಲೆಗಳಲ್ಲಿ 60 ಸಾವಿರಕ್ಕಿಂತಲೂ ಹೆಚ್ಚಿನ, ಅಂದರೆ 61,268, ಜೀತದಾಳುಗಳನ್ನು ಗುರುತಿಸಲಾಗಿತ್ತು. ಇದನ್ನು ನಾವು

ಎರಡು ರೀತಿಯಲ್ಲಿ ವಿಶ್ಲೇಷಿಸಬಹುದು. ಒಂದು ಉತ್ತರ ಕರ್ನಾಟಕದಲ್ಲಿ ಜೀತದಾಳುಗಳ ಸಂಖ್ಯೆಯೇ ಕಡಿಮೆ ಅಥವಾ ಆ ಪ್ರದೇಶದಲ್ಲಿ ಜೀತದಾಳುಗಳನ್ನು ಗುರುತಿಸುವ ಪ್ರಕ್ರಿಯೆ ಸಮರ್ಪಕವಾಗಿ ನಡೆದಿಲ್ಲ ಎಂಬುದು. ಉತ್ತರ ಕರ್ನಾಟಕದ ಜಿಲ್ಲೆಗಳು ಈಗಲೂ ಹೆಚ್ಚು ಹಿಂದುಳಿದ ಜಿಲ್ಲೆಗಳೆಂದು ಮನಸ್ಸಿನಲ್ಲಿಟ್ಟರೆ ಎರಡನೇ ತೀರ್ಮಾನವೇ ಸರಿ ಎಂದೆನಿಸುತ್ತದೆ.

ಹೀಗೆ ಜೀತದಾಳುಗಳನ್ನು ಗುರುತಿಸಿ ಪುನರ್ವಸತಿಗೊಳಿಸುವ ಪ್ರಕ್ರಿಯೆ ಕರ್ನಾಟಕವನ್ನೊಳಗೊಂಡಂತೆ ಎಲ್ಲಾ 12 ರಾಜ್ಯಗಳಲ್ಲಿ ಆರಂಭದಲ್ಲಿ ಉತ್ಸಾಹದಿಂದ ನಡೆದಿದ್ದರೂ 1980ರಿಂದಲೇ ಆ ಪ್ರಕ್ರಿಯೆಯಲ್ಲಿ ಮಂದಗತಿ ತಲೆದೋರಿತು ಅಥವಾ ಅದು ಸಂಪೂರ್ಣವಾಗಿ ಸ್ಥಗಿತವಾಯಿತೆಂದರೂ ತಪ್ಪಾಗಲಾರದು. ಆದರೆ 1980ರ ನಂತರದ ಎಷ್ಟೋ ಅಧ್ಯಯನಗಳು ಆ 12 ರಾಜ್ಯಗಳಲ್ಲದೇ ಜೀತ ಮುಕ್ತವೆಂದು ಮೊದಲು ತಿಳಿದು ಕೊಂಡಿದ್ದ ಕೇರಳ, ಪಂಜಾಬ್, ಜಮ್ಮು ಮತ್ತು ಕಾಶ್ಮೀರ, ಪಶ್ಚಿಮ ಬಂಗಾಳ, ಅರುಣಾಚಲ ಪ್ರದೇಶ ಮತ್ತು ಮೇಘಾಲಯ ಮುಂತಾದ ರಾಜ್ಯಗಳಲ್ಲಿಯೂ ಜೀತ ಪದ್ಧತಿ ಜೀವಂತವಿರುವುದನ್ನು ಬೆಳಕಿಗೆ ತಂದಿವೆ.

ವಾಸ್ತವ ಸ್ಥಿತಿ ಹೀಗಿದ್ದರೂ, ಮೊದಲು ಜೀತ ಪದ್ಧತಿ ಬಗ್ಗೆ ಕೆಲಸ ಮಾಡಿಕೊಂಡಿದ್ದ ಕರ್ನಾಟಕವನ್ನೊಳಗೊಂಡಂತೆ ಮೇಲ್ಕಾಣಿಸಿದ 12 ರಾಜ್ಯಗಳು ತಮ್ಮ ತಮ್ಮ ರಾಜ್ಯಗಳಲ್ಲಿ ಜೀತ ಪದ್ಧತಿ ಇಲ್ಲವೆಂದು ಸರ್ವೋಚ್ಚ ನ್ಯಾಯಾಲಯದಲ್ಲಿ 1985ರ 3922ನೇ ರಿಟ್ ಅರ್ಜಿ ವಿಚಾರಣೆ ಸಂಬಂಧದಲ್ಲಿ ಪ್ರಮಾಣ ಪತ್ರ ಸಲ್ಲಿಸಿದ್ದವು. ಆದರೆ ಸರ್ವೋಚ್ಚ ನ್ಯಾಯಾಲಯವು 1995ರ ಜೂನ್ 3ರಂದು ಆ ರಾಜ್ಯಗಳ ಪ್ರಮಾಣ ಪತ್ರಗಳಿಗೆ ಬೆಲೆ ಕೊಡದೇ ಪಶ್ಚಿಮ ಬಂಗಾಳ ಮತ್ತು ಮೇಘಾಲಯ ರಾಜ್ಯಗಳನ್ನೊಳಗೊಂಡಂತೆ ಒಟ್ಟು 13 ರಾಜ್ಯಗಳಲ್ಲಿ ಜೀತ ಕುರಿತು ಆಮೂಲಾಗ್ರ ಸಮೀಕ್ಷೆ ನಡೆಸಿ ವರದಿ ಹಾಕುವಂತೆ ಪ್ರತಿ ರಾಜ್ಯದಲ್ಲಿ ಇಬ್ಬಿಬ್ಬರು ಆಯುಕ್ತರನ್ನು ನೇಮಿಸಿ ಆಜ್ಞೆಯನ್ನು ಹೊರಡಿಸಿತು. ಆ 13 ರಾಜ್ಯಗಳಲ್ಲಿ ಕೇವಲ ತಮಿಳುನಾಡು ಆಯೋಗವು ವ್ಯಾಪಕವಾದ ಸಮೀಕ್ಷೆ ಕೈಗೊಂಡು ದೊಡ್ಡ ಪ್ರಮಾಣದಲ್ಲಿ, ಅಂದರೆ ಸುಮಾರು 10 ಲಕ್ಷ ಜೀತದಾಳುಗಳನ್ನು ಗುರುತಿಸಿತು. ರಾಜ್ಯ ಸರ್ಕಾರವು ಗುರುತಿಸಿದ ಆ ಜೀತದಾಳುಗಳ ಬಗ್ಗೆ ಮುಂದಿನ ಕ್ರಮ ತೆಗೆದು ಕೊಳ್ಳುವಂತೆ ಆದೇಶಿಸಲ್ಪಟ್ಟಿತ್ತು. ಆದರೆ ತಮಿಳು ನಾಡು ಸರ್ಕಾರವು 1996-97ರಲ್ಲಿ ಮರು ತನಿಖೆ ಮಾಡಿ ಇಡೀ ರಾಜ್ಯದಲ್ಲಿ ಕೇವಲ 25,005 ಮಂದಿ ಮಾತ್ರ ಜೀತದಾಳುಗಳಿದ್ದಾರೆಂಬ ತೀರ್ಮಾನಕ್ಕೆ ಬಂತು. ಇದರಿಂದ ತಮಿಳುನಾಡಿನಲ್ಲಿ ಗುರುತಿಸಿದ ಒಟ್ಟು ಜೀತದಾಳುಗಳ ಸಂಖ್ಯೆ 63,894 ಕ್ಕೆ ಏರಿತು. ಆದ್ದರಿಂದ ಕಾನೂನು ಬಂದಾಗಿನಿಂದ 2000 ವರ್ಷದ ತನಕ ಇಡೀ ದೇಶದಲ್ಲೇ ಅತಿ ಹೆಚ್ಚಿನ ಜೀತದಾಳುಗಳನ್ನು ಗುರುತಿಸಿರುವ ರಾಜ್ಯವೆಂಬ ಹೆಗ್ಗಳಿಕೆ 1997ರಿಂದ 2000ದ ವರೆಗಿನ ಅವಧಿಗೆ ತಮಿಳುನಾಡು ರಾಜ್ಯಕ್ಕೆ ಸೇರುತ್ತದೆ.

ಕರ್ನಾಟಕ ಸರ್ಕಾರವು ಜೀತದಾಳುಗಳನ್ನು ಹೊಸದಾಗಿ ಗುರುತಿಸಲು 1992ರಿಂದ ಹಲವಾರು ಸುತ್ತೋಲೆಗಳನ್ನು ಹೊರಡಿಸಿದೆ. 1990ರಲ್ಲಿ ಆನೇಕಲ್ ತಾಲೂಕಿನ 656 ಮಂದಿ ಜೀತದಾಳುಗಳು ಜೀವಿಕದ ಪ್ರಯತ್ನದಿಂದ ತಮ್ಮ ಬಿಡುಗಡೆ ಮತ್ತು ಪುನರ್ವಸತಿಗೆ ಅರ್ಜಿ ಸಲ್ಲಿಸಿದಾಗ ಕರ್ನಾಟಕ

ಸರ್ಕಾರವು ಜೀತಪದ್ಧತಿ ಈಗಲೂ ಅಸ್ತಿತ್ವದಲ್ಲಿರುವುದನ್ನು ಮನಗಂಡು ಇಡೀ ರಾಜ್ಯದಲ್ಲಿ ಹೊಸದಾಗಿ ಜೀತದಾಳುಗಳ ಸಮೀಕ್ಷೆ ಮಾಡಲು 1992ರಲ್ಲಿ ಒಂದು ಸುತ್ತೋಲೆ ಹೊರಡಿಸಿತು. ನಂತರ ಸರ್ವೋಚ್ಚ ನ್ಯಾಯಾಲಯವು 1985ರ ರಿಟ್ ಅರ್ಜಿ ಸಂ.3922 ಕುರಿತು 1995 ಮತ್ತು 1997ರಂದು ಹೊರಡಿಸಿದ ಆದೇಶದ ಪರಿಣಾಮವಾಗಿಯೂ ಕರ್ನಾಟಕ ಸರ್ಕಾರವು ಇಡೀ ರಾಜ್ಯದಲ್ಲಿ ಜೀತದಾಳುಗಳ ಸಮೀಕ್ಷೆಯನ್ನು ಪುನಃ ಮಾಡಲು 1999ರಲ್ಲಿ ಇನ್ನೊಂದು ಆದೇಶವನ್ನು ಹೊರಡಿಸಿತು. ಆದರೆ ಎರಡೂ ಸಮೀಕ್ಷೆಗಳಿಂದ ಜೀತದಾಳುಗಳು ಪತ್ತೆ ಆಗಿರಲಿಲ್ಲ.

2000ರ ಜೂನ್ 22ರಂದು ಆಘಾತಕಾರಿಯಾದ ಜೀತ ಪ್ರಕರಣ ಬೆಳಕಿಗೆ ಬಂತು. ಕಳೆದ ಮೂರೂವರೆ ವರ್ಷಗಳಿಂದ ಐದು ಮಂದಿ ಜೀತದಾಳುಗಳ ಎರಡೂ ಕಾಲುಗಳಿಗೆ ದಪ್ಪ ಸರಪಳಿಗಳನ್ನು ಬಿಗಿದು ಶ್ರೀರಂಗಪಟ್ಟಣದ ಕಲ್ಲು ಕೋರೆಯೊಂದರಲ್ಲಿ ಅವರಿಂದ ಕೆಲಸ ಮಾಡಿಸಲಾಗುತ್ತಿತ್ತು. ಇದರ ನಂತರ ಇಡೀ ಕರ್ನಾಟಕದಲ್ಲಿ ಜೀತದಾಳುಗಳನ್ನು ಗುರುತಿಸಿ ಪುನರ್ವಸತಿಗೊಳಿಸುವ ಸಂಕಲ್ಪವನ್ನು ಸರ್ಕಾರವು ತಾಳಿತು. ಜೀತ ಪದ್ಧತಿ ನಿರ್ಮೂಲನೆ ಕಾನೂನಿನ ಪ್ರಕಾರ ಕೈಗೊಳ್ಳುವ ಕ್ರಮಗಳ ನಿರ್ವಹಣೆಯನ್ನು ಸರ್ವೋಚ್ಚ ನ್ಯಾಯಾಲಯವು 1997ರಲ್ಲಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ವಿಧಿಸಿದಾಗಿನಿಂದ ಆ ಆಯೋಗವೂ ಕರ್ನಾಟದಲ್ಲಿ ಜೀತ ಮತ್ತು ಬಾಲ ಕಾರ್ಮಿಕ ಸಮಸ್ಯೆಗಳ ಬಗ್ಗೆ ಹೆಚ್ಚಿನ ಮುತುವರ್ಜಿಯನ್ನು ವಹಿಸುತ್ತಾ ಬಂದಿದೆ. 2000–03ರಲ್ಲಿ ಕರ್ನಾಟಕ ಸರ್ಕಾರವು 1967 ಹೊಸ ಜೀತದಾಳುಗಳನ್ನು ಗುರುತಿಸಿ ಅವರಲ್ಲಿ 1890 ಮಂದಿಗೆ 2003–04 ರೊಳಗೆ ಪುನರ್ವಸತಿ ಸೌಲಭ್ಯಗಳನ್ನು ಕಲ್ಪಿಸಿತು. 2004– 05ರಲ್ಲಿ 102 ಹೊಸ ಜೀತದಾಳುಗಳನ್ನು ಗುರುತಿಸಲಾಗಿದ್ದು ಆ ವರ್ಷ 64 ಮಂದಿ ಜೀತದಾಳುಗಳಿಗೆ ಪುನರ್ವಸತಿ ಕಲ್ಪಿಸಲಾಗಿದೆ.

**ಜೀತ ಪದ್ಧತಿ ರದ್ದತಿ ಕಾನೂನಿನಡಿ ಕೈಗೊಳ್ಳಬೇಕಾದ ಕ್ರಮಗಳು : ಜೀತದಾಳುಗಳ ಗುರುತಿಸುವಿಕೆ, ಬಿಡುಗಡೆ ಮತ್ತು ಪುನರ್ವಸತಿ ಹಾಗೂ ಅಪರಾಧಿಗಳಿಗೆ ಶಿಕ್ಷೆ ವಿಧಿಸುವುದು**

ಜೀತ ಕಾನೂನು 12ನೇ ಅನುಚ್ಛೇದದ ಪ್ರಕಾರ ತನ್ನ ಕಾರ್ಯವ್ಯಾಪ್ತಿಯಲ್ಲಿ ಜೀತಪದ್ಧತಿ ಅಥವಾ ಇನ್ನಿತರ ಯಾವುದೇ ಬಲಾತ್ಕಾರದ ದುಡಿಮೆ ಹೇರಲ್ಪಟ್ಟಿದ್ದರೆ ಅದರ ಬಗ್ಗೆ ವಿಚಾರಣೆ ಮಾಡುವ ಕರ್ತವ್ಯ ಜಿಲ್ಲಾಧಿಕಾರಿ ಮತ್ತು ಅನುಚ್ಛೇದ 10ರಲ್ಲಿ ನಮೂದಿಸಿದ ಪ್ರತಿ ಅಧಿಕಾರಿಯದ್ದು. ವಿಚಾರಣೆ ಮಾಡುವುದು ಅಂದರೆ ಜೀತದಾಳುಗಳನ್ನು ಗುರುತಿಸುವುದು ಎಂದು ಅರ್ಥ. ಗುರುತಿಸಿದ ಮೇಲೆ ಅಂತಹ ಬಲಾತ್ಕಾರದ ದುಡಿಮೆಯನ್ನು ನಿರ್ಮೂಲನೆಗೊಳಿಸಲು ಬೇಕಾದ ಕ್ರಮಗಳನ್ನು ಅವರು ಕೈಗೊಳ್ಳಬೇಕು. ಆ ಕ್ರಮಗಳೆಂದರೆ ಗುರುತಿಸಿದ ಜೀತದಾಳುಗಳನ್ನು ಬಿಡುಗಡೆಗೊಳಿಸಿ ಪುನರ್ವಸತಿಗೊಳಿಸಬೇಕು ಮತ್ತು ಜೀತ ಅಪರಾಧವೆಸಗಿದ ವ್ಯಕ್ತಿಗಳ ಮೇಲೆ ಕಾನೂನು ಕ್ರಮ ಜರುಗಿಸಬೇಕು.

ಹೀಗೆ ಜೀತ ಪದ್ಧತಿ ರದ್ದತಿ ಕಾನೂನಿನಡಿ ಒಬ್ಬ ಜಿಲ್ಲಾಧಿಕಾರಿಯು ಕೈಗೊಳ್ಳಬೇಕಾದ ಕ್ರಮಗಳನ್ನು ನಾಲ್ಕು ರೀತಿಯಾಗಿ ವಿಂಗಡಿಸಬಹುದು. ಅವ್ಯಾವುವೆಂದರೆ: 1. ಜೀತದಾಳುಗಳನ್ನು ಗುರುತಿಸುವುದು; 2.

ಗುರುತಿಸಿದ ಜೀತದಾಳುಗಳನ್ನು ಬಿಡುಗಡೆಗೊಳಿಸುವುದು; 3. ಬಿಡುಗಡೆಗೊಳಿಸಿದ ಜೀತದಾಳುಗಳಿಗೆ ಪುನರ್ವಸತಿ ಸೌಲಭ್ಯ ಕಲ್ಪಿಸುವುದು; ಮತ್ತು 4. ಅಪರಾಧಿಗಳಿಗೆ ಕಾನೂನಿನಡಿ ಶಿಕ್ಷೆ ವಿಧಿಸುವುದು.

**ಜೀತದಾಳುಗಳ ಗುರುತಿಸುವಿಕೆ**

ಜಿಲ್ಲಾ ದಂಡಾಧಿಕಾರಿಯು ಅಥವಾ ಅವರು ನೇಮಿಸಲ್ಪಟ್ಟ ಅವರ ಕೈಕೆಳಗಿನ ಒಬ್ಬ ಅಧಿಕಾರಿಯು ಜೀತದಾಳುಗಳನ್ನು ಗುರುತಿಸಬೇಕು. "ಕಾನೂನು ಒಪ್ಪಿಕೊಂಡಿರುವ ಅಪರಾಧಗಳ ಮೇಲೆ ನಿಗಾ ಇಡಲು" ಮತ್ತು ಕಾನೂನು ಒಪ್ಪಿಕೊಂಡಿರುವ ಯಾವುದಾದರೂ ಅಪರಾಧಗಳು ನಡೆದಿವೆಯೇ ಎಂದು ಸಮೀಕ್ಷೆ ಮಾಡುವ ಉದ್ದೇಶ (ಪ್ರಕರಣ 14) ದಿಂದ ಜೀತ ಕಾನೂನು 13ನೇ ಪ್ರಕರಣದಡಿ ರಚಿಸಲಾದ ಜಾಗೃತ ಸಮಿತಿ ಕೂಡಾ ಜೀತದಾಳುಗಳನ್ನು ಗುರುತಿಸಬೇಕು.

ಜೊತೆಗೆ ಕರ್ನಾಟಕ ಪಂಚಾಯತ್ ರಾಜ್ ಕಯಿದೆ 1993ರ ಪ್ರಕರಣ 58೦ ಪ್ರಕಾರ ಪ್ರತಿ ಗ್ರಾಮ ಪಂಚಾಯತಿಯ ಕಾರ್ಯದರ್ಶಿಯು ಜೀತದಾಳುಗಳ ಬಗ್ಗೆ ಜಿಲ್ಲಾಧಿಕಾರಿಗಳಿಗೆ ವರದಿಯನ್ನು ನೀಡಬೇಕು. ಮತ್ತು ಸರ್ಕಾರದ ಒಂದು ಸುತ್ತೋಲೆ ಪ್ರಕಾರ ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಉಪವಿಭಾಗಾಧಿಕಾರಿಗೆ ಮತ್ತು ತಹಶೀಲ್ದಾರರಿಗೆ ಜೀತದಾಳುಗಳ ಬಗ್ಗೆ ವರದಿಯನ್ನು ಸಲ್ಲಿಸಬೇಕಾಗುತ್ತದೆ.

ಜಿಲ್ಲಾಧಿಕಾರಿಗಳು ಮತ್ತು ಉಪ ವಿಭಾಗಾಧಿಕಾರಿಗಳು ಮೂರು ವರ್ಷಗಳಿಗೊಮ್ಮೆ ಮತ್ತು ವರ್ಷಕ್ಕೊಮ್ಮೆ ಜೀತದಾಳುಗಳ ಸಮೀಕ್ಷೆಯನ್ನು ಮಾಡುತ್ತಿರಬೇಕು. ಅವರಿಗೆ ಅವರವರ ಜಾಗೃತ ಸಮಿತಿಗಳು ಸಮೀಕ್ಷೆ ಕಾರ್ಯದಲ್ಲಿ ನೆರವಾಗಬೇಕು. ಜಾಗೃತ ಸಮಿತಿಗಳ ರಚನೆ ಮತ್ತು ಪ್ರಕಾರ್ಯಗಳನ್ನು ಕಾಯಿದೆಯ 13 ಮತ್ತು 14ನೇ ಅನುಚ್ಛೇದಗಳಲ್ಲಿ ವಿವರಿಸಲಾಗಿದೆ. ಜಾಗೃತ ಸಮಿತಿಗಳು ಕನಿಷ್ಟ ಎರಡು ತಿಂಗಳಿಗೊಮ್ಮೆ ಸಭೆ ಸೇರಬೇಕು. ಅವನ್ನು ಎರಡು ವರ್ಷಗಳಿಗೊಮ್ಮೆ ಪುನರ್‌ರಚಿಸಲಾಗುವುದು. ಅವನ್ನು ಪುನರ್‌ರಚಿಸುವಾಗ ಸರಿಯಾದ ತಿಳುವಳಿಕೆ ಮತ್ತು ಪುರೋಗಾಮಿ ಚಿಂತನೆ ಇರುವ ವ್ಯಕ್ತಿಗಳನ್ನೂ ಅನುಸೂಚಿತ ಜಾತಿ ಮತ್ತು ಜನಾಂಗಗಳು, ಕಾರ್ಮಿಕ ಸಂಘಟನೆಗಳು ಮತ್ತು ಸರ್ಕಾರೇತರ ಸಂಸ್ಥೆಗಳ ಮುಖಂಡರನ್ನೂ ಸೇರಿಸುವಂತೆ ನೋಡಿಕೊಳ್ಳಬೇಕು.

ಜೀತದಾಳುಗಳನ್ನು ಗುರುತಿಸಿ ಬಿಡುಗಡೆಗೊಳಿಸುವ ಮತ್ತು ಅಪರಾಧಿಗಳನ್ನು ಶಿಕ್ಷಿಸುವ ಜವಾಬ್ದಾರಿಯು ಜಿಲ್ಲಾಧಿಕಾರಿಗಳಿಗಿರುತ್ತದೆ. ಅವರನ್ನು ಗುರುತಿಸಲಿಕ್ಕೆ ನೆರವಾಗುವ ಮತ್ತು ಅವರಿಗೆ ಪುನರ್ವಸತಿ ಕಲ್ಪಿಸುವ ಜವಾಬ್ದಾರಿ ಜಿಲ್ಲಾ ಪಂಚಾಯತಿ ಅಧ್ಯಕ್ಷರು ಮತ್ತು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯ ನಿರ್ವಾಹಕಾಧಿಕಾರಿಗಳದ್ದಾಗಿರುತ್ತದೆ. (ಕರ್ನಾಟಕದ ಕ್ಷೇತ್ರಮಟ್ಟದ ಅಧಿಕಾರಿಗಳಿಗೆ ಜೀತ ಸಮಸ್ಯೆ ಕುರಿತು ತಿಳುವಳಿಕೆ ನೀಡಲು ಬೆಂಗಳೂರಿನ ನ್ಯಾಶನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯುನಿವರ್ಸಿಟಿಯಲ್ಲಿ 2003ರ ಅಕ್ಟೋಬರ್ 9–10ರಂದು ಕರ್ನಾಟಕ ಸರ್ಕಾರದ ಕಾರ್ಮಿಕ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗಳೊಂದಿಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಆಯೋಜಿಸಿದ

ಎರಡು ದಿನಗಳ ಕಮ್ಮಟದ ಫಲಿತಾಂಶ. ನಂ.1. ಇನ್ನು ಮುಂದೆ ಈ ಫಲಿತಾಂಶ ಲೇಖವನ್ನು "ಫಲಿತಾಂಶ" ಎಂದು ಉಲ್ಲೇಖಿಸಲಾಗುವುದು.)

ಜಿಲ್ಲಾಧಿಕಾರಿಗಳು ತಮ್ಮ ಅಧ್ಯಕ್ಷತೆಯಲ್ಲಿ ಒಂದು ಜಿಲ್ಲಾ ವೇದಿಕೆಯನ್ನು ರಚಿಸಿ ಸರ್ಕಾರೇತರ ಸಂಸ್ಥೆಗಳ ಜೊತೆ ಜೀತದಾಳು ಮತ್ತು ಬಾಲ ಕಾರ್ಮಿಕರಿಗೆ ಸಂಬಂಧ ಪಟ್ಟ ವಿಷಯಗಳ ಬಗ್ಗೆ ಆಗಿಂದಾಗ್ಗೆ ಸಮಾಲೋಚನೆ ನಡೆಸಬೇಕು. ಸರ್ಕಾರೇತರ ಸಂಸ್ಥೆಗಳಿಗೆ ಜೀತದಾಳು ಮತ್ತು ಬಾಲ ಕಾರ್ಮಿಕರ ಗುರುತಿಸುವುದು ಮತ್ತು ಪುನರ್ವಸತಿಗೆ ಸಂಬಂಧಪಟ್ಟಂತೆ ಯೋಜನೆಗಳನ್ನು ರೂಪಿಸುವುದು ಮತ್ತು ಅವನ್ನು ನಿರ್ವಹಿಸುವ ಜವಾಬ್ದಾರಿಯನ್ನು ವಹಿಸಬೇಕು ಮತ್ತು ಆ ಕೆಲಸಗಳಿಗೆ ಬೇಕಾಗುವ ಧನಸಹಾಯವನ್ನು ಒದಗಿಸಬೇಕು("ಫಲಿತಾಂಶ"ನಂ.3).

ಕೆಳ ಮಟ್ಟದ ಅಧಿಕಾರಿಗಳು ಗುರುತಿಸಿದ ಜೀತದಾಳುಗಳನ್ನು ಜಿಲ್ಲಾಧಿಕಾರಿಗಳು ಮತ್ತು ಉಪ ವಿಭಾಗಾಧಿಕಾರಿಗಳು ಸ್ವಲ್ಪ ಪ್ರಮಾಣದಲ್ಲಿ ತಾವೇ ಖುದ್ದಾಗಿ ಗುರುತಿಸಬೇಕು ಮತ್ತು ಜಿಲ್ಲೆ ಹಾಗೂ ಉಪ ವಿಭಾಗ ಮಟ್ಟದಲ್ಲಿಯ ಜೀತದಾಳುಗಳ ಗುರುತಿಸುವಿಕೆಯ ಪ್ರಕ್ರಿಯೆಯನ್ನು ಕ್ರಿಯಾಶೀಲವಾಗಿ ಮುನ್ನಡೆಸಬೇಕು. ಪಂಚಾಯತಿ ಇಲಾಖೆಯ ಅಧಿಕಾರಿಗಳೂ ಜೀತದಾಳುಗಳ ಬಗ್ಗೆ ವರದಿ ಕೊಡುವಂತೆ ಉಪ ವಿಭಾಗಾಧಿಕಾರಿಗಳು ನೋಡಿಕೊಳ್ಳಬೇಕು. ಈ ರೀತಿ ಕಾನೂನನ್ನು ಪ್ರಾಮಾಣಿಕವಾಗಿ ಅನುಷ್ಠಾನಗೊಳ್ಳುವಂತೆ ಅವರು ನೋಡಿಕೊಳ್ಳಬೇಕು ಮತ್ತು ಯಾವುದೇ ರೀತಿಯ ಬಾಹ್ಯ ಒತ್ತಡಗಳಿಗೆ ಯಾರೂ ಮಣಿಯುವಂತಿರಬಾರದು. ("ಫಲಿತಾಂಶ" ನಂ. 2 5)

ಜೀತದಾಳು ಮತ್ತು ಬಾಲ ಕಾರ್ಮಿಕ ಸಮಸ್ಯೆಗಳಿಗೆ ಸಂಬಂಧ ಪಟ್ಟಂತೆ ಸಾಂಸ್ಥಿಕ ನೆನಪನ್ನು ಉಳಿಸಿಕೊಳ್ಳಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಾಹಕಾಧಿಕಾರಿಗಳು ತಮ್ಮ ವರ್ಗಾವಣೆ ಸಮಯದಲ್ಲಿ ಪದಮುಕ್ತ ಅಧಿಕಾರಿಯು ಪದಗ್ರಾಹಿ ಅಧಿಕಾರಿಗೆ ಪ್ರಭಾರ ವರ್ಗಾವಣೆ ಪ್ರಪತ್ರದಲ್ಲಿ ಜೀತ ಕಾನೂನಿನಡಿಯಲ್ಲಿ ಜಿಲ್ಲೆಯಲ್ಲಿ ಕೈಗೊಂಡ ಹಾಗೂ ಕೈಗೊಳ್ಳಲಿರುವ ಕೆಲಸಕಾರ್ಯಗಳ ಬಗ್ಗೆ ವಿವರವಾದ ಟಿಪ್ಪಣಿಯನ್ನು ಕೊಡಬೇಕು. ("ಫಲಿತಾಂಶ" ನಂ. 2)

ಜೀತ ಸಮೀಕ್ಷೆಯ ಕೆಲಸವು ಸರಿಯಾಗಿ ನಡೆಯಬೇಕಾದರೆ ಕಂದಾಯ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಎಲ್ಲಾ ಅಧಿಕಾರಿಗಳು, ಇನ್ನಿತರ ಇಲಾಖೆಯ ಸಂಬಂಧಪಟ್ಟ ಅಧಿಕಾರಿಗಳು, ಪಂಚಾಯತಿಗಳ ಚುನಾಯಿತ ಸದಸ್ಯರು, ನ್ಯಾಯಾಲಯದ ಅಧಿಕಾರಿಗಳು ಹಾಗೂ ಆರಕ್ಷಕರು /ಪೋಲೀಸರುಗಳಿಗೆ ಜೀತಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಸಂವೇದನಾ ತರಬೇತಿಗಳನ್ನು ನಡೆಸಬೇಕು. ಜೀತಕ್ಕೆ ಸಂಬಂಧಪಟ್ಟ ವಿಷಯಗಳೆಂದರೆ ಸಂವಿಧಾನದಲ್ಲಿರುವ ಅಂಶಗಳು, ಜೀತ ಪದ್ಧತಿ ರದ್ದತಿ ಕಾನೂನಿನಲ್ಲಿರುವ ಅಂಶಗಳು, ಅವುಗಳಲ್ಲಿ ಮುಖ್ಯವಾಗಿ ಜೀತದ ವ್ಯಾಖ್ಯಾನ ಮತ್ತು ಅದನ್ನು ಅರ್ಥೈಸುವುದು ಹಾಗೂ ಜೀತದಾಳುಗಳನ್ನು ಸರಿಯಾಗಿ ಗುರುತಿಸುವ ವಿಧಾನ. ("ಫಲಿತಾಂಶ" ನಂ. 5,

6, 20). ಜೀತದಾಳುಗಳನ್ನು ಪುನರ್ವಸತಿಗೊಳಿಸುವ ಕೆಲಸದಲ್ಲಿ ನೆರವಾಗುವ ಹಣಕಾಸು ಸಂಸ್ಥೆಗಳ ಅಧಿಕಾರಿಗಳೂ ಮೇಲಿನ ಸಂವೇದನಾ ತರಬೇತಿಗಳಲ್ಲಿ ಪಾಲ್ಗೊಳ್ಳಬೇಕು. ("ಫಲಿತಾಂಶ" ನಂ. 10).

ಜೀತದಾಳುಗಳನ್ನು ಗುರುತಿಸುವ ಮುಂಚೆ ಅವರಲ್ಲಿ ಧೈರ್ಯ ತುಂಬಲು ಅವರಿಗೂ ಸಂವೇದನಾ ತರಬೇತಿಗಳನ್ನು ನಡೆಸಬೇಕು. ಬಿಡುಗಡೆಗೊಳಿಸಿದ ಜೀತದಾಳುಗಳಿಗೂ ಅವರ ಪುನವರ್ಸತಿ ಸಮಯದಲ್ಲಿ ಸಂವೇದನಾ ತರಬೇತಿಗಳನ್ನು ನಡೆಸಬೇಕು. ಗುರುತಿಸಿದ ಮತ್ತು ಬಿಡುಗಡೆಗೊಳಿಸಿದ ಜೀತದಾಳು ಮತ್ತು ಅವರ ಕುಟುಂಬಗಳಿಗೆ ಕಾನೂನಿನ ಅವಕಾಶಗಳು ಮತ್ತು ತಮ್ಮ ಪುನರ್ವಸತಿ ಕಾರ್ಯಕ್ರಮಗಳನ್ನು ಸಂಘಟಿತರಾಗಿ, ಸ್ವಾವಲಂಬಿಯಾಗಿ, ಗುಂಪು ಆಧಾರದ ಮೇಲೆ ಮತ್ತು ಸಹಕಾರಿ ತತ್ವಗಳ ಮೇಲೆ ಕಾರ್ಯಗತಗೊಳಿಸಲು ಬೇಕಾದ ಕೌಶಲ್ಯಗಳ ಬಗ್ಗೆ ಸಂವೇದನಾ ತರಬೇತಿಗಳನ್ನು ನಡೆಸಿಕೊಂಡು ಹೋಗಬೇಕು. ("ಫಲಿತಾಂಶ" ನಂ. 28)

ಅಧಿಕಾರಿಗಳು ಮತ್ತು ಜೀತದಾಳುಗಳಿಗೆ ಮೇಲೆ ವಿವರಿಸಿದ ಸಂವೇದನಾ ತರಬೇತಿಗಳನ್ನು ನಡೆಸುವುದು ಅತ್ಯವಶ್ಯಕ. ಎಕೆಂದರೆ ಜೀತದಾಳುಗಳನ್ನು ಗುರುತಿಸುವಲ್ಲಿ ಎದುರುಗೊಳ್ಳುವ ಸಮಸ್ಯೆಗಳಿಗೆ ಕಾರಣಗಳು ಇಂತಿರುವುವು: 1) ಜೀತದಾಳುಗಳಲ್ಲಿ ಹೆಚ್ಚಿನವರು ಅನುಸೂಚಿತ ಜಾತಿ ಮತ್ತು ಜನಾಂಗಕ್ಕೆ ಸೇರಿದವರಾಗಿದ್ದು ತಮ್ಮ ಮೇಲೆ ದೌರ್ಜನ್ಯವಾಗುವ ಮತ್ತು ತಮ್ಮ ಜೀವನೋಪಾಯಕ್ಕೆ ತೊಂದರೆಯಾಗುವ ಭಯದಿಂದ ತಾವು ಜೀತದಾಳುಗಳೆಂದು ಒಪ್ಪಿಕೊಳ್ಳಲು ಅವರು ಮುಂದೆ ಬರುವುದಿಲ್ಲ. 2) ಜೀತಪದ್ಧತಿಯನ್ನು ಮುಂದುವರಿಸಲು ಮಾಲಿಕರು ದೌರ್ಜನ್ಯದ ವಾತಾವರಣವನ್ನು ನಿರ್ಮಿಸುತ್ತಾರೆ. 3) ಜೀತದಾಳುಗಳೀಗೆ ಪರ್ಯಾಯ ಉದ್ಯೋಗದ ಅವಕಾಶಗಳು ಇಲ್ಲದೇ ಇರುವುದು. 4) ಜಾಗೃತಿ ಸಮಿತಿಗಳು ಕ್ರಿಯಾಶೀಲವಾಗಿಲ್ಲದಿರುವುದು; ಸ್ಥಳೀಯ ಅಧಿಕಾರಿಗಳು ನಿಷ್ಕ್ರಿಯರಾಗಿರುವುದು ಮತ್ತು ಜೀತ ಕುರಿತು ವಿಚಾರ ಹಾಗೂ ಸಮಸ್ಯೆಗಳ ಬಗ್ಗೆ ಅರಿವು ಇಲ್ಲದೇ ಇರುವುದು; ಹಾಗೂ ಯಾವುದೇ ಸ್ವಯಂ ಸೇವಾ ಸಂಸ್ಥೆಗಳು ತಾವಾಗಿ ಜೀತದಾಳುಗಳನ್ನು ಗುರುತಿಸಲು ಮುಂದೆ ಬರದೇ ಇರುವುದು ಮತ್ತು ತಪ್ಪಾಗಿ ಜೀತದಾಳುಗಳನ್ನು ಗುರುತಿಸಿದ್ದೇ ಅದರೆ ತಡೆಯೊಡ್ಡದಿರುವುದು. (ಜೀತ ಪದ್ಧತಿ ನಿರ್ಮೂಲನೆ, ಜೀತ ಗುರುತಿಸುವಿಕೆ, ಬಿಡುಗೊಡೆಗೊಳಿಸುವುದು ಮತ್ತು ಪುನರ್ವಸತಿಗೊಳಿಸುವ ಬಗ್ಗೆ ಒಂದು ಕೈಪಿಡಿ, ಕಾರ್ಮಿಕ ಇಲಾಖೆ, ಭಾರತ ಸರ್ಕಾರ, ಇನ್ನು ಮುಂದೆ ಇದನ್ನು "ಕೈಪಿಡಿ" ಎಂದು ಉದ್ಧರಿಸಲಾಗುವುದು, ಫೆಬ್ರವರಿ 2004, ನಂ. 2. 5, ಪುಟ 5)

ಮೇಲೆ ವಿವರಿಸಿದ ಎಲ್ಲಾ ಸಂವೇದನಾ ತರಬೇತಿಗಳನ್ನು ನಡೆಸಿಕೊಂಡು ಹೋಗಲು ವಿಶ್ವಾಸಾರ್ಹ ಸರ್ಕಾರೇತರ ಸಂಸ್ಥೆಗಳಿಗೆ ವಹಿಸಿ ಕೊಡುವುದು ಸೂಕ್ತ.

ಜೀತದಾಳುಗಳನ್ನು ಗುರುತಿಸುವಾಗ ಎಸ್. ಆರ್. ಸಂಕರನ್‌ರವರು ಹಾಕಿಕೊಟ್ಟ ಮಾರ್ಗದರ್ಶಿಗಳನ್ನು ಅನುಸರಿಸುವುದು ಸೂಕ್ತ. (ಆ ಮಾರ್ಗದರ್ಶಿಗಳನ್ನು ಇನ್ನು ಮುಂದೆ "ಮಾರ್ಗದರ್ಶಿ" ಎಂದು

ಉದ್ಧರಿಸಲಾಗುವುದು). ಸರ್ಕಾರದ ಆದೇಶದ ಪ್ರಕಾರ ಕಾನೂನಿನ ಪ್ರಕಾರ ಕ್ರಮಕೈಗೊಳ್ಳುವ ಅಧಿಕಾರಿಗಳು ಆ ಮಾರ್ಗದರ್ಶಿಗಳನ್ನು ಅನುಸರಿಸಲೇಬೇಕು.

ಆ ಮಾರ್ಗದರ್ಶಿಯಲ್ಲಿರುವ ಮುಖ್ಯಾಂಶಗಳು ಹೀಗಿವೆ:

1) ಜೀತದಾಳುಗಳ ತನಿಖೆಯನ್ನು ದಲಿತ ಅಥವಾ ಮೂಲನಿವಾಸಿ ಕೇರಿಯಲ್ಲಿಯೇ ನಡೆಸಬೇಕು; ಇತರೆ ಜಾತಿಗಳ ಕೇರಿಗಳಲ್ಲಲ್ಲ.
2) ಜೀತದಾಳುಗಳ ತನಿಖೆಯನ್ನು ಅವರ ಮಾಲೀಕರ ಸಮಕ್ಷಮ ನಡೆಸಲೇಬಾರದು.
3) ಮೊದಲೇ "ನೀವು ಜೀತದಾಳುಗಳೋ?" ಎಂದು ಕೇಳುವ ಬದಲು, ತನಿಖಾ ಅಧಿಕಾರಿಗಳು ಕೆಲಸದ ಸಂದರ್ಭಗಳ ಬಗ್ಗೆ ಮಾಹಿತಿ ಪಡೆಯಬೇಕು. ಹಲಕೆಲವು ಸೂಕ್ತ ಪ್ರಶ್ನೆಗಳ ಮೂಲಕ ಆ ಕೆಲಸದ ಸಂದರ್ಭಗಳಲ್ಲಿ ಕಾನೂನಿನಲ್ಲಿ ವಿವರಿಸಿದ ಪ್ರಕಾರ ಬಲಾತ್ಕಾರದ ಅಂಶಗಳಿವೆಯೇ ಎಂಬ ತೀರ್ಮಾನಕ್ಕೆ ಬರಬೇಕು. ಜೀತದಾಳು ಅಥವಾ ಮಾಲಿಕರ ಹೇಳಿಕೆಗಳನ್ನು ಮಾತ್ರ ಒಪ್ಪಿಕೊಳ್ಳದೇ ವಾಸ್ತವವಾಗಿ ಅವರು ಕೆಲಸ ಮಾಡುವ ಸಂದರ್ಭಗಳು ಕಾನೂನಿನಲ್ಲಿ ನಮೂದಿಸಿದ ಪ್ರಕಾರ ಬಲಾತ್ಕಾರದ ದುಡಿಮೆಯನ್ನು ಸ್ಪಷ್ಟಪಡಿಸುತ್ತವೆಯೋ ಇಲ್ಲವೋ ಎಂದು ವೈಯಕ್ತಿಕ ತೀರ್ಮಾನಕ್ಕೆ ಬರುವುದು ಸೂಕ್ತ.

ಮೇಲ್ಕಾಣಿಸಿದ ಮಾರ್ಗದರ್ಶನಗಳಿಗೆ ಇನ್ನೊಂದು ವಿಷಯವನ್ನು ಸೇರಿಸಿಕೊಳ್ಳಬಹುದು. ತನಿಖೆಯನ್ನು ಏಕಾಂತದಲ್ಲಿ, ಒಬ್ಬೊಬ್ಬರಾಗಿ ಮತ್ತು ಗುಟ್ಟಾಗಿ ನಡೆಸುವ ಬದಲು ಸಾಮೂಹಿಕವಾಗಿ ಮತ್ತು ದಲಿತರು ಅಥವಾ ಮೂಲನಿವಾಸಿಗಳ ಮುಖಂಡರ ಸಮಕ್ಷಮದಲ್ಲಿ ನಡೆಸುವುದು ಒಳಿತು. ಇದರಿಂದ ಮಾಹಿತಿ ಒಟ್ಟು ಮಾಡುವಾಗಲೇ ಅವುಗಳ ಸತ್ಯಾಸತ್ಯತೆಗಳ ಬಗ್ಗೆ ಮರುಪರಿಶೀಲನೆ ಮಾಡುವ ಅವಕಾಶ ಸಿಗುತ್ತದೆ ಮತ್ತು ಸುಳ್ಳು ಮಾಹಿತಿಗಳನ್ನು ತಳ್ಳಿಹಾಕಲು ಸಾಧ್ಯವಾಗುತ್ತದೆ.

ಅಂತಿಮವಾಗಿ ಜೀತದಾಳುಗಳನ್ನು ಸರಿಯಾಗಿ ಗುರುತಿಸ ಬೇಕಾದರೆ ಜೀತ ಮತ್ತು ಅದಕ್ಕೆ ಸಂಬಂಧ ಪಟ್ಟಂತೆ ಈ ಕೆಳಗಿನ ವಿಚಾರಗಳನ್ನು ತನಿಖೆ ಸಮಯದಲ್ಲಿ ನೆನಪಿನಲ್ಲಿಡಬೇಕು:

1) ಬಲಾತ್ಕಾರದ ದುಡಿಮೆ ಎಂದರೆ ಕೇವಲ ದೈಹಿಕ ಬಲಾತ್ಕಾರ ಅಥವಾ ಹಿಂಸೆ ಅಲ್ಲ. ಜೀತದಲ್ಲಿ ದೈಹಿಕ ಬಲಾತ್ಕಾರ ಇದ್ದೇ ಇರುವುದಾದರೂ ನೇರ ದೈಹಿಕ ಬಲ ಪ್ರಯೋಗ ಎಲ್ಲಾ ಜೀತದ ಪ್ರಕರಣಗಳಲ್ಲಿ ಇರಬೇಕೆಂದಿಲ್ಲ. ಕಾನೂನಿನ ಪ್ರಕಾರ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ಕನಿಷ್ಠ ವೇತನಕ್ಕಿಂತ ಕಡಿಮೆ ಮಜೂರಿಗೆ ಒಬ್ಬ ವ್ಯಕ್ತಿಯು ಕೆಲಸ ಮಾಡುವಂತೆ ಒಪ್ಪಿಕೊಳ್ಳುವಂತೆ ಮಾಡುವುದೇ ಬಲಾತ್ಕಾರದ ದುಡಿಮೆ. (ಪೀಪಲ್ಸ್ ಯೂನಿಯನ್ ಫಾರ್ ಡೆಮೊಕ್ರಾಟಿಕ್ ರೈಟ್ಸ್ ಮತ್ತಿತರರು ವಿರುದ್ಧ ಯೂನಿಯನ್ ಆಫ್ ಇಂಡಿಯಾ ಮತ್ತಿತರರು, ಪ್ಯಾರಾ ನಂ.1415, ಂಖಖ 1982 ಖಅ 1473)

2) ಜೀತ ಕಾನೂನು ಒಬ್ಬ ಜೀತದಾಳು ಇಷ್ಟೇ ವಯಸ್ಸಿನವರಾಗಿರಬೇಕೆಂದು ಹೇಳುವುದಿಲ್ಲ (ಪ್ರಕರಣ 2ರ). ಜೀತದಾಳುಗಳು ಯಾವ ವಯಸ್ಸಿನವರೂ ಆಗಿರಬಹುದು. ಬಾಲ ಜೀತದಾಳುಗಳನ್ನು ಜೀತದಾಳುಗಳೆಂದೇ ಗುರುತಿಸಬೇಕು ಮತ್ತು ಅವರ ಪರವಾಗಿ ಬಾಲ ಕಾರ್ಮಿಕ ನಿಷೇಧ ಕಾನೂನಿನಡಿಯೂ ಕ್ರಮ ಕೈಗೊಳ್ಳಬೇಕು (ಫಲಿತಾಂಶ ನಂ. 1, 17, 23).

3) ಜೀತ ಅವಧಿಗೆ ಕಾಲಮಿತಿಯನ್ನೂ ಜೀತ ಕಾನೂನು ಹಾಕಿಲ್ಲ (ಪ್ರಕರಣ 2ರ). ಜೀತವು ಎಷ್ಟು ಕಾಲಾವಧಿಯಲ್ಲೂ ನಡೆಯಬಹುದು. ಒಂದು ವರ್ಷ ತನಕವೂ ಅದು ಇರಬೇಕೆಂದಿಲ್ಲ. ಆದ್ದರಿಂದ ಜೀತವು ಜೀವನ ಪರ್ಯಂತ ನಡೆಯಬಹುದು; ಹಲವು ವರ್ಷ ತನಕ ಇರ ಬಹುದು ಅಥವಾ ಕೆಲವೇ ಕೆಲವು ವರ್ಷಗಳಿಗೆ ಅದು ಹರಡಬಹು; ಕೇವಲ ಒಂದೇ ಒಂದು ವರ್ಷಕ್ಕೂ ಅದು ಸೀಮಿತಗೊಳ್ಳಬಹುದು ಅಥವಾ ಒಂದೇ ಒಂದು ಋತುವಿಗೆ ಮಾತ್ರ (ಉದಾ: ನಾಟಿಕಾಲ, ಸುಗ್ಗಿಕಾಲಕ್ಕೆ) ಅದು ಅನ್ವಯಿಸಬಹುದು. ಜೀತದ ತೀರ್ಮಾನಕ್ಕೆ ಬರಬೇಕಾದರೆ ಕೆಲಸದ ಸಂದರ್ಭದಲ್ಲಿ ಬಲಾತ್ಕಾರವಿದೆಯೇ ಎಂದು ಕಂಡು ಹಿಡಿಯುವುದು ಮುಖ್ಯ. ಕಾನೂನಿನ ಪ್ರಕಾರ ಕಾಲಾವಧಿ ಜೀತದ ತೀರ್ಮಾನಕ್ಕೆ ಬರಲು ನಿರ್ಣಾಯಕವಲ್ಲ. (ಎ.ಕೆ.ಚಕ್ರವರ್ತಿ ವರದಿ: 2.23 ಋ ಸಾರಾಂಶ, 3.4).

4) ಕಾಯ್ದೆಯ ಪ್ರಕಾರ ಜೀತವಿರಲು ಲಿಖಿತ ದಾಖಲೆಯ ಅವಶ್ಯಕತೆ ಇಲ್ಲವೇ ಇಲ್ಲ (ಪ್ರಕರಣ 2ರ) ನೋಡಿ). ಕಾನೂನಿನ ಅನುಚ್ಛೇದ 15ರ ಪ್ರಕಾರ ಜೀತಸಾಲದ ಬಗೆಗಿನ ಯಾವುದೇ ಪ್ರತಿಪಾದನೆಯನ್ನು ಸುಳ್ಳು ಎಂದು ತೋರಿಸುವ ಜವಾಬ್ದಾರಿ ಮಾಲಿಕರದ್ದು. ಜೀತದಾಳು ಮಾತ್ರ ತನ್ನ ಪ್ರತಿಪಾದನೆಗೆ ಯಾವುದೇ ಆಧಾರ ತೋರಿಸಬೇಕೆಂದಿಲ್ಲ.

5) ಜೀತದಾಳುಗಳನ್ನು ಗುರುತಿಸುವ ಕಾರ್ಯ ಒಂದು ಸಾರಿ ನಡೆದು ಮುಗಿಯಬೇಕಾದ ಪ್ರಕ್ರಿಯೆಯಲ್ಲ. ಬದಲಿಗೆ ಜೀತ ಪದ್ಧತಿ ಜೀವಂತ ಇರುವ ತನಕವೂ ಅದು ನಡೆಯುತ್ತಾ ಇರಬೇಕು. ಜೀತ ಇರುವಿಕೆಯ ಬಗ್ಗೆ ಅಧಿಕಾರಿಗಳ ಗಮನ ಸೆಳೆದ ಪ್ರತಿ ಸಂದರ್ಭದಲ್ಲೂ ಜೀತದ ತನಿಖೆಯನ್ನು ಅಧಿಕಾರಿಗಳು ಮಾಡಬೇಕು. ಮೂರು ವರ್ಷಕ್ಕೊಮ್ಮೆ, ಜೀತ ಸಮೀಕ್ಷೆಯನ್ನು ಜಿಲ್ಲಾಧಿಕಾರಿಗಳು, ಉಪ ವಿಭಾಗಾಧಿಕಾರಿಗಳು ಮತ್ತು ಗ್ರಾಮ ಪಂಚಾಯತಿಗಳು ನಡೆಸುವುದು ಉಚಿತ ("ಫಲಿತಾಂಶ" ನಂ. 13)

6) ಜೀತದಾಳುಗಳನ್ನು ಗುರುತಿಸುವ ಅಧಿಕಾರಿಗಳು ಮಾಧ್ಯಮಗಳಲ್ಲಿಯ ವರದಿಗಳು ಮತ್ತು ಸ್ವಯಂ ಸೇವಾ ಸಂಸ್ಥೆಗಳು ನೀಡುವ ದೂರುಗಳನ್ನು ಸೂಕ್ತವಾಗಿ ಪರಿಗಣಿಸಬೇಕು. ಅನುಸೂಚಿತ ಜಾತಿ ಮತ್ತು ಜನಾಂಗಗಳು, ಕೃಷಿಕಾರ್ಮಿಕರು ಮತ್ತಿತರ ಅಸಂಘಟಿತ ಕಾರ್ಮಿಕರಿಗೆ ಉತ್ತಮ ಸೇವೆ ಸಲ್ಲಿಸುವ ಸರ್ಕಾರೇತರ ಸಂಸ್ಥೆಗಳ ಸಹಾಯವನ್ನು ಜೀತದಾಳುಗಳನ್ನು ಗುರುತಿಸುವಲ್ಲಿ ಅವರು

ಪಡೆಯಬೇಕು. ಅದೇ ರೀತಿ, ಜೀತ ವಿಮುಕ್ತರ ಯಾವುದೇ ಸಂಘಟನೆಗಳು, ವಿದ್ಯಾರ್ಥಿ ಮುಖಂಡರು, ಪ್ರತ್ಯೇಕವಾಗಿ ಅನುಸೂಚಿತ ಜಾತಿ ಮತ್ತು ಜನಾಂಗಗಳು, ಕೃಷಿಕಾರ್ಮಿಕರು ಮತ್ತಿತರ ಅಸಂಘಟಿತ ಕಾರ್ಮಿಕರ ಸಮುದಾಯಗಳಿಂದ ಬಂದ ವಿದ್ಯಾರ್ಥಿ ಸ್ವಯಂಸೇವಕರನ್ನೂ ಜೀತದಾಳುಗಳನ್ನು ಗುರುತಿಸುವಲ್ಲಿ ತೊಡಗಿಸಿಕೊಳ್ಳಬೇಕು ("ಕೈಪಿಡಿ" ನೋಡಿ, ನಂ. 2. 9, ಪುಟ 6–7).

7) ಕಂದಾಯ ಇಲಾಖೆ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಅನುಸೂಚಿತ ಜನಾಂಗದ ಸಂಶೋಧನಾ ಕೇಂದ್ರ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳು ಮನೆ ನಿವೇಶನ ಹಂಚಿಕೆ, ಮನೆ ಹಂಚಿಕೆ ಮುಂತಾದ ವಿಷಯಗಳಿಗೆ ಸಂಬಂಧ ಪಟ್ಟಂತೆ ನಡೆಸುವ ಕೌಟುಂಬಿಕ ಸಮೀಕ್ಷೆಗಳಲ್ಲಿ ಜೀತದಾಳುಗಳನ್ನು ಗುರುತಿಸುವ ಕೆಲಸವೂ ಕಡ್ಡಾಯವಾಗಿ ನಡೆಯುವಂತಿರಬೇಕು (ಕೈಪಿಡಿ ನೋಡಿ, ನಂ. 2. 9, ಪುಟ 7).

**ಜೀತದಾಳುಗಳನ್ನು ಗುರುತಿಸಲು ಕಾಲಮಿತಿ:**

ಕರ್ನಾಟಕಾದ್ಯಂತ ಉಗಾದಿಯ ಸ್ವಲ್ಪ ಸಮಯದ ನಂತರ ಜೀತಕೆಲಸಗಳ ಬಗ್ಗೆ ಒಪ್ಪಂದಗಳಾಗುತ್ತವೆ. ಆದ್ದರಿಂದ ಮೂರು ವರ್ಷಗಳಿಗೊಮ್ಮೆ ನಡೆಸುವ ಸಮೀಕ್ಷೆಗಳನ್ನು ಎಪ್ರಿಲ್ ತಿಂಗಳಿಂದ ನಡೆಸುವುದು ಸೂಕ್ತ. ಮೊದಲು ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ಎಪ್ರಿಲ್‌ನಿಂದ ಒಂದು ತಿಂಗಳೊಳಗಾಗಿ ಜಿಲ್ಲಾಧಿಕಾರಿಗಳು ಮತ್ತು ಉಪ ಜಿಲ್ಲಾಧಿಕಾರಿಗಳಿಗೆ ಜೀತದಾಳುಗಳ ಬಗ್ಗೆ ವರದಿ ಸಲ್ಲಿಸಬೇಕು. ಜಿಲ್ಲಾಧಿಕಾರಿಗಳು ಮತ್ತು ಉಪ ಜಿಲ್ಲಾಧಿಕಾರಿಗಳು ಮುಂದಿನ ಒಂದು ತಿಂಗಳೊಳಗಾಗಿ ಜಾಗೃತಿ ಸಮಿತಿಯ ನೆರವಿನಿಂದ ಆ ವರದಿಗಳ ಆಧಾರದ ಮೇಲೆ ಮತ್ತು ಸ್ವತಂತ್ರವಾಗಿ ಸಮೀಕ್ಷೆ ನಡೆಸಬೇಕು. ಉತ್ತಮ ಸರ್ಕಾರೇತರ ಸಂಸ್ಥೆಗಳ ಜೊತೆಗೂಡಿ ಸಮೀಕ್ಷೆ ಮಾಡುವುದು ಅಥವಾ ಅವರಿಂದಲೇ ಸಮೀಕ್ಷೆ ನಡೆಸುವುದು ಒಳ್ಳೆಯದು.

**ಜೀತದಾಳುಗಳ ಬಿಡುಗಡೆ**

ಜೀತಸಮೀಕ್ಷೆಯ ಮೂಲಕ ಒಬ್ಬ ವ್ಯಕ್ತಿಯು ಜೀತದಾಳು ಎಂದು ಖಾತ್ರಿ ಆದ ಮೇಲೆ ಜಿಲ್ಲಾಧಿಕಾರಿಗಳು ಮತ್ತು ಉಪವಿಭಾಗಾಧಿಕಾರಿಗಳು ಅವರ ಬಿಡುಗಡೆಗೆ ಆದೇಶ ಕಳುಹಿಸಿ ಅವರಿಗೆ ಬಿಡುಗಡೆ ಪತ್ರವೊಂದನ್ನು ನೀಡಬೇಕು. ಬಿಡುಗಡೆ ಪತ್ರಗಳ ಪ್ರತಿಯನ್ನು ಆಯಾ ಗ್ರಾಮ ಪಂಚಾಯತಿಯ ಕಾರ್ಯದರ್ಶಿಯಗಳಿಗೆ ಕಳುಹಿಸಬೇಕು.

ಜೀತದಾಳುಗಳ ಗುರುತಿಸುವಿಕೆ ಮತ್ತು ಬಿಡುಗಡೆ ಕಾರ್ಯ ಏಕಕಾಲಕ್ಕೆ ನಡೆಯಬೇಕು. ಇದರಿಂದ ಜೀತದಾಳುಗಳ ಪುನರ್ವಸತಿಯಲ್ಲಿ ವಿಳಂಬವನ್ನು ನಿಲ್ಲಿಸಿ ಅವರು ಜೀತಕ್ಕೆ ಮರಳಿ ಹೋಗುವುದನ್ನು ತಡೆಗಟ್ಟಬಹುದು ("ಕೈಪಿಡಿ" ನಂ. 4.10–11, ಪುಟ 12 ನೋಡಿ). ಜೀತದಾಳುವನ್ನು ಗುರುತಿಸಿದ ಎರಡು

ವಾರಗಳಲ್ಲಿ ಅವರ ಬಿಡುಗಡೆಯೂ ಆಗಬೇಕು ಮತ್ತು ಅವರ ಪುನರ್ವಸತಿಗೆ ಕ್ರಮವನ್ನು ಆ ಕೂಡಲೇ ಕೈಗೊಳ್ಳಬೇಕು. ಬಿಡುಗಡೆ ಪತ್ರವು ಮುಕ್ತ ಜೀತದಾಳುವಿಗೆ ಕೇಂದ್ರ ಪುರಸ್ಕೃತ ಯೋಜನೆ (ಕೇಪುಯೋ) ಯಡಿ ಪುನರ್ವಸತಿ ಸೌಲಭ್ಯ ಹಾಗೂ ಎಲ್ಲಾ ಬಡತನ ನಿರ್ಮೂಲನೆಯ ಯೋಜನೆಗಳಿಂದ ಸೌಲಭ್ಯ, ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಮುಂದುವರಿಕೆಗೋಸ್ಕರ ವಿವಿಧ ಯೋಜನೆಗಳ ಸೌಲಭ್ಯ ಪಡೆಯುವ ಅರ್ಹತೆ ನೀಡುತ್ತದೆ.

ಕೇಪುಯೋಯಡಿ ಪುನರ್ವಸತಿ ಸೌಲಭ್ಯಕ್ಕೆ ನಿರ್ಧರಿಸಲಾಗಿದ್ದ 20,000 ರೂಪಾಯಿಗಳಿಂದ 1,000 ರೂಪಾಯಿಗಳನ್ನು ಬಿಡುಗಡೆ ಮಾಡಿದಾಗಲೇ ಅಧಿಕಾರಿಗಳು ಪ್ರತಿ ಮುಕ್ತ ಜೀತದಾಳುವಿಗೆ ಅವರ ದಿನನಿತ್ಯದ ಖರ್ಚಿಗೆಂದು ನೀಡಬೇಕು.

ಕರ್ನಾಟಕ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು 2006ರಲ್ಲಿ ಜಾರಿಗೆ ತಂದಿರುವ "ಜೀತದಾಳುಗಳ ಪುನರ್ವಸತಿ ಸಹಾಯ ಧನ" ಯೋಜನೆಯಡಿಯಲ್ಲಿ ಪ್ರತಿ ಮುಕ್ತ ಜೀತದಾಳುವಿಗೆ ಅವರು ಬಿಡುಗಡೆ ಹೊಂದಿದ ದಿನದಿಂದ ಮುಂದಿನ ಎರಡು ವರ್ಷಗಳ ತನಕ ಪ್ರತಿ ತಿಂಗಳಿಗೆ 300 ರೂಪಾಯಿಗಳ ಸಹಾಯಧನವನ್ನು ನೀಡಬೇಕು.

ಬಿಡುಗಡೆ ಆದ ತಕ್ಷಣ ಕಾನೂನಿನ ಪ್ರಕಾರ ಜೀತದಾಳುವಿಗೆ ಒದಗುವ ಪರಿಣಾಮಗಳು ಇಂತಿವೆ:

1) ಜೀತದ ಯಾವುದೇ ಒಪ್ಪಂದವು ಅಸ್ತಿತ್ವದಲ್ಲಿರುವುದಿಲ್ಲ (ಪ್ರಕರಣ 4–5).
2) ಜೀತಸಾಲವನ್ನು ತೆರಬೇಕಾಗಿಲ್ಲ (ಪ್ರಕರಣ 6).
3) ಜೀತಸಾಲದ ಬಗ್ಗೆ ಯಾವುದೇ ಪಾವತಿಯನ್ನು ಸಾಲಗಾರನು ಪಡೆಯಬಾರದು (ಪ್ರಕರಣ 9).
4) ಅಡಮಾನವಿಟ್ಟ ಜೀತದಾಳುವಿನ ಯಾವುದೇ ಆಸ್ತಿಯು ಮುಕ್ತವಾಗುತ್ತದೆ (ಪ್ರಕರಣ 7).
5) ಜೀತದಾಳುವಿಗೆ ವಾಸವಾಗಿರಲು ನೀಡಲಾಗಿದ್ದ ಹೊಲ–ಮನೆಯಿಂದ ಮುಕ್ತಗೊಳಿಸಿದ ಜೀತದಾಳುವನ್ನು ಹೊರಹಾಕುವಂತಿಲ್ಲ (ಪ್ರಕರಣ 8).
6) ಜೀತ ಕಾನೂನಿನ ಪ್ರಕಾರ 30 ದಿನಗಳೊಳಗೆ ಜೀತದಾಳುವಿನ ಆಸ್ತಿಯನ್ನು ಜೀತದಾಳುವಿಗೆ ಹಿಂತಿರುಗಿಸದಿದ್ದರೆ ಆ ವ್ಯಕ್ತಿಯ ಮೇಲೆ 1000 ರೂಪಾಯಿ ದಂಡ ವಿಧಿಸಬಹುದು ಮತ್ತು ಆ ದಂಡದಿಂದ ಮರಳಿಸದ ಪ್ರತಿ ದಿನವೊಂದಕ್ಕೆ 5 ರೂಪಾಯಿಯಂತೆ ಮುಕ್ತ ಜೀತದಾಳುವಿಗೆ ಹಣವನ್ನು ನೀಡಬೇಕು (ಪ್ರಕರಣ 19).

ಒಬ್ಬ ಜೀತದಾಳುವಿನ ಬಿಡುಗಡೆ ಕುರಿತು ಒಂದು ಅಗತ್ಯವಾದ ಸ್ಪಷ್ಟತೆಯನ್ನು ಒದಗಿಸುವುದು ಸೂಕ್ತ. ಮೇಲಿನ ಎಲ್ಲಾ ವಿವರಗಳಿಂದ ಖಚಿತವಾಗುವುದೇನೆಂದರೆ ಒಬ್ಬ ಜೀತದಾಳುವನ್ನು ಬಿಡುಗಡೆಗೊಳಿಸುವುದೆಂದರೆ ಅವರನ್ನು ಕೆಲಸದಿಂದ ಬಿಡಿಸುವುದಲ್ಲ; ಬದಲಾಗಿ ಬಂಧನ, ಬಲಾತ್ಕಾರ ಮತ್ತು ಶೋಷಣೆಯನ್ನು ಒಳಗೊಂಡಿರುವ ಕೆಲಸದ ಸಂದರ್ಭಗಳನ್ನು ಬದಲಾಯಿಸುವುದು. ಒಬ್ಬ

ಜೀತದಾಳುವನ್ನು ಬಿಡುಗಡೆಗೊಳಿಸಿದ ಮೇಲೆ, ಜೀತದಾಳುವು ಒಪ್ಪಿದರೆ, ಶೋಷಣೆ ಇಲ್ಲದ ರೀತಿಯಲ್ಲಿಯೂ ಮತ್ತು ಕಾನೂನಾತ್ಮಕವಾಗಿ ಅವರು ಅದೇ ಮಾಲೀಕರಲ್ಲಿ ಕೆಲಸ ಮುಂದುವರೆಸುವಂತೆಯೂ ಸಂಬಂಧಪಟ್ಟ ಅಧಿಕಾರಿಗಳು ನೋಡಿಕೊಳ್ಳಬಹುದು. ಈ ಸಂದರ್ಭದಲ್ಲಿ ಎಸ್. ಮುರುಳೀಧರರವರು1998ರ ಮೇ 14ರಂದು ಸಲ್ಲಿಸಿದ "ಜೀತ ಕುರಿತ ಮೊಕದ್ದಮೆಯ ಬಗ್ಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ವರದಿ"ಯಿಂದ ಉದ್ಧರಿಸುವುದು ಸೂಕ್ತ. "ಬಿಡುಗಡೆ ಅಂದರೆ ದೈಹಿಕವಾಗಿ ಜೀತದಳುವನ್ನು ಬೇರೆಡೆ ಸಾಗಿಸಬೇಕೆಂದಿಲ್ಲ. ಜೀತ ಕಾಯ್ದೆಯ 8ನೇ ಪ್ರಕರಣವು ಜೀತದಾಳು ಜೀತಸಮಯದಲ್ಲಿ ಪಡೆದಿರುವ ವಸತಿ ಪ್ರದೇಶದ ಮೇಲಿನ ಸ್ವಾಮ್ಯತೆಯನ್ನು ರಕ್ಷಿಸುತ್ತದೆ. ಬಿಡುಗಡೆ ಅಂದರೆ ಸಾಲದಿಂದ ವಿಮೋಚನೆ (ಪ್ರಕರಣ –6), ಅಡಮಾನದಿಂದ ವಿಮೋಚನೆ (ಪ್ರಕರಣ–7), ಮತ್ತು ಶೋಷಣೆಯಿಂದ ವಿಮೋಚನೆಯಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಬಿಡುಗಡೆಯ ಮುಂಚೆ ಜೀತದಾಳುವಾಗಿದ್ದ ಕೆಲಸಗಾರ ತನ್ನ ಕೆಲಸವನ್ನು ಕಳೆದುಕೊಳ್ಳದೇ ಹಲವಾರು ಕಾರ್ಮಿಕ ಕಾಯಿದೆಗಳನ್ವಯ ಅವರು ಕೆಲಸವನ್ನು ಮುಂದುವರಿಸಿಕೊಂಡು ಹೋಗುವಂತೆ ನೋಡಿಕೊಳ್ಳುವ ಒಂದು ವ್ಯವಸ್ಥೆ ಇರಬೇಕು. ಆ ಕಾರ್ಮಿಕ ಕಾಯಿದೆಗಳಲ್ಲಿ ಮುಖ್ಯವಾದ ಕಾಯಿದೆಗಳೆಂದರೆ ಕನಿಷ್ಟ ವೇತನ ಕಾನೂನು ಮತ್ತು ವೇತನ ನೀಡುವ ಕಾನೂನು. ಜೀತದಿಂದ ಬಿಡುಗಡೆಗೊಳಿಸಿದ ಮೇಲೆ ಅದೇ ಕೆಲಸದಲ್ಲಿ ಮುಂದುವರಿಯುತ್ತಿರುವ ಕೆಲಸಗಾರರಿಗೆ ಜೀತ ಮಾಡುತ್ತಿದ್ದಷ್ಟು ವರ್ಷಗಳಿಗೆ ಕನಿಷ್ಟ ವೇತನದಡಿ ದೊರಕಬೇಕಾಗಿರುವ ವೇತನವನ್ನು ಅದರ ಬಡ್ಡಿ ಜೊತೆ ಸಿಗುವಂತೆ ಬಿಡುಗಡೆಗೊಳಿಸುವ ಅಧಿಕಾರಿಗಳು ನೋಡಿಕೊಳ್ಳಬೇಕು." (ಪುಟ–8)

**ಕಾನೂನಿನ ಪ್ರಕಾರ ಅಪರಾಧಿಗಳ ಮೇಲೆ ಕ್ರಮ ಜರುಗಿಸುವುದು**

ತೀರ ಕಠೋರ ಅಪರಾಧಿಗಳ ಮೇಲೆ ಮಾತ್ರ ಕ್ರಮ ಜರುಗಿಸಬೇಕು:

ಮಾಲಿಕರಿಂದ ದೌರ್ಜನ್ಯವಾಗುವ ಹಾಗೂ ತಮ್ಮ ಕೆಲಸ ಕಳಕೊಳ್ಳುವ ಭಯ ಜೀತದಾಳುಗಳಲ್ಲಿರುವುದರಿಂದ ಮತ್ತು ಎಲ್ಲಾ ಜೀತ ಪ್ರಕರಣಗಳಲ್ಲೂ ಮಾಲಿಕರ ವಿರುದ್ಧ ಕ್ರಮ ಕೈಗೊಳ್ಳಬೇಕೆಂದಿಲ್ಲ. ಶಿಕ್ಷೆಯನ್ನು ತೀರ ಕಠೋರ ಅಪರಾಧಿಗಳ ಮೇಲೆ ಮಾತ್ರ ಜರುಗಿಸಬೇಕು ("ಫಲಿತಾಂಶ" ನಂ. 16). ಶಿಕ್ಷೆಯ ಉದ್ದೇಶ ಬೇರೆಯವರಿಗೆ ಎಚ್ಚರಿಕೆ ನೀಡಿ ಜೀತ ಅಪರಾಧಗಳನ್ನು ತಡೆಗಟ್ಟುವುದಾಗಿದೆ ("ಫಲಿತಾಂಶ" ನಂ. 23).

**ನೋಟೀಸುಗಳನ್ನು ಕಳುಹಿಸುವುದು:**

ಜೀತದಾಳುಗಳನ್ನು ಇಟ್ಟುಕೊಂಡಿರುವ ಎಲ್ಲಾ ಮಾಲಿಕರಿಗೆ ಜೀತ ಅಪರಾಧಗಳ ಮೇಲೆ ಆಗುವ ಶಿಕ್ಷೆಗಳ ಬಗ್ಗೆ ಪ್ರಸ್ತಾಪಿಸಿ ನೋಟೀಸುಗಳನ್ನು ಕಳುಹಿಸಬಹುದು. ("ಫಲಿತಾಂಶ" ನಂ. 13 ಅನುಸೂಚಿ 9.2 ನೋಡಿ) ಆದರೆ ಅಂತಹ ನೋಟೀಸುಗಳನ್ನು ಕಳುಹಿಸುವ ಕೆಲಸ ಜೀತದಾಳುಗಳನ್ನು ಬಿಡುಗಡೆಗೊಳಿಸಿ ಅವರಿಗೆ ಸೂಕ್ತ ಪುನರ್ವಸತಿ ಸೌಲಭ್ಯ ಕಲ್ಪಿಸಿದ ಮೇಲೆಯೇ ಆಗಬೇಕು.

**ಜೀತ ಕಾನೂನಿನಲ್ಲಿ ವಿಧಿಸಲಾದ ಶಿಕ್ಷೆಗಳು:**

1) ಮನ್ನಾ ಆದ ಜೀತಸಾಲದ ಕುರಿತು ಮಾಲಿಕನು ಪಾವತಿಯನ್ನು ಪಡೆದರೆ ಅವನಿಗೆ ಮೂರು ವರ್ಷಗಳ ತನಕ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದು. ಸಾಲಗಾರನು ಪಡೆದ ಹಣವನ್ನು ನ್ಯಾಯಾಲಯದಲ್ಲಿ ಠೇವಣಿ ಇಟ್ಟು ಅದನ್ನು ಜೀತದಾಳುವಿಗೆ ಒದಗಿಸುವಂತೆ ನ್ಯಾಯಾಲಯವು ಆದೇಶಿಸಬಹುದು (ಜೀತ ಕಾನೂನು 9 ನೋಡಿ).

2) ಒಬ್ಬ ವ್ಯಕ್ತಿಯು ಅಥವಾ ಒಂದು ಕಂಪೆನಿಯು ಈ ಕೆಳಗೆ ನಮೂದಿಸಿದ ಅಪರಾಧಗಳನ್ನು ಎಸಗಿದರೆ ಅವರ ಮೇಲೆ ಮೂರು ವರ್ಷ ತನಕ ಜೈಲು ಶಿಕ್ಷೆ ಮತ್ತು 2000 ರೂಪಾಯಿ ತನಕ ದಂಡ ವಿಧಿಸಬಹುದು (ಕಾಯ್ದೆಯ ಪ್ರಕರಣ 16–18, 20, 23 ನೋಡಿ): (1) ಒಬ್ಬ ವ್ಯಕ್ತಿಗೆ ಜೀತ ಸೇವೆ ಮಾಡಲು ಒತ್ತಾಯಿಸುವುದು (2) ಜೀತಸಾಲವನ್ನು ನೀಡುವುದು (3) ಒಬ್ಬ ವ್ಯಕ್ತಿಯು ಜೀತಸೇವೆಯನ್ನು ಮಾಡುವಂತೆ ಯಾವುದೇ ಸಂಪ್ರದಾಯ, ರೂಢಿ, ಒಪ್ಪಂದ, ಕರಾರು ಅಥವಾ ಇತರ ಸಲಕರಣೆಯ ಮೂಲಕ ಕಡ್ಡಾಯ ಮಾಡುವುದು (4) ಕಾಯ್ದೆಯಲ್ಲಿ ನಮೂದಿಸಿದ ರೀತಿಯಲ್ಲಿ ಜೀತದಾಳುವಿನ ಆಸ್ತಿಯನ್ನು ವಾಪಾಸು ಮಾಡದಿರುವುದು (5) ಜೀತ ಅಪರಾಧವನ್ನು ಎಸಗುವಂತೆ ಬೇರೆಯವರಿಗೆ ನೆರವು ನೀಡುವುದು.

3) ಜೀತ ಕಾನೂನು ಜ್ಯಾರಿಗೊಂಡ 30 ದಿನಗಳೊಳಗೆ ಜೀತದಾಳುವಿನ ಆಸ್ತಿಯನ್ನು ಜೀತದಾಳುವಿಗೆ ಮರಳಿಸದಿದ್ದರೆ ಮರಳಿಸದ ವ್ಯಕ್ತಿಗೆ ಒಂದು ವರ್ಷದ ತನಕ ಜೈಲು ಶಿಕ್ಷೆ ಮತ್ತು 1,000 ರೂಪಾಯಿ ತನಕ ದಂಡ ವಿಧಿಸಬಹುದು (ಜೀತ ಕಾನೂನು 19).

4) ವಸೂಲಿ ಮಾಡಿದ ಕೆಲವು ದಂಡಗಳಿಂದ ಜೀತಸೇವೆ ಮಾಡಿಸಿದ ದಿನವೊಂದಕ್ಕೆ 5 ರೂಪಾಯಿಯಂತೆ (ಜೀತ ಕಾನೂನು ಪ್ರಕರಣ 18) ಮತ್ತು ಜೀತದಾಳುವಿನ ಆಸ್ತಿಯನ್ನು ಮರಳಿಸದ ಪ್ರತಿ ದಿನವೊಂದಕ್ಕೆ 5 ರೂಪಾಯಿಯಂತೆ (ಜೀತ ಕಾನೂನು ಪ್ರಕರಣ 19) ಮುಕ್ತ ಜೀತದಾಳುವಿಗೆ ನೀಡಬೇಕು.

**ಕಾರ್ಯನಿರ್ವಾಹಕ ದಂಡಾಧಿಕಾರಿಗಳಿಗೆ ನ್ಯಾಯಿಕ ದಂಡಾಧಿಕಾರಿಗಳ ಅಧಿಕಾರಗಳನ್ನು ನೀಡಿರುವುದು:**

ಕಾಯ್ದೆಯ ಪ್ರಕರಣ 21ರಂತೆ ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆಯಂತೆ (ಸಂ. ಖಫಾಐ.20.ಐಃಆ.76 ದಿನಾಂಕ 30 ಮಾರ್ಚ್ 1976) ಜಿಲ್ಲಾಧಿಕಾರಿಗಳಿಗೆ ಮೇಲೆ ಮೊದಲನೇ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ಅಧಿಕಾರಗಳನ್ನು ನೀಡಿದೆ ಹಾಗೂ 2011ರ ಸರ್ಕಾರದ ಆದೇಶದ ಮೇರೆಗೆ ಉಪವಿಭಾಗಾಧಿಕಾರಿಗಳಿಗೆ ಎರಡನೇ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ಅಧಿಕಾರಗಳನ್ನು ನೀಡಲಾಗಿದೆ.

**ವಿಚಾರಣೆಯ ವಿಧಾನಗಳು:**

ಅಪರಾಧಗಳ ವಿಚಾರಣೆಯನ್ನು ಒಬ್ಬ ದಂಡಾಧಿಕಾರಿಯು ಸಂಕ್ಷಿಪ್ತ ವಿಧಾನದಲ್ಲಿ ಮಾಡಬಹುದು (ಜೀತ ಕಾನೂನು ಜೀತ ಕಾನೂನು ಪ್ರಕರಣ 21 (2) ನೋಡಿ). ಸಂಕ್ಷಿಪ್ತ ವಿಚಾರಣೆಗೂ ಇನ್ನಿತರ

ವಿಚಾರಣೆಗಳಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಸಂಕ್ಷಿಪ್ತ ವಿಚಾರಣೆಯಲ್ಲಿ ವಾದಿ-ಪ್ರತಿವಾದಿಗಳ ಪರ ಇರುವ ಸಾಕ್ಷಿಗಳನ್ನು ಕೂಲಂಕುಷವಾಗಿ ವಿಚಾರಿಸುವುದಿಲ್ಲ.

ಯಾವುದೇ ಸಿವಿಲ್ ನ್ಯಾಯಾಲಯಕ್ಕೆ ಜೀತ ಕಾನೂನಿನ ಯಾವುದೇ ಅನುಚ್ಛೇದದಲ್ಲಿರುವ ವಿಷಯಗಳ ಮೇಲೆ ಅಧಿಕಾರವಿಲ್ಲ ಮತ್ತು ಜೀತ ಕಾನೂನಿನಡಿ ಕೈಗೊಂಡ ಯಾವುದೇ ಕ್ರಮದ ಬಗ್ಗೆ ತಡೆಯಾಜ್ಞೆಯನ್ನು ಯಾವುದೇ ಸಿವಿಲ್ ನ್ಯಾಯಾಲಯವು ನೀಡತಕ್ಕದ್ದಲ್ಲ (ಜೀತ ಕಾನೂನು ಪ್ರಕರಣ 25).

**ಜೀತಕ್ಕೆ ಪೂರಕವಾಗಿರುವ ಅಪರಾಧಗಳ ಮೇಲೆ ಕ್ರಮ ಜರುಗಿಸುವುದು:**

ಜೀತದ ಅಪರಾಧಗಳ ಮೇಲೆ ಕ್ರಮ ಜರುಗಿಸುವಾಗ ಅಧಿಕಾರಿಗಳು ಪರಿಣಾಮಕಾರಿಯಾದ ರೀತಿಯಲ್ಲಿ ಮತ್ತು ಅತಿ ಹೆಚ್ಚಿನ ಶಿಕ್ಷೆ ಸಿಗುವಂತಾಗಲು ಇನ್ನಿತರ ಯಾವ ಕಾನೂನುಗಳನ್ನು ಬಳಸಿ ಕ್ರಮ ತೆಗೆದುಕೊಳ್ಳಬಹುದು ಎಂಬುದನ್ನು ಪರಿಗಣಿಸಿ ಅದರ ಪ್ರಕಾರ ತೀರ್ಮಾನ ತೆಗೆದುಕೊಳ್ಳಬೇಕು. ("ಫಲಿತಾಂಶ" ನಂ. 23). ಜೀತ ಪದ್ಧತಿ ನಿರ್ಮೂಲನೆ ಕಾಯ್ದೆ ಜೊತೆಗೆ ಸೇರಿಸಬಹುದಾದ ಕಾನೂನುಗಳೆಂದರೆ: 1) ಕನಿಷ್ಠ ವೇತನ ಕಾನೂನು, 1948; 2) ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ, 1986; ಮತ್ತು 3) ಅನುಸೂಚಿತ ಜಾತಿ ಮತ್ತು ಅನುಸೂಚಿತ ಜನಾಂಗಗಳ ಮೇಲಿನ ದೌರ್ಜನ್ಯ ತಡೆ ಕಾನೂನು, 1989.

1) ಕನಿಷ್ಠ ವೇತನ ಕಾಯಿದೆ, 1948 ರಲ್ಲಿ ನಮೂದಿಸಿದ ಪ್ರಕ್ರಿಯೆಗಳನ್ನು ಅನುಸರಿಸಿ ಜೀತ ಮಾಲಿಕರಿಂದ ನ್ಯಾಯವಾಗಿ ನೀಡಬೇಕಾಗಿದ್ದ ಕೂಲಿಯನ್ನು ವಸೂಲಿ ಮಾಡಬೇಕು. ಆ ಕಾಯ್ದೆಯ ಪ್ರಕರಣ 20ರಂತೆ ವೇತನ ಪ್ರತಿಪಾದನೆಯ ಅರ್ಜಿಯನ್ನು ವೇತನ ಪ್ರತಿಪಾದಿಸುವ ಪ್ರಾಧಿಕಾರಕ್ಕೆ ಸಲ್ಲಿಸಬೇಕು. ಆ ಪ್ರಾಧಿಕಾರವು ಜಿಲ್ಲಾ ಕಾರ್ಮಿಕ ಅಧಿಕಾರಿಯಾಗಿರುತ್ತಾರೆ. ಆ ಅರ್ಜಿಯನ್ನು ಒಂದೇ ಜೀತದಾಳು ಖುದ್ದಾಗಿ ನೀಡಬಹುದು; ಅಥವಾ ಹಲವು ಜೀತದಾಳುಗಳ ಪರವಾಗಿ ಒಂದು ಕಾರ್ಮಿಕ ಸಂಘ ಅಥವಾ ಸರ್ಕಾರೇತರ ಸಂಸ್ಥೆಯು ಸಲ್ಲಿಸಬಹುದು. ಅರ್ಜಿಯಲ್ಲಿ ಇಷ್ಟರವರೆಗೆ ಕೊಟ್ಟಿದ್ದ ಕೂಲಿ ಮತ್ತು ನ್ಯಾಯಯುತವಾಗಿ ಕೊಡಬೇಕಾಗಿದ್ದ ಕೂಲಿಗಳ ಮಧ್ಯೆ ಇರುವ ವ್ಯತ್ಯಾಸದ ಮೊತ್ತದ ಮೇಲೆ ಹಕ್ಕು ಪ್ರತಿಪಾದಿಸಬೇಕು. ವೇತನ ಪ್ರತಿಪಾದಿಸುವ ಪ್ರಾಧಿಕಾರವು ಆ ಪ್ರತಿಪಾದನೆಯನ್ನು ಒಪ್ಪಿಕೊಳ್ಳುವುದರ ಜೊತೆಗೆ ಅದರ ಹತ್ತು ಪಾಲಿನಷ್ಟು ದಂಡವನ್ನೂ ವಿಧಿಸಬಹುದು.

2) ಅಪಾಯಕಾರಿ ಕೆಲಸಗಳಲ್ಲಿ ಕೆಲಸ ಮಾಡುವ ಬಾಲ ಜೀತದಾಳುವಿನ ಮಾಲಿಕನ ಮೇಲೆ 20,000 ರೂಪಾಯಿ ದಂಡವನ್ನು ವಿಧಿಸಿ ಆ ಹಣಕ್ಕೆ ಇನ್ನೊಂದು 5,000 ರೂಪಾಯಿಯನ್ನು ಸರ್ಕಾರವು ಸೇರಿಸಿ ಒಟ್ಟು ಮೊತ್ತವನ್ನು ಮಗುವಿನ ಹೆಸರಿನಲ್ಲಿ ಬ್ಯಾಂಕ್ ಒಂದರಲ್ಲಿ ಠೇವಣಿ ಇಡಬೇಕು. ಜೊತೆಗೆ ಮಾಲಿಕನ ಮೇಲೆ ದಾವೆ ಹೂಡಬೇಕು.

3) ಜೀತದಾಳು ಅನುಸೂಚಿತ ಜಾತಿ ಅಥವಾ ಜನಾಂಗಕ್ಕೆ ಸೇರಿದವರಾಗಿದ್ದರೆ ದೌರ್ಜನ್ಯ ತಡೆಗಟ್ಟುವ ಕಾಯಿದೆ, 1989ರ ಪ್ರಕರ 3ರಡಿ ದಾವೆ ಹಾಕಿ ಕರ್ನಾಟಕ ಸಮಾಜ ಕಲ್ಯಾಣ ಇಲಾಖೆಯಿಂದ ಸೂಕ್ತ ಪರಿಹಾರವನ್ನು ಪಡೆಯಬಹುದು. ಕನಿಷ್ಠ 25,000 ರೂಪಾಯಿಗಳನ್ನು ಜೀತದಾಳುವೊಬ್ಬನಿಗೆ ಮಂಜೂರು ಮಾಡಬೇಕಾಗಿದೆ. ಅದರಲ್ಲಿ ಕಾಲು ಭಾಗದ ಮೊತ್ತವನ್ನು ಪ್ರಥಮ ಮಾಹಿತಿ ವರದಿಯನ್ನು ದಾಖಲಿಸಿದಾಗ ಜೀತದಾಳುವಿಗೆ ಕೊಡಬೇಕಾಗಿದೆ. ಉಳಿದ ಹಣವನ್ನು ಅಪರಾಧ ನಿರ್ಣಯದ ನಂತರ ಕೊಡಬೇಕಾಗಿದೆ.

**ಜೀತದಾಳುಗಳ ಪುನರ್ವಸತಿ**

**ಜೀತ ನಿರ್ಮೂಲನೆಯಲ್ಲಿ ಕೈಗೊಳ್ಳಬೇಕಾದ ನಾಲ್ಕು ಬಗೆಯ ಕಾರ್ಯಗಳಲ್ಲಿ ಪುನರ್ವಸತಿ ಕಾರ್ಯ ಮಹತ್ವದ ಪಾತ್ರ ವಹಿಸುತ್ತದೆ. ಅದೇ ಜೀತ ಪದ್ಧತಿ ರದ್ದತಿ ಕಾನೂನಿನ ಕೇಂದ್ರ ಬಿಂದು. ಜೀತ ಕಾನೂನು ಪ್ರಮುಖವಾಗಿ ಒಂದು ಕಲ್ಯಾಣ ಕಾನೂನು; ಅಪರಾಧೀಯ ಕಾನೂನು ಅಲ್ಲ. ಜೀತ ಕಾನೂನು ಪ್ರಕರಣ 11ರಲ್ಲಿ ಜಿಲ್ಲಾ ದಂಡಾಧಿಕಾರಿಯು ಒಬ್ಬ ಜೀತದಾಳುವನ್ನು ಪುನವರ್ಸತಿಗೊಳಿಸುವಾಗ ಆ ವ್ಯಕ್ತಿಯು ಪುನಃ ಜೀತಸಾಲವನ್ನು ಪಡೆಯದ ರೀತಿಯಲ್ಲಿ ಅವರು ಆರ್ಥಿಕ ಪರಿಸ್ಥಿತಿಯನ್ನು ಸುದೃಢಗೊಳೀಸಬೇಕೆಂದು ಅವರಿಗೆ ಆದೇಶ ನೀಡಿದೆ. ಆ ಸಮಗ್ರ ಪುನರ್ವಸತಿ ಹೇಗಿರಬೇಕೆಂದು ಈ ಕೆಳಗಿನ ಅಂಶಗಳು ಸ್ಪಷ್ಟಪಡಿಸುತ್ತವೆ.**

**ಜೀತದಾಳುಗಳ ಪುನರ್ವಸತಿ:** ಸಾಮಾನ್ಯ ತತ್ವಗಳು ಮತ್ತು ದೃಷ್ಟಿಕೋನಗಳು

1. ಜೀತ ಕಾನೂನಿನ ಅನುಚ್ಛೇದ 11ರ ಪ್ರಕಾರ ಸಂಬಂಧಪಟ್ಟ ಅಧಿಕಾರಿಯ ಜವಾಬ್ದಾರಿ ಏನಂದರೆ ಜೀತದಾಳುಗಳು ಪುನಃ ಜೀತಕ್ಕೆ ಮರಳದ ರೀತಿಯಲ್ಲಿ ಅವರ ಆರ್ಥಿಕ ಹಿತಾಸಕ್ತಿಗಳನ್ನು ದೃಢಗೊಳಿಸುವುದು. ಆದರೆ ಜೀತ ಕಾನೂನು ಯಾವ ರೀತಿಯ ಪುನರ್ವಸತಿ ಸೌಲಭ್ಯಗಳನ್ನು ಜೀತದಾಳುಗಳಿಗೆ ಒದಗಿಸಬೇಕು ಎಂಬುದರ ಬಗ್ಗೆ ಪ್ರಸ್ತಾಪ ಮಾಡುವುದಿಲ್ಲ. ಅವುಗಳ ಬಗ್ಗೆ ಕೇಂದ್ರ ಪುರಸ್ಕೃತ ಯೋಜನೆ (ಕೇಪುಯೋ)ಯು ವಿವರವಾಗಿ ಮಾರ್ಗದರ್ಶನಗಳನ್ನು ಕೊಡುತ್ತದೆ.

2. ಸಮಗ್ರ ದೃಷ್ಟಿ: ಪರಿಣಾಮಕಾರಿಯಾದ ಪುನರ್ವಸತಿ ಕಲ್ಪಿಸಲು ಸಮಗ್ರ ದೃಷ್ಟಿಯ ಅವಶ್ಯಕತೆಯಿದೆ. ಆರ್ಥಿಕ ಮಟ್ಟದ ಪುನರ್ವಸತಿ ಜೊತೆ ಜೀತದಾಳುಗಳು ತಮ್ಮ ಹಕ್ಕುಗಳ ಬಗ್ಗೆ ಅರಿವು ಪಡೆಯುವಂತೆ ಅವರಿಗೆ ಮಾನಸಿಕ ಪುನರ್ವಸತಿಯೂ ಆಗಬೇಕು. ಇಂತಹ ಪ್ರಯತ್ನಗಳನ್ನು ಸಂಘಟನಾತ್ಮಕವಾಗಿ ಮಾಡುವುದು ಒಳ್ಳೆಯದು. ಅಂದರೆ ಬಿಡುಗಡೆ ಹೊಂದಿದ ಜೀತದಾಳುಗಳ ಬೇರೆಬೇರೆ ತರಹದ ಗುಂಪುಗಳನ್ನು ಕಟ್ಟಿ ಅವನ್ನು ಶ್ರದ್ಧೆಯಿಂದ ಬೆಳೆಸಬೇಕು. ಅವು ಕಾರ್ಮಿಕ ಒಕ್ಕೂಟಗಳಾಗಬಹುದು; ಸಹಕಾರ ಸಂಘಗಳಾಗಬಹುದು; ಸ್ವ ಸಹಾಯ ಗುಂಪುಗಳಾಗಬಹುದು; ಅಥವಾ ಸ್ವಯಂ ಸೇವಾ ಸಂಸ್ಥೆಗಳಾಗಬಹುದು. ಸಂಘಟನಾತ್ಮಕ ಪ್ರಯತ್ನದಲ್ಲಿಯೂ ಕೇವಲ ಜೀತದಾಳುಗಳನ್ನು ನಿರ್ದಿಷ್ಟ ವ್ಯಕ್ತಿಯಾಗಿ ಪರಿಗಣಿಸುವುದರ ಜೊತೆಗೆ ಅವರ ಇಡೀ ಕುಟುಂಬವನ್ನೇ ಲೆಕ್ಕಕ್ಕೆ ತೆಗೆದುಕೊಳ್ಳುವುದು ಉತ್ತಮ. ಅದರಲ್ಲಿಯೂ ಕುಟುಂಬದಲ್ಲಿಯ ಮಕ್ಕಳ ಬಗ್ಗೆ ವಿಶೇಷ ಗಮನ ಹರಿಸ ಬೇಕು.

1) ಕೇಂದ್ರ ಕಾರ್ಮಿಕ ಇಲಾಖೆಯ ಕಾರ್ಯದರ್ಶಿಗಳು 1982ರ ಸಪ್ಟೆಂಬರ್ 2ರಲ್ಲೇ ಕಳುಹಿಸಿದ ಸುತ್ತೋಲೆಯು ಆರ್ಥಿಕ ಪುನರ್ವಸತಿಯ ಜೊತೆಗೆ ಮಾನಸಿಕ ಪುನರ್ವಸತಿಯ ಮಹತ್ವವನ್ನು ಎತ್ತಿ ಹಿಡಿಯುತ್ತದೆ. ಮಾನಸಿಕ ಪುನರ್ವಸತಿಯು ಜೀತದಾಳುವಿಗೆ ತೀರ ಅವಶ್ಯಕ. ಇಷ್ಟರ ವರೆಗೆ ಅವರು ದಮನ ಹಾಗೂ ದಾಸ್ಯದ ಪ್ರಪಂಚಕ್ಕೆ ಅಂಟಿಕೊಂಡಿದ್ದರು. ತನ್ನ ಹಕ್ಕುಗಳ ಬಗ್ಗೆ ಪೂರ್ತಿ ಕತ್ತಲಲ್ಲಿದ್ದರು. ಸಾಲವೇ ಅವರ ವಿಧಿಯಾಗಿತ್ತು. ಇಂತಹ ಪರಿಸ್ಥಿಯಲ್ಲಿರುವ ಅವರಿಗೆ ತಾನು ಒಬ್ಬ ಮನುಷ್ಯ ಎಂಬುದನ್ನು ಖಾತ್ರಿಪಡಿಸುವ ಅನಿವಾರ್ಯತೆ ಇದೆ. ಆರ್ಥಿಕ ಜೀವನೋಪಾಯ ಪಡೆಯುವುದು ತನ್ನ ಹಕ್ಕು; ಯಾವುದೇ ಕಾರಣಕ್ಕೂ ತಾನು ವಿಪರೀತ ಬಡ್ಡಿಗೆ ಸಾಲನೀಡುವ ಮಾಲಿಕರ ಮೇಲೆ ಅವಲಂಬಿತವಾಗಿರಬೇಕೆಂದಿಲ್ಲ ಎಂಬುದನ್ನು ಅವರಿಗೆ ಧೃಡಪಡಿಸಬೇಕು. (ಬಿಡುಗಡೆಗೊಳಿಸಿದ ಜೀತದಾಳುಗಳ ಪುನರ್ವಸತಿಗೆ ಒಂದು ನೀಲನಕ್ಷೆ, ಕಾರ್ಮಿಕ ಇಲಾಖೆ, ಭಾರತ ಸರ್ಕಾರ, ನವದೆಹಲಿ, 2 ಸೆಪ್ಟೆಂಬರ್ 1982 ನೋಡಿ, ಇನ್ನು ಮುಂದೆ ಇದನ್ನು "ನೀಲನಕ್ಷೆ" ಎಂದು ಉದ್ಧರಿಸಲಾಗುವುದು)

3. ದಿನ ನಿತ್ಯ ಅವಶ್ಯಕತೆಗಳಿಗೆ ಬೇಕಾಗುವ ಹಣದ ಪೂರೈಕೆ: ಬಿಡುಗಡೆ ಹೊಂದಿದ ಜೀತದಾಳುಗಳ ದಿನನಿತ್ಯದ ಅವಶ್ಯಕತೆಗಳ ಪೂರೈಕೆಗೆ ಹಣವನ್ನು ಸುಲಭ ರೀತಿಯಲ್ಲಿ ಒದಗಿಸುವುದು ಜರೂರಾಗಿ ಆಗಬೇಕಾದ ಕೆಲಸವಾಗಿದೆ. ಏಕೆಂದರೆ ಆ ರೀತಿಯ ಹಣದ ಕೊರತೆಯಿಂದಲೇ ಸಮಾಜದಲ್ಲಿಯ ತೀರ ಬಡಜನರು ಜೀತದ ಬಲೆಗೆ ಬೀಳುತ್ತಾರೆ. ಆದ್ದರಿಂದ ಉತ್ತಮ ಪುನವರ್ಸತಿ ಕಾರ್ಯವು ಬಿಡುಗಡೆ ಹೊಂದಿದ ಜೀತದಾಳುಗಳ ದಿನ ನಿತ್ಯದ ಖರ್ಚಿಗೆ ಹಣ ಪೂರೈಸುವಂತೆ ಮಾಡಬೇಕು. ಈ ನಿಟ್ಟಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ನಾಬಾರ್ಡ್ ಮತ್ತು ರಿಸರ್ವ್ ಬ್ಯಾಂಕ್‌ಗಳ ಪಾತ್ರ ಮಹತ್ವದ್ದು. ಅವುಗಳು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಜೊತೆಗೆ ಆಧಾರ ಒದಗಿಸದೇ ಅಥವಾ ತೀರಾ ಕಡಿಮೆ ಬಡ್ಡಿದರದಲ್ಲಿ ದಿನ ನಿತ್ಯ ಅನುಭೋಗಕ್ಕೆ ದುರ್ಬಲ ವರ್ಗದ ಜನರಿಗೆ ಸಣ್ಣ ಪ್ರಮಾಣದ ಹಣ ಸಹಾಯ ನೀಡುವ ಯೋಜನೆಗಳನ್ನು ಹಾಕಿಕೊಳ್ಳಬೇಕು.

4. ಬೇರೆ ಬೇರೆ ಮೂಲಗಳಿಂದ ಸಿಗುವ ಸೌಲಭ್ಯಗಳನ್ನು ಒಗ್ಗೂಡಿಸಿ ಕೊಡುವ ದೃಷ್ಟಿ: ಜೀತದಾಳುಗಳ ಆರ್ಥಿಕ ಅಭಿವೃದ್ಧಿಯನ್ನು ಕೇಪುಯೋಗೆ ಮಾತ್ರ ಸೀಮಿತಗೊಳಿಸಬಾರದು. ಸರ್ಕಾರದ ಬೇರೆ ಬೇರೆ ಇಲಾಖೆಗಳು ಮತ್ತು ಸರ್ಕಾರಿ ಸ್ವಾಯತ್ತ ಸಂಸ್ಥೆಗಳಿಂದ ಸಿಗುವ ವಿವಿಧ ಯೋಜನೆಗಳಲ್ಲಿ ಸಿಗುವ ವಿವಿಧ ಸೌಲಭ್ಯಗಳನ್ನು ಒಟ್ಟಿಗೆ ಸೇರಿಸಿ ಕೊಡಬೇಕು. ಉದಾಹರಣೆಗಾಗಿ ವಸತಿ ಸೌಲಭ್ಯಗಳು, ಸಾಲ ಸೌಲಭ್ಯಗಳು ಇತ್ಯಾದಿ. ಆರ್ಥಿಕ ಅಭಿವೃದ್ಧಿ ಜೊತೆಗೆ ಸಾಮಾಜಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಗೂ ವಿವಿಧ ಯೋಜನೆಗಳಿಂದ ಪ್ರಯೋಜನಗಳನ್ನು ಪಡೆಯಬೇಕು. ಆ ಎಲ್ಲಾ

ಯೋಜನೆಗಳಲ್ಲಿ ಫಲಾನುಭವಿಗಳನ್ನು ಗುರುತಿಸುವಾಗ ಜೀತದಾಳುಗಳಿಗೆ ಪ್ರಥಮ ಆದ್ಯತೆ ಸಿಗಬೇಕು.

5. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಒಗ್ಗೂಡುವಿಕೆ: ಒಗ್ಗೂಡುವಿಕೆ ಕೇವಲ ಸರ್ಕಾರಿ ಇಲಾಖೆಗಳಲ್ಲಿ ಮಾತ್ರವಲ್ಲ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳಲ್ಲಿಯೂ ಇರಬೇಕು. ಸರ್ಕಾರೇತರ ಸಂಸ್ಥೆಗಳು ಅವುಗಳಲ್ಲಿಯೂ ಬಿಡುಗಡೆ ಹೊಂದಿದ ಜೀತದಾಳುಗಳ ನೇತೃತ್ವದಲ್ಲಿರುವ ಸಂಘಗಳು, ಭೂರಹಿತ ಕಾರ್ಮಿಕರು, ದಲಿತರು ಮತ್ತು ಮೂಲನಿವಾಸಿಗಳ ಸಂಘಟನೆಗಳನ್ನು ಜೀತ ನಿರ್ಮೂಲನೆಯ ಪ್ರಮುಖ ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಳ್ಳಬೇಕು. ಪ್ರತ್ಯೇಕವಾಗಿ ಜೀತದಾಳುಗಳ ಶಿಕ್ಷಣ, ಆರೋಗ್ಯ ಮತ್ತು ಮಾನಸಿಕ ಪುನರ್ವಸತಿ ಕಾರ್ಯಗಳಲ್ಲಿ ಸರ್ಕಾರೇತರ ಸಂಸ್ಥೆಗಳ ನೆರವನ್ನು ಪಡೆಯುವುದು ಹೆಚ್ಚು ಸೂಕ್ತ.

6. ಜೀತದಾಳುಗಳ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಕೋನದೊಂದಿಗಿನ ಪುನರ್ವಸತಿ ಕಾರ್ಯವನ್ನು ಜೀತ ತಡೆಗಟ್ಟುವ ಪ್ರಯತ್ನಗಳೊಂದಿಗೆ ಸಮೀಕರಿಸುವುದು.

ಜೀತ ಕೇವಲ ಆರ್ಥಿಕ ಶೋಷಣೆ ಮಾತ್ರವಲ್ಲ. ಅದರ ಜೊತೆಗೆ ಸಾಮಾಜಿಕ ಅವಮಾನ, ಮಾನಸಿಕ ಕೀಳರಿಮೆ, ಅಧಿಕಾರದಿಂದ ವಂಚನೆ ಮತ್ತು ಸಾಂಸ್ಕೃತಿಕವಾಗಿ ತುಚ್ಚೀಕರಣಗಳೂ ಜೀತ ಬದುಕನ್ನು ಆವರಿಸುತ್ತವೆ. ಇವೆಲ್ಲವೂ ಶತಶತಮಾನಗಳ ಜಾತಿ ದಬ್ಬಾಳಿಕೆ ಮತ್ತು ಮೂಲನಿವಾಸಿಗಳ ಪ್ರತ್ಯೇಕತೆ ಮತ್ತು ಶೋಷಣೆಗಳ ಪ್ರಕ್ರಿಯೆಗಳೊಂದಿಗೆ ಹಾಸುಹೊಕ್ಕಾಗಿವೆ.

ಜೀತ ನಿರ್ಮೂಲನೆ ಒಂದು ಸಂಕುಚಿತ ದೃಷ್ಟಿಯ ಕೆಲಸವಲ್ಲ. ಅದು ಸಂವಿಧಾನವು ಬಯಸುವ ಸಮತಾ ಸಮಾಜವನ್ನು ಕಟ್ಟುವ ವಿಶಾಲ ಹಂಬಲದಿಂದ ಮೂಡಿಬರಬೇಕು. ಜೊತೆಗೆ ಜೀತ ಪುನರ್ವಸತಿಯ ಪ್ರಯತ್ನಗಳನ್ನು ಜೀತ ತಡೆಗಟ್ಟುವಲ್ಲಿ ಸಹಕಾರಿಯಾಗುವ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಕೋನದೊಂದಿಗೆ ಬೆಸೆಯಬೇಕು. ಜೀತವನ್ನು ತಡೆಗಟ್ಟುವಲ್ಲಿ ವಿವಿಧ ಹಕ್ಕುಗಳನ್ನು ಪಡೆಯುವುದು ಮುಖ್ಯ ಗುರಿಯಾಗಬೇಕು. ಆದ್ದರಿಂದ ಸಮಾಜದಲ್ಲಿ ಎಲ್ಲರಿಗೂ ಮೂಲಭೂತ ಹಕ್ಕುಗಳನ್ನು ಪಡೆಯುವಂತೆ ಮಾಡುವುದು; ಎಲ್ಲರೂ ನೆಮ್ಮದಿಯಲ್ಲಿ ಬದುಕುವಂತಾಗುವ ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳುವುದು ಜೀತ ಪುನರ್ವಸತಿಯ ಭಾಗಗಳೆಂದೇ ಪರಿಗಣಿಸಬೇಕು ("ನೀಲನಕ್ಷೆ" ನೋಡಿ)

**ಉಪಸಂಹಾರ**

ಈ ಹಂತದಲ್ಲಿ ಸರ್ವೋಚ್ಛ ನ್ಯಾಯಾಲಯವು, ಬಂಧನ ಮುಕ್ತಿ ಮೋರ್ಚಾ ವಿರುದ್ಧ ಯೂನಿಯನ್ ಆಫ್ ಇಂಡಿಯಾ ಮತ್ತಿತರರು ಎಂಬ ಪ್ರಕರಣದಲ್ಲಿ ತನ್ನ ತೀರ್ಪಿನಲ್ಲಿ ದಾಖಲಿಸಿದ ಅಭಿಪ್ರಾಯಗಳನ್ನು ನೆನಪಿಗೆ ತರುವುದು ಒಳಿತು: "ಆಡಳಿತವು ಜೀತದ ವಾಸ್ತವ್ಯವನ್ನು ಒಪ್ಪಿಕೊಳ್ಳಲು ಏಕೆ ನಾಚುತ್ತದೆ ಎಂಬುದನ್ನು ನಮಗೆ ಅರ್ಥ ಮಾಡಿಕೊಳ್ಳಲು ಅಗುವುದಿಲ್ಲ. ಏಕೆಂದರೆ ಜೀತದ ವಾಸ್ತವ್ಯ ಆಡಳಿತಕ್ಕೆ ಕಳಂಕವಲ್ಲ. ಆಡಳಿತಕ್ಕೆ ನಿಜವಾಗಿ ಕಳಂಕ ತರುವ ಅಂಶವೇನೆಂದರೆ ಜೀತವನ್ನು ಒಪ್ಪಿಕೊಳ್ಳದೇ ಜೀತದಾಳುಗಳನ್ನು ಶೀಘ್ರಗತಿಯಲ್ಲಿ ಗುರುತಿಸಿ, ಬಿಡುಗಡೆಗೊಳಿಸಿ ಮತ್ತು ಶಾಶ್ವತವಾಗಿ ಪುನರ್ವಸತಿಗೊಳಿಸಿ, ಜೀತಪದ್ಧತಿಯನ್ನು ಕೊನೆಗಾಣಿಸಲು ಮಾಡಬೇಕಾದ ಎಲ್ಲಾ ಕೆಲಸಗಳನ್ನು ಮಾಡಲು ನಿರಾಕರಿಸುವುದು. ಆಡಳಿತಕ್ಕೆ ಅಗತ್ಯವಾಗಿ ಇರಬೇಕಾದ ಸಂಗತಿ ಏನೆಂದರೆ ಜೀತದಾಳುಗಳನ್ನು ಗುರುತಿಸಿ, ಬಿಡುಗೊಡೆಗೊಳಿಸಿ, ಪುನರ್ವಸತಿಗೊಳಿಸಲು ಮತ್ತು ನಮ್ಮ ರಾಷ್ಟ್ರೀಯ ಜೀವನದಲ್ಲಿ ಕಪ್ಪು ಚುಕ್ಕೆಯಂತಿರುವ ಈ ಅಮಾನವೀಯ ಆಚರಣೆಯನ್ನು ನಿರ್ನಾಮಗೊಳಿಸಲು ಬೇಕಾದ ಇಚ್ಛಾಶಕ್ತಿ, ಕ್ರಿಯಾಶಕ್ತಿ ಮತ್ತು ಸಾಮಾಜಿಕ ಬದ್ಧತೆ." (ಎಐಆರ್ 1984 ಎಸ್‌ಸಿ 802, ಪ್ಯಾರಾ ನಂ. 25)

# ಅನುಬಂಧ VII

## ಬಿಟ್ಟಿ ಚಾಕ್ರಿಯಲ್ಲಿ ತೊಡಗಿರುವವರ ವೈಯಕ್ತಿಕ ಹಾಗೂ ಕೌಟುಂಬಿಕ ವಿವರಗಳು

**I. ಕುಟುಂಬದ ವಿವರಗಳು:**[3–11ರ ತನಕದ ಶಿರ್ಷಿಕೆಗಳಿಗೆ ಉತ್ತರ ಕೊಡುವಾಗ ಕೋಷ್ಟಕದ ಕೆಳಗೆ ಕೊಟ್ಟಿರುವ ವಿವರಗಳನ್ನುಗಮನಿಸಿ]

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| ಕ್ರಸ | ಹೆಸರು–ತಂದೆ ಹೆಸರು | ಸಂಬಂಧ | ವ | ಲಿ | ವಿದ್ಯೆ | ಜಾತಿ | ಕೆಲಸ | ಕೂಲಿ/ಸಂಬಳ ದಿನಕ್ಕೆ/ತಿಂಗಳಿಗೆ | ವರ್ಷಕ್ಕೆ ಕೂಲಿ ಕೆಲಸ ಸಿಗುವ ದಿನಗಳು | ಕೆಲಸ ಮಾಡುವಜಾಗ |
| 1) | | | | | | | | | | |
| 2) | | | | | | | | | | |
| 3) | | | | | | | | | | |
| 4) | | | | | | | | | | |
| 5) | | | | | | | | | | |
| 6) | | | | | | | | | | |
| 7) | | | | | | | | | | |
| 8) | | | | | | | | | | |

**3 ಸಂಬಂಧ:** ಯಜಮಾನ/ನಿ, ಹೆಂಡತಿ, ಮಗ, ಮಗಳು, ಸೊಸೆ, ಮೊಮ್ಮಗ, ಮೊಮ್ಮಗಳು, ಅಳಿಯ, ಮೊಮ್ಮಗ, ಮೊಮ್ಮಗಳು, ತಂದೆ, ತಾಯಿ, ಗಂಡನ ಅಣ್ಣ–ತಮ್ಮ (ಭಾವ–ಮೈದ), ಇತ್ಯಾದಿ. **4ವ = ವಯಸ್ಸು:** ಪೂರ್ತಿಯಾದ ವರ್ಷ ಮತ್ತು ತಿಂಗಳುಗಳು **5ಲಿ = ಲಿಂಗ:** ಗಂಡು/ ಹೆಣ್ಣು

**6 ವಿದ್ಯೆಗೆ ಈ ಕೆಳಗಿನ ಒಂದು ಸಂಕೇತ ಬಳಸಿ:**

0 ಶಾಲೆಗೆ ಹೋಗಿಲ್ಲ 1 – 1ನೇ ಕ್ಲಾಸ್ 2 – 2ನೇ ಕ್ಲಾಸ್ 3 – 3ನೇ ಕ್ಲಾಸ್ 4 – 4ನೇ ಕ್ಲಾಸ್ 5 – 5ನೇ ಕ್ಲಾಸ್ 6 – 6ನೇ ಕ್ಲಾಸ್ 7 – 7ನೇ ಕ್ಲಾಸ್ 8 – 8ನೇ ಕ್ಲಾಸ್ 9 – 9ನೇ ಕ್ಲಾಸ್ 10 – 10ನೇ ಕ್ಲಾಸ್ 11 – 11ನೇ ಕ್ಲಾಸ್(PUC I)12 – 12ನೇ ಕ್ಲಾಸ್ (PUC II)13 – (BA I)14–(BA II)15 – (BA III)16 – (ITI I)17 – (ITI II)18 -ಡಿಪ್ಲೋಮ I19 - ಡಿಪ್ಲೋಮ II 20- ಡಿಪ್ಲೋಮ III 21 - DED 22 – BED 23. ವಯಸ್ಕರ ಶಿಕ್ಷಣ ಪಡೆದಿದ್ದೇನೆ 24 ಶಾಲೆಗೆ ಹೋಗದೇ, ವಯಸ್ಕರ ಶಿಕ್ಷಣ ಪಡೆಯದೇ ಹೆಸರು ಮಾತ್ರ ಬರೆಯುತ್ತೇನೆ 25. ಶಾಲೆಗೆ ಹೋಗದೇ, ವಯಸ್ಕರ ಶಿಕ್ಷಣ ಪಡೆಯದೇ ಓದುತ್ತೇನೆ, ಬರೆಯುತ್ತೇನೆ 26. ಅಂಗನವಾಡಿ

**7 ಜಾತಿ: SC/STಯಲ್ಲಿ ಉಪಜಾತಿ ನಮೂದಿಸಬೇಕು**

**8 ಕೆಲಸಕ್ಕೆಈ ಕೆಳಗಿನ ಒಂದು ಸಂಕೇತ ಬಳಸಿ:**

1. ಬಿಟ್ಟಿ ಚಾಕ್ರಿ 2. ಜೀತ 3. ದಿನಗೂಲಿ ಕೆಲಸ 4. ಸ್ವಂತ ಕೆಲಸ – ಜಮೀನು 5. ಸ್ವಂತ ಕೆಲಸ ಗೂಡು ಅಂಗಡಿ 6. ಸ್ವಂತ ಕೆಲಸ – ಹಸು / ಎಮ್ಮೆ ಸಾಕುವುದು, ಹಾಲು ಕರೆಯುವುದು 7. ಸ್ವಂತ ಕೆಲಸ – ಕುರಿ / ಮೇಕೆ ಸಾಕುವುದು 8. ಸ್ವಂತ ಕೆಲಸ – ಕೋಳಿ ಸಾಕುವುದು 9. ಸ್ವಂತ ಕೆಲಸ – ಹಂದಿ ಸಾಕುವುದು 10. ಮನೆಯಲ್ಲಿ ಕೆಲಸ 11. ಜಮೀನು ಮತ್ತು ಕೂಲಿ 12. ಬಿಟ್ಟಿ ಚಾಕ್ರಿ ಮತ್ತು ಕೂಲಿ 13. ಖಾಸಗಿ ನೌಕರಿ [ವಿವರ ಕೊಡಿ]. 14. ಸರ್ಕಾರಿ ನೌಕರಿ [ವಿವರ ಕೊಡಿ]15. ಬಿಟ್ಟಿ ಚಾಕ್ರಿ–ಮನೆಕೆಲಸ 16. ಬಿಟ್ಟಿ ಚಾಕ್ರಿ– ಸಾಕು ಪ್ರಾಣಿ 17. ವಿದ್ಯಾರ್ಥಿ 18. ದಿನಗೂಲಿ– ಗ್ಯಾರೆಜ್ 19. ರೋಗಿ

**9 ಕೂಲಿಯ/ಸಂಬಳದ ಬಗ್ಗೆ ತಿಳಿಸುವಾಗ ಈ ಕೆಳಗಿನ ವಿಷಯಗಳನ್ನು ಗಮನಿಸಿ:**

ದಿನ/ತಿಂಗಳು: ದಿನಗೂಲಿಯಾದರೆ ದಿನ ಲೆಕ್ಕದಲ್ಲಿ ಎಷ್ಟು ಕೂಲಿ ಅಥವಾ ವಾರ ಲೆಕ್ಕದಲ್ಲಿ ಎಷ್ಟು ಕೂಲಿ ಸಿಗುತ್ತದೆ ಎಂಬುದನ್ನು ತಿಳಿಸಿ. ತಿಂಗಳ ಲೆಕ್ಕದಲ್ಲಿ ಸಂಬಳ ಸಿಗುತ್ತಿದ್ದರೆ ತಿಂಗಳ ಸಂಬಳ ಎಷ್ಟು ಎಂಬುದನ್ನು ತಿಳಿಸಿ.

**10 ವರ್ಷಕ್ಕೆ ಕೂಲಿ ಕೆಲಸ ಸಿಗುವ ದಿನಗಳು:** ವರ್ಷಕ್ಕೆ ಎಷ್ಟು ದಿನ ಕೆಲಸ ಸಿಗುತ್ತದೆ ಎಂಬುದನ್ನು ತಿಳಿಸಿ. ಎಷ್ಟು ದಿನ ಕೂಲಿ ಕೆಲಸ ಸಿಗುವುದಿಲ್ಲ ಎಂಬುದನ್ನು ತಿಳಿಸಿ.**ಕೂಲಿ ಕೆಲಸದ ಸಮಯ ಮತ್ತು ಕಾಲ ತಿಳಿಸಿ:**

**11 ಕೆಲಸದ ಜಾಗ:** – ಸ್ವಂತ ಊರಾದರೆ ಸ್ವಂತ ಊರಲ್ಲಿ ಎಂದು ತಿಳಿಸಿ. ಸ್ವಂತ ಊರು ಬಿಟ್ಟು ಬೇರೆ ಊರಾದರೆ, ಆ ಊರ ಹೆಸರು, ಬೇರೆ ತಾಲೂಕು, ಜಿಲ್ಲೆ, ರಾಜ್ಯವಾದರೆ ಅವುಗಳನ್ನೂ ತಿಳಿಸಿ; ಸ್ವಂತ ಊರಿಂದ ಅದು ಎಷ್ಟು ದೂರ ಎಂಬುದನ್ನು ತಿಳಿಸಿ.

**ಬೇರೆ ಊರಲ್ಲಿ ಕೆಲಸ ಮಾಡುವುದಾದರೆ ಯಾವ್ಯಾವಾಗ ಮನೆಗೆ ಬರುತ್ತಾರೆ?ಬೇರೆ ಊರಲ್ಲಿ ಎಲ್ಲಿ ಉಳಕೊಳ್ಳುತ್ತಾರೆ? ಊಟ ಹೇಗೆ ನಿಭಾಯಿಸುತ್ತಾರೆ? ಎಂಬುದನ್ನು ತಿಳಿಸಿ:**

**II. ಸ್ವಂತ ಬಿಟ್ಟಿ ಚಾಕ್ರಿ ಮಾಡುತ್ತಿದ್ದರೆ:**

**II.1 ಕೆಲಸದ ಸಮಯ ಮತ್ತು ಕಾಲ ತಿಳಿಸಿ:**

**II.1.1** ಕೇವಲ ಮುಂಜಾನೆ-ಬೆಳಿಗ್ಗೆ, ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು:

**II.1.2** ಮುಂಜಾನೆ-ಬೆಳಿಗ್ಗೆ ಮತ್ತು ಸಂಜೆ: ಮುಂಜಾನೆ-ಬೆಳಿಗ್ಗೆ ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು:
ಸಂಜೆ ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು:

**II.1.3** ಮುಂಜಾನೆ ಮತ್ತು ಇಡೀ ದಿನ: ಮುಂಜಾನೆ ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು:
ಇಡೀ ದಿನಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು:

**II.1.4** ಮುಂಜಾನೆ-ಬೆಳಿಗ್ಗೆ ಬಿಟ್ಟಿ ಚಾಕ್ರಿ ಮತ್ತು ಅದೇ ಮನೆಯಲ್ಲಿ ದಿನಗೂಲಿ: ಮುಂಜಾನೆ-ಬೆಳಿಗ್ಗೆ ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು: , ದಿನಗೂಲಿಯ ಸಮಯ ಮತ್ತು ಒಟ್ಟು ಗಂಟೆಗಳು:

**II.1.5** ಮುಂಜಾನೆ-ಬೆಳಿಗ್ಗೆ ಬಿಟ್ಟಿ ಚಾಕ್ರಿ ಮತ್ತು ಬೇರೆ ಮನೆಯಲ್ಲಿ ದಿನಗೂಲಿ: ಮುಂಜಾನೆ-ಬೆಳಿಗ್ಗೆ ಕೆಲಸ ಮಾಡುವ ಸಮಯ ಮತ್ತು ಒಟ್ಟು ಗಂಟೆಗಳು: , ದಿನಗೂಲಿಯ ಸಮಯ ಮತ್ತು ಒಟ್ಟು ಗಂಟೆಗಳು:

**II.2 ಬಿಟ್ಟಿ ಚಾಕ್ರಿಯಲ್ಲಿ ಏನೇನು ಕೆಲಸ ಮಾಡಬೇಕಾಗುತ್ತದೆ?**

**II.2.1** ಮುಂಜಾನೆ-ಬೆಳಿಗ್ಗೆಯಲ್ಲಿ:

**II.2.2** ಸಂಜೆಯೂ ಬಿಟ್ಟಿ ಚಾಕ್ರಿ ಮಾಡುತ್ತಿದ್ದರೆ ಸಂಜೆಯಲ್ಲಿ:

**II.2.3** ದಿನವಿಡೀ ಕೂಡಾ ಬಿಟ್ಟಿ ಚಾಕ್ರಿ ಮಾಡುತ್ತಿದ್ದರೆ ದಿನದಲ್ಲಿ:

**II.2.4ದಿನನಿತ್ಯದ ಬಿಟ್ಟಿ ಚಾಕ್ರಿ ಜೊತೆ ವರ್ಷದ ಮಧ್ಯೆ, ಬೇರೆ ಬೇರೆ ಸಂದರ್ಭಗಳಲ್ಲಿ ಯಜಮಾನನಿಗೆ ಏನೇನು ಕೆಲಸ ಮಾಡಬೇಕಾಗುತ್ತದೆ?**

| ಮದುವೆ ಆದಾಗ: | ಸಾವು ಆದಾಗ: | ತಿಥಿ ಆದಾಗ: | ಇನ್ನಿತರೆಸಂದರ್ಭ 1: | ಇನ್ನಿತರೆಸಂದರ್ಭ 2: | ಇನ್ನಿತರೆಸಂದರ್ಭ3: |
|---|---|---|---|---|---|
| | | | | | |

**II.3ಬಿಟ್ಟಿ ಚಾಕ್ರಿ ಮಾಡಿದರೆ ಸಿಗುವ ಸೌಲಭ್ಯಗಳು:**

| ದಿನ ನಿತ್ಯ: | ವರ್ಷದಲ್ಲಿ: | ಮದುವೆ ಆದಾಗ: | ಸಾವು ಆದಾಗ: | ತಿಥಿ ಆದಾಗ: | ಸಂದರ್ಭ 1: | ಸಂದರ್ಭ 2: | ಸಂದರ್ಭ3: |
|---|---|---|---|---|---|---|---|
| | | | | | | | |

**II.4** **ಬಿಟ್ಟಿ ಚಾಕ್ರಿ ಮಾಡುವ ಯಜಮಾನನ ಹೆಸರು, ವಯಸ್ಸು, ಜಾತಿ, ಭೂಮಿ ಮತ್ತಿತರೆ ವಿವರ ಕೊಡಿ:**

| ಯಜಮಾನನ ಹೆಸರು – ತಂದೆ ಹೆಸರು | ವಯಸ್ಸು | ವಿದ್ಯೆ | ಜಾತಿ | ಭೂಮಿ – ಎಕ್ರೆ | ಮನೆಯ ವಿವರ |
|---|---|---|---|---|---|
| | | | | | |

**III.** **ದಿನಗೂಲಿ ಮಾಡುವ ಯಜಮಾನ ಬೇರೆ ಆಗಿದ್ದರೆ ಅವರ ಹೆಸರು, ವಯಸ್ಸು, ಜಾತಿ, ಭೂಮಿ ಮತ್ತಿತರೆ ವಿವರ ಕೊಡಿ:**

| ಯಜಮಾನನ ಹೆಸರು – ತಂದೆ ಹೆಸರು | ವಯಸ್ಸು | ವಿದ್ಯೆ | ಜಾತಿ | ಭೂಮಿ – ಎಕ್ರೆ | ಮನೆಯ ವಿವರ |
|---|---|---|---|---|---|
| | | | | | |

**IV.** ಬಿಟ್ಟಿ ಚಾಕ್ರಿಯನ್ನು ಒಬ್ಬನೇ/ಒಬ್ಬಾಕೆಯೇ ಮಾಡುತ್ತಾರಾ ಅಥವಾ ಕುಟುಂಬದ ಬೇರೆ ಮಂದಿ ಬದಲಾಗಿ ಮಾಡುತ್ತಾರ? ಯಾರು ಮಾಡುತ್ತಾರೆ? ಯವ್ಯಾವಾಗ ಮಾಡುತ್ತಾರೆ?

**V.** **ಕುಟುಂಬದಲ್ಲಿ ಬಿಟ್ಟಿ ಚಾಕ್ರಿಯ ಇತಿಹಾಸ, ವಿವರ ಕೊಡಿ:**

**V.1** **ಎಷ್ಟು ಕಾಲದಿಂದ ಮಾಡುತ್ತಿದ್ದಾರೆ?:**

**V.2** **ದಾಯಾದಿ ಕುಟುಂಬಗಳಲ್ಲಿ ಪಾಳಿಯಲ್ಲಿ ಬಿಟ್ಟಿ ಚಾಕ್ರಿ ಮಾಡುವ ಪದ್ಧತಿ ಇದೆಯೇ ವಿವರಿಸಿ:** [ಪಾಳಿಯಲ್ಲಿರುವ ಕುಟುಂಬಗಳ ವಿವರ ಕೊಡಿ; ಪಾಳಿ ಎಷ್ಟು ವರ್ಷಕ್ಕೊಮ್ಮೆ? ಮೊದಲು ಒಟ್ಟಾಗಿದ್ದು/ಪಾಳಿಯಲ್ಲಿದ್ದು ಈಗ ಸ್ವತಂತ್ರವಾಗಿ ಬಿಟ್ಟಿ ಚಾಕ್ರಿ ಮಾಡುತ್ತಿದ್ದಾರೆಯೇ? ಮೊದಲು ಒಬ್ಬನೇ ಯಜಮಾನನಲ್ಲಿ ಬಿಟ್ಟಿಚಾಕ್ರಿ ಮಾಡುತ್ತಿದ್ದು , ಬಿಟ್ಟಿಚಾಕ್ರಿ ಮಾಡುವ ಮನೆಗಳು ಒಟ್ಟಿಗಿದ್ದು, ಯಜಮಾನನ ಮನೆಯಲ್ಲಿ ಭಾಗವಾಗಿ ಬೇರೆ ಬೇರೆ ಮನೆಗಳಾದಾಗ, ಬಿಟ್ಟಿ ಚಾಕ್ರಿ ಮಾಡುವ ಕುಟುಂಬಗಳೂ ಬೇರೆ ಬೇರೆಯಾಗಿ ಬೇರೆ ಬೇರೆ ಯಜಮಾನರಲ್ಲಿ ಈಗ ಬಿಟ್ಟಿ ಚಾಕ್ರಿ ಮಾಡುತ್ತಿದ್ದಾರೆಯೇ? –ಯಾವಾಗಿಂದ?]

**V.3** **ಊರ ಜಾತ್ರೆ / ಹಬ್ಬಗಳಲ್ಲಿ ಬೇರೆಬೇರೆ ಜಾತಿಗಳು ನೀಡುವ ಸೇವೆಗೆ ಏನೆಂದು ಹೆಸರು? ಅವರು ಮಾಡುವ ಸೇವೆಗಳು ಯಾವುವು?**

**V.4** ಊರ ಜಾತ್ರೆ / ಹಬ್ಬಗಳಲ್ಲಿ ದಲಿತರು ನೀಡುವ ಸೇವೆಗೆ ಏನೆಂದು ಕರೆಯುತ್ತಾರೆ? ದಲಿತರಲ್ಲಿಯ ಬೇರೆ ಬೇರೆ ಉಪಜಾತಿಗಳಿಗೆ ತಕ್ಕಂತೆ ಮಾಡುವ ಸೇವೆಗಳು ಯಾವುವು? ಪ್ರತಿ ಉಪಜಾತಿಯ ಸೇವೆಯ ವಿವರ ಕೊಡಿ:

**V.5** ಈಗ ಬಿಟ್ಟಿ ಚಾಕ್ರಿ ಮಾಡದೇ ಇದ್ದ ಮನೆಗಳಲ್ಲಿ ಬಿಟ್ಟಿ ಚಾಕ್ರಿಯ ಇತಿಹಾಸವಿದ್ದರೆ, ವಿವರ ಕೊಡಿ: ಎಷ್ಟು ವರ್ಷದ ಹಿಂದೆ ಮಾಡಿದ್ದರು? ಎಷ್ಟು ಕಾಲದಿಂದ ಮಾಡುತ್ತಿದ್ದರು? ಯಾರಿಗೆ ಮಾಡುತ್ತಿದ್ದರು? ಏಕೆ ಮತ್ತು ಹೇಗೆ ನಿಲ್ಲಿಸಿದರು?

**V.6** ಬಿಟ್ಟಿ ಚಾಕ್ರಿ ಬಿಟ್ಟ ಕಾರಣಗಳು:

**VI.** ಬಿಟ್ಟಿ ಚಾಕ್ರಿ ಮಾಡುವಾಗ ಅನುಭವಿಸಿದ ಸಂಗತಿಗಳು [ಅಗತ್ಯವಿದ್ದರೆ ಹೆಚ್ಚಿನ ಹಾಳೆ ಬಳಸಿ]

**VI.1** ತುಂಬ ಬಡತನದ ಪರಿಸ್ಥಿತಿ:

**VI.2** ತುಂಬಾ ನೋವಿನ ಸಂಗತಿ:

**VI.3** ತುಂಬ ಅವಮಾನದ ಸಂಗತಿ:

**VI.4** ನಿಮಗೆ ಕನಸುಗಳು ಇದ್ದವೋ? ಅವು ನುಚ್ಚು ನೂರಾದವು ಎನಿಸಿದೆಯೇ?

**VII.**ಸ್ವಂತ ಜೀತದಾಳು ಆಗಿದ್ದರೆ:**VII.1**ಸಾಲ ತೆಗೆದುಕೊಂಡ ವರ್ಷ-ತಿಂಗಳು, ತೆಗೆದುಕೊಂಡ ಸಾಲ?ಸಾಲಕ್ಕೆ ಕಾರಣ,ಇತ್ಯಾದಿ ವಿವರಿಸಿ:

| ಕ್ರಸ | ವರ್ಷ-ತಿಂಗಳು | ತೆಗೆದು ಕೊಂಡ ಸಾಲ | ಸಾಲಕ್ಕೆ ಕಾರಣ: |
|---|---|---|---|
| 1 | | | |
| 2 | | | |
| 3 | | | |
| 4 | | | |

VII.2 ಮಾಡಬೇಕಾದ ಕೆಲಸಗಳು:

VII.3 ಸಿಗುವ ಸೌಲಭ್ಯಗಳು:

| ದಿನ ನಿತ್ಯ: | ವರ್ಷ ಮಧ್ಯ: |
|---|---|
| | |

VII.4 ಯಜಮಾನನ ಹೆಸರು, ವಯಸ್ಸು, ಜಾತಿ, ಭೂಮಿ ಮತ್ತಿತರೆ ವಿವರ ಕೊಡಿ:

| ಯಜಮಾನನ ಹೆಸರು – ತಂದೆ ಹೆಸರು | ವಯಸ್ಸು | ವಿದ್ಯೆ | ಜಾತಿ | ಭೂಮಿ – ಎಕ್ರೆ | ಮನೆಯ ವಿವರ |
|---|---|---|---|---|---|
| | | | | | |

VII.5 ಜೀತಮಾಡುವಾಗ ಅನುಭವಿಸಿದ ಸಂಗತಿಗಳು [ಅಗತ್ಯವಿದ್ದರೆ ಹೆಚ್ಚಿನ ಹಾಳೆ ಬಳಸಿ]

VII.5.1 ತುಂಬಾ ಬಡತನದ ಪರಿಸ್ಥಿತಿ:

VII.5.2 ತುಂಬಾ ನೋವಿನ ಸಂಗತಿ:

VII.5.3 ತುಂಬ ಅವಮಾನದ ಸಂಗತಿ:

VII.5.4 ನಿಮಗೆ ಕನಸುಗಳು ಇದ್ದವೋ? ಅವು ನುಚ್ಚುನೂರಾದವು ಎನಿಸಿದೆಯೇ?

VIII.ಬಿಟ್ಟ ಚಾಕ್ರಿ ಮಾಡುವವರ ಮನೆಯ ವಿವರ ಕೊಡಿ:

VIII.1

| ಸ್ವಂತ ಮನೆ | ಬಾಡಿಗೆ | ಸಂಬಂಧಿಕರದ್ದು | ಗುಡಿಸಲು | ಹಂಚಿನ ಮನೆ | ಕಲ್ನಾರು ಮನೆ | ಆರ್.ಸಿ.ಸಿ. ಮನೆ. | ಸರ್ಕಾರದಿಂದ ಮನೆ: |
|---|---|---|---|---|---|---|---|
| ಹೌದು/ಅಲ್ಲ | | | | | | | ಕಟ್ಟಿದ ವರ್ಷ:<br>ಕೊಟ್ಟ ಅನುದಾನ: |

VIII.2 ಭೂಮಿ ಇದ್ದರೆ ವಿವರ ಕೊಡಿ: 1. ವಿಧ:ವಿಸ್ತೀರ್ಣ: 2. ವಿಧ:ವಿಸ್ತೀರ್ಣ: 3. ವಿಧ:ವಿಸ್ತೀರ್ಣ:

VIII.3 ಸಾಕು ಪ್ರಾಣಿಗಳಿದ್ದರೆ ವಿವರ ಕೊಡಿ – ಯಾವುವು? ಎಷ್ಟು?:

| ಹಸು | ಎತ್ತು | ಎಮ್ಮೆ | ಕೋಣ | ಕರು | ಕುರಿ | ಮೇಕೆ | ಕೋಳಿ | ಹಂದಿ | | | |
|---|---|---|---|---|---|---|---|---|---|---|---|
| | | | | | | | | | | | |

VIII.3 ಮನೆಯಲ್ಲಿರುವ ಅಂತಸ್ತಿನ ವಸ್ತುಗಳಿದ್ದರೆ ವಿವರ ಕೊಡಿ – ಎಷ್ಟು?:

| ಸೈಕಲ್ಲು | ಬೈಕು | ಟಿವಿ | ಡಿವಿಡಿ | ಕಬಾಟು | ಮಂಚ | ಮೇಜು | ಕುರ್ಚಿ | ಚಿನ್ನ | ಬೆಳ್ಳಿ | | |
|---|---|---|---|---|---|---|---|---|---|---|---|
| | | | | | | | | | | | |

**IX.ಬಿಟ್ಟಿ ಚಾಕ್ರಿ ಮಾಡುವವರ ರಾಜಕೀಯ ಹಿನ್ನೆಲೆ:**

**IX.1** ಮಹಾ ಚುನಾವಣೆಗೆ ಓಟು ಹಾಕಿದ್ದೀರಾ?ಹೌದು/ಇಲ್ಲ. ಯಾವ ವರ್ಷ?: ರಾಜ್ಯ ಚುನಾವಣೆಗೆ ಓಟು ಹಾಕಿದ್ದೀರಾ?ಹೌದು/ಇಲ್ಲ. ಯಾವ ವರ್ಷ? ಗ್ರಾಮ ಪಂಚಾಯತಿಗೆ ಓಟು ಹಾಕಿದ್ದೀರಾ? ಹೌದು/ಇಲ್ಲ. ಯಾವ ವರ್ಷ? ತಾಲೂಕು ಪಂ.ಗೆ ಓಟು ಹಾಕಿದ್ದೀರಾ?ಹೌದು/ಇಲ್ಲ. ಯಾವ ವರ್ಷ? ಜಿಲ್ಲಾ ಪಂ.ಗೆ ಓಟು ಹಾಕಿದ್ದೀರಾ?ಹೌದು/ಇಲ್ಲ. ಯಾವ ವರ್ಷ?

**IX.2** ಗ್ರಾಮ ಪಂ. ಚುನಾವಣೆಗೆ ನಿಂತಿದ್ದೀರಾ? ಹೌದು/ಇಲ್ಲ. ಯಾವ ವರ್ಷ? ತಾಲೂಕು ಪಂ. ಚುನಾವಣೆಗೆ ನಿಂತಿದ್ದೀರಾ?ಹೌದು/ಇಲ್ಲ. ಯಾವ ವರ್ಷ? ಜಿಲ್ಲಾ ಪಂ. ಚುನಾವಣೆಗೆ ನಿಂತಿದ್ದೀರಾ?ಹೌದು/ಇಲ್ಲ. ಯಾವ ವರ್ಷ?

**IX.3** ಗ್ರಾಮ ಪಂ. ಚುನಾವಣೆಯಲ್ಲಿ ಗೆದ್ದಿದ್ದೀರಾ?ಹೌದು/ಇಲ್ಲ. ಯಾವ ವರ್ಷ? ತಾಲೂಕು ಪಂ. ಚುನಾವಣೆಯಲ್ಲಿ ಗೆದ್ದಿದ್ದೀರಾ?ಹೌದು/ಇಲ್ಲ. ಯಾವ ವರ್ಷ? ಜಿಲ್ಲಾ ಪಂ. ಚುನಾವಣೆಯಲ್ಲಿ ಗೆದ್ದಿದ್ದೀರಾ?ಹೌದು/ಇಲ್ಲ. ಯಾವ ವರ್ಷ?

**IX.4** ಯಾವುದೇ ರಾಜಕೀಯ ಪಕ್ಷದ ಸದಸ್ಯರಾಗಿದ್ದೀರಾ? ಹೌದು/ಇಲ್ಲ. ಯಾವ ವರ್ಷದಿಂದ?

**X.ಬಿಟ್ಟಿ ಚಾಕ್ರಿ ಮಾಡುವವರ ಶಿಕ್ಷಣದ ಹಿನ್ನೆಲೆ:**

**X.1** ಊರಲ್ಲಿ ಶಾಲೆ ಇದೆಯೇ: ಹೌದು/ಇಲ್ಲ. ಇದ್ದರೆ, ಶಾಲೆಯ ವಿವರ ಕೊಡಿ:

**X.2** ಇಲ್ಲದಿದ್ದರೆ, ಹತ್ತಿರ ಇರುವ ಶಾಲೆಯ ವಿವರ ಕೊಡಿ: ಅದು ಊರಿನಿಂದ ಎಷ್ಟು ದೂರ ಇದೆ?:

**X.3** ಕುಟುಂಬದಲ್ಲಿ ಯಾವ ತಲೆಮಾರಿನಿಂದ ಶಾಲೆಗೆ ಹೋಗುತ್ತಿದ್ದಾರೆ?:

**X.4** ಇಷ್ಟರ ವರೆಗೆ ಕುಟುಂಬದಲ್ಲಿ ಯಾರ್‍ಯಾರು ಶಾಲೆಗೆ ಹೋಗಿದ್ದಾರೆ?ಎಷ್ಟರ ತನಕ ಓದಿದ್ದಾರೆ?ಓದಿದವರು ಈಗ ಏನು ಮಾಡುತ್ತಿದ್ದಾರೆ?

| 1 | 2 | 3 | 4 |
|---|---|---|---|
| ಕ್ರ ಸ | ಶಾಲೆಗೆ ಹೋದವರು | ಓದಿನ ಮಟ್ಟ | ಈಗಿನ ಕೆಲಸ |
| 1) | | | |
| 2) | | | |
| 3) | | | |
| 4) | | | |
| 5) | | | |

**XI.ಬಿಟ್ಟಿ ಚಾಕ್ರಿ ಮಾಡುವವರ ಆರೋಗ್ಯದ ಹಿನ್ನೆಲೆ:**

**XI.1** ಊರಲ್ಲಿ ಸರ್ಕಾರಿ/ ಖಾಸಗಿ ಆಸ್ಪತ್ರೆ/ ಕ್ಲಿನಿಕ್ / ಇದೆಯೇ? ಇದೆ/ಇಲ್ಲ ನಾಟಿ ವೈದ್ಯರಿದ್ದಾರೆಯೇ? ಇದ್ದಾರೆ.ಇಲ್ಲ ವಿವರ ಕೊಡಿ:

**XI.2** ಊರಲ್ಲಿ ಇಲ್ಲದಿದ್ದರೆ, ಹತ್ತಿರ ಇರುವ ಆರೋಗ್ಯದ ಸೌಲಭ್ಯಗಳು ಯಾವುವು? ಎಷ್ಟು ದೂರ ಇವೆ?

**XI.3 ಕಳೆದ 20 ವರ್ಷಗಳಲ್ಲಿ ಕುಟಂಬದಲ್ಲಿ ಬಂದಿರುವ ದೊಡ್ಡ ಕಾಯಿಲೆಗಳು ಯಾವುವು?ಪ್ರತಿಯೊಂದಕ್ಕೂ ಈ ಮುಂದಿನ ವಿವರ ಕೊಡಿ:**

| ಕಾಯಿಲೆ | ಯಾರಿಗೆ ? | ಯಾವಾಗ ? | ಏನು ಚಿಕಿತ್ಸೆ ಕೊಟ್ಟದ್ದೀರಿ ? | ಎಲ್ಲಿ ಕೊಟ್ಟಿದ್ದೀರಿ ? | ಯಾರು ಕೊಟ್ಟಿದ್ದರು ? | ಆದ ಖರ್ಚುಗಳು ? | ಖರ್ಚು ಹೇಗೆ ನಿಭಾಯಿಸಿದಿರಿ ? | ಎಲ್ಲಿಂದ ಪಡೆದಿರಿ ? |
|---|---|---|---|---|---|---|---|---|
| | | | | | | | | |
| | | | | | | | | |
| | | | | | | | | |

**XII.ಬಿಟ್ಟಿ ಚಾಕ್ರಿ ಮಾಡುವವರಿಗೆ ಈ ಕೆಳಗಿನ ಸರ್ಕಾರಿ ಸೌಲಭ್ಯಗಳು ಸಿಕ್ಕಿವೆಯೇ? ಹೌದು/ಇಲ್ಲ. ಹೌದಾದರೆ, ಸಿಕ್ಕಿದ ವರ್ಷ ತಳಿಸಿ**

| ನಿವೇಶನ | ಮನೆ | ಶೌಚಾಲಯ | BPL | ಅನ್ನಭಾಗ್ಯ | ವೃದ್ಧಾಪ್ಯ ವೇ. | ವಿಧವಾ ವೇತನ | ಅಂಗ ವಿಕಲ ವೇ | ಭಾಗ್ಯ ಲಕ್ಷ್ಮಿ | ಸಾಲ | ಸಾಲ ಮನ್ನ | ರಾಷ್ಟ್ರೀಯ ಬೀಮಾ | ಭೂಮಿ | ಬೋರ್ ವೆಲ್ | ಇತರೆ |
|---|---|---|---|---|---|---|---|---|---|---|---|---|---|---|
| | | | | | | | | | | | | | | |

**XIII.ಬಿಟ್ಟ ಚಾಕ್ರಿ ಮಾಡುವವರ ಧಾರ್ಮಿಕ ನಂಬಿಕೆಗಳು/ಚಟುವಟಿಕೆಗಳು:**

| | | |
|---|---|---|
| 1. | ಮನೆ ದೇವರು: | ನಿಮ್ಮ ಆಚರಣೆಗಳು: |
| 2. | ಊರ ದೇವರು: | ನಿಮ್ಮ ಆಚರಣೆಗಳು: |
| 3. | ಊರ ಜಾತ್ರೆ ಯಾವಾಗ: | ನಿಮ್ಮ ಆಚರಣೆಗಳು/ನಿಮ್ಮ ವಿಶಿಷ್ಟ ಪಾತ್ರ: |
| 4. | ಊರಲ್ಲಿ ಬೇರೆ ಸಾಮೂಹಿಕ ಆಚರಣೆಗಳು-ಯವಾಗ:: | ನಿಮ್ಮ ಪಾತ್ರ ಏನು? |
| 5. | ನಿಮ್ಮಲ್ಲಿ ಪ್ರತ್ಯೇಕ ನಂಬಿಕೆ: | ಅದಕ್ಕೆ ನಿಮ್ಮ ಆಚರಣೆಗಳು: |
| 6. | ಮನೆಯಲ್ಲಿ ದೊಡ್ಡ ಕಾಯಿಲೆ ಬಂದಾಗ ಮಾಡಿದ ಹರಕೆ/ಜಾತ್ರೆಗಳ ವಿವರಗಳು: | |

**XIV. ಬಿಟ್ಟ ಚಾಕ್ರಿ ಮಾಡುವವರಹಳ್ಳಿಯ ವಿವರಗಳು:**

**XIV.1 ಜಾತಿವಾರು ಈ ಕೆಳಗಿನ ವಿವರ ಕೊಡಿ:**[ಮನೆ=ಒಂದೇ ಒಲೆಯಲ್ಲಿ ಅಡಿಗೆ ಮಾಡಿ ಊಟ ಮಾಡುವ ಒಂದು ಅಥವಾ ಹೆಚ್ಚು ಕುಟುಂಬವಿರುವ ಜಾಗ]

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| ಕ್ರಸ | ಜಾತಿ / ಉಪಜಾತಿ ಹೆಸರು | ಒಟ್ಟು ಮನೆಗಳು | ಒಟ್ಟು ಜನಸಂಖ್ಯೆ: | ಭೂಮಿ ಇರುವ ಒಟ್ಟು ಮನೆಗಳು: | ಭೂಮಿ ಇಲ್ಲದಿರುವ ಒಟ್ಟು ಮನೆಗಳು: | ದಿನಗೂಲಿ ಮಾಡುವ ಒಟ್ಟು ಮನೆಗಳು: | ಸರ್ಕಾರಿ ನೌಕರಿ ಮಾಡುವ ಒಟ್ಟು ಮನೆಗಳು: ವಿವರಗಳು | ಖಾಸಗಿ ನೌಕರಿ ಮಾಡುವ ಒಟ್ಟು ಮನೆಗಳು: ವಿವರಗಳು | ಸ್ವಂತ ಕೆಲಸ ಮಾಡುವ ಒಟ್ಟು ಮನೆಗಳು: ವಿವರಗಳು |
| 1) | | | | | | | | | |
| 2) | | | | | | | | | |
| 3) | | | | | | | | | |
| 4) | | | | | | | | | |
| 5) | | | | | | | | | |
| 6) | | | | | | | | | |
| 7) | | | | | | | | | |
| 8) | | | | | | | | | |
| 9) | | | | | | | | | |
| 10) | | | | | | | | | |
| 11) | | | | | | | | | |
| 12) | | | | | | | | | |
| 13) | | | | | | | | | |
| 14) | | | | | | | | | |
| 15) | | | | | | | | | |

**XIV.2 ಬಿಟ್ಟಿ ಚಾಕ್ರಿ ಮಾಡುವವರ ಊರಲ್ಲಿರುವ ಸಂಸ್ಥೆಗಳ ವಿವರಗಳು:**

**XIV.2.1 ಶಿಕ್ಷಣ:**ಸರ್ಕಾರಿ ಅಂಗನವಾಡಿ: ಇದೆ/ಇಲ್ಲ. ಸರ್ಕಾರಿ ಪ್ರಾಥಮಿಕ ಶಾಲೆ: ಇದೆ/ಇಲ್ಲ. ಸರ್ಕಾರಿ ಮಾಧ್ಯಮಿಕ ಶಾಲೆ: ಇದೆ/ಇಲ್ಲ. ಸರ್ಕಾರಿ ಪ್ರೌಢ ಶಾಲೆ: ಇದೆ/ಇಲ್ಲ. ಸರ್ಕಾರಿ ಜೂನಿಯರ್ ಕಾಲೇಜು: ಇದೆ/ಇಲ್ಲ. ಸರ್ಕಾರಿ ಡಿಗ್ರಿ ಕಾಲೇಜು: ಇದೆ/ಇಲ್ಲ.

ಖಾಸಗಿ ನರ್ಸರಿ: ಇದೆ/ಇಲ್ಲ. ಖಾಸಗಿ ಪ್ರಾಥಮಿಕ ಶಾಲೆ: ಇದೆ/ಇಲ್ಲ. ಖಾಸಗಿ ಮಾಧ್ಯಮಿಕ ಶಾಲೆ:ಇದೆ/ಇಲ್ಲ. ಖಾಸಗಿ ಪ್ರೌಢ ಶಾಲೆ:ಇದೆ/ಇಲ್ಲ. ಖಾಸಗಿ ಜೂನಿಯರ್ ಕಾಲೇಜು:ಇದೆ/ಇಲ್ಲ. ಖಾಸಗಿ ಡಿಗ್ರಿ ಕಾಲೇಜು: ಇದೆ/ಇಲ್ಲ.

**XIV.2.2 ದೇವಸ್ಥಾನಗಳು:**

**XIV.2.3 ಆರೋಗ್ಯ ಕೇಂದ್ರಗಳು – ಸರ್ಕಾರಿ / ಖಾಸಗಿ:**

**XIV.2.4 ಕುಡಿಯುವ ನೀರು:**

**XIV.2.5 ರಸ್ತೆ:**

**XIV.2.6 ಕರೆಂಟು:**

**XIV.2.7 ಪಶು ಸಂಗೋಪನೆ:**

**XIV.3. ಬಿಟ್ಟಿ ಚಾಕ್ರಿ ಮಾಡುವವರ ದಲಿತ ಕೇರಿಯಲ್ಲಿರುವ ವ್ಯವಸ್ಥೆಗಳು:**

**XIV.3.1 ಶಿಕ್ಷಣ:**

**XIV.3.2 ಆರೋಗ್ಯ:**

**XIV.3.3 ದೇವಸ್ಥಾನ:**

**XIV.3.4 ಕುಡಿಯುವ ನೀರು:**

**XIV.3.5 ರಸ್ತೆ:**

**XIV.3.6 ಚರಂಡಿ:**

**XIV.3.7 ಕರೆಂಟು:**

**XIV.3.8 ಸಮುದಾಯ ಶೌಚಾಲಯ:** ಇದೆ/ಇಲ್ಲ. ಇರುವ ಕಕ್ಕಸುಗಳು: ಇರುವ ಮೂತ್ರಿಗಳು: ಹರಿಯುವ ನೀರು: ಇದೆ/ಇಲ್ಲ

**XIV.3.9 ಶೌಚಾಲಯವಿರುವ ಮನೆಗಳು:** **ಶೌಚಾಲಯವಿರದ ಮನೆಗಳು:**

**XIV.3.10 ಸಮುದಾಯ ಭವನ:** ಇದೆ/ಇಲ್ಲ. ಇದ್ದರೆ ಅದರಲ್ಲಿರುವ **ಸೌಕರ್ಯಗಳು:**

ದಿನಾಂಕ: ಸಮೀಕ್ಷೆ ಮಾರ್ಗದರ್ಶಕರು: ಕಿರಣ ಕಮಲ ಪ್ರಸಾದ. ಸಹಾಯಕರ ಹೆಸರು:
ಸಹಿ:







ಜಾಲಿಕೊಪ್ಪದ ಪಶ್ಚಿಮ ತುದಿಯಲ್ಲಿರುವ ಕಟ್ಟೆ, ಅದರ ಹಿಂದಿನ ಗುಡಿ ಹಾಗೂ ಸಮುದಾಯ
ಭವನ ಮತ್ತು ಇಕ್ಕೆಲಗಳಲ್ಲಿ ಮನೆಗಳು








ಜಾಲಿಕೊಪ್ಪದ ಬೇರೆವೇರೆ ಮನೆಗಳು, ಜನರು ಮತ್ತು ಮಕ್ಕಳು









ಜಾಲಿಕೊಪ್ಪದ ಓಣಿಯ ಪೂರ್ವ ತುದಿಯ ದಕ್ಷಿಣ ದಿಕ್ಕಿನ ಮತ್ತು ಅದರ ಹಿಂಬದಿಯ ಕೆಲ ಮನೆಗಳು











ಚಿವಟಗುಂಡಿಯ ಸಮುದಾಯ ಭವನದಲ್ಲಿ ದಲಿತರೊಂದಿಗೆ ಸಂಶೋಧಕರು, ಕೆಲ ಮನೆಗಳ ಮುಂದೆ ದಲಿತರು, ಊರ ಅತಿ ಹಿರಿಯ ನಾಯಕರು (ಜೀತ, 'ಬಿಟ್ಟಿ ಚಾಕ್ರಿ' ಮಾಡಿದವರು) ಮತ್ತು ಮಧ್ಯ ರಸ್ತೆಯ ದಕ್ಷಿಣಕ್ಕಿರುವ ಒಂದು ಕಿರು ಓಣಿ













ಮೇಲಿನ ಎಡ ಚಿತ್ರ: ಚಿವಟಗುಂಡಿಯ ಮಧ್ಯ ರಸ್ತೆಯ ದಲಿತ ಕೇರಿಯ ಪಶ್ಚಿಮ ತುದಿಯಿಂದ ಪೂರ್ವಕ್ಕೆ ಚಾಚಿರುವ ಮಧ್ಯ ರಸ್ತೆಯ ಇಕ್ಕೆಲಗಳಲ್ಲಿಯ ದಲಿತರ ಮನೆಗಳು
ಮೇಲಿನ ಬಲ ಚಿತ್ರ: ಚಿವಟಗುಂಡಿಯ ಮಧ್ಯ ರಸ್ತೆಯ ದಲಿತ ಕೇರಿಯ ಪಶ್ಚಿಮ ತುದಿಯಿಂದ ಪೂರ್ವದಿಕ್ಕಿಗೆ ಚಾಚಿರುವ ದಲಿತೇತರ ಮನೆಗಳು
ಮಧ್ಯದ ಎರಡು ಚಿತ್ರಗಳು: ಚಿವಟಗುಂಡಿಯ ಬೇರೆ ಬೇರೆ ಮನೆಗಳು
ಕೆಳಗಿನ ಎಡ ಚಿತ್ರ: ಚಿವಟಗುಂಡಿ ಗ್ರಾಮ ಪಂಚಾಯತಿ ಕಛೇರಿ
ಕೆಳಗಿನ ಬಲ ಚಿತ್ರ: ಚಿವಟಗುಂಡಿಯ ದಲಿತ ಸಮುದಾಯದ ಹಿಂಬದಿಯ ಗುಡಿಯ ಬಾಗಿಲ ಮುಂದೆ ಪಶ್ಚಿಮ ದಿಕ್ಕಿನಲ್ಲಿರುವ ದಲಿತ ಮನೆಗಳ ಹಿಂದೆಯ ಓಣಿ ದಲಿತೇತರ ಮನೆಗಳಿಗೆ ದಾರಿ ಒದಗಿಸುವುದು.







ಚಿವಟಗುಂಡಿಯಲ್ಲಿ 'ಬಿಟ್ಟಿ ಚಾಕ್ರಿ' ಭಾಗವಾಗಿ ಬೆಳಿಗ್ಗೆ ಸೆಗಣಿ ಹೊರುತ್ತಿರುವ ದಲಿತರು









ಮೇಲಿನ ಚಿತ್ರ: ಚಿವಟಗುಂಡಿಯ ದಲಿತ ಸಮುದಾಯದಲ್ಲಿ ಉಪವಿಭಾಗಾಧಿಕಾರಿಗಳೊಂದಿಗೆ ಸಂಶೋಧಕರು (ಆಗಸ್ಟ್ 22, 2018)

ಕೆಳಗಿನ ಎಡಭಾಗದ ಚಿತ್ರ: ಉಪವಿಭಾಗಾಧಿಕಾರಿಗಳ ಎದುರು ಮಾಲಿಕರೊಬ್ಬರು ಕುಳಿತಿರುವುದು; ಕೆಲ ಅಧಿಕಾರಿಗಳು ಜೀತದಾಳುಗಳ ಮಾಹಿತಿ ಸಂಗ್ರಹಿಸುತ್ತಿರುವುದು
ಕೆಳಗಿನ ಬಲಭಾಗದ ಎರಡು ಚಿತ್ರಗಳು: ದಲಿತ ಮುಖಂಡರೊಂಇದಗೆ ಸಂಶೋಧಕರು











ಜಾಲಿಕೊಪ್ಪದ ದಲಿತರು ಜನೆವರಿ 14, 2018ರ ಸಂಕ್ರಮಣ ಹಬ್ಬದ ಇಡೀ ರಾತ್ರಿ ಊರ ಮಧ್ಯದಲ್ಲಿ ಸಾಂಗ್ಯಾ ಬಾಳ್ಯಾ ಸಣ್ಣಾಟ ಪ್ರದರ್ಶಿಸುತ್ತಿರುವುದು ಮತ್ತು ಊರ ಮುಖಂಡರ ಸಮಕ್ಷಮ ಸಂಶೋಧಕರು ಆಟದ ಮುಂಚೆ ದೀಪ ಬೆಳಗಿಸುತ್ತಿರುವುದು.











ಜಾಲಿಕೊಪ್ಪದಲ್ಲಿ ಜನೆವರಿ 14, 2018ರಂದು ಮಲಪ್ರಭ ನದಿದಂಡದಲ್ಲಿ ಎಲ್ಲಾ ಜಾತಿ ಜನಾಂಗದವರೊಂದಿಗೆ ದಲಿತರಿಂದ ಸಂಕ್ರಮಣ ಆಚರಣೆ







ಜಾಲಿಕೊಪ್ಪದ ಯುವಕರು – ಮಕ್ಕಳು ವಿವಿದ ಆಟಗಳಲ್ಲಿ

